# ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಬದಲಾವಣೆಯಲ್ಲಿ ಕ್ರೈಸ್ತ ಸಂಸ್ಥೆಗಳ ಪಾತ್ರ (೧೮೩೪-೨೦೦೮)

ಪಿಎಚ್.ಡಿ. ಪದವಿಗಾಗಿ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಸಿದ್ಧಪಡಿಸಿದ ಮಹಾಪ್ರಬಂಧ

ಸಂಶೋಧಕರು

ನೋರ್ಬರ್ಟ್ ಮಸ್ಕರೇನ್ಹಸ್

ಮಾರ್ಗದರ್ಶಕರು

ಡಾ. ಪೀಟರ್ ವಿಲ್ಸನ್ ಪ್ರಭಾಕರ್
ಪ್ರಾಧ್ಯಾಪಕರು, ಇತಿಹಾಸ ವಿಭಾಗ
ವಿವೇಕಾನಂದ ಮಹಾವಿದ್ಯಾಲಯ
ಪುತ್ತೂರು, ದಕ್ಷಿಣ ಕನ್ನಡ- ೫೭೪ ೨೦೧

ಮೂಲಕ

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು, ದಕ್ಷಿಣ ಕನ್ನಡ- ೫೭೫ ೦೦೧

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

೨೦೧೨

# ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಬದಲಾವಣೆಯಲ್ಲಿ ಕ್ರೈಸ್ತ ಸಂಸ್ಥೆಗಳ ಪಾತ್ರ (೧೮೩೪-೨೦೦೮)

ಪಿಎಚ್.ಡಿ. ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಸಿದ್ಧಪಡಿಸಿದ ಮಹಾಪ್ರಬಂಧ

ಸಂಶೋಧಕರು

ನೋರ್ಬರ್ಟ್ ಮಸ್ಕರೇನ್ಹಸ್

ಮಾರ್ಗದರ್ಶಕರು

ಡಾ. ಪೀಟರ್ ವಿಲ್ಸನ್ ಪ್ರಭಾಕರ್
ಪ್ರಾಧ್ಯಾಪಕರು, ಇತಿಹಾಸ ವಿಭಾಗ
ವಿವೇಕಾನಂದ ಮಹಾವಿದ್ಯಾಲಯ
ಪುತ್ತೂರು, ದಕ್ಷಿಣ ಕನ್ನಡ- ೫೭೪ ೨೦೩

ಮೂಲಕ

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು, ದಕ್ಷಿಣ ಕನ್ನಡ- ೫೭೫ ೦೦೧

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

೨೦೧೨

## ಪ್ರಮಾಣ ಪತ್ರ

**'ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಬದಲಾವಣೆಯಲ್ಲಿ ಕ್ರೈಸ್ತ ಸಂಸ್ಥೆಗಳ ಪಾತ್ರ (೧೮೩೪-೨೦೦೮)'**ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಲಾಗಿದೆ. **ಡಾ. ಪೀಟರ್ ವಿಲ್ಸನ್ ಪ್ರಭಾಕರ್,** ಇತಿಹಾಸ ಪ್ರಾಧ್ಯಾಪಕರು, ವಿವೇಕಾನಂದ ಮಹಾವಿದ್ಯಾಲಯ, ಪುತ್ತೂರು, ದಕ್ಷಿಣ ಕನ್ನಡ-೫೭೪೨೦೩ ಇವರು ಈ ಪ್ರಬಂಧ ರಚನೆಗೆ ಮಾರ್ಗದರ್ಶನ ಮಾಡಿದ್ದಾರೆ. ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಯಾವುದೇ ಪದವಿಗಾಗಲಿ, ಇಲ್ಲವೇ ಬೇರೆ ಯಾವುದೇ ಪ್ರಕಟಣೆಗಾಗಲಿ ಬಳಸಿಕೊಂಡಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೧.೧೨.೧೨
ಸ್ಥಳ : ಪುತ್ತೂರು

**ನೋರ್ಬರ್ಟ್ ಮಸ್ಕರೇನ್ಹಸ್**
ಇತಿಹಾಸ ಉಪನ್ಯಾಸಕರು,
ಸಂತ ಫಿಲೋಮಿನಾ ಕಾಲೇಜು
ಪುತ್ತೂರು, ದಕ್ಷಿಣ ಕನ್ನಡ-೫೭೪ ೨೦೨

## ದೃಢೀಕರಣ ಪತ್ರ

**ನೋರ್ಬರ್ಟ್ ಮಸ್ಕರೇನ್ಹಸ್** ಇವರು **'ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಬದಲಾವಣೆಯಲ್ಲಿ ಕ್ರೈಸ್ತ ಸಂಸ್ಥೆಗಳ ಪಾತ್ರ (೧೮೩೪-೨೦೦೮)'**ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಮಂಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧವನ್ನು ಇಲ್ಲವೇ ಇದರ ಯಾವುದೇ ಭಾಗವನ್ನು ಈ ಮೊದಲು ಅಭ್ಯರ್ಥಿಯು ಯಾವುದೇ ಪದವಿಗಾಗಲಿ, ಇಲ್ಲವೇ ಬೇರೆ ಯಾವುದೇ ಪ್ರಕಟಣೆಗಾಗಲಿ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೨೧.೧೨.೨೦೧೨
ಸ್ಥಳ : ಪುತ್ತೂರು

**ಡಾ. ಪೀಟರ್ ವಿಲ್ಸನ್ ಪ್ರಭಾಕರ್**
ವಿವೇಕಾನಂದ ಮಹಾವಿದ್ಯಾಲಯ
ಪುತ್ತೂರು, ದಕ್ಷಿಣ ಕನ್ನಡ-೫೭೪ ೨೦೩

# ಪರಿವಿಡಿ

ಪುಟ ಸಂಖ್ಯೆ

## ಅಧ್ಯಾಯ -೧

# ಪ್ರಸ್ತಾವನೆ

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯು ೧೨° ೪' ೧೫" ರಿಂದ ೧೩° ೫೮' ೩೦" ಉತ್ತರ ಅಕ್ಷಾಂಶ ಹಾಗೂ ೭೪° ೪೩' ೨೬" ರಿಂದ ೭೫° ೪೪' ೩೧" ಪೂರ್ವ ರೇಖಾಂಶಗಳ ನಡುವೆ ಇದೆ.[೧] ಜಿಲ್ಲೆಯ ಉತ್ತರಕ್ಕೆ ಉತ್ತರ ಕನ್ನಡ, ದಕ್ಷಿಣಕ್ಕೆ ಚಂದ್ರಗಿರಿ ನದಿ, ಪೂರ್ವಕ್ಕೆ ಮೈಸೂರು ಮತ್ತು ಕೊಡಗು ಹಾಗೂ ಪಶ್ಚಿಮಕ್ಕೆ ಅರಬ್ಬಿ ಸಮುದ್ರ ಇವೆ.[೨] ಜಿಲ್ಲೆಯು ೧೫೦ ಮೈಲು ಉದ್ದ ಹಾಗೂ ೨೫ ರಿಂದ ೫೦ ಮೈಲು ಅಗಲ ವಿಸ್ತೀರ್ಣತೆಯನ್ನು ಹೊಂದಿದೆ.[೩] ೧೪೧ ಕಿ.ಮೀ. ಉದ್ದದ ಕರಾವಳಿ ತೀರವು ಜಿಲ್ಲೆಗಿದೆ. ಒಟ್ಟು ೩,೯೦೨ ಚ.ಕಿ.ಮೀ. ವಿಸ್ತೀರ್ಣತೆಯನ್ನು ಜಿಲ್ಲೆಯು ಒಳಗೊಂಡಿದೆ.[೪] ಪಶ್ಚಿಮ ಘಟ್ಟಗಳು ದಕ್ಷಿಣದ ಪೀಠಭೂಮಿ ಹಾಗೂ ಕರಾವಳಿಯ ಮಧ್ಯೆ ದೊಡ್ಡ ಗೋಡೆಯಂತೆ ಕಂಡುಬರುತ್ತವೆ. ಇವು ಸಮುದ್ರದಿಂದ ಸುಮಾರು ೫೦ ಮೈಲು ದೂರದಲ್ಲಿದ್ದು, ಸಮುದ್ರ ಮಟ್ಟದಿಂದ ಅತ್ಯಂತ ಎತ್ತರದಲ್ಲಿವೆ.[೫] ಬ್ರಿಟಿಷ್ ಆಳ್ವಿಕೆಯ ಆರಂಭದ ಕಾಲದಲ್ಲಿ ದಕ್ಷಿಣ ಕನ್ನಡ(ಸೌತ್ ಕೆನರಾ) ಜಿಲ್ಲೆಯು ಕುಂದಾಪುರ, ಉಡುಪಿ, ಮಂಗಳೂರು, ಕಾಸರಗೋಡು ಹಾಗೂ ಉಪ್ಪಿನಂಗಡಿ ಎಂಬ ಐದು ತಾಲೂಕುಗಳನ್ನೊಳಗೊಂಡಿತ್ತು.[೬] ೧೮೫೯ರಲ್ಲಿ ಜಿಲ್ಲೆಯು ಪುತ್ತೂರು ತಾಲೂಕನ್ನು ಒಳಗೊಂಡು ಒಟ್ಟು ಆರು ತಾಲೂಕುಗಳನ್ನು ಹೊಂದಿತ್ತು.[೭] ೧೮೬೨ರಲ್ಲಿ ಕೆನರಾವು ಉತ್ತರ ಹಾಗೂ ದಕ್ಷಿಣ ಕೆನರಾವಾಗಿ ವಿಭಜನೆಗೊಂಡು ಪ್ರತ್ಯೇಕ ಆಡಳಿತ ಘಟಕಗಳಲ್ಲಿ ಸೇರಿಕೊಂಡಾಗ ಕುಂದಾಪುರವು ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿತು. ಹಾಗಾಗಿ ತಾಲೂಕುಗಳ ಸಂಖ್ಯೆ ಏಳಕ್ಕೆ ಏರಿತು.[೮] ಕಡೆಗೆ, ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕುಂದಾಪುರ, ಉಡುಪಿ, ಕಾರ್ಕಳ, ಮಂಗಳೂರು, ಬಂಟ್ವಾಳ, ಬೆಳ್ತಂಗಡಿ, ಪುತ್ತೂರು ಮತ್ತು ಸುಳ್ಯ ಎಂಬ ತಾಲೂಕುಗಳಿದ್ದವು. ಅಂದಿನ ಸೌತ್ ಕೆನರಾ ಜಿಲ್ಲೆಯೆಂಬುದು ಇಂದು ಉಡುಪಿ, ದಕ್ಷಿಣ ಕನ್ನಡ ಹಾಗೂ ಕಾಸರಗೋಡು ಎಂಬ ಮೂರು ಜಿಲ್ಲೆಗಳಾಗಿವೆ. ೧೯೫೬ರಲ್ಲಿ ರಾಜ್ಯ ವಿಂಗಡಣೆಯ ಕಾಲದಲ್ಲಿ ಕಾಸರಗೋಡು ತಾಲೂಕು ಕೇರಳಕ್ಕೆ ಸೇರಿ ಆಮೇಲೆ ಜಿಲ್ಲೆಯಾಯಿತು. ಆದರೆ 'ತುಳುನಾಡು' ಎಂಬುದು ಈ ಮೂರು ಜಿಲ್ಲೆಗಳಲ್ಲಿಯೂ ವ್ಯಾಪಿಸಿಕೊಂಡಿದೆ.[೯] ೧೯೯೭ರಲ್ಲಿ ಸೌತ್ ಕೆನರಾದಿಂದ ಕುಂದಾಪುರ, ಉಡುಪಿ ಮತ್ತು ಕಾರ್ಕಳ ತಾಲೂಕುಗಳನ್ನು ಬೇರ್ಪಡಿಸಿ ಉಡುಪಿ ಜಿಲ್ಲೆಯನ್ನು ರಚಿಸಲಾಯಿತು.

ಪ್ರಕೃತ ಅಧ್ಯಯನದಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಎಂಬುದನ್ನು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಇಂದಿನ ಕಾಸರಗೋಡು ಜಿಲ್ಲೆ ಎಂಬ ಅರ್ಥದಲ್ಲಿ ಪರಿಗಣಿಸಲಾಗಿದೆ. ಕಾಸರಗೋಡು ಜಿಲ್ಲೆ ಪ್ರಸ್ತುತ ಮಂಗಳೂರು ಕಥೋಲಿಕ ಧರ್ಮಪ್ರಾಂತ್ಯದ ಭಾಗವಾಗಿರುವುದರಿಂದ ಅದನ್ನೂ ಸಹ

ಅಧ್ಯಯನ ವ್ಯಾಪ್ತಿಯೊಳಗೆ ತರಲಾಗಿದೆ. ೧೫ನೇ ಶತಮಾನದ ಅಂತ್ಯದಲ್ಲಿ ಪೋರ್ಚುಗೀಸರ ಆಗಮನದಿಂದ ಭಾರತದಲ್ಲಿ ಪಾಶ್ಚಿಮಾತ್ಯ ವಸಾಹತುಗಳ ಕಾಲವು ಆರಂಭವಾಯಿತು ಹಾಗೂ ಅದರೊಂದಿಗೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವು ಬಹಳವಾಗಿ ಪಸರಿಸುತ್ತ ಭಾರತದಲ್ಲಿ ರೋಮನ್ ಕಥೋಲಿಕ ಮಿಶನ್ನುಗಳ ಯುಗ ಆರಂಭವಾಯಿತು ಎಂದು ಪ್ರೊಟೆಸ್ಟೆಂಟ್ ಕ್ರೈಸ್ತ ಸಭಾ ಚರಿತ್ರೆಕಾರರಾದ ಜೂಲಿಯಸ್ ರಿಕ್ಟರ್ ಹೇಳಿದ್ದಾರೆ. ಪೋರ್ಚುಗೀಸ್ ಅರಸರು ಪೌರಾತ್ಯ ಪ್ರಯಾಣವನ್ನು ಹಮ್ಮಿಕೊಂಡಿದ್ದರಲ್ಲಿ ಇದ್ದಂಥ ಒಂದು ಉದ್ದೇಶವು ಕ್ರೈಸ್ತ ವಿಶ್ವಾಸವನ್ನು ಪ್ರಚಾರ ಮಾಡುವುದು ಎಂದು ಕಥೋಲಿಕ ಸಭಾ ಚರಿತ್ರೆಕಾರರಾದ ಜೋಸೆಫ್ ಥೆಕ್ಕೆದಾಥ್‌ರು ಹೇಳುತ್ತಾರೆ. ಪೋರ್ಚುಗೀಸರು ತಾವು ವಶಪಡಿಸಿಕೊಂಡಿದ್ದ ಪ್ರದೇಶಗಳಲ್ಲೆಲ್ಲಾ ರೋಮನ್ ಕಥೋಲಿಕ ಧರ್ಮವನ್ನು ಪ್ರಚಾರ ಮಾಡಿದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತ ಧರ್ಮ ಯಾವಾಗ ಆರಂಭವಾಯಿತೆಂದು ಖಚಿತವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಪ್ರೇಷಿತ ಸಂತ ತೋಮಸರು ಭಾರತಕ್ಕೆ ಬಂದು, ಕೇರಳದಲ್ಲಿ ಧರ್ಮಪ್ರಚಾರ ಮಾಡಿದರು ಮತ್ತು ಮದ್ರಾಸಿನ ಹತ್ತಿರವಿರುವ ಮೈಲಾಪುರದಲ್ಲಿ ಹುತಾತ್ಮರಾದರು ಎನ್ನುವ ನಂಬಿಕೆ ಇದೆ. ಆದರೆ ಅವರು ದಕ್ಷಿಣ ಕನ್ನಡ ಜಿಲ್ಲೆಗೆ ಧರ್ಮ ಪ್ರಚಾರಕ್ಕಾಗಿ ಬರಲಿಲ್ಲ. ಪ್ರೇಷಿತ ಸಂತ ಬಾರ್ಥೋಲೋಮಿಯೋ ಕನ್ನಡ ಜಿಲ್ಲೆಯಲ್ಲಿ ಧರ್ಮ ಪ್ರಚಾರ ಮಾಡಿ ಇಲ್ಲಿಯ ಬ್ರಾಹ್ಮಣರನ್ನು ಕ್ರೈಸ್ತ ಧರ್ಮ ಸ್ವೀಕರಿಸುವಂತೆ ಪ್ರೇರೇಪಿಸಿದರು ಎಂಬ ನಂಬಿಕೆ ಇದೆಯಾದರೂ ಅದನ್ನು ದೃಢಪಡಿಸಲು ದಾಖಲೆಗಳಿಲ್ಲ. ಏಳನೇ ಶತಮಾನದಲ್ಲಿ ಕಲ್ಯಾಣಪುರ ಎಂಬಲ್ಲಿ ಒಬ್ಬ ಬಿಷಪರಿದ್ದರು ಎನ್ನುವುದು ಇತಿಹಾಸದಲ್ಲಿ ಕಂಡುಬರುತ್ತದೆ. ಕಾಸ್ಮೊಸ್ ಇಂಡಿಕೊ ಪ್ಲುಸ್ಟೆಸ್ ಅವರ ಪ್ರಕಾರ ಕ್ರೈಸ್ತ ಧರ್ಮ ಕಲ್ಯಾಣಪುರದಲ್ಲಿ ಕ್ರಿ.ಶ. ೬ನೇ ಶತಮಾನಕ್ಕಿಂತಲೂ ಮೊದಲೇ ಅಸ್ತಿತ್ವದಲ್ಲಿತ್ತು.[೧೦] ಆದರೆ ಆ ಕಲ್ಯಾಣಪುರ ಮತ್ತು ಉಡುಪಿಯಿಂದ ನಾಲ್ಕು ಮೈಲು ದೂರವಿರುವ ಕಲ್ಯಾಣಪುರ ಒಂದೇ ಎಂದು ನಿಖರವಾಗಿ ಹೇಳಲು ಆಧಾರ ಸಾಲದು.

೧೬ನೇ ಶತಮಾನಕ್ಕೆ ಮುನ್ನ ದಕ್ಷಿಣ ಕನ್ನಡ ಜಿಲ್ಲೆಯ ಕಥೋಲಿಕ ಧರ್ಮದ ಕುರಿತಾಗಿ ಯಾವುದೇ ಐತಿಹಾಸಿಕ ದಾಖಲೆಗಳು ಲಭ್ಯವಿಲ್ಲ . ಆದರೆ, ೧೬ನೇ ಶತಮಾನದ ಆರಂಭದಿಂದ ಭಾರತದ ಪಶ್ಚಿಮ ಕರಾವಳಿಯಲ್ಲಿ ಪೋರ್ಚುಗೀಸರ ಪ್ರಭಾವ ಹೆಚ್ಚುತ್ತಾ ಬಂತು. ಎಲ್ಲೆಲ್ಲಿ ಪೋರ್ಚುಗೀಸ್ ನಾಯಕರು, ದಳವಾಯಿಗಳು ತಮ್ಮ ರಾಷ್ಟ್ರದ ನಿಶಾನಿಯನ್ನು ನೆಟ್ಟರೋ ಅವರ ಹಿಂದೆಯೇ ಪೋರ್ಚುಗೀಸ್ ಧರ್ಮಗುರುಗಳು, ಕ್ರೈಸ್ತ ಮತ ಪ್ರಚಾರದ ಧ್ವಜವನ್ನು ನೆಟ್ಟರು.[೧೧] ೧೫೦೦ರಲ್ಲಿ ಪೋರ್ಚುಗೀಸ್ ಸೇನಾನಿಯಾಗಿದ್ದ ಪೆಡ್ರೊ ಆಲ್ವಾರೀಸ್ ಕೆಬ್ರಾಲ್ ೮ ಮಂದಿ ಫ್ರಾನ್ಸಿಸ್ಕನ್ ಮಿಶನರಿಗಳೊಡಗೂಡಿ ಉತ್ತರ ಕನ್ನಡದ ಅಂಜೇದೀವ ದ್ವೀಪದಲ್ಲಿ ಬಂದಿಳಿದು, ಫಾ। ಹೆನ್ರಿಕ್‌ರವರ ನೇತೃತ್ವದಲ್ಲಿ ೨೩ ದ್ವೀಪ ನಿವಾಸಿಗಳನ್ನು ಕ್ರೈಸ್ತ ಮತಕ್ಕೆ ಸ್ವೀಕರಿಸಿದರು ಎನ್ನಲಾಗುತ್ತದೆ. ಅಲ್ಲದೆ, ಅವರಿಗಾಗಿ ಅವರ್ ಲೇಡಿ ಆಫ್ ಬ್ರೋಥಾಸ್ ಇಗರ್ಜಿಯನ್ನು ಕಟ್ಟಲಾಯಿತು. ೧೫೨೬ರಲ್ಲಿ ಪೋರ್ಚುಗೀಸರು

ಕೆನರಾವನ್ನು ತಮ್ಮ ಆಡಳಿತಕ್ಕೆ ಒಳಪಡಿಸಿದಾಗ ಫ್ರಾನ್ಸಿಸ್ಕನ್ ಮಿಶನರಿಗಳು ಮಂಗಳೂರಿಗೆ ಬಂದು ಧರ್ಮ ಪ್ರಚಾರವನ್ನು ಕೈಗೆತ್ತಿಕೊಂಡರು. ಅವರು ಇಲ್ಲಿನ ಕೆಲವರನ್ನು ಕ್ರೈಸ್ತರನ್ನಾಗಿ ಮಾಡಿ ಅವರಿಗಾಗಿ ಎಸ್. ಎಸ್. ದೆ ರೊಜಾರಿಯೊ(ಬೋಳಾರ), ಎಸ್. ಎಸ್. ದೆ ಮಿಸೆರಿಕೋರ್ಡಿಯಾ (ಉಳ್ಳಾಲ) ಮತ್ತು ಸಾವೊ ಫ್ರಾನ್ಸಿಸ್ಕೊ (ಫರಂಗಿಪೇಟೆ) ಎಂಬ ಇಗರ್ಜಿಗಳನ್ನು ಕಟ್ಟಿಸಿದರು. ೧೬೨೩ರಲ್ಲಿ ಕೆನರಾಕ್ಕೆ ಭೇಟಿಕೊಟ್ಟಿದ್ದ ಇಟಲಿಯ ಡೆಲ್ಲಾವಲ್ಲೆ ಇದನ್ನು ದೃಢಪಡಿಸಿದ್ದಾರೆ ಮಾತ್ರವಲ್ಲದೆ ಇವುಗಳ ನಿರ್ವಹಣೆಗೆ ಕೇವಲ ಒಬ್ಬ ವಿಕಾರ್ ಮತ್ತು ಇಬ್ಬರು ಫ್ರಾನ್ಸಿಸ್ಕನ್ ಫ್ರೈಯರ್ಸ್‌ಗಳಿದ್ದರು ಎಂದೂ ಬರೆದಿದ್ದಾರೆ.[೧೨] ಆಗ ಯೇಸುಸಭೆ ಇನ್ನೂ ಹುಟ್ಟಿರಲಿಲ್ಲ ಮತ್ತು ಅಗ್ರಗಾಮಿ ಯೇಸುಸಭೆ ಧರ್ಮಗುರುಗಳಲ್ಲಿ ಒಬ್ಬರಾದ ಸಂತ ಫ್ರಾನ್ಸಿಸ್ ಕ್ಷೇವಿಯರ್ ಅವರು ಗೋವಾಕ್ಕೆ ಬಂದಿಳಿದದ್ದು ೧೬ ಮೇ ೧೫೪೨ರಲ್ಲಿ .[೧೩] ಯೇಸುಸಭೆಯವರು ಗೋವಾದಲ್ಲಿ ಧರ್ಮಪ್ರಚಾರ ಮಾಡುವ ಮೊದಲೇ ಫ್ರಾನ್ಸಿಸ್ಕನ್ ಸಭೆಯವರು ಹಲವು ದೇಶೀಯರನ್ನು ಕ್ರೈಸ್ತ ಧರ್ಮಕ್ಕೆ ಸ್ವೀಕರಿಸಿದ್ದರು. ತದನಂತರದ ವರ್ಷಗಳಲ್ಲಿ ಪೋರ್ಚುಗೀಸರ ಪ್ರಭಾವ ಇಲ್ಲಿ ಇನ್ನಷ್ಟು ಬೆಳೆದಾಗ ಹೆಚ್ಚಿನ ಸಂಖ್ಯೆಯಲ್ಲಿ ಕ್ರೈಸ್ತ ಮಿಶನರಿಗಳು ಇಲ್ಲಿಗಾಗಮಿಸಿ ಕರಾವಳಿಯ ಉದ್ದಕ್ಕೂ ಹಲವು ಇಗರ್ಜಿ(ಚರ್ಚ್)ಗಳನ್ನು ಕಟ್ಟಿ ಮತ ಪ್ರಚಾರಗೈದರು. ೧೫೬೦ರ ನಂತರ ಗೋವೆಯಲ್ಲಿ 'ಇನ್‌ಕ್ವಿಜಿಶನ್' ಎಂಬ 'ಮತೀಯ ನ್ಯಾಯಾಲಯ'ವೊಂದರ ಸ್ಥಾಪನೆಯಾಗಿ ಹಿಂದೂ ಮತದಿಂದ ಕ್ರೈಸ್ತ ಮತಕ್ಕೆ ಮತಾಂತರ ಹೊಂದಿದವರು ತಮ್ಮ ಸಂಸ್ಕೃತಿ, ಭಾಷೆ, ಆಚಾರ - ವಿಚಾರ, ರೀತಿ- ನೀತಿ, ಸಂಪ್ರದಾಯಗಳೆಲ್ಲವನ್ನು ತಿರಸ್ಕರಿಸಿ ಪೋರ್ಚುಗೀಸ್ ಭಾಷೆ ಮತ್ತು ಸಂಸ್ಕೃತಿಯನ್ನು ಕಡ್ಡಾಯವಾಗಿ ಸ್ವೀಕರಿಸಬೇಕೆಂದು ಬಲಾತ್ಕಾರಿಸಿದಾಗ ಸಾವಿರಾರು ಕ್ರೈಸ್ತರು ದಕ್ಷಿಣಕ್ಕೆ ವಲಸೆ ಬಂದರು. ಆಗ ಕೆನರಾ ಜಿಲ್ಲೆ ಇಕ್ಕೇರಿಯ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಗೋವಾದ ಕೊಂಕಣಿ ಕ್ರೈಸ್ತರು ಒಳ್ಳೆಯ ಕೃಷಿಕರಾಗಿದ್ದುದರಿಂದ ಸ್ಥಳೀಯ ಅರಸರು ಅವರನ್ನು ಸಂತೋಷದಿಂದ ಸ್ವಾಗತಿಸಿದರು.[೧೪] ಹೀಗೆ ವಲಸೆ ಬಂದ ಕ್ರೈಸ್ತರು ಬಾರ್ಸೆಲೋರ್(ಬಸ್ರೂರು), ಕ್ಯಾಂಬೊಲಿಮ್ (ಗಂಗೊಳ್ಳಿ), ಕಲ್ಯಾಣಪುರ, ಮಂಗಳೂರು ಮುಂತಾದ ಸ್ಥಳಗಳಲ್ಲಿ ನೆಲೆ ನಿಂತರು.[೧೫] ೧೫೩೪ ರಿಂದ ಕೆನರಾವನ್ನು ಗೋವಾದ ಬಿಷಪರ ಅಧಿಕಾರ ವ್ಯಾಪ್ತಿಯೊಳಗೆ ತಂದು ಅದನ್ನು 'ಮಿಶನ್ ಪ್ರದೇಶ'ವೆಂದು ಪರಿಗಣಿಸಲಾಗುತ್ತದೆ.[೧೬]

೧೫೬೮ರಂದು ಮಂಗಳೂರು ನಗರವು ಪೋರ್ಚುಗೀಸರ ವಶವಾಯಿತು ಮತ್ತು ೧೫೬೯ರಲ್ಲಿ ಬಾರ್ಸೆಲೋರನ್ನೂ ಸ್ವಾಧೀನ ಪಡಿಸಿಕೊಂಡರು.[೧೭] ವ್ಯಾಟಿಕನ್ ಮತ್ತು ಪೋರ್ಚುಗಲ್ಲಿನ ನಡುವೆ ಆದ ಒಪ್ಪಂದದ ಪ್ರಕಾರ ಪೋರ್ಚುಗಲ್ಲಿನ ರಾಜನನ್ನು ಭಾರತದಲ್ಲಿ ಕಥೋಲಿಕ ಧರ್ಮದ ಸಾರಥಿ ಅಥವಾ ಪೋಷಕ ಎಂದು ಪರಿಗಣಿಸಲಾಯಿತು. ಆ ಪ್ರಕಾರ, ಧರ್ಮದ ಕೆಲಸವನ್ನು ನಿರ್ವಹಿಸುವ ಜವಾಬ್ದಾರಿಯನ್ನು ರಾಜ ವಹಿಸಿಕೊಂಡನು ಮತ್ತು ಪೋರ್ಚುಗಲ್ಲಿನ ಮೂಲಕ ಮಾತ್ರವೇ

ಯಾರಾದರೂ ಧರ್ಮ ಪ್ರಚಾರಕರಾಗಿ ಬರಬಹುದು ಎನ್ನುವ ಷರತ್ತಿಗೆ ಜಗದ್ಗುರುಗಳು ಒಪ್ಪಿದರು. ಜಗದ್ಗುರುಗಳು ಪೋರ್ಚುಗಲ್ಲಿಗೆ ನೀಡಿದ ಈ ಹಕ್ಕನ್ನು ಪದ್ರುವಾದೊ ಎನ್ನುತ್ತಾರೆ. ೧೭ನೇ ಶತಮಾನದಲ್ಲಿ ಪೋರ್ಚುಗೀಸರ ಪ್ರಭಾವವು ಕುಗ್ಗುತ್ತಿದ್ದಂತೆ ಈ ಧರ್ಮಗುರುಗಳಿಗೆ ಸ್ಥಳೀಯ ಅರಸರಿಂದ ಲಭಿಸುತ್ತಿದ್ದ ಭದ್ರತೆ ಕಡಿಮೆಯಾಯಿತು. ಪರಿಣಾಮವಾಗಿ ಧರ್ಮಗುರುಗಳು ಜಿಲ್ಲೆಗೆ ಬರುವುದು ವಿರಳವಾಗಿ ಭಕ್ತರ ಧಾರ್ಮಿಕ ಸ್ಥಿತಿ ಬಿಗಡಾಯಿಸಿತು. ಈ ವಿಷಯ ರೋಮಿಗೆ ತಿಳಿದು ಜಗದ್ಗುರುಗಳು ಥಾಮಸ್ ಡಿ ಕಾಸ್ಟ್ರೊ ಎಂಬ ಗೋವಾ ನಿವಾಸಿಯನ್ನು ಕನ್ನಡ ಜಿಲ್ಲೆಗೆ 'ವಿಕಾರ್ ಅಪೋಸ್ತಲಿಕಾ'ರಾಗಿ ನೇಮಕ ಮಾಡಿದರು.[೧೮] ಬಿಷಪ್ ಕಾಸ್ಟ್ರೊ(೧೬೭೪-೧೬೮೪) ಕಾಲದಲ್ಲಿ ಫಾ। ಜೋಸೆಫ್ ವಾಸ್(೧೬೮೧-೧೬೮೫)ರವರು, ಗೋವಾ ಆರ್ಚ್ ಬಿಷಪರ ಪ್ರತಿನಿಧಿಯಾಗಿ ಕನ್ನಡ ಜಿಲ್ಲೆಗೆ ಬಂದರು. ಆದರೂ ಫಾ। ಜೋಸೆಫ್ ವಾಸ್ ಬಹಳ ವಿನೀತರಾಗಿ ಇಲ್ಲಿಯ ಧರ್ಮಾಧ್ಯಕ್ಷರೊಂದಿಗೆ ಹೊಂದಾಣಿಕೆ ಮಾಡಿಕೊಂಡು ವ್ಯವಹರಿಸಿದರು.[೧೯] ಬಿಷಪ್ ಕಾಸ್ಟ್ರೊರವರ ಮರಣದ ಬಳಿಕ ಕನ್ನಡ ಜಿಲ್ಲೆಗೆ ಬೇರೆ ಬಿಷಪರ ನೇಮಕ ಆಗಲಿಲ್ಲ, ಹಾಗಾಗಿ ಈ ಜಿಲ್ಲೆಯು ಪುನಃ ಗೋವಾದ ಆರ್ಚ್ ಬಿಷಪರ ಅಧಿಕಾರಕ್ಕೆ ಒಳಪಟ್ಟಿತು. ೧೮ನೇ ಶತಮಾನದಲ್ಲಿ ಬಿದನೂರಿನ ರಾಜನ ಪ್ರಭಾವ ಕಡಿಮೆಯಾಗಿ, ಹೈದರಾಲಿಯು ಬಿದನೂರು ರಾಜ್ಯವನ್ನು ವಶಪಡಿಸಿಕೊಂಡನು. ಸಾಮುವೆಲ್ ಮಿಲಿಯವರ ಪ್ರಕಾರ, ಮೈಸೂರು ಅರಸನು ಜನರ ಮೇಲೆ ಭಾರದ ತೆರಿಗೆಯನ್ನು ವಿಧಿಸಿದ್ದರಿಂದ ಅವರು ನೆಮ್ಮದಿಯ ಬದುಕಿನಿಂದ ವಂಚಿತರಾಗಿದ್ದರು.[೨೦]

ಹೈದರಾಲಿ ಸಾಮಾನ್ಯವಾಗಿ ಧರ್ಮಸಹಿಷ್ಣು ಆಗಿದ್ದನೆಂಬುದು ಅವನು ತನ್ನ ಅಧಿಕಾರದುದ್ದಕ್ಕೂ ಮುಸ್ಲಿಮೇತರ ಪ್ರಜೆಗಳ ವಿಷಯವಾಗಿ ಅನುಸರಿಸಿರುವ ಧೋರಣೆಗಳಿಂದ ತಿಳಿದು ಬರುತ್ತದೆ. ಹಿಂದೂ ಧರ್ಮ ಮತ್ತು ಸಂಪ್ರದಾಯಗಳನ್ನು ತನ್ನ ಸಾಮ್ರಾಜ್ಯದೊಳಗೆ ಗೌರವಿಸುತ್ತಿದ್ದ ಅವನು ಮತಾಂಧನಾಗಿರಲಿಲ್ಲ. ಹೈದರ್‌ನಾಮದಲ್ಲಿ ಹೈದರಾಲಿಯನ್ನು 'ದೈವ ಬ್ರಹ್ಮದ್ವೇಷರಹಿತ' ಎಂದು ಸಂಭೋಧಿಸಿದ್ದು, ಅದು ಅವನು ಹಿಂದೂ ದೇವರನ್ನು ಮತ್ತು ಬ್ರಾಹ್ಮಣರನ್ನು ದ್ವೇಷಿಸುತ್ತಿರಲಿಲ್ಲ ಎಂದರ್ಥ. ಹಿಂದೂ ಸಂಸ್ಥೆಗಳಿಗೆ ಮತ್ತು ವ್ಯಕ್ತಿಗಳಿಗೆ ಹಿಂದಿನ ಅರಸರು ಅನುಸರಿಸಿಕೊಂಡು ಬಂದಿದ್ದ ದಾನ-ದಕ್ಷಿಣೆಗಳಾದ ಇನಾಮ್, ಸರ್ವಮಾನ್ಯ, ಅಗ್ರಹಾರ ಇತ್ಯಾದಿಗಳನ್ನು ಹೈದರಾಲಿಯೂ ಮುಂದುವರಿಸಿದ್ದನು. ಅವನ ಆಡಳಿತಕ್ಕೆ ಒಳಪಟ್ಟ ಎಲ್ಲಾ ಪ್ರದೇಶಗಳಲ್ಲಿ ಹಿಂದೂಗಳೇ ಹೆಚ್ಚು ಸಂಖ್ಯೆಯಲ್ಲಿದ್ದು, ಅವರ ಆಸಕ್ತಿಗಳನ್ನು ರಕ್ಷಿಸುವುದು ಅವನ ಆದ್ಯ ಕರ್ತವ್ಯವೆಂದು ನಂಬಿದ್ದನು.[೨೧]

ಕ್ರೈಸ್ತ ಸಮುದಾಯದವರ ಕುರಿತು ಹೈದರಾಲಿ ಇಂಥದೇ ನೀತಿಯನ್ನು ಪಾಲಿಸಿದ್ದನು. ಕೆಳದಿ ಸಾಮ್ರಾಜ್ಯವನ್ನು ವಶಪಡಿಸಿಕೊಂಡ ನಂತರ ಕೆನರಾ ಜಿಲ್ಲೆ ಅವನ ಆಡಳಿತ ವ್ಯಾಪ್ತಿಗೆ ಒಳಪಟ್ಟಿತು.

ಹೈದರಾಲಿ ಧರ್ಮ ಮತ್ತು ರಾಜಕೀಯಗಳನ್ನು ಬೆರೆಸಲಿಲ್ಲ, ಬದಲಾಗಿ, ಇಲ್ಲಿನ ಕ್ರೈಸ್ತ ಸಮುದಾಯದೊಂದಿಗೆ ಉತ್ತಮ ಸಂಬಂಧವನ್ನು ಬೆಳೆಸಿ, ಅವರಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿದ್ದನು. ಕ್ರೈಸ್ತ ಪಾದ್ರಿಗಳಲ್ಲಿ ಇಬ್ಬರು ಫಾ। ಜೋಕಿಂ ಮಿರಾಂದ ಮತ್ತು ಫಾ। ಆ್ಯಂಟನಿ ಜೋಸ್ ಡಿ ನೊರೊನ್ಹ, ಇವರುಗಳೊಂದಿಗೆ ನಿಕಟ ಸಂಪರ್ಕವನ್ನು ಹೈದರಾಲಿ ಬೆಳೆಸಿದ್ದನು.[೨೨] ೧೭೬೬ರಲ್ಲಿ ಒಂದು ಫರ್ಮಾನನ್ನು ಹೊರಡಿಸಿ ಮಲಬಾರಿನ ರೋಮನ್ ಕಥೋಲಿಕ ಚರ್ಚಿಗೆ ೨೪೦೦ ಪನಾಮನ್ನು ದಾನವಾಗಿ ನೀಡಿದ್ದನು. ಒಂದು ವೇಳೆ ಕ್ರೈಸ್ತ ಪ್ರಜೆಗಳು ತಪ್ಪು ಮಾಡಿದಲ್ಲಿ ಅವರನ್ನು ವಿಚಾರಿಸಿ, ತಕ್ಕ ಶಿಕ್ಷೆ ನೀಡುವ ಅಧಿಕಾರವನ್ನು ಕ್ರೈಸ್ತ ಧರ್ಮಗುರುಗಳಿಗೆ ವಹಿಸಿದ್ದನು. ಕಥೋಲಿಕ ಮಿಶನರಿಗಳನ್ನು ಸಾಮಾನ್ಯವಾಗಿ ಅನುಕಂಪದಿಂದಲೇ ನೋಡುತ್ತಿದ್ದನು. ೧೭೭೧ರಂದು ಪೋರ್ಚುಗೀಸರೊಂದಿಗೆ ಮಾಡಿಕೊಂಡ ಒಂದು ಒಪ್ಪಂದದಲ್ಲಿ ಹೈದರಾಲಿ ಮಿಶನರಿಗಳಿಗೆ ಅವನ ಅಧೀನಕ್ಕೆ ಒಳಪಟ್ಟ ಸೀಮೆಗಳಲ್ಲಿ ಸುವಾರ್ತೆ ಸಾರುವ ಸ್ವಾತಂತ್ರ್ಯವನ್ನು ನೀಡಿದ್ದನು. ಯಾವುದೇ ಹಿಂದೂ ಪ್ರಜೆ ಸ್ವಇಚ್ಛೆಯಿಂದ ಕ್ರೈಸ್ತ ಧರ್ಮ ಸೇರಲು, ಹೈದರಾಲಿ ಅಡ್ಡಿ ಉಂಟು ಮಾಡಿರಲಿಲ್ಲ. ಹೀಗೆ ಕ್ರೈಸ್ತರಿಗೂ ಒಂದು ಗೌರವದ ಸ್ಥಾನವನ್ನೂ, ಸಾಕಷ್ಟು ಸ್ವಾಯತ್ತತೆಯನ್ನೂ ಹೈದರಾಲಿ ನೀಡಿರುವುದರಿಂದ ಅವರ ಸಮುದಾಯದ ರಚನೆ ಒಂದರ್ಥದಲ್ಲಿ **'ರಾಜ್ಯದೊಳಗೊಂದು ರಾಜ್ಯ'** ಎಂದು ಭಾಸವಾಗುತ್ತಿತ್ತು.[೨೩]

ಹೈದರಾಲಿ, ಕರಾವಳಿ ಕ್ರೈಸ್ತರನ್ನು ತನ್ನ ಸಾಮ್ರಾಜ್ಯದ ಆಸ್ತಿಯೆಂದೇ ಪರಿಗಣಿಸಿದ್ದನು. ಮನ್ರೋ ಹೇಳುವಂತೆ, ಇಲ್ಲಿಯ ಕ್ರೈಸ್ತರು ಭೂಮಾಲೀಕರಾಗಿದ್ದು, ಕೃಷಿ ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಅದೇ ಕಾರಣಕ್ಕೆ, ಹೈದರಾಲಿ ಇಲ್ಲಿಯ ಕ್ರೈಸ್ತರೊಂದಿಗೆ ನಿಕಟ ಸಂಬಂಧವನ್ನಿಟ್ಟುಕೊಂಡಿದ್ದನು. ೧೭೬೮ರಲ್ಲಿ ಬ್ರಿಟಿಷರು ಮಂಗಳೂರಿನ ಮೇಲೆ ದಾಳಿ ಮಾಡಿ ಅದನ್ನು ವಶಪಡಿಸಿಕೊಂಡರು. ಈ ಸಮಯದಲ್ಲಿ ಪೋರ್ಚುಗೀಸರು ನಿರ್ಲಿಪ್ತರಾಗಿದ್ದರು. ಆದರೆ, ಸ್ಥಳೀಯ ಕ್ರೈಸ್ತರು ಬ್ರಿಟಿಷರ ಪರವಾಗಿದ್ದು, ಅವರಿಗೆ ಪ್ರೋತ್ಸಾಹ ನೀಡಿರುವುದು ಹೈದರಾಲಿಯನ್ನು ಕೆರಳಿಸಿತ್ತು. ಇಷ್ಟೆಲ್ಲಾ ಬೆಳವಣಿಗೆಯ ನಡುವೆಯೂ ಹೈದರಾಲಿ ಕ್ರೈಸ್ತರೊಂದಿಗೆ ಧಾರ್ಮಿಕ ಸಹಿಷ್ಣುತಾ ಭಾವನೆಯನ್ನು ಮುಂದುವರಿಸಿದ್ದನು. ಕೆಲವು ಧರ್ಮಗುರುಗಳನ್ನು ಸೆರೆ ಹಿಡಿದದ್ದು ನಿಜ. ಆದರೆ ಅದನ್ನು ಸಾರ್ವತ್ರಿಕವಾಗಿ ಇಡೀ ಸಮುದಾಯಕ್ಕೆ ನೀಡಿದ ಶಿಕ್ಷೆ ಎಂದು ಅರ್ಥೈಸಬಾರದು. ಹಾಗಾಗಿ, ಹಿಂದೂ ಮತ್ತು ಕ್ರೈಸ್ತ ಪ್ರಜೆಗಳ ಬಗ್ಗೆ ಹೈದರಾಲಿಯ ಧೋರಣೆಗಳು ಕೋಮುವಾದಿ, ಮತಾಂಧತಾ ಭಾವನೆಯಾಗಿರದೆ, ಉದಾರವಾದಿ ಧಾರ್ಮಿಕ ಸಹಿಷ್ಣುತಾ ಧೋರಣೆಗಳಾಗಿ ರಾಜಕೀಯ ಹಿತಾಸಕ್ತಿಗಳ ರಕ್ಷಣಾ ವ್ಯೂಹವಾಗಿರುತ್ತದೆ.[೨೪]

ಧರ್ಮದ ವಿಚಾರವಾಗಿ ಅನೇಕ ಸಂದರ್ಭಗಳಲ್ಲಿ ಟಿಪ್ಪು ಸುಲ್ತಾನನನ್ನು ಉದಾರವಾದಿ ಎಂದು ಪರಿಗಣಿಸಿದರೂ, ವಸಾಹತುಶಾಹಿ ಇತಿಹಾಸಕಾರರು ಅವನು ಮುಸ್ಲಿಮೇತರ ಪ್ರಜೆಗಳ ಕುರಿತು

ತಳೆದಿರುವ ಧಾರ್ಮಿಕ ನೀತಿಯನ್ನು ಖಂಡಿಸಿದ್ದಾರೆ. ಕಿರ್ಕ್ ಪ್ಯಾಟ್ರಿಕ್ ಎಂಬುವವರು ಟಿಪ್ಪುವನ್ನು "ಅಸಹಿಷ್ಣುತೆಯ ಮತದ್ವೇಷಿ ಅಥವಾ ಪ್ರಕೋಪದ ಹುಚ್ಚ" ಎಂದು ಕರೆದಿದ್ದಾರೆ. ಮಾರ್ಕ್ ವಿಲ್ಕ್ಸನು, ತನ್ನ 'ಹಿಸ್ಟರಿ ಆಫ್ ಮೈಸೂರು' ಗ್ರಂಥದಲ್ಲಿ ,"ಬಲವಂತದ ಮತ ಪರಿವರ್ತನೆ, ಸಾಮೂಹಿಕವಾಗಿ ಜನಾಂಗದ ಮುಂದೊಗಲನ್ನು ಕತ್ತರಿಸಿ ಹಾಕುವ ಮತ ಸಂಸ್ಕಾರ, ದೇವಸ್ಥಾನಗಳ ನಾಶ, ದೇವದಾಯಗಳ ಮುಟ್ಟುಗೋಲು ಮುಂತಾದುವುಗಳ ಕತೆಗಳನ್ನು ಹೇಳುತ್ತ, ಟಿಪ್ಪು ಅಸಹಿಷ್ಣತೆಯ ಮತದ್ವೇಷಿಯಾಗಿದ್ದ ಮತ್ತು ಯಾವುದೋ ಒಂದು ಕಾಲದಲ್ಲಿ ಚರಿತ್ರೆಯಲ್ಲಾದ ಧಾರ್ಮಿಕ ಚಿತ್ರಹಿಂಸೆಯು ಅತ್ಯಂತ ಭಯಾನಕವಾಗಿ ಪುನರ್‌ಸ್ಥಾಪನೆಯಾಯಿತು"[೨೫] ಎಂದು ಹೇಳಿದ್ದಾನೆ. ಆದರೆ ಸುರೇಂದ್ರನಾಥ ಸೇನರು, ಟಿಪ್ಪು ಇಸ್ಲಾಂ ಮತಕ್ಕೆ ಬಲವಂತವಾಗಿ ಪರಿವರ್ತನೆಯನ್ನು ಮಾಡಿದ್ದರೂ, ಅವನ ಉದ್ದೇಶ ರಾಜಕೀಯವೇ ಹೊರತು ಧಾರ್ಮಿಕವಲ್ಲವೆಂದು ಅಭಿಪ್ರಾಯ ಪಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಟಿಪ್ಪು ಮುಸ್ಲಿಮೇತರರನ್ನು ಹಿಂಸೆಗೊಳಪಡಿಸಿರುವುದರಲ್ಲಿ ಸಂದೇಹವಿಲ್ಲ, ಆದರೆ ಇದು ಧರ್ಮಾಂಧತೆಯ ಮನೋಭಾವದಿಂದ ಮಾಡಿರುವುದಲ್ಲ, ಬದಲಾಗಿ, ಅವರು ಅವನ ಮತ್ತು ಅವನ ಸರಕಾರಕ್ಕೆ ವಿಧೇಯರಾಗಿರದ, ಅಪರಾಧಕ್ಕಾಗಿ ಹಾಗೆ ಮಾಡಿದನು. ಕೆಲವೊಮ್ಮೆ, ತನ್ನ ಮುಸ್ಲಿಂ ಪ್ರಜೆಗಳನ್ನು ಕೂಡ ಅಪರಾಧಕ್ಕಾಗಿ ಅಷ್ಟೇ ಕ್ರೂರತರವಾಗಿ ನಡೆಸಿಕೊಂಡಿದ್ದನು. [೨೬] ಟಿಪ್ಪು ಸುಲ್ತಾನನು ಕ್ರೈಸ್ತ ಪ್ರಜೆಗಳನ್ನು ಧಾರ್ಮಿಕವಾಗಿ ಚಿತ್ರಹಿಂಸೆಗೆ ಗುರಿಪಡಿಸಿದ್ದನೆಂಬ ಆಪಾದನೆ ಇದ್ದರೂ, ಹಿಂದೂ ಪ್ರಜೆಗಳ ಬಗ್ಗೆ ತಳೆದಿರುವ ಅವನ ಧೋರಣೆಯಂತೆ, ಕ್ರೈಸ್ತರ ವಿಚಾರವಾಗಿಯೂ ರಾಜಕೀಯ ಕಾರಣವೇ ಹೊರತು ಧಾರ್ಮಿಕ ಕಾರಣಗಳಿಗಾಗಿರಲಿಲ್ಲ. ಆಂಗ್ಲೋ-ಮೈಸೂರು ಯುದ್ಧವು ಕ್ರೈಸ್ತರ ಬಂಧನಕ್ಕೆ ಸಾಮಾನ್ಯ ಹಿನ್ನಲೆಯನ್ನು ಒದಗಿಸಿತು. ೧೭೮೩ ರಲ್ಲಿ, ಜನರಲ್ ಮ್ಯಾಥ್ಯೂಸ್ ನೇತೃತ್ವದಲ್ಲಿ , ೪೦೦ ಜನ ಯೂರೋಪಿಯನ್ನರು ಮತ್ತು ೧೨೦೦ ಜನ ಇತರ ಸಿಪಾಯಿಗಳಿದ್ದ ಬ್ರಿಟಿಷ್ ಸೈನ್ಯ ಕರ್ನಾಟಕದ ಕರಾವಳಿಗೆ ಬಂದಿಳಿಯಿತು. [೨೭] ಅವನು ಬಿದನೂರನ್ನು ವಶಪಡಿಸಿಕೊಂಡ ಬಳಿಕ ಸದಾಶಿವಗಢದಿಂದ ಮಂಗಳೂರಿನವರೆಗಿನ ಘಟ್ಟಗಳ ಪಶ್ಚಿಮ ಪ್ರದೇಶದ ಮೇಲೆ ಹತೋಟಿಯನ್ನು ಸ್ಥಾಪಿಸಿದನು. ಜನರಲ್ ಮ್ಯಾಥ್ಯೂಸ್ ಗೆಲ್ಲಲು ಕೆಲವು ಕೊಂಕಣಿ ಕ್ರೈಸ್ತರು ಇಂಗ್ಲಿಷ್ ಸೈನ್ಯಕ್ಕೆ ಸಾಧ್ಯವಿದ್ದ ಸಹಾಯ ಮಾಡಿದರು. ಸೇನೆಯ ಸಂಚಾರ ಕಾಲದಲ್ಲಿ ಅಲ್ಲಿಯ ಕ್ರೈಸ್ತರು ಮಾರ್ಗದರ್ಶಕರಾಗಿ ಕೆಲಸ ಮಾಡಿ ಬ್ರಿಟಿಷರಿಗೆ ಅನುಕೂಲ ಮಾಡಿಕೊಟ್ಟರು.[೨೮]

ಕ್ರೈಸ್ತರ ಬಂಧನಕ್ಕೆ ಕಾರಣವಾದ ಮತ್ತೊಂದು ಅಂಶ, ಕೆಲವು ಕ್ರೈಸ್ತರು ೩,೩೦,೦೦೦ ರೂಪಾಯಿಗಳನ್ನು ಜನರಲ್ ಮ್ಯಾಥ್ಯೂಸನಿಗೆ ಸಾಲವಾಗಿ ಕೊಟ್ಟದ್ದು, ಜೊತೆಗೆ, ಕ್ರೈಸ್ತರು ಇಂಗ್ಲಿಷ್ ಸೇನೆಗೆ ೧೦೦೦ ಚೀಲ ಅಕ್ಕಿಯನ್ನು ಪೂರೈಸಿದರು.[೨೯] ಫ್ರಾಕ್ಸಿ ಜೆ. ಫರ್ನಾಂಡಿಸ್, ತನ್ನ ಕೃತಿ "ಸ್ಟಾರ್ಮ್ ಓವರ್

ಶ್ರೀರಂಗಪಟ್ಟಣ" ದಲ್ಲಿ ಟಿಪ್ಪು ಸುಲ್ತಾನನು ಕೊಂಕಣಿ ಕ್ರೈಸ್ತರನ್ನು ಸೆರೆಹಿಡಿದ ಅಂಶವನ್ನು ಎತ್ತಿ ಹೇಳಿದ್ದಾನೆ. ಜೇಮ್ಸ್ ಸ್ಕರ್ರಿ ಎಂಬ ಶ್ರೀರಂಗಪಟ್ಟಣದಲ್ಲಿದ್ದ ಇಂಗ್ಲಿಷ್ ಕೈದಿ ತಾನು ಬರೆದ ಪುಸ್ತಕ 'ಲೈಫ್ ಆ್ಯಸ್ ಎ ಪ್ರಿಸನರ್'' ನಲ್ಲಿ ತಾನು ಜನರಲ್ ಮ್ಯಾಥ್ಯೂಸ್ ಒಂದು ತಟ್ಟೆಯ ಮೇಲೆ ಮೊಳೆಯಿಂದಲೋ, ಮುಳ್ಳು ಚಮಚದಿಂದಲೋ ಬರೆದಿದುದನ್ನು ಟಿಪ್ಪು ಸುಲ್ತಾನನಿಗೆ ಓದಿ ಹೇಳಿದುದಾಗಿ ಹೇಳಿದ್ದಾನೆ. ಆ ಬರಹದಲ್ಲಿ ಮ್ಯಾಥ್ಯೂಸ್ ಮಲಬಾರ್ ಕ್ರೈಸ್ತರಿಂದ ೩,೩೦,೦೦೦ ರೂಪಾಯಿಗಳನ್ನು ಸಾಲವಾಗಿ ಪಡೆದಿದ್ದುದಾಗಿಯೂ, ಯಾರಾದರೂ ಬಂಧಿಯು ಬಿಡುಗಡೆಯಾದ ಮೇಲೆ ಮದರಾಸಿನ ಈಸ್ಟ್ ಇಂಡಿಯಾ ಕಂಪೆನಿಗೆ ಈ ವಿಷಯವನ್ನು ತಿಳಿಸಬೇಕೆಂದೂ ಕೋರಿದ್ದನು. ಎ.ಎಲ್.ಪಿ.ಡಿಸೋಜ ಈ ಮಾತನ್ನು ಒಪ್ಪುವುದಿಲ್ಲ. ಆದರೆ ಹಾಗೆ ಒಪ್ಪದಿರುವುದಕ್ಕೆ ವಿಹಿತವಾದ ಕಾರಣವನ್ನೇನೂ ಕೊಡುವುದಿಲ್ಲ. ಎ.ಎಲ್.ಪಿ.ಡಿಸೋಜಾ ಅವರು ಟಿಪ್ಪು ಸುಲ್ತಾನನಿಗೆ ಸಂಬಂಧಿಸಿದ ಕೆಲವು ಪತ್ರಗಳ ಆಧಾರದ ಮೇಲೆ ಹೇಳುತ್ತಾರೆ, " ತನ್ನ ಧರ್ಮವನ್ನು ಕುರಿತ ಉತ್ಸಾಹದಿಂದ ಅವನು ಕೆನರಾದ ನಜರೀನರೆಲ್ಲರನ್ನೂ ಸೆರೆ ಹಿಡಿದು ಅವರನ್ನು ಇಸ್ಲಾಂ ಧರ್ಮಕ್ಕೆ ಬಲತ್ಕಾರವಾಗಿ ಪರಿವರ್ತಿಸಿದನು. ಕ್ರೈಸ್ತರ ಬೌದ್ಧಿಕ ಮತ್ತು ಸೈನಿಕ ಶಕ್ತಿಯನ್ನು ಕಂಡು ಅವನು ಅವರನ್ನು ಬಲತ್ಕಾರವಾಗಿ ತನ್ನ ಧರ್ಮಕ್ಕೆ ಪರಿವರ್ತಿಸಿ ಅವರ ನಿಷ್ಠೆಯು ಖಾಯಂ ಆಗಿ ತನ್ನ ಕಡೆಗೆ ಇರುವಂತಾಗಲು ಬಯಸಿದನು." ಈ ಅಭಿಪ್ರಾಯವನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ಕ್ರೈಸ್ತರ ಬಂಧನಕ್ಕೆ ಧಾರ್ಮಿಕ ಪರಿಗಣನೆಯು ಒಂದು ಹಿನ್ನಲೆಯಾಗಿರಲಿಲ್ಲ. ರಾಜಕೀಯ ಪರಿಗಣನೆ ಹಾಗೂ ಕೆಲವು ಕ್ರೈಸ್ತರ ಇಂಗ್ಲಿಷ್ ಪರ ಪ್ರವೃತ್ತಿ ಅದಕ್ಕೆ ಕಾರಣವಾಯಿತು.[೩೦]

ಕೊಂಕಣಿ ಕ್ರೈಸ್ತರು ಜನರಲ್ ಮ್ಯಾಥ್ಯೂಸ್‌ಗೆ ಕೊಟ್ಟ ಬೆಂಬಲದ ಬಗೆಗೆ ಟಿಪ್ಪು ಸುಲ್ತಾನನಿಗೆ ವರದಿ ದೊರಕಿತು. ರಾಜನೀತಿಯ ಅಂಗವಾಗಿ ಸಾಮೂಹಿಕ ಬಂಧನವನ್ನು ಜಾರಿಗೊಳಿಸಲು ನಿರ್ಧರಿಸಿದನು. ಟಿಪ್ಪು ಸುಲ್ತಾನನು ಸಮಸ್ಯೆಗೆ ಪರಿಹಾರವೆಂದು ಹಾಕಿಕೊಂಡ ಈ ಬಂಧನದ ಹಂಚಿಕೆಯನ್ನು ದಮನಕಾರಿ ಕ್ರಮವೆನ್ನುವುದಕ್ಕಿಂತ ರಾಜ್ಯಾಡಳಿತ ನೀತಿಯ ಒಂದು ಅಂಶವನ್ನಾಗಿ ನೋಡಬಹುದು. ಇದು ಟಿಪ್ಪು ಸುಲ್ತಾನನ ಕ್ರಮವನ್ನು ಸಮರ್ಥಿಸುವುದಕ್ಕಲ್ಲ, ಆ ಕಾಲದ ಇತಿಹಾಸದ ಹಿನ್ನಲೆಯಲ್ಲಿ ಸಮಸ್ಯೆಯನ್ನು ಪರಿಶೀಲಿಸುವ ಪ್ರಯತ್ನ ಅಷ್ಟೇ. ಆದರೆ ಆ ಯೋಜನೆಯನ್ನು ನಿರ್ವಹಿಸಿದ ವಿಧಾನ, ಸೆರೆಗೊಂಡವರನ್ನು ನೋಡಿಕೊಂಡ ರೀತಿ ಅಮಾನವೀಯ ನಡವಳಿಕೆಯನ್ನು ತೋರಿಸುತ್ತದೆ. ಟಿಪ್ಪು ಸುಲ್ತಾನನೇ ನೇರವಾಗಿ ಈ ಅಮಾನವೀಯ ನಡವಳಿಕೆಯಲ್ಲಿ ತೊಡಗಿಕೊಂಡನೋ ಇಲ್ಲವೋ, ರಾಜ್ಯದ ಮುಖ್ಯಸ್ಥನಾಗಿ ಅವನು ಅದಕ್ಕೆ ಜವಾಬ್ದಾರನಾಗಲೇಬೇಕು.[೩೧] ಎರಡನೆ ಆಂಗ್ಲೋ-ಮೈಸೂರು ಯುದ್ಧದ ಕೊನೆಗೆ ಸಹಿ ಹಾಕಲಾದ ಮಂಗಳೂರು ಒಪ್ಪಂದದಲ್ಲಿ, ಇಂಗ್ಲಿಷರಿಗೆ ಸಹಾಯ ಮಾಡಿದ ಕೊಂಕಣಿ ಕ್ರೈಸ್ತರನ್ನು ಕ್ಷಮಿಸುವ ಯಾವ ಪ್ರಸ್ತಾಪವೂ ಇರಲಿಲ್ಲ. ಪಾದ್ರಿಗಳನ್ನು ಬಂಧಿಸಬಾರದು ಮತ್ತು

ಕ್ರೈಸ್ತರಿಗೆ ಉಪಟಳ ನೀಡಬಾರದು ಎಂದು ಗೋವಾದ ಪೋರ್ಚುಗೀಸ್ ಸರ್ಕಾರ ಟಿಪ್ಪುವಿಗೆ ಬರೆದಿದ್ದರಾದರೂ ಟಿಪ್ಪು ಅದನ್ನು ಲೆಕ್ಕಿಸಲಿಲ್ಲ.[೩೨]

ಕರಾವಳಿ ಕರ್ನಾಟಕದಲ್ಲಿ ವಾಸವಾಗಿದ್ದ ಎಲ್ಲಾ ಕೊಂಕಣಿ ಕ್ರೈಸ್ತರನ್ನು ೧೭೮೪ರಲ್ಲಿ ಒಂದೇ ಸಲ ಟಿಪ್ಪು ಗಡಿಪಾರು ಮಾಡಲಿಲ್ಲ. ಬಂಧನದ ಸುದ್ದಿ ಕೇಳಿದೊಡನೆಯೇ ಶಕ್ತಿಯಿದ್ದ ಅನೇಕರು ಓಡಿಹೋದರು. ಶ್ರೀಮಂತರಾಗಿದ್ದ ಕೆಲವು ಕೊಂಕಣಿ ಕ್ರೈಸ್ತರು ಅಧಿಕಾರಿಗಳಿಗೆ ಲಂಚಕೊಟ್ಟು ಬಂಧನದಿಂದ ತಪ್ಪಿಸಿಕೊಂಡರು. ಗೋವೆಗೆ ಸೇರಿದ ಧರ್ಮಗುರುಗಳನ್ನು ಬಂಧಿಸಲಿಲ್ಲ, ಅವರನ್ನು ಗೋವೆಗೆ ಕಳುಹಿಸಿಬಿಟ್ಟನು. ಪೋರ್ಚುಗೀಸ್ ದಾಖಲೆಗಳ ಪ್ರಕಾರ ೧೩ ಜನ ಗೋವಾದ ಧರ್ಮಗುರುಗಳು ಬರಿಗೈಯಲ್ಲಿ ಗೋವಾ ತಲುಪಿದರು. ಫಾ। ಮಿರಾಂದರವರನ್ನು ಗಡಿಪಾರು ಮಾಡಿ ತಲಚೇರಿಗೆ ಕಳುಹಿಸಿದನು.[೩೩] ಪೋರ್ಚುಗೀಸ್ ದಾಖಲೆಗಳ ಪ್ರಕಾರ ೨೦,೦೦೦ ಮಂದಿ ಕಥೋಲಿಕರ ಬಂಧನ ಆಗಿರಬಹುದು. ಇನ್ನೂ ಅಧಿಕವೆಂದರೆ, ಫಾ। ಮಿರಾಂದರ ಹೇಳಿಕೆಯಂತೆ ೪೦,೦೦೦ ಎಂಬುದನ್ನೂ ಇಟ್ಟುಕೊಳ್ಳಬಹುದು. ಆದ್ದರಿಂದ ಕರಾವಳಿ ಕರ್ನಾಟಕದಿಂದ ಶ್ರೀರಂಗಪಟ್ಟಣಕ್ಕೆ ಕರೆದೊಯ್ದ ಕೊಂಕಣಿ ಕ್ರೈಸ್ತರ ಸಂಖ್ಯೆ ೪೦,೦೦೦ ಕ್ಕಿಂತ ಹೆಚ್ಚಲ್ಲ ಮತ್ತು ೨೦,೦೦೦ ಕ್ಕಿಂತ ಕಡಿಮೆಯಾಗಿರುವ ಸಾಧ್ಯತೆಯೂ ಇಲ್ಲ ಎಂಬುದಾಗಿ ಸೆವರಿನ್ ಸಿಲ್ವಾ ಅವರ ಅಭಿಪ್ರಾಯವಾಗಿದೆ.[೩೪]

೧೭೯೯ರಲ್ಲಿ ಟಿಪ್ಪು ಸುಲ್ತಾನ್ ಯುದ್ಧದಲ್ಲಿ ಸತ್ತ ಮೇಲೆ ಕೊಂಕಣಿ ಕ್ರೈಸ್ತರು ಶ್ರೀರಂಗಪಟ್ಟಣ ಬಂಧನದಿಂದ ಬಿಡುಗಡೆಯಾಗಿ ತಾಯಿನಾಡಿಗೆ ಹಿಂದಿರುಗಿದರು.[೩೫] ಅದುವರೆಗೆ ಬಿದನೂರು ಮತ್ತು ಮೈಸೂರು ರಾಜರ ಕೈ ಕೆಳಗೆ ಇದ್ದ ಕೆನರಾ ಜಿಲ್ಲೆ ಇಂಗ್ಲಿಷರ ಅಧೀನವಾಯಿತು. ಆದುದರಿಂದ ಬ್ರಿಟಿಷರು ಕೆನರಾವನ್ನು ವಶಪಡಿಸಿಕೊಳ್ಳುವ ಮೊದಲೇ ರೋಮನ್ ಕಥೋಲಿಕ ಕ್ರೈಸ್ತರು ಕರಾವಳಿಯುದ್ದಕ್ಕೂ ನೆಲೆಯೂರಿದ್ದರು. ಮಲಬಾರ್, ಕೆನರಾ ಮತ್ತು ಮೈಸೂರು ರಾಜ್ಯಗಳ ಸ್ಥಿತಿಗತಿಗಳ ಅಧ್ಯಯನಕ್ಕಾಗಿ ಬ್ರಿಟಿಷ್ ಸರಕಾರದಿಂದ ನಿಯೋಜಿಸಲ್ಪಟ್ಟ ಬುಕಾನನ್ ೧೮೦೧ರಲ್ಲಿ ಕೆನರಾಕ್ಕೆ ಭೇಟಿ ನೀಡಿದ ಬಳಿಕ ಹೀಗೆ ಬರೆಯುತ್ತಾರೆ, "ಈಗಾಗಲೇ ೧೫,೦೦೦ ಜನರು ಮಂಗಳೂರು ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಿಗೆ ಹಿಂದಿರುಗಿ ಬಂದಿದ್ದಾರೆ. ೧೦,೦೦೦ ಜನರು ಮಲಬಾರಿಗೆ ತಪ್ಪಿಸಿಕೊಂಡು ಹೋಗಿದ್ದವರು, ಮನೆಗೆ ಹಿಂದಿರುಗುತ್ತಿದ್ದಾರೆ. ಬಡತನದಿಂದ ಪಾಳುಬಿದ್ದ ಚರ್ಚುಗಳಲ್ಲಿ ಯಾವುದನ್ನೂ ಮರಳಿ ನಿರ್ಮಿಸಲು ಸಾಧ್ಯವಾಗಿಲ್ಲ.[೩೬] ೨೦,೦೦೦ ಜನರು ಬಂಧನದಿಂದ ತಪ್ಪಿಸಿಕೊಂಡು ಮರಳಿದರೆಂದು ಅಬೆ-ದುಬ್ವಾ ಹೇಳುತ್ತಾರೆ.[೩೭] ಮೂರನೆಯ ಒಂದು ಭಾಗದಷ್ಟು ಜನರು ಮೊದಲನೆಯ ವರ್ಷದಲ್ಲಿಯೇ ತೀರಿಕೊಂಡರೆಂದು ವಿಲ್ಕ್ಸ್ ನಿರ್ಧರಿಸುತ್ತಾರೆ.[೩೮] ಬಂಧನದ ಸ್ವರೂಪವನ್ನು ಚರ್ಚಿಸಿ, ಹ್ಯಾಮಿಲ್ಟನ್, ಬಹು ಕಡಿಮೆ ಸಂಖ್ಯೆಯಲ್ಲಿ ಹಿಂದಿರುಗಿದರು ಎಂದು ಹೇಳುತ್ತಾನೆ.[೩೯] ೧೮೧೮ರಲ್ಲಿ ಕೆನರಾದಲ್ಲಿ

ಕಥೋಲಿಕರ ಸಂಖ್ಯೆ ೨೧,೮೦೦ [೪೦] ಹಾಗೂ ೧೮೫೪ರಲ್ಲಿ ೩೦,೪೮೦ಕ್ಕೆ ತಲುಪಿತ್ತು.[೪೧] ಈ ಮೇಲಿನ ಅಂಕೆ-ಸಂಖ್ಯೆಗಳಿಂದ ತಿಳಿದು ಬರುವುದೇನೆಂದರೆ ೧೭೮೪-೧೭೯೯ರ 'ಕೆನರಾ ಬಂಧನ'ದ ಹೊರತಾಗಿಯೂ ಜಿಲ್ಲೆಯಲ್ಲಿ ಕಥೋಲಿಕರ ಸಂಖ್ಯೆ ಸಾಕಾಷ್ಟು ಇತ್ತು ಎಂಬುದು.

೧೮ನೇ ಶತಮಾನದ ಕೊನೆಯಲ್ಲಿ ಈಸ್ಟ್ ಇಂಡಿಯ ಕಂಪನಿಯು ಭಾರತದ ಹಲವು ಪ್ರಾಂತ್ಯಗಳನ್ನು ಸ್ವಾಧೀನ ಪಡಿಸಿಕೊಂಡು ಆಡಳಿತದ ಜವಾಬ್ದಾರಿಯನ್ನು ಹೊತ್ತುಕೊಂಡ ಮೇಲೆ ಅದರ ಧಾರ್ಮಿಕ ನೀತಿಯಲ್ಲಿ ಬದಲಾವಣೆಯಾಯಿತು. ಭಾರತೀಯರ ವಿಶ್ವಾಸಗಳು ಹಾಗೂ ಸಾಂಪ್ರದಾಯಕ ಸಂಸ್ಕೃತಿಗಳಲ್ಲಿ ಇಲ್ಲವೇ ಆಚಾರಗಳಲ್ಲಿ 'ಕೈ ಹಾಕದಿರುವ' ಹೊಸ ಧೋರಣೆಯನ್ನು ಹೊಂದಿದ ನಂತರ ಕಂಪನಿಯು ಕ್ರೈಸ್ತ ಧರ್ಮ ಪ್ರಸಾರಣೆಯ ಎಲ್ಲಾ ಬಗೆಯ ಕಾರ್ಯವನ್ನೂ ನಿಷೇಧಿಸಿತು. ಆದರೆ, ಔದ್ಯೋಗಿಕ ಕ್ರಾಂತಿಯಿಂದುಂಟಾದ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಗಳು ಬ್ರಿಟಿಷರಲ್ಲಿ ತಮ್ಮ ಧರ್ಮ, ಸಂಸ್ಕೃತಿ ಹಾಗೂ ನಾಗರೀಕತೆಯಲ್ಲಿ ಒಂದು ನೂತನ ಅಭಿಮಾನವನ್ನು ಹಾಗೂ ಬ್ರಿಟನ್ನಿನ ಭವಿಷ್ಯತ್ತಿನ ಕುರಿತು ನೂತನ ವಿಶ್ವಾಸವನ್ನೂ, ನಿರೀಕ್ಷೆಯನ್ನೂ ಹುಟ್ಟಿಸಿದವು. ಈ ಕಾರಣದಿಂದಾಗಿ ಅವರು ತಮ್ಮ ದೇಶ, ಧರ್ಮ, ಸಂಸ್ಕೃತಿ ಹಾಗೂ ನಾಗರಿಕತೆಗಳ ಬಗ್ಗೆ ಉಚ್ಚ ಮನೋಭಾವನೆಯನ್ನು ಹಾಗೂ ಭಾರತದ ಬಗ್ಗೆ ತುಚ್ಛ- ಭಾವನೆಯನ್ನು ವ್ಯಕ್ತಪಡಿಸಲಾರಂಭಿಸಿದರು.

೧೮೧೩ರಲ್ಲಿ ಕಂಪನಿಯ ಸನ್ನದ್ದಿನ ತಿದ್ದುಪಡಿಯ ಕುರಿತು ಪುನಃ ವಿಮರ್ಶೆಯಾಗುತ್ತಿರುವ ಹಿನ್ನೆಲೆಯಲ್ಲಿ ಉದಾರವಾದಿಗಳು ಭಾರತದಲ್ಲಿ ಸಾಮಾಜಿಕ ಸುಧಾರಣೆಯಾಗಬೇಕೆಂಬ ಬೇಡಿಕೆಯನ್ನು ಮಂಡಿಸಿದರು. ಸತಿ ಸಹಗಮನ ಪದ್ಧತಿ, ಹೆಣ್ಣು ಶಿಶುಹತ್ಯೆ, ಮೂರ್ತಿಪೂಜೆ, ಜಾತಿ ಪದ್ಧತಿ ಮುಂತಾದ ಸಾಮಾಜಿಕ ಕೆಡುಕುಗಳ ನಿರ್ಮೂಲನೆಗಾಗಿ ಕ್ರೈಸ್ತ ಧರ್ಮದ ಅಗತ್ಯತೆಯನ್ನು ಇಂಗ್ಲಿಷರ ಈ ಗುಂಪು ಒತ್ತಿ ಹೇಳಿತು.[೪೨] ಆದರೆ ಸಾಮ್ರಾಜ್ಯಶಾಹಿವಾದಿಗಳು ಭಾರತದಲ್ಲಿರುವ ಬಹು ಸಂಖ್ಯಾಕ ಹಿಂದೂಗಳ ಧಾರ್ಮಿಕ ವಿಷಯಗಳಲ್ಲಿ ಕೈ ಹಾಕುವುದನ್ನು ವಿರೋಧಿಸಿದರು. ಸೌವಾರ್ತಿಕವಾದಿಗಳು ಭಾರತದಲ್ಲಿ ಸುವಾರ್ತಾ ಪ್ರಸಾರಣೆಗೆ ಮಿಶನರಿಗಳಿಗೆ ಅನುಮತಿ ನೀಡಬೇಕೆಂಬ ಬೇಡಿಕೆಯನ್ನು ಸಮರ್ಥಿಸುವುದಕ್ಕಾಗಿಯೂ ಹಾಗೂ ಆ ಬೇಡಿಕೆಗೆ ಇಂಗ್ಲೆಂಡಿನ ಸಾರ್ವಜನಿಕರ ಬೆಂಬಲವನ್ನು ಪಡೆಯುವುಕ್ಕಾಗಿಯೂ ಭಾರತದ ಧರ್ಮ ಹಾಗೂ ಸಮಾಜದ ಬಗ್ಗೆ ನಕಾರಾತ್ಮಕವಾದ ಚಿತ್ರಣವನ್ನು ತಮ್ಮ ಬರವಣಿಗೆಗಳಲ್ಲಿ ಕೊಟ್ಟರು. ಜೇಮ್ಸ್ ಮಿಲ್ಲನು ತಾನು ಬರೆದ 'ಹಿಸ್ಟರಿ ಆಫ್ ಬ್ರಿಟಿಷ್ ಇಂಡಿಯಾ' ಪುಸ್ತಕದಲ್ಲಿ "ಭಾರತೀಯ ಧರ್ಮದ ನಿಜವಾದ ಲಕ್ಷಣ ಅಂಧ ವಿಶ್ವಾಸ ಹಾಗೂ ಪುರೋಹಿತರ ನಿರಂಕುಶ ಪ್ರಭುತ್ವ ಇವುಗಳೇ ಆಗಿದೆ. ಭಾರತದ ಸಾಮಾಜಿಕ ಪದ್ಧತಿಯು ಜನರಲ್ಲಿ ಆಲಸ್ಯವನ್ನೂ, ದುರಾಶೆಯನ್ನೂ ಹಾಗೂ ಅಜ್ಞಾನವನ್ನು ಉಂಟು ಮಾಡಿದೆಯೆಂದು" ಹೇಳಿದನು. ಚಾರ್ಲ್ಸ್ ಗ್ರಾಂಟನು,

“ಬ್ರಿಟಿಷರು ತಾವು ವಶಪಡಿಸಿಕೊಂಡ ಸ್ಥಳಗಳಿಂದ ಕೇವಲ ವಾರ್ಷಿಕ ಲಾಭ ಪಡೆಯಬೇಕೆಂಬಷ್ಟನ್ನೇ ದೇವರು ಅಪೇಕ್ಷಿಸುವುದಿಲ್ಲ. ಆದರೆ ಬಹಳ ಕಾಲದಿಂದಲೂ ಕತ್ತಲೆಯಲ್ಲಿ ದುಸ್ಥಿತಿಯಲ್ಲಿ ಮುಳುಗಿದ ಅದರ ನಿವಾಸಿಗಳೊಂದಿಗೆ ಬೆಳಕನ್ನು, ಸತ್ಯವನ್ನು, ಶಿಸ್ತಿನ ಸಮಾಜದ ಆಶೀರ್ವಾದಗಳನ್ನು, ಔದ್ಯೋಗಿಕ ಬೆಳವಣಿಗೆಗಳನ್ನೂ ಅದರ ಸೌಕರ್ಯಗಳನ್ನೂ ಹಂಚಿಕೊಳ್ಳಬೇಕೆಂದು” ಸೂಚಿಸಿದನು. ವಿಲಿಯಂ ವಿಲ್ಬರ್ ಫೋರ್ಸನು, “ಬ್ರಿಟಿಷರ ಧರ್ಮವು ಶ್ರೇಷ್ಠವಾದುದು, ಶುದ್ಧವಾದುದು ಹಾಗೂ ಪ್ರಯೋಜನಕಾರಿಯಾದುದು. ಅವರದು (ಭಾರತೀಯ) ಹೀನಕರವೂ, ವಿಷಯ ಲಂಪಾಟವೂ ಹಾಗೂ ಕ್ರೂರವೂ ಆಗಿದೆ” ಎಂದು ಹೇಳಿದನು.[೪೩] ಅಲೆಕ್ಸಾಂಡರ್ ಡಫನು, “ಅತಿ ದೊಡ್ಡ ಕಟ್ಟಡದಂತೆ ಬೆಳೆದು ನಿಂತಿರುವ ಮೂರ್ತಿ ಪೂಜೆ ಹಾಗೂ ಮೂಢಭಕ್ತಿಯನ್ನು ನಿರ್ಮೂಲ ಮಾಡುವುದೇ ಕ್ರೈಸ್ತರ ಕರ್ತವ್ಯವೆಂದು” ವಾದಿಸಿದನು. ಸೌವಾರ್ತಿಕರು ಹಾಗೂ ಉದಾರವಾದಿಗಳು ಕ್ರೈಸ್ತ ಧರ್ಮವು ಮಾತ್ರವೇ ಭಾರತ ಸಮಾಜವನ್ನು ನೈತಿಕವಾಗಿ ಪರಿವರ್ತಿಸಬಲ್ಲದು ಎಂದು ನಂಬಿದ್ದರು. ಬಹುಜನ ಉದಾರವಾದಿಗಳ ಪರವಾಗಿ ಚಾರ್ಲ್ಸ್ ಟ್ರೆವರ್ಲಿನ್ ಹೀಗೆ ಹೇಳಿದನು: “ದೇಶೀಯರನ್ನು ಕ್ರೈಸ್ತ ಧರ್ಮಕ್ಕೆ ಮತಾಂತರ ಮಾಡುವುದರ ಹೊರತು ಬೇರೆ ಯಾವುದೂ ನಿಜವಾದ ನೈತಿಕ ಪರಿವರ್ತನೆಯನ್ನು ತರಲಾರದು.” ಮಿಲ್ಸ್, ಗ್ರಾಂಟ್, ಢಫ್ ಹಾಗೂ ಇತರರು ಭಾರತೀಯ ಸಮಾಜದ ಬಗ್ಗೆ ಕೊಟ್ಟ ಚಿತ್ರಣವು ಇಲ್ಲವೇ ಹೇಳಿದ ಮಾತುಗಳು, ಭಾರತೀಯ ಧರ್ಮಗಳ ಬಗ್ಗೆ ಮಿಶನರಿಗಳ ವಿಚಾರಗಳ ಮೇಲೆ ತುಂಬಾ ಪ್ರಭಾವ ಬೀರಿವೆ.[೪೪] ೧೯ನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಮಿಶನರಿ ಆಸಕ್ತಿಯ ಬೆಳವಣಿಗೆಯು ಆ ದೇಶದ ಸಾಮ್ರಾಜ್ಯದ ಭಾವನೆಯ ಬೆಳವಣಿಗೆಯೊಂದಿಗೆ ಸಂಬಂಧಿಸಿದೆ. ಆದುದರಿಂದ ಮಿಶನರಿಗಳು ತಾವು ಕೇವಲ ಸುವಾರ್ತೆಯ ಪ್ರಚಾರಕರು ಆಗಿರದೆ ವಸಾಹತುಶಾಹಿತ್ವ ಬೆಳವಣಿಗೆಯಲ್ಲಿ ಅಂದರೆ ಬೇರೆ ದೇಶಗಳನ್ನು ಹಾಗೂ ಜನಾಂಗಗಳನ್ನು ವಶಪಡಿಸಿಕೊಳ್ಳುವುದರಲ್ಲಿಯೂ, ವ್ಯಾಪಾರ ಹಾಗೂ ಬ್ರಿಟಿಷ್ ನಾಗರಿಕತೆಯನ್ನು ಹಬ್ಬಿಸುವುದರಲ್ಲಿಯೂ ತಾವು ಮುಖ್ಯ ಪಾಲುಗಾರರಾಗಿದ್ದೇವೆಂದು ಎಣಿಸಿದ್ದರು.[೪೫]

೧೮೩೩ರಲ್ಲಿ ಈಸ್ಟ್ ಇಂಡಿಯಾ ಕಂಪನಿ ಸರ್ಕಾರವು ಶಾಸನ ತಿದ್ದುಪಡಿ ಮಾಡಿ ಇಂಗ್ಲಿಷ್ ಸಂಘ ಮಾತ್ರವಲ್ಲದೆ ಇತರರೂ ಭಾರತದಲ್ಲಿ ಕ್ರೈಸ್ತ ಸುವಾರ್ತಿಕ ಸೇವೆಯನ್ನು ನಡೆಸಬಹುದೆಂಬ ಅನುಮತಿಯನ್ನು ನೀಡಿದರು.[೪೬] ಇದರಿಂದ ಬಾಸೆಲ್ ಮಿಶನ್ ಸಂಘದ ಮೂಲಕ ೧೮೩೪ರಲ್ಲಿ ರೆವೆ. ಸಾಮುವೆಲ್ ಹೆಬಿಕ್, ರೆವೆ. ಜೆ. ಸಿ. ಲೇಹ್ನರ್, ರೆವೆ. ಸಿ. ಎಲ್. ಗ್ರೈನರ್ ಮತ್ತು ಎಂಬ ಮೂವರು ಮಿಶನರಿಗಳು ಮಂಗಳೂರಿಗೆ ತಲುಪಿದರು. ಇವರುಗಳ ಆಗಮನದ ಮೂಲ ಉದ್ದೇಶ ಕ್ರೈಸ್ತ ಮತವನ್ನು ಪ್ರಸಾರ ಮಾಡುವುದಾದರೂ, ಈ ಉದ್ದೇಶ ನೆರವೇರಬೇಕಾದರೆ ಜನರನ್ನು ಜ್ಞಾನದ ಕಡೆಗೆ ನಡೆಸುವುದು ಬಹು ಅಗತ್ಯ ಎಂದರಿತ ಮಿಶನರಿಗಳು ಜನರ ಅಗತ್ಯತೆಗಳನ್ನು ಪೂರೈಸುವುದಕ್ಕೆ

ನೆರವಾಗುವ ರೀತಿಯಲ್ಲಿ, ಜಿಲ್ಲೆಯಲ್ಲಿ ಶಿಕ್ಷಣ, ಮುದ್ರಣ, ಹಂಚು, ನೇಯ್ಗೆ, ವೈದ್ಯಕೀಯ, ಸಾಹಿತ್ಯ ಮೊದಲಾದ ರಂಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಜಿಲ್ಲೆಯ ಸಮಗ್ರ ಬದಲಾವಣೆಯಲ್ಲಿ ಮಹತ್ತರ ಪಾತ್ರವನ್ನು ವಹಿಸಿದರು.

## ೧.೧. ಜಿಲ್ಲೆಯ ಕ್ರೈಸ್ತರ ಕುರಿತು ಇದುವರೆಗಿನ ಅಧ್ಯಯನಗಳು

ಕ್ರೈಸ್ತ ಧರ್ಮ ಮತ್ತು ಅದರ ಪ್ರಸಾರದ ಕುರಿತು ಆಧುನಿಕ ದಕ್ಷಿಣ ಕನ್ನಡದಲ್ಲಿ ಈಗಾಗಲೇ ಹಲವು ಅಧ್ಯಯನಗಳು ನಡೆದಿವೆ. ೧೯ನೇ ಶತಮಾನದ ಆರಂಭದಲ್ಲಿ ಲಾರ್ಡ್ ವೆಲ್ಲೆಸ್ಲಿಯ ವಿನಂತಿಯ ಮೇರೆಗೆ ಫ್ರಾನ್ಸಿಸ್ ಬುಕಾನನ್ ಎಂಬ ವಿದ್ವಾಂಸನು ಬರೆದ 'ಜರ್ನಿ ಫ್ರಂ ಮದ್ರಾಸ್ ಥ್ರು ದ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಎಂಡ್ ಮಲಬಾರ್ ( ೧೮೦೦-೦೧)' ೩ ಸಂಪುಟಗಳು ಉಪಯುಕ್ತ ಮಾಹಿತಿಗಳನ್ನು ಒಳಗೊಂಡಿವೆ. ಅದು ಜಿಲ್ಲೆಯ ಹಾಗೂ ಜನತೆಯ ಕುರಿತಾದ ಹಲವು ಕುತೂಹಲಕಾರಿ ಮಾಹಿತಿಗಳನ್ನು ಒದಗಿಸುತ್ತದೆ. ಆದರೆ ಬ್ರಿಟಿಷ್ ಆಡಳಿತಗಾರರ ಬರಹಗಳು ಪೂರ್ವಾಗ್ರಹ ಪೀಡಿತವಾಗಿದ್ದು ಅವುಗಳನ್ನು ಎಚ್ಚರಿಕೆಯಿಂದ ಅಧ್ಯಯನ ನಡೆಸಬೇಕಾಗುತ್ತದೆ. ಅದೇ ರೀತಿ ಸ್ಥಳೀಯ ಆಕರಗಳಲ್ಲಿನ ವೈಭವೀಕೃತ ನಿರೂಪಣೆಗಳನ್ನು ಕೈಬಿಡಬೇಕಾಗುತ್ತದೆ. ಇಂದಿನ ಯಾವುದೇ ಲಿಖಿತ ಅಥವಾ ಶಿಷ್ಟ ಪರಂಪರೆಯ ಮುಖಾಂತರ ಇತಿಹಾಸವನ್ನು ಗ್ರಹಿಸಿದಾಗ ಅವು ಕೇವಲ ಕೆಲವೇ ಸಿದ್ಧ ಮಾನದಂಡಗಳಿಂದ, ಸೀಮಿತ ಉದ್ದೇಶಕ್ಕಾಗಿ, ಸೀಮಿತ ದೃಷ್ಟಿಕೋನದಿಂದ ರಚಿತವಾದವುಗಳಾಗಿರುತ್ತವೆ. ಭಾರತದ ಈವರೆಗಿನ ಇತಿಹಾಸ, ಸಾಹಿತ್ಯಗಳು ಮತ್ತು ಸಂಸ್ಕೃತಿಯ ಬಗೆಗಿನ ಗ್ರಹಿಕೆಗಳು ಸಂಪೂರ್ಣವಾಗಿ ಭಾರತೀಯ ಪುರೋಹಿತಶಾಹಿ ಮತ್ತು ಪಾಶ್ಚಾತ್ಯ ವಸಾಹತುಶಾಹಿ ಮನೋಧರ್ಮದಿಂದ ಗ್ರಹಿಸಿರುವವುಗಳು. ಬ್ರಿಟಿಷರು ಭಾರತಕ್ಕೆ ಬರುವ ಮುಂಚೆ, ಭಾರತಕ್ಕೆ ಇತಿಹಾಸಗಳೆಂದರೆ ಪುರಾಣ, ಉಪನಿಷತ್ತು, ವೇದ, ಸ್ಮೃತಿಗಳು ಮತ್ತು ಕಾವ್ಯಗಳು. ಇವುಗಳ ಆಧಾರದಿಂದ ಭಾರತದ ಸಂಸ್ಕೃತಿಯ ಕಲ್ಪನೆಯನ್ನು ನೀಡಲಾಗಿದೆ. ಆದರೆ ಈ ಕಾಲ, ಉದ್ದೇಶ, ಸಂದರ್ಭ ಮತ್ತು ಅವುಗಳ ಕರ್ತೃ ಇವುಗಳ ಬಗ್ಗೆ ಗಮನಿಸಿದಾಗ ಅವು ಒಂದು ನಿರ್ದಿಷ್ಟ ಜನವರ್ಗದ ಆಶಯ, ಆಕಾಂಕ್ಷೆ ಮತ್ತು ಒಳಿತನ್ನು ಪ್ರತಿಬಿಂಬಿಸುತ್ತವೆಯೇ ಹೊರತು ಸಮಷ್ಟಿಯನ್ನಲ್ಲ. ಇದಕ್ಕೆ ಮುಖ್ಯ ಕಾರಣ ವಿದ್ಯೆಯ ಕೇಂದ್ರೀಕರಣ ಮತ್ತು ಅದು ಪರರಿಗೆ ಸೇರಬಾರದೆಂಬ ಗೌಪ್ಯ ಸಂರಕ್ಷಣೆ. ಕೇಂದ್ರಿಕೃತ ವಿದ್ಯೆ ಭಾರತದ ಬಹುದೊಡ್ಡ ಜನಸಮೂಹವನ್ನು ಶಿಕ್ಷಣದಿಂದ ದೂರವಿರಿಸಿತು.[೪೭] ದಕ್ಷಿಣ ಕನ್ನಡದ ಇತಿಹಾಸದ ಆರಂಭಿಕ ಬರಹಗಾರರು ಬ್ರಿಟಿಷ್ ಆಡಳಿತಗಾರರೂ ಆಗಿದ್ದು, ಅವರು ತಮ್ಮ ಅಧ್ಯಯನಕ್ಕೆ ಈಸ್ಟ್ ಇಂಡಿಯಾ ಕಂಪನಿಯ ಆಡಳಿತಾತ್ಮಕ ದಾಖಲೆಗಳನ್ನೇ ಆಧರಿಸಿದ್ದುದು ಕಂಡುಬರುತ್ತದೆ. ಆದರೂ, 'ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನುವೆಲ್ಸ್ - ಸೌತ್ ಕೆನರಾ' ಎಂಬ ಗ್ರಂಥದ ಎರಡೂ ಸಂಪುಟಗಳು ಗಮನಾರ್ಹವಾದ

ಕೃತಿಗಳಾಗಿವೆ. ಜಿಲ್ಲೆಯ ಇತಿಹಾಸದ ಅಧ್ಯಯನವನ್ನು ಕೈಗೆತ್ತಿಕೊಳ್ಳುವವರಿಗೆ ಈ ಸಂಪುಟಗಳು ತುಂಬಾ ಪ್ರಯೋಜನಕಾರಿಯಾಗಿವೆ.

ಜಿಲ್ಲೆಯ ಇತಿಹಾಸದ ಅಧ್ಯಯನ, ಸಂಶೋಧನೆಗಳಲ್ಲಿ ತೊಡಗಿದ ಕೆಲವು ಸ್ಥಳೀಯ ವಿದ್ವಾಂಸರು ಆಂಗ್ಲ ಪೂರ್ವ ಕಾಲಾವಧಿಯಲ್ಲಿಯೇ ತಮ್ಮ ಗಮನವನ್ನು ಕೇಂದ್ರಿಕರಿಸಿದ್ದಾರೆ. ಅಂತಹ ವಿದ್ವಾಂಸರಲ್ಲಿ ಎಂ. ಗಣಪತಿ ರಾವ್ ಐಗಳ್ ಪ್ರಮುಖರು. ಅವರು ಜಿಲ್ಲೆಯ ರಾಜಕೀಯ ಇತಿಹಾಸಕ್ಕೆ ಹೆಚ್ಚಿನ ಒತ್ತು ನೀಡಿರುವುದು ಕಂಡುಬರುತ್ತದೆ. ಅವರ ಕೃತಿಯು ೧೯ನೇ ಶತಮಾನದ ಆರಂಭದಿಂದ ಅಂತ್ಯವರೆಗಿನ ಬ್ರಿಟಿಷ್ ಆಡಳಿತದ ಮಾಹಿತಿಗಳಿಗೆ ಆಧಾರವಾಗಿದೆ. ಅನಂತರ ಆಂಗ್ಲ ಪೂರ್ವ ಕಾಲಾವಧಿಗೆ ಸಂಬಂಧಿಸಿದಂತೆ ಅನೇಕ ಕೃತಿಗಳು ಪ್ರಕಟಗೊಂಡಿವೆ. ಅವುಗಳಲ್ಲಿ ಹೆಚ್ಚಿನವು ಶಾಸನಗಳನ್ನೂ, ಜಾನಪದ ಪಾಡ್ದನಗಳನ್ನೂ, ಗ್ರಾಮಪದ್ಧತಿ ಎಂಬ ಜನಪ್ರಿಯ ಐತಿಹ್ಯಗಳನ್ನು ಆಧರಿಸಿ ರಚನೆಗೊಂಡಿವೆ. ಕೆಲವು ತಜ್ಞರು ಜಿಲ್ಲೆಯನ್ನು ಕುರಿತಾದ ತಮ್ಮ ಅಧ್ಯಯನಕ್ಕೆ ವಸಾಹತು ಕಾಲದ ಮತ್ತು ಸ್ವಾತಂತ್ರ್ಯೋತ್ತರ ಅವಧಿಯ ಜಿಲ್ಲಾ ರಾಜ್ಯಪತ್ರವನ್ನೂ ಇತ್ತೀಚಿಗಿನ ಐತಿಹಾಸಿಕ ವಿಚಾರಗಳನ್ನೂ ಆಧಾರವಾಗಿ ಬಳಸಿದ್ದಾರೆ.

ವಿವಿಧ ವಿದ್ವಾಂಸರು ದಕ್ಷಿಣ ಕನ್ನಡದ ಕಥೋಲಿಕರನ್ನು ಕುರಿತಾಗಿ ಮಾಡಿದ ಹಲವು ಅಧ್ಯಯನಗಳು ಪ್ರಕಟಿತ ಹಾಗೂ ಅಪ್ರಕಟಿತ ಕೃತಿಗಳ ರೂಪದಲ್ಲಿವೆ. ಸಾಮುವೆಲ್ ಮಿಲಿಯವರ 'ಕೆನರಾ, ಪಾಸ್ಟ್ ಆಂಡ್ ಪ್ರೆಸೆಂಟ್' ಎಂಬ ಗ್ರಂಥದಲ್ಲಿ ೧೯ನೇ ಶತಮಾನದ ಹಿಂದಿನ ಕೆನರಾದ ಭೌಗೋಳಿಕ ಲಕ್ಷಣ, ಕಥೋಲಿಕ ಕ್ರೈಸ್ತರ ಶಿಕ್ಷಣ, ಜೀವನ ಕ್ರಮ ಮುಂತಾದ ವಿಚಾರಗಳ ಬಗ್ಗೆ ಉಪಯುಕ್ತ ಮಾಹಿತಿಯನ್ನು ಒದಗಿಸಿಕೊಡುತ್ತಾರೆ. ಯೇಸುಸಭೆಗೆ ಸೇರಿದ ಫಾ। ಮಾಫ್ಫೆಯವರು ಸಂಗ್ರಹಿಸಿದ ಮಾಹಿತಿಗಳನ್ನು ಬಳಸಿಕೊಂಡು ಯೇಸುಸಭೆಯ ಫಾ। ಜೆ. ಮೂರ್ ಎಂಬವರು ಸಂಪಾದಿಸಿದ 'ಹಿಸ್ಟರಿ ಆಫ್ ದ ಡಯಾಸಿಸ್ ಆಫ್ ಮ್ಯಾಂಗಲೂರ್' ಗ್ರಂಥವು ಜಿಲ್ಲೆಯಲ್ಲಿ ಕಥೋಲಿಕ ಸಮಾಜವು ಜೀವಿಸಿದ ಬಗೆ, ಅವರ ಸಾಧನೆಗಳು ಇವುಗಳ ಕುರಿತು ಪ್ರಮುಖವಾದ ಬೆಳಕು ಚೆಲ್ಲುವ ಕೃತಿಯಾಗಿದೆ. ಧಾರ್ಮಿಕ ವಿಚಾರಗಳಿಗಷ್ಟೇ ಸೀಮಿತವಾಗಿರುವುದು ಈ ಕೃತಿಯ ನ್ಯೂನತೆ ಎನ್ನಬಹುದು. ಜೆ.ಎಂ.ಮೊರಾಯಸ್ ಎಂಬವರು ಬರೆದ 'ಮ್ಯಾಂಗಲೂರ್, ಎ ಹಿಸ್ಟೋರಿಕಲ್ ಸ್ಕೆಚ್' ಎಂಬ ಗ್ರಂಥವು ಜಿಲ್ಲೆಯಲ್ಲಿ ಕ್ರೈಸ್ತರ ಆರಂಭದ ದಿನಗಳಿಂದ ತೊಡಗಿ ಅವರು ಬಂಧನದಿಂದ ಹಿಂದಿರುಗುವ ವರೆಗಿನ ವಿವರಗಳನ್ನೂ, ಕ್ರೈಸ್ತ ಧರ್ಮ ಪ್ರಸಾರದ ಮಾಹಿತಿಗಳನ್ನೂ ಸವಿವರವಾಗಿ ನೀಡುತ್ತದೆ.

ವಿಲಿಯಂ ಎಕ್ಸ್. ಮಸ್ಕರೇನ್ಹಸ್ ಅವರ ಅಪ್ರಕಟಿತ ಕೃತಿಯಾದ ' ಹೈದರ್ ಆಲಿ ಆಂಡ್ ಟಿಪ್ಪು ಸುಲ್ತಾನ್ ಇನ್ ಕೆನರಾ' ಗ್ರಂಥವು ಮೈಸೂರನ್ನು ಆಳಿದ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರ ಕಾಲದ ಇತಿಹಾಸವನ್ನು ಒಳಗೊಂಡಿದೆ. ಈ ವಿದ್ವಾಂಸರು ಆಂಗ್ಲ ವಸಾಹತುಶಾಹಿ ದಾಖಲೆಗಳನ್ನು ಮತ್ತು ಹೈದರ್ – ಟಿಪ್ಪು ಇವರ ಕುರಿತು ಜಿಲ್ಲೆಯಲ್ಲಿ ಜನಜನಿತವಾಗಿದ್ದ ಐತಿಹ್ಯಗಳನ್ನು ವಿಪುಲವಾಗಿ ಬಳಸಿಕೊಂಡಿರುತ್ತಾರೆ. ವಸಾಹತುಶಾಹಿ ದಾಖಲೆಗಳ ಮೇಲೆ ಅತಿಯಾದ ಅವಲಂಬನೆಯ ಕಾರಣದಿಂದಾಗಿ ಈ ಲೇಖಕರು ಪೂರ್ವಾಗ್ರಹ ಪೀಡಿತರಾಗಿರುವಂತೆ ಕಂಡು ಬರುತ್ತದೆ. ಆದರೂ, ಇವರ ಕೃತಿಯಲ್ಲಿ ಹೈದರಾಲಿಯು ಟಿಪ್ಪುವಿಗಿಂತ ಉತ್ತಮ ವ್ಯಕ್ತಿತ್ವದವನಾಗಿ ಚಿತ್ರಿಸಲ್ಪಟ್ಟಿದ್ದಾನೆ. ಎಸ್.ಎನ್. ಸಲ್ಡಾನ ಅವರ ' ದ ಕಾಪ್ಟಿವಿಟಿ ಆಫ್ ಕೆನರಾ ಕ್ರಿಶ್ಚಿಯನ್ಸ್ ಅಂಡರ್ ಟಿಪ್ಪು ಇನ್ ೧೭೮೪' ಕೃತಿಯು ಮೂಲ ದಾಖಲೆಗಳನ್ನು ಪರಿಶೀಲಿಸಿ ಬಂಧನದ ಕುರಿತಾದ ಹೊಸ ಒಳನೋಟಗಳನ್ನು ನೀಡಿರುವುದು ವ್ಯಕ್ತವಾಗುತ್ತದೆ. ಸೆವೆರಿನ್ ಸಿಲ್ವಾ ಅವರ 'ಹಿಸ್ಟರಿ ಆಫ್ ಕ್ರಿಶ್ಚಿಯಾನಿಟಿ ಇನ್ ಕೆನರಾ' ಗ್ರಂಥದ ಎರಡೂ ಸಂಪುಟಗಳು ಕ್ರೈಸ್ತ ಸಮುದಾಯದ ಇತಿಹಾಸವನ್ನು ಅಧ್ಯಯನ ಮಾಡಿದ ಮಾಹಿತಿಗಳಿಂದ ಕೂಡಿವೆ. ಮೊದಲನೇ ಸಂಪುಟವು ಪೋರ್ಚುಗೀಸ್ ಅಧಿಪತ್ಯವು ಅನುಸರಿಸಿದ ಮತಾಂತರ ವಿಚಾರಗಳನ್ನು ಮತ್ತು ೧೮೫೦ರವರೆಗಿನ ಇತರ ವಿವರಗಳನ್ನು ಒಳಗೊಂಡಿದೆ. ಎರಡನೇ ಸಂಪುಟವು ಇದಕ್ಕೆ ಬೇಕಾದ ಪೂರಕ ಮಾಹಿತಿಗಳನ್ನು ಒದಗಿಸುತ್ತದೆ. ಎ.ಎಲ್.ಪಿ. ಡಿ'ಸೋಜರ 'ಹಿಸ್ಟರಿ ಆಫ್ ದ ಕಥೋಲಿಕ್ ಕಮ್ಯೂನಿಟಿ ಆಫ್ ಸೌತ್ ಕೆನರಾ'ವು ದಕ್ಷಿಣ ಕನ್ನಡದ ಕಥೋಲಿಕರ ಆರಂಭಿಕ ಇತಿಹಾಸದ ಮೇಲೆ ಬೆಳಕು ಬೀರುವ ಕಿರು ಹೊತ್ತಗೆಯಾಗಿದೆ. ಜಾರ್ಜ್ ಪೌಲಿನೋ ಸಿಕ್ವೇರಾ ಅವರು ತಮ್ಮ 'ಟೈಗರ್ ಆಫ್ ಮೈಸೂರ್ ಆಂಡ್ ಕೆನರಾ ಕ್ರಿಶ್ಚಿಯನ್ಸ್' ಕೃತಿಯಲ್ಲಿ ಟಿಪ್ಪು ಸುಲ್ತಾನನ ಮತಾಂಧತೆಯನ್ನು ಪ್ರಬಲವಾಗಿ ಪ್ರತಿಪಾದಿಸಿದ್ದಾರೆ. ಕೆನರಾ ಬಂಧಿತರ ಸಂಖ್ಯೆಯನ್ನು ಅಂದಾಜಿಸಲಾಗಿದ್ದ ೩೦,೦೦೦ದಿಂದ ಈ ಕೃತಿಯಲ್ಲಿ ೨೦,೦೦೦ಕ್ಕೆ ಇಳಿಸಲಾಗಿದೆ.

ಪಿಯೂಸ್ ಫಿಡೆಲಿಸ್ ಪಿಂಟೋ ಅವರು ತಮ್ಮ ' ಹಿಸ್ಟರಿ ಆಫ್ ಕ್ರಿಶ್ಚಿಯನ್ಸ್ ಇನ್ ಕೋಸ್ಟಲ್ ಕರ್ನಾಟಕ (೧೫೦೦-೧೭೬೩)' ಕೃತಿಯಲ್ಲಿ ಸೆವೆರಿನ್ ಸಿಲ್ವಾ ಅವರಂತೆ ವಿಭಿನ್ನವಾದ ದೃಷ್ಟಿಕೋನವನ್ನು ಹೊಂದಿದ್ದು ಕೆನರಾದ ಕಥೋಲಿಕರ ಇತಿಹಾಸವನ್ನೂ, ಸಮಸ್ಯೆಗಳನ್ನೂ ಕುರಿತು ಹೊಸ ಬೆಳಕಿನಲ್ಲಿ ವಿಶ್ಲೇಷಿಸಿದ್ದಾರೆ. 'ಸರಸ್ವತಿ'ಸ್ ಚಿಲ್ಡ್ರನ್ಸ್- ಎ ಹಿಸ್ಟರಿ ಆಫ್ ದ ಮ್ಯಾಂಗಲೂರಿಯನ್ ಕ್ರಿಶ್ಚಿಯನ್ಸ್' ಎಂಬುದು ಆ್ಯಲೆನ್ ಮಚಾದೊ ಪ್ರಭು ವಿರಚಿತ ಕೃತಿಯಾಗಿದ್ದು, ಆರಂಭದ ಕಾಲದಿಂದ ಕಥೋಲಿಕರ ಇತಿಹಾಸವನ್ನು ನಿರೂಪಿಸುತ್ತದೆ. ಮೊದಲಿಗೆ ಸರಸ್ವತಿ ನದಿಯ ದಡದಲ್ಲಿ ವಾಸಿಸುತ್ತಿದ್ದ ಜನಾಂಗದವರು

ಬಳಿಕ ಕಥೋಲಿಕರಾಗಿ ಮತಾಂತರಗೊಂಡರು ಎಂಬುದು ಇಲ್ಲಿ ಗಮರ್ನಾಹವಾಗಿದೆ. 'ಸಾರಸ್ವತ' ಮತ್ತು 'ಗೌಡ ಸಾರಸ್ವತ' ಎಂಬ ಶಬ್ಧಗಳು ಇವರ ಹೆಸರಿನೊಂದಿಗೆ ಸೇರಿರುವುದು ಇದಕ್ಕೆ ಪ್ರಬಲವಾದ ಸಾಕ್ಷಿಯಾಗಿದೆ. ಈ ವಂಶಸ್ಥರನ್ನು ಪೋರ್ಚುಗೀಸ್ ಮಿಶನರಿಗಳು ಒತ್ತಾಯದ ಮತಾಂತರದಿಂದ ಕ್ರೈಸ್ತರನ್ನಾಗಿಸಿದ ವಿಚಾರವು ಇಲ್ಲಿ ಪ್ರಸ್ತಾಪಿತವಾಗಿದೆ. ಕ್ರಾಂತಿ ಕೆ. ಫರಾಯಸ್ ಅವರು ತಮ್ಮ 'ದ ಕ್ರಿಶ್ಚಿಯನ್ ಇಂಪಾಕ್ಟ್ ಇನ್ ಸೌತ್ ಕೆನರಾ' ಪುಸ್ತಕದಲ್ಲಿ ಜಿಲ್ಲೆಯ ಮೇಲೆ ಕ್ರೈಸ್ತ ಧರ್ಮದ ಪ್ರಭಾವವು ಯಾವ ರೀತಿಯಲ್ಲಾಯಿತು ಎಂಬ ಬಗ್ಗೆ ವಿಶ್ಲೇಷಿಸಿದ್ದಾರೆ. ಕಥೋಲಿಕ ಮತ್ತು ಪ್ರೊಟೆಸ್ಟೆಂಟ್ ಪಂಗಡಗಳಿಗೆ ಸೇರಿದ ಕ್ರೈಸ್ತರ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಜೀವನವನ್ನು ಅಧ್ಯಯನ ಮಾಡುವ ಈ ಕೃತಿಯಲ್ಲಿ ದಕ್ಷಿಣ ಕನ್ನಡದ ಸಾಮಾಜಿಕ ಬದಲಾವಣೆಗೆ ಕ್ರೈಸ್ತ ಮತವು ಪೂರಕವಾಗಿತ್ತು ಎಂಬ ವಿಚಾರಕ್ಕೆ ಒತ್ತು ನೀಡಲಾಗಿದೆ.

'ಡಿಸ್ಟಿಂಗ್ವಿಸ್ಡ್ ಮ್ಯಾಂಗಲೂರಿಯನ್ ಕ್ಯಾಥೋಲಿಕ್ಸ್' ಪುಸ್ತಕದಲ್ಲಿ ಅದರ ಲೇಖಕರಾದ ಮೈಕಲ್ ಲೋಬೋರವರು ಮುಖ್ಯವಾಗಿ ಸರ್ಕಾರಿ ಸೇವೆಗಳಲ್ಲಿಯೂ, ವ್ಯಾಪಾರ ವ್ಯವಹಾರಗಳಲ್ಲಿ ಮತ್ತು ಉದ್ಯೋಗಾರ್ಥಿಗಳಾಗಿ ವಿದೇಶದಲ್ಲಿಯೂ ಚದುರಿಹೋದ ಜಿಲ್ಲೆಯಲ್ಲಿ ಕೆನೆ ಪದರದಂತಿರುವ ಕಥೋಲಿಕರ ಔದ್ಯೋಗಿಕ ಇತಿಹಾಸದ ಕುರಿತು ಮಾಹಿತಿ ನೀಡಿದ್ದಾರೆ. ಭಾರತದಲ್ಲಿಯೂ, ಜಗತ್ತಿನಾದ್ಯಂತ ಇತರ ಸ್ಥಳಗಳಲ್ಲಿಯೂ ವಾಸ ಮಾಡುತ್ತಿರುವ ದಕ್ಷಿಣ ಕನ್ನಡದ ಕಥೋಲಿಕರ ಕುರಿತು ಮಾಹಿತಿ ನೀಡುವ ಇದೇ ಲೇಖಕರ ಇನ್ನೊಂದು ಕೃತಿಯು 'ಮ್ಯಾಂಗಲೂರಿಯನ್ಸ್ ವರ್ಲ್ಡ್‌ವೈಡ್' ಎಂಬುದಾಗಿದೆ. ಮೇಲಿನ ಎರಡೂ ಕೃತಿಗಳ ಸಾರವನ್ನು ಒಳಗೊಂಡಂತೆ ಮೈಕಲ್ ಲೋಬೋರವರು ಬರೆದ ಮೂರನೇ ಪುಸ್ತಕವೇ 'ಹಿಸ್ಟರಿ ಆಂಡ್ ಡೈರೆಕ್ಟರಿ ಆಫ್ ಮ್ಯಾಂಗಲೂರಿಯನ್ ಕ್ಯಾಥೋಲಿಕ್ಸ್'. ಈ ಮೂರು ಕೃತಿಗಳೂ ಮಾಹಿತಿ ಸಂಗ್ರಹದಲ್ಲಿ ಅಸಾಧಾರಣ ಕಾರ್ಯವನ್ನು ಮಾಡಿದ್ದರೂ, ಅವುಗಳಲ್ಲಿ ಕೇವಲ ಸರ್ಕಾರಿ ಉದ್ಯೋಗಸ್ಥರ, ವಿದೇಶಗಳಲ್ಲಿ ನೆಲೆಸಿದವರ ಕುರಿತಾದ ವಿವರಗಳು, ಕೆಲವೊಮ್ಮೆ ಕೇವಲ ಹೆಸರುಗಳ ಉಲ್ಲೇಖವಿರುತ್ತದೆ. ಗ್ರಾಮೀಣ ಭಾಗದಲ್ಲಿ ನೆಲೆಸಿದ ಬಹು ಸಂಖ್ಯೆಯಲ್ಲಿರುವ ಕಥೋಲಿಕರ ಕುರಿತು ಈ ಕೃತಿಗಳು ಮೌನ ತಾಳಿವೆ. ಆದುದರಿಂದ ಉನ್ನತ ಸಾಧಕರ ಪ್ರಗತಿಗೆ ಹಿನ್ನಲೆಯಲ್ಲಿರುವ ಸಾಮಾಜಿಕ ಸ್ಥಿತಿಯನ್ನು ಪೂರ್ಣವಾಗಿ ನಿರ್ಲಕ್ಷಿಸಿದಂತಾಗಿದೆ.

ಅಲ್ಫಾನ್ಸೊಸ್ ಡಿಸೋಜ ಜೆ.ಸ. ಎಂಬವರು ಸಮಾಜ ಶಾಸ್ತ್ರೀಯ ನೆಲೆಯಲ್ಲಿ ಅವಲೋಕಿಸಿ ತಮ್ಮ 'ಪಾಪ್ಯುಲರ್ ಕ್ರಿಶ್ಚಿಯಾನಿಟಿ- ಎ ಕೇಸ್ ಸ್ಟಡಿ ಎಮಂಗ್ ದ ಕ್ಯಾಥೋಲಿಕ್ಸ್ ಆಫ್ ಮ್ಯಾಂಗಲೂರ್' ಎಂಬ ಅಪ್ರಕಟಿತ ನಿಬಂಧದಲ್ಲಿ ಕ್ರೈಸ್ತ ಧರ್ಮಾಚಾರಣೆಯು ಜನತೆಯಲ್ಲಿ ಯಾವ ರೀತಿಯಾಗಿತ್ತೆಂದು

ವಿವರಿಸಿದ್ದಾರೆ. ವಿನಯ್ ರಜತ್ ಎಂಬವರು ತಮ್ಮ 'ಸೋಶಿಯಲ್ ಸ್ಟ್ರಕ್ಚರ್ ಆಂಡ್ ಸ್ಟ್ರಾಟಿಫಿಕೇಷನ್ ಎಮಂಗ್ ದ ಕ್ಯಾಥೋಲಿಕ್ಸ್ ಆಫ್ ಮ್ಯಾಂಗಲೂರ್' ಎಂಬ ಅಪ್ರಕಟಿತ ನಿಬಂಧದಲ್ಲಿ ದಕ್ಷಿಣ ಕನ್ನಡದ ಕಥೋಲಿಕ ಸಮಾಜದಲ್ಲಿ ಆಚರಣೆಯಲ್ಲಿರುವ ವಿವಿಧ ಜಾತಿ ಪದ್ಧತಿಯನ್ನು ವಿಶ್ಲೇಷಿಸಿದ್ದಾರೆ. ಯೇಸು ಸಭೆಯ ಇಮ್ಯಾನುವೆಲ್ ಬೊನ್ನಿ ಎಂಬವರು ಬರೆದ 'ಎಮಾಂಗ್ ದ ಔಟ್ ಕಾಸ್ಟ್ಸ್, ಎ ಹಿಸ್ಟರಿ ಆಫ್ ದ ಪಯೋನಿಯರಿಂಗ್ ಜೆಸ್ವಿಟ್ ಮಿಶನರೀಸ್ ಇನ್ ದ ಡಯಾಸಿಸ್ ಆಫ್ ಮ್ಯಾಂಗಲೂರ್' ಪುಸ್ತಕದಲ್ಲಿ ಮತಾಂತರ ಚಟುವಟಿಕೆಗಳಲ್ಲಿ ತೊಡಗಿದ ಧರ್ಮಗುರುಗಳ ಕುರಿತು ಮಾಹಿತಿ ದೊರೆಯುತ್ತದೆ. ಯೇಸು ಸಭೆಯ ದೇವದತ್ತ ಕಾಮತ್ ಎಂಬವರ 'ದ ಬರ್ನಿಂಗ್ ಬುಶ್, ದ ಹಿಸ್ಟರಿ ಆಫ್ ದ ಕರ್ನಾಟಕ ಜೆಸ್ವಟ್ ಪ್ರೋವಿನ್ಸ್' ಪುಸ್ತಕದ ಎರಡೂ ಸಂಪುಟಗಳಲ್ಲಿ ಕರ್ನಾಟಕ ಪ್ರಾಂತ್ಯದ ಯೇಸುಸಭೆಯ ಇತಿಹಾಸದ ಅವಲೋಕನ ನಡೆಸಿದ್ದಾರೆ. ಮೊದಲನೆ ಸಂಪುಟದಲ್ಲಿ ಜಿಲ್ಲೆಯ ಮಂಗಳೂರು ಭಾಗದಲ್ಲಾದ ಯೇಸುಸಭೆಯ ಸಾಧನೆಗಳ ವಿವರ ದೊರೆಯುತ್ತದೆ. ಜಿಲ್ಲೆಯಲ್ಲಿ ಇಗರ್ಜಿಗಳ ಸ್ಥಾಪನೆಗಾಗಿ ಆದ್ಯ ಯೇಸುಸಭೆಯ ಧರ್ಮಗುರುಗಳು ಮಾಡಿದ ತ್ಯಾಗ, ದುಡಿಮೆ ಇತ್ಯಾದಿಗಳ ಕುರಿತು ವಿವರಿಸಲು ಈ ಲೇಖಕರು ಪ್ರಯತ್ನಿಸಿದ್ದಾರೆ. ಇವರ ಕೃತಿಗಳಲ್ಲಿ, ಪ್ರಸಿದ್ಧ ಧರ್ಮಗುರುಗಳಾದ ಕೋರ್ಟಿ ಮತ್ತು ಕಮಿಸಾ ಇವರುಗಳ ವಿವರಣೆಯು ದೊಡ್ಡ ಪ್ರಮಾಣದಲ್ಲಿ ಇದ್ದರೂ ಅವರು ಕೈಗೊಂಡ ಅಲಕ್ಷಿತ ವರ್ಗದ ಮತಾಂತರ ಕ್ರಿಯೆಯೂ ದಾಖಲೆಯಾಗಿವೆ. ಇವರ ಬರೆಹವು ಧಾರ್ಮಿಕ ಸಾಧನೆಗಳ ಕೃತಿಯಾಗಿರುವುದರಿಂದ ಸಮಾಜದ ಪ್ರಗತಿಗೆ ಧರ್ಮಗುರುಗಳೇ ಕಾರಣವೆಂಬ ಶ್ಲಾಘನೆಯ ಧೋರಣೆಯನ್ನು ಹೊಂದಿದೆ.

ಜಿಲ್ಲೆಯ ವಲಸಿಗರ ಕುರಿತು ಮಾಹಿತಿ ನೀಡುವಂತಹ ಕೆಲವು ಅಧ್ಯಯನಗಳೂ ನಡೆದಿವೆ. ವಿಶ್ವನಾಥ ಕಾರ್ನಾಡ್ ಅವರ 'ತುಳುವರ ಮುಂಬೈ ವಲಸೆ: ಸಾಂಸ್ಕೃತಿಕ ಅಧ್ಯಯನ' ಎಂಬ ಸಂಶೋಧನಾ ಕೃತಿಯಲ್ಲಿ ಜಿಲ್ಲೆಯಿಂದ ತುಳುವ ಜನಾಂಗದವರು ಮುಂಬೈಗೆ ವಲಸೆ ಹೋದುದರ ನಿರೂಪಣೆ ಮಾಡಿದ್ದಾರೆ. ಆದರೆ ಈ ಕೃತಿಯಲ್ಲಿ ಕಥೋಲಿಕರ ಮತ್ತು ಗೌಡ ಸಾರಸ್ವತ ಬ್ರಾಹ್ಮಣ ವರ್ಗದವರ ಮಾಹಿತಿಯನ್ನು ಕೈ ಬಿಟ್ಟಂತೆ ಕಾಣುತ್ತದೆ. ವಾಲ್ಟರ್ ಡಿ'ಸೋಜ ಅವರ 'ಗಲ್ಫ್ ಮೈಗ್ರೇಶನ್ ಆಂಡ್ ಇಟ್ಸ್ ಸೋಶಿಯೋ – ಇಕಾನಾಮಿಕ್ ಇಂಪಾಕ್ಟ್ - ಎ ಸ್ಟಡಿ ವಿಥ್ ರೆಫರೆನ್ಸ್ ಟು ದಕ್ಷಿಣ ಕನ್ನಡ' ಎಂಬ ಅಪ್ರಕಟಿತ ನಿಬಂಧದವು ಹೆಸರೇ ಸೂಚಿಸುವಂತೆ ಕೊಲ್ಲಿ ರಾಷ್ಟ್ರಗಳಿಗೆ ವಲಸೆ ಹೋದವರ ಜೀವನ ಮಟ್ಟ ಸುಧಾರಣೆ, ಸಾಮಾಜಿಕ ಮತ್ತು ಆರ್ಥಿಕ ಪರಿಣಾಮಗಳ ಕುರಿತು ವಿವರಣೆಯನ್ನು ಹೊಂದಿದೆ. ಈ ಕೃತಿಯಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಿಂದ ವಲಸೆ ಹೋದ ಮುಸ್ಲಿಂ, ಬಂಟ, ಬಿಲ್ಲವ ಮತ್ತಿತರ ಸಮುದಾಯಗಳ ಕುರಿತು ಉಲ್ಲೇಖ ದೊರೆಯುತ್ತದೆ; ಆದರೆ ಕ್ರೈಸ್ತ ಸಮುದಾಯದ ಬಗ್ಗೆ ಯಾವುದೇ

ಉಲ್ಲೇಖವಿಲ್ಲ. ನೋರ್ಬರ್ಟ್ ಲೋಬೋರವರ 'ಮೈಗ್ರೇಶನ್ ಆಂಡ್ ಮೈಗ್ರೆಂಟ್ಸ್' ಎಂಬ ಸಂಶೋಧನಾ ಕೃತಿಯು ೧೯೬೦ರ ನಂತರ ದಕ್ಷಿಣ ಕನ್ನಡದ ಗ್ರಾಮೀಣ ಭಾಗಗಳಿಂದ ಪಟ್ಟಣ ಪ್ರದೇಶಗಳಿಗೆ ಬೇರೆ ಬೇರೆ ಕಾರಣಗಳಿಗಾಗಿ ವಲಸೆ ಹೋದವರ ಕುರಿತು ವಿವರಣೆ ನೀಡುತ್ತದೆ. ವಿಶಾಂರ್ಘ್ ಪಿಂಟೋರವರ " ಮೈಗ್ರೇಶನ್ ಆಫ್ ದ ಕ್ಯಾಥೋಲಿಕ್ಸ್ ಆಫ್ ಸೌತ್ ಕೆನರಾ ಎಂಡ್ ಇಟ್ಸ್ ಸೋಶಿಯೊ – ಇಕಾನಾಮಿಕ್ ಡೈಮೆನ್ಶನ್ಸ್ (೧೯೦೦-೧೯೮೦)" ಎಂಬ ಅಪ್ರಕಟಿತ ಮಹಾಪ್ರಬಂಧದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕಥೋಲಿಕರ ವಿವಿಧ ನಮೂನೆಯ ವಲಸೆಗಳು ಹಾಗೂ ಅದರಿಂದ ಸಮುದಾಯದ ಮತ್ತು ಜಿಲ್ಲೆಯ ಮೇಲಾಗಿರುವ ಪ್ರಭಾವದ ಬಗ್ಗೆ ವಿಶದವಾಗಿ ವಿವರಿಸಿದ್ದಾರೆ.

"ದ ಬಾಸೆಲ್ ಮಿಶನ್ ಇನ್ ಸೌತ್ ಕೆನರಾ (೧೮೩೪-೧೯೪೭)" ಎಂಬ ಅಪ್ರಕಟಿತ ನಿಬಂಧದಲ್ಲಿ ಪೀಟರ್ ವಿಲ್ಸನ್ ಪ್ರಭಾಕರ್‌ರವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಾಸೆಲ್ ಮಿಶನ್ನಿನ ವೈವಿಧ್ಯಮಯ ಚಟುವಟಿಕೆಗಳ ವಿಮರ್ಶೆಯನ್ನು ಮೂಲ ಆಕರ ಹಾಗೂ ಕ್ಷೇತ್ರ ಕಾರ್ಯಗಳ ಸಹಾಯದಿಂದ ಮಾಡುವ ಪ್ರಯತ್ನ ಮಾಡಿದ್ದಾರೆ. ಬಾಸೆಲ್ ಮಿಶನ್‌ನ ವಾರ್ಷಿಕ ವರದಿಗಳ ವಿಸ್ತೃತ ಅಧ್ಯಯನದಿಂದ ರಚಿತವಾಗಿರುವ ಈ ಕೃತಿ, ಬಾಸೆಲ್ ಮಿಶನ್ನಿನ ಕಾರ್ಯ ವೈಖರಿಯ ಬಗ್ಗೆ ತಿಳಿದುಕೊಳ್ಳಲು ತುಂಬಾ ಪ್ರಯೋಜನಕಾರಿಯಾಗಿದೆ. ಮಿಶನರಿಗಳು ಬಾಸೆಲ್‌ನಲ್ಲಿರುವ ಗೃಹ ಸಮಿತಿಗೆ ಬರೆಯುತ್ತಿದ್ದ ಈ ವಾರ್ಷಿಕ ವರದಿಗಳು ಮಿಶನ್ನಿನ ಸೇವಾ ಕಾರ್ಯದ ಬಗ್ಗೆ ಸಹಜ ಸ್ಥಿತಿಗಿಂತ ಸ್ವಲ್ಪ ಹೆಚ್ಚಾಗಿಯೇ ಉತ್ಪ್ರೇಕ್ಷಿಸಿ ಬರೆಯುವ ಮೂಲಕ ವಿಲಾಯಿತಿಯಿಂದ ಅನುಕಂಪ ಹಾಗೂ ಔದಾರ್ಯತೆಯನ್ನು ಗಿಟ್ಟಿಸಿಕೊಳ್ಳಲು ಪ್ರಯತ್ನಿಸಿರುವುದನ್ನು ತಮ್ಮ ಸಂಶೋಧನೆಯ ಮೂಲಕ ಪ್ರಚುರಪಡಿಸಿದ್ದಾರೆ.

ಲೆತಿಷಿಯಾ ಎಸ್. ಮೊಂತೇರೊರವರು, "ಇಕಾನಮೀಸ್ ಎಂಡ್ ಗ್ರೋಥ್ ಪೊಟೆಂಶಿಯಲ್ ಆಫ್ ದ ಟೈಲ್ ಇಂಡಸ್ಟ್ರಿ ಆಫ್ ದಕ್ಷಿಣ ಕನ್ನಡ" ಎಂಬ ಅಪ್ರಕಟಿತ ನಿಬಂಧದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಹಂಚು ಉದ್ಯಮದ ಹುಟ್ಟು, ಬೆಳವಣಿಗೆ, ಸಂಘಟನೆ, ಮಾರುಕಟ್ಟೆ ಮತ್ತು ಕೈಗಾರಿಕೆಗಳ ಸಮಸ್ಯೆಗಳ ಬಗ್ಗೆ ಸುಮಾರು ೭೦ ಕಾರ್ಖಾನೆಗಳ ಕ್ಷೇತ್ರ ಕಾರ್ಯ ನಡೆಸಿ ಮಾಹಿತಿ ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ. ಮುಖ್ಯವಾಗಿ ಗುಡಿ ಕೈಗಾರಿಕೆಯಾಗಿದ್ದ ಹಂಚಿನ ಕಾರ್ಖಾನೆ ಸುಸಂಘಟಿತ ಕಾರ್ಖಾನೆ ವ್ಯವಸ್ಥೆಯಾಗಿ ಪರಿವರ್ತನೆಯಾದ ಸನ್ನಿವೇಶವನ್ನು ವಿವರಿಸಿದ್ದಾರೆ. ದಕ್ಷಿಣ ಕನ್ನಡದಂತಹ ಸಣ್ಣ ಪ್ರದೇಶವೊಂದರಲ್ಲಿ ಕೈಗಾರಿಕಾ ಕಸುಬು ಒಂದರಲ್ಲಿ ಹಣ, ವಸ್ತು ಮತ್ತು ಮಾನವ ಸಂಪನ್ಮೂಲಗಳನ್ನು ತೊಡಗಿಸಿಕೊಂಡಿರುವ ಚಿತ್ರಣವನ್ನು ಅಂಕಿ ಅಂಶಗಳ ಸಮೇತ ನೀಡಿದ್ದಾರೆ.

ಜೈಪ್ರಕಾಶ್ ರಾಘವಯ್ಯನವರು ತಮ್ಮ "ಬಾಸೆಲ್ ಮಿಶನ್ ಇಂಡಸ್ಟ್ರೀಸ್ ಇನ್ ಮಲಬಾರ್ ಆಂಡ್ ಸೌತ್ ಕೆನರಾ: ೧೮೩೪-೧೯೧೪" ಕೃತಿಯಲ್ಲಿ ಕೈಗಾರಿಕೆಯಿಂದ ಮಲಬಾರ್ ಮತ್ತು ಕೆನರಾದ ಜನರ ಸಾಮಾಜಿಕ ಮತ್ತು ಆರ್ಥಿಕ ಚಟುವಟಿಕೆಗಳ ಮೇಲಾದ ಪ್ರಭಾವವನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ. ಮೊದಲ ಮಹಾಯುದ್ಧದ ಸಮಯದಲ್ಲಿ ಜರ್ಮನಿ ಶತ್ರು ದೇಶ ಎಂಬ ಕಾರಣಕ್ಕಾಗಿ ಭಾರತದ ಬ್ರಿಟಿಷ್ ಸರಕಾರ, ಮಿಶನರಿಗಳನ್ನು ಹಿಂದಕ್ಕೆ ಕಳುಹಿಸಿ ಅವರು ನಡೆಸುತ್ತಿದ್ದ ಕೈಗಾರಿಕೆಗಳನ್ನು ಬ್ರಿಟಿಷ್ ಕಾಮನ್ವೆಲ್ತ್ ಟ್ರಸ್ಟ್ ಅಧೀನಕ್ಕೊಳಪಡಿಸಲಾಯಿತು. ಹೀಗೆ, ಬಾಸೆಲ್ ಮಿಶನ್ ಕೈಗಾರಿಕೆಗಳು ತಮ್ಮ ಹಿಂದಿನ ತೇಜಸ್ಸನ್ನು ಕಳೆದುಕೊಂಡು ಕಳೆಗುಂದಿದವು ಎಂಬ ವಿಷಯವನ್ನು ವಿಶ್ಲೇಷಿಸಿದ್ದಾರೆ.

ಮೋಹನ್ ಕೃಷ್ಣ ರೈ ಕೆ. ಅವರ, "ಅರ್ಬನೈಜೇಶನ್ ಆಫ್ ಮ್ಯಾಂಗಲೊರ್: ಎ ಕೊಲೋನಿಯಲ್ ಎಕ್ಸ್‌ಪೀರಿಯನ್ಸ್ (೧೭೯೯-೧೯೪೭)" ಎಂಬ ಅಪ್ರಕಟಿತ ನಿಬಂಧದಲ್ಲಿ ಕರ್ನಾಟಕವು ಬ್ರಿಟಿಷ್ ವಸಾಹತುವಾಗಿ ಪರಿವರ್ತನೆಗೊಂಡ ಬಳಿಕ ನಗರೀಕರಣ ಪ್ರಕ್ರಿಯೆಯಲ್ಲಿ ಅನೇಕ ರೀತಿಯ ಬದಲಾವಣೆಗಳು ಉಂಟಾದವು. ವಸಾಹತುಪೂರ್ವ ಅವಧಿಯಲ್ಲಿ ಅಸ್ತಿತ್ವದಲ್ಲಿದ್ದ ಪೇಟೆ-ಪಟ್ಟಣಗಳು ಮತ್ತು ಕೈಗಾರಿಕೆಗಳು ವಸಾಹತುಶಾಹಿ ಆಳ್ವಿಕೆಯಿಂದಾಗಿ ಅನೇಕ ರೀತಿಯ ಸ್ಥಿತ್ಯಂತರಗಳಿಗೆ ಒಳಗಾದವು. ಬ್ರಿಟನ್ ಕೈಗಾರಿಕಾ ದೇಶವಾಗಿದ್ದರಿಂದಾಗಿ ಹಾಗೂ ಅಲ್ಲಿ ನಗರೀಕರಣ ಪ್ರಕ್ರಿಯೆ ಚುರುಕಿನಿಂದ ಕೂಡಿದ್ದರಿಂದಾಗಿ ಭಾರತವನ್ನು ಮತ್ತೊಂದು ಕೈಗಾರಿಕಾ ದೇಶವನ್ನಾಗಿ ಅಭಿವೃದ್ಧಿಪಡಿಸಲು ಬ್ರಿಟಿಷ್ ಸರಕಾರ ಇಷ್ಟಪಡಲಿಲ್ಲ. ಅವರ ಉದ್ದೇಶ ಯೂರೋಪಿನ ಕೈಗಾರೀಕರಣ ಮತ್ತು ನಗರೀಕರಣಕ್ಕೆ ಪೂರಕವಾದ ವ್ಯವಸ್ಥೆಯೊಂದನ್ನು ಭಾರತದಲ್ಲಿ ಹುಟ್ಟು ಹಾಕುವುದಾಗಿತ್ತು ಎಂದು ಅಭಿಪ್ರಾಯಪಟ್ಟಿದ್ದಾರೆ

ಗಾಡ್ವಿನ್ ಶಿರಿಯವರು ಸಂಪಾದಿಸಿರುವ, " ಹೋಲ್ನೆಸ್ ಇನ್ ಕ್ರೈಸ್ಟ್" ಎಂಬ ಕೃತಿಯನ್ನು ಭಾರತದಲ್ಲಿ ಬಾಸೆಲ್ ಮಿಶನ್ ಸ್ಥಾಪನೆಯ ೧೫೦ ವರ್ಷಾಚರಣೆಯ ಸಂಸ್ಮರಣೆಗಾಗಿ ಹೊರ ತರಲಾಗಿದೆ. ಈ ಗ್ರಂಥದಲ್ಲಿ ಬಾಸೆಲ್ ಮಿಶನ್ ಚಟುವಟಿಕೆಗಳ ಅಧ್ಯಯನಕ್ಕೆ ನೆರವಾಗುವ ಕೆಲವೊಂದು ಉಪಯುಕ್ತ ಲೇಖನಗಳು ದೊರೆಯುತ್ತವೆ. ಅದೇ ರೀತಿಯಲ್ಲಿ, ಭಾರತದಿಂದ ಬಾಸೆಲ್ ಮಿಶನರಿಗಳು ಸ್ವಿಟ್ಜರ್ಲೆಂಡಿನ ಬಾಸೆಲ್‌ನಲ್ಲಿರುವ ಗೃಹಮಂಡಲಿಗೆ ೧೮೪೧ರಿಂದ ೧೯೧೪ರ ವರೆಗೆ ಬರೆದಿರುವ ಬಾಸೆಲ್ ಮಿಶನ್ ವಾರ್ಷಿಕ ವರದಿಗಳು (ಬಿ.ಎಂ.ಆರ್.) ಬೆಂಗಳೂರಿನ ಯುನೈಟೆಡ್ ಥಿಯೋಲಾಜಿಕಲ್ ಕಾಲೇಜ್ (U.T.C.) ಮತ್ತು ಮಂಗಳೂರಿನ ಕರ್ನಾಟಕ ಥಿಯೋಲಾಜಿಕ್ ಕಾಲೇಜಿನ(K.T.C.) ಪತ್ರಾಗಾರಗಳಲ್ಲಿ ಉಪಲಬ್ಧವಿದೆ. ಈ ವರದಿಗಳ ಕೂಲಂಕುಷ ಅಧ್ಯಯನ ಸಂಶೋಧನೆಗೆ ಬಹಳಷ್ಟು ನೆರವಾಗುತ್ತದೆ. ಆದರೆ ಈ ವರದಿಗಳನ್ನು ಅಧ್ಯಯನಕ್ಕಾಗಿ ಬಳಸಿಕೊಳ್ಳುವಾಗ, ಅವುಗಳು ನೀಡುವ ಮಾಹಿತಿಯ, ಉದ್ದೇಶ ಮತ್ತು ಸಂಕೀರ್ಣತೆಯನ್ನು ಅರ್ಥೈಸಿಕೊಳ್ಳಬೇಕು. ಹೆಚ್ಚಿನ ಸಂದರ್ಭಗಳಲ್ಲಿ ಬಿ.ಎಂ.ಆರ್. ಗಳು

ಗೃಹ ಮಂಡಲಿಯನ್ನು ತೃಪ್ತಿ ಪಡಿಸಿ, ಅವರಿಂದ ತಾವು ಹಾಕಿಕೊಂಡಿರುವ ಯೋಜನೆಗಳನ್ನು ಸುಸೂತ್ರವಾಗಿ ನೆರವೇರಿಸಿಕೊಂಡಿವೆ. ಆ ಕಾಲಘಟ್ಟದಲ್ಲಿ ಮಿಶನರಿಗಳಿಗೆ ಅದರ ಅನಿವಾರ್ಯತೆ ಇತ್ತು ಎಂಬುದನ್ನು ಮರೆಯುವಂತಿಲ್ಲ. ಆದರೆ, ಈಗ ನಾವು, ಆ ವರದಿಗಳನ್ನು ಬಳಸಿಕೊಳ್ಳುವಾಗ ಅಂತಹ ಯಾವುದೇ ಕಟ್ಟುಪಾಡುಗಳಿಗೆ ಬಲಿಯಾಗದೆ ಜಾಗರೂಕತೆಯಿಂದ, ನಿಷ್ಪಕ್ಷಪಾತವಾಗಿ ಅವಲೋಕಿಸಬೇಕಾಗಿದೆ.

ಹೀಗೆ, ದಕ್ಷಿಣ ಕನ್ನಡದ ಕ್ರೈಸ್ತರ ಕುರಿತು ನಡೆದ ಸಂಶೋಧನಾತ್ಮಕ ಕೃತಿಗಳಲ್ಲಿ, ಕೆಲವನ್ನು ಹೊರತು ಪಡಿಸಿ, ಹೆಚ್ಚಿನ ಎಲ್ಲವೂ ಧಾರ್ಮಿಕ ನಿಲುವನ್ನು ಹೊಂದಿವೆ. ಅವುಗಳಲ್ಲಿ ಜಿಲ್ಲೆಗೆ ಕ್ರೈಸ್ತರ ಆಗಮನ, ಚರ್ಚ್‌ಗಳ ಸ್ಥಾಪನೆ, ಧರ್ಮಪ್ರಾಂತ್ಯದ ಅಭಿವೃದ್ಧಿ, ವಲಸೆ ಮುಂತಾದ ವಿಚಾರಗಳಿಗೇ ಹೆಚ್ಚು ಒತ್ತು ನೀಡಿರುವುದನ್ನು ಕಾಣಬಹುದು. ಈ ಅಧ್ಯಯನಗಳಲ್ಲಿ ದಕ್ಷಿಣ ಕನ್ನಡದ ಕ್ರೈಸ್ತರು ಎಂದರೆ ಕೊಂಕಣಿ ಕಥೋಲಿಕರು ಮತ್ತು ಬಾಸೆಲ್ ಮಿಶನ್ ಕ್ರೈಸ್ತರು ಮಾತ್ರ ಎಂಬ ಭಾವವಿದ್ದಂತೆ ತೋರುತ್ತದೆ. ಸಿರೋ-ಮಲಬಾರ್, ಸಿರೋ-ಮಲಂಕರ, ಆರ್ಥೋಡೋಕ್ಸ್ ಸಿರಿಯನ್ ಕಥೋಲಿಕ್ಸ್, ಧರ್ಮಭಗಿನಿಯರು (ಸಿಸ್ಟರ್ಸ್) ಹಾಗೂ ಸಹೋದರರು (ಬ್ರದರ್ಸ್) ಶಿಕ್ಷಣ, ಆರೋಗ್ಯ, ಕೈಗಾರಿಕೆ, ಸಮಾಜಸೇವೆ, ಸಾಹಿತ್ಯ, ಆಡಳಿತ ಮುಂತಾದ ಕ್ಷೇತ್ರಗಳಲ್ಲಿ ಸಲ್ಲಿಸಿದ ಸೇವೆ ಅವಜ್ಞೆಗೆ ಗುರಿಯಾಗಿದೆ. ಸ್ಥಳೀಯ ಕ್ರೈಸ್ತ ಸಮಾಜ ಮತ್ತು ಸ್ಥಳೀಯ ಕ್ರೈಸ್ತರ ಸಾಮಾಜಿಕ ಕಳಕಳಿಯ ಬಗ್ಗೆ ನಿರ್ಲಕ್ಷ್ಯ ಧೋರಣೆ ವಹಿಸಲಾಗಿದೆ. ನಮ್ಮ ದೇಶದ ರಾಜಕೀಯ ಇತಿಹಾಸ ರಚನೆಯ ಮಾದರಿಯಲ್ಲಿ ಇಲ್ಲಿಯೂ ಕ್ರೈಸ್ತ ಸಮಾಜದ ಮೇಲ್‌ಸ್ತರದ ನಾಯಕರ ಸಾಧನೆಗಳನ್ನು ಪಟ್ಟಿ ಮಾಡುವ ಬಗ್ಗೆ ಹೆಚ್ಚಿನ ಗಮನ ನೀಡಲಾಗಿದೆಯೇ ಹೊರತು, ಸಾಮಾನ್ಯ ಕ್ರೈಸ್ತರ ಶ್ರಮ, ಪ್ರಯತ್ನ, ಸಾಧನೆ ಶೂನ್ಯ ಎಂಬಂತೆ ಬಿಂಬಿತವಾಗಿವೆ. ಆದುದರಿಂದ, ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಬದಲಾವಣೆಯಲ್ಲಿ ಕ್ರೈಸ್ತ ಸಂಸ್ಥೆಗಳ ಪಾತ್ರದ ಅಧ್ಯಯನ ಅಪೂರ್ಣವಾಗದೆ ಸಾದ್ಯಂತವಾಗಬೇಕಾದರೆ ಕ್ರೈಸ್ತರನ್ನು ಸಮಗ್ರವಾಗಿ ಗಮನಿಸುವುದು ಅಗತ್ಯವಾಗುತ್ತದೆ. ಜಿಲ್ಲೆಯ ಸಮಗ್ರ ಸಾಮಾಜಿಕ ಬದಲಾವಣೆಯಲ್ಲಿ ಕ್ರೈಸ್ತರು ಸಲ್ಲಿಸಿದ ಸೇವೆಯನ್ನು ಒಟ್ಟಾಗಿ ವಿಪುಲ ಆಕರ ಸಾಮಾಗ್ರಿಯ ಶೋಧ ಕಾರ್ಯದ ಮೂಲಕ ಅಧ್ಯಯನ ನಡೆಸುವ ಉದ್ದೇಶದಿಂದ ನಾನು "ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಬದಲಾವಣೆಯಲ್ಲಿ ಕ್ರೈಸ್ತ ಸಂಸ್ಥೆಗಳ ಪಾತ್ರ" ( ೧೮೩೪-೨೦೦೮) ಎಂಬ ವಿಷಯವನ್ನು ಕೈಗೆತ್ತಿಕೊಂಡಿದ್ದೇನೆ.

## ೧.೨. ಅಧ್ಯಯನದ ವ್ಯಾಪ್ತಿ ಮತ್ತು ಉದ್ದೇಶ

ಪ್ರಕೃತ ಅಧ್ಯಯನದಲ್ಲಿ 'ಮಿಶನರಿ' [೩೮] ಪದವನ್ನು, ಧರ್ಮಗುರುಗಳ ದೀಕ್ಷೆಯನ್ನು ಪಡೆದು, ಕ್ರೈಸ್ತ ಮತವನ್ನು ಪ್ರಚಾರ ಮಾಡುವುದಕ್ಕೋಸ್ಕರ ಪರದೇಶದಿಂದ ನಮ್ಮ ಜಿಲ್ಲೆಗೆ ಬಂದವರು ಎಂಬ ಅರ್ಥದಲ್ಲಿ ಬಳಸಲಾಗಿದೆ. ಕರ್ನಾಟಕದ ಕಥೋಲಿಕ [೩೯] ಧರ್ಮದ ಚರಿತ್ರೆಯಲ್ಲಿ ದೇಶೀಯ ಗುರುಗಳ ಕೆಲವು ಉಲ್ಲೇಖಗಳು ದೊರೆಯುತ್ತವೆ. ಇವರನ್ನು ಮತ ಪ್ರಚಾರಕ್ಕಾಗಿ ಬಂದ ಮಿಶನರಿಗಳೆನ್ನುವುದಕ್ಕಿಂತ ಕ್ರೈಸ್ತ ಮತಸ್ಥರ ಧಾರ್ಮಿಕ ಕ್ಷೇಮಪಾಲನೆಯನ್ನು ಮಾಡುತ್ತಿದ್ದವರು ಎಂದು ಭಾವಿಸುವುದು ಹೆಚ್ಚು ಸೂಕ್ತ.[೪೦] ಧರ್ಮಗುರುವಿನ ದೀಕ್ಷೆಯನ್ನು ಪಡೆಯದ ವಿದೇಶಿಯರೂ ಜಿಲ್ಲೆಗೆ ಬಂದಿದ್ದು, ಇವರಲ್ಲಿ 'ಬ್ರದರ್'ಗಳನ್ನೂ, 'ಸಿಸ್ಟರ್'ಗಳನ್ನೂ ಹೆಸರಿಸಬಹುದು. ಇವರ ಮುಖ್ಯ ಉದ್ದೇಶ ಧರ್ಮ ಪ್ರಚಾರವಾಗಿದ್ದರೂ, ನೇರವಾದ ಪ್ರಚಾರ ಕಾರ್ಯಕ್ಕೆ ಇವರು ಇಳಿದವರಲ್ಲ. ಬ್ರದರ್‌ಗಳು- ಸನ್ಯಾಸಿ ಸಂಸ್ಥೆಗಳ ಸದಸ್ಯರಾಗಿದ್ದೂ ಹೆಚ್ಚಿನ ವಿದ್ಯಾರ್ಹತೆಯನ್ನೂ, ಗುರುದೀಕ್ಷೆಯನ್ನೂ ಪಡೆಯದವರು- ಸಾಮಾನ್ಯವಾಗಿ ಮಿಶನರಿ ಕಾರ್ಯಕ್ಕೆ ಸಂಬಂಧಿಸಿದ ಲೌಕಿಕ ಕೆಲಸಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು.

೧೮೩೩ರ ಸನ್ನದಿನ ಪ್ರಕಾರ ಬ್ರಿಟಿಷೇತರ ಮಿಶನ್ನುಗಳಿಗೂ ಭಾರತಕ್ಕೆ ಸುವಾರ್ತಾ ಪ್ರಸಾರಕ್ಕೆ ಬರಲು ಅನುಮತಿ ನೀಡಲಾಯಿತು. ಅದೇ ಸಮಯದಲ್ಲಿ ಮೆಕಾಲೆಯವರ ಶಿಕ್ಷಣ ವರದಿಯನ್ನಾಧರಿಸಿ ಲಾರ್ಡ್ ವಿಲಿಯಂ ಬೆಂಟಿಂಕ್ ಆಧುನಿಕ ಶಿಕ್ಷಣವನ್ನು ಭಾರತದಲ್ಲಿ ಜಾರಿಗೆ ತಂದನು. ಜಿಲ್ಲೆಯಲ್ಲಿ ಮೊದಲು ಆಧುನಿಕ ಶಿಕ್ಷಣವನ್ನು ಜಾರಿಗೆ ತಂದು ಶೈಕ್ಷಣಿಕ ಕ್ರಾಂತಿಗೆ ಕಾರಣರಾದವರು ಬಾಸೆಲ್‌ಇವಾಂಜಲಿಕಲ್ ಮಿಶನ್‌ನವರು. ಆದುದರಿಂದ ೧೮೩೪ನ್ನು ಪ್ರಕೃತ ಅಧ್ಯಯನದ ಆರಂಭವಾಗಿ ತೆಗೆದುಕೊಳ್ಳಲಾಗಿದೆ. ಪ್ರಕೃತ ಅಧ್ಯಯನದಲ್ಲಿ ಜಿಲ್ಲೆಗೆ ಬಾಸೆಲ್ ಮಿಶನ್ ಆಗಮಿಸಿದ ವರ್ಷದಿಂದ (೧೮೩೪) ಆರಂಭಿಸಿ ಸಿರೋ ಮಲಬಾರ್ ಧರ್ಮಪ್ರಾಂತ್ಯ(ಬೆಳ್ತಂಗಡಿ ಧರ್ಮಪ್ರಾಂತ್ಯ)ದ ಸೇವಾ ಕಾರ್ಯವನ್ನೂ ಸ್ವಲ್ಪ ಮಟ್ಟಿಗಾದರೂ ಒಳಪಡಿಸಬೇಕೆಂಬ ಉದ್ದೇಶದಿಂದ ೨೦೦೮ ಇಸವಿಯ ತನಕದ ವಿಚಾರವನ್ನು ಅಧ್ಯಯನಕ್ಕಾಗಿ ಆರಿಸಿಕೊಳ್ಳಲಾಗಿದೆ. ಜಿಲ್ಲೆಯಲ್ಲಿ ಮಿಶನರಿಗಳ ಕೊಡುಗೆಯೊಂದಿಗೆ ಇದುವರೆಗಿನ ಕ್ರೈಸ್ತರ ಬಗೆಗಿನ ಅಧ್ಯಯನಗಳಲ್ಲಿ ಅವಜ್ಞೆಗೆ ಗುರಿಯಾಗಿದ್ದ ಗ್ರಹಸ್ಥರು (laymen), ಧರ್ಮಭಗಿನಿಯರು (ಮಹಿಳೆಯರು), ಬ್ರಹ್ಮಾವರದ ಆರ್ಥೋಡೋಕ್ಸ್ ಸಿರಿಯನ್ ಕಥೋಲಿಕರು ಮತ್ತು ಕೇರಳ ಮೂಲದ ಮಲಯಾಳಂ ಮಾತೃಭಾಷೆಯನ್ನಾಡುವ ಕ್ರೈಸ್ತರು, ಜಿಲ್ಲೆಯ ಸಾಮಾಜಿಕ ಬದಲಾವಣೆಯಲ್ಲಿ ಸಲ್ಲಿಸಿರುವ ಕೊಡುಗೆಯನ್ನು ಗುರುತಿಸಿ, ಎಲೆ ಮರೆಯ ಕಾಯಿಯಂತೆ ಇರುವ ಅವರ ಸಾಧನೆಯನ್ನು ದಾಖಲಿಸಿಕೊಳ್ಳುವುದೂ ಪ್ರಕೃತ ಅಧ್ಯಯನದ ಗುರಿಯಾಗಿದೆ. ದಕ್ಷಿಣ ಕನ್ನಡ ಜಿಲ್ಲೆ .

ಇಂದು ಶಿಕ್ಷಣ ಹಾಗೂ ವೈದ್ಯಕೀಯ ಕ್ಷೇತ್ರಗಳಲ್ಲಿ ಗಮನಾರ್ಹವಾಗಿ ಅಭಿವೃದ್ಧಿ ಹೊಂದಿದೆ. ಆದರೆ, ೧೯ನೇ ಶತಮಾನದ ಮೊದಲು ಜಿಲ್ಲೆ ಯ ಶಿಕ್ಷಣ ಮತ್ತು ವೈದ್ಯಕೀಯ ಪರಿಸ್ಥಿತಿ ಹೇಗಿತ್ತು? ವಸಾಹತುಶಾಹಿ ಸರಕಾರದಿಂದಾದ ಬದಲಾವಣೆಗಳಾವುವು? ಕ್ರೈಸ್ತ ಸಂಸ್ಥೆಗಳ ಪಾತ್ರವೇನು? ಎಂದು ತಿಳಿದುಕೊಳ್ಳುವ ಕುತೂಹಲದಿಂದಲೂ ಈ ಅಧ್ಯಯನವನ್ನು ಕೈಗೆತ್ತಿಕೊಂಡಿದ್ದೇನೆ.

ಪ್ರಸ್ತುತ ಅಧ್ಯಯನವನ್ನು ಏಳು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಮೊದಲನೆಯ ಅಧ್ಯಾಯವು ಪ್ರವೇಶಿಕೆಯ ರೂಪದಲ್ಲಿದ್ದು, ಕೊಂಕಣಿ ಕ್ರೈಸ್ತರು ಗೋವಾದಿಂದ ಕರ್ನಾಟಕದ ಕರಾವಳಿಗೆ ವಲಸೆ ಬಂದದ್ದು, ಆಂಗ್ಲೋ- ಮೈಸೂರು ಸಂಬಂಧಗಳಲ್ಲಿನ ಸಂಕೀರ್ಣ ಪರಿಸ್ಥಿತಿಗಳಿಂದಾಗಿ ಸಂಕಷ್ಟಕ್ಕೆ ಗುರಿಯಾದದ್ದು, ಅಧ್ಯಯನದ ಸ್ವರೂಪ, ವ್ಯಾಪ್ತಿ, ಉದ್ದೇಶ, ಈವರೆಗಿನ ಅಧ್ಯಯನಗಳು ಮತ್ತು ಆಕರ ಸಾಮಗ್ರಿಗಳು ಮತ್ತು ಅಧ್ಯಯನ ವಿಧಾನದ ಬಗ್ಗೆ ಚರ್ಚಿಸುತ್ತದೆ. ಎರಡನೆಯ ಅಧ್ಯಾಯದಲ್ಲಿ ಕೆನರಾದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದ ಬಾಸೆಲ್ ಮಿಶನ್, ಅಪೋಸ್ತಲಿಕ್ ಕಾರ್ಮೆಲ್, ಯೇಸು ಸಭೆ, ಅರ್ಸುಲಾಯ್ನ್, ಚಾರಿಟಿ, ಬೆಥನಿ, ಕಥೋಲಿಕ ಶಿಕ್ಷಣ ಮಂಡಳಿ, ಸಿರಿಯನ್, ಮಲಬಾರ್ ಕಥೋಲಿಕರು ಹಾಗೂ ಜನಸಾಮಾನ್ಯರ ಶೈಕ್ಷಣಿಕ ಕೊಡುಗೆಗಳನ್ನು ಅವಲೋಕಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ , ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ವೈದ್ಯಕೀಯ ಪರಿಸ್ಥಿತಿ, ಕಂಕನಾಡಿಯ ಫಾ। ಮುಲ್ಲರ್ಸ್ ಚಾರಿಟೇಬಲ್ ಇನ್‌ಸ್ಟಿಟ್ಯೂಷನ್ಸ್, ಉಡುಪಿಯ ಡಾ. ಲೊಂಬಾರ್ಡ್ ಸ್ಮಾರಕ ಆಸ್ಪತ್ರೆ, ಮತ್ತಿತರ ಆಸ್ಪತ್ರೆಗಳು ಮತ್ತು ವೈದ್ಯಕೀಯ ಕ್ಷೇತ್ರದಲ್ಲಿ ದುಡಿದ ಕ್ರೈಸ್ತ ವೈದ್ಯರ ಅಧ್ಯಯನ ನಡೆಸಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಕ್ರೈಸ್ತ ಧಾರ್ಮಿಕರು ಹಾಗೂ ಜನಸಾಮಾನ್ಯರು ನಡೆಸುವ ವಿವಿಧ ಸಮಾಜಸೇವಾ ಸಂಸ್ಥೆಗಳಾದ ಅನಾಥಾಶ್ರಮ, ವೃದ್ಧಾಶ್ರಮ, ವಸತಿ ನಿಲಯ, ವಿದ್ಯಾರ್ಥಿನಿಲಯ, ವಿಭಿನ್ನ ಸಾಮರ್ಥ್ಯದ ಮಕ್ಕಳ ಶಾಲೆ, ಕುಷ್ಠರೋಗ ಹಾಗೂ ಹೆಚ್.ಐ.ವಿ./ ಏಡ್ಸ್ ರೋಗಿಗಳ ಶುಶ್ರೂಷಾ ಕೇಂದ್ರ, ಮದ್ಯವರ್ಜನ ಮತ್ತು ಸಹಕಾರಿ ಸಂಘಗಳ ಸ್ಥಾಪನೆಯ ಉದ್ದೇಶ ಮತ್ತು ಅಭಿವೃದ್ಧಿಯ ಕುರಿತು ವಿಮರ್ಶಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಮುದ್ರಣಾಲಯ, ನೇಯ್ಗೆ, ಹಂಚು, ಯಂತ್ರಗಾರ, ಗೇರು ಉದ್ದಿಮೆ, ಕಾಫಿ ಸಂಸ್ಕರಣೆ, ಕೃಷಿ ಮುಂತಾದ ಉದ್ದಿಮೆಗಳ ಸ್ಥಾಪನೆ ಮತ್ತು ಅವುಗಳ ಆರ್ಥಿಕ ಮತ್ತು ಸಾಮಾಜಿಕ ಪರಿಣಾಮಗಳ ಬಗ್ಗೆ ವಿವರಿಸಲಾಗಿದೆ. ಅಧ್ಯಾಯ ಆರರಲ್ಲಿ , ಸುವಾರ್ತಾ ಪ್ರಸಾರ ಮತ್ತು ಸಮಾಜ ಸೇವೆಯಲ್ಲಿ ಕ್ರೈಸ್ತರಿಗೆ, ಮೇಲ್ವರ್ಗದವರ ಪ್ರಚೋದನೆಯಿಂದ ಎದುರಾದ ಸವಾಲುಗಳು ಹಾಗೂ ಮಿಶನರಿಗಳು ಅದನ್ನು ಎದುರಿಸಿದ ರೀತಿಯನ್ನು ಅವಲೋಕಿಸುವ ಪ್ರಯತ್ನ ಮಾಡಲಾಗಿದೆ. ಅಧ್ಯಾಯ ಏಳರಲ್ಲಿ, ಅಧ್ಯಯನದ ಫಲಿತಗಳನ್ನು ನೀಡಲಾಗಿದೆ.

## ೧.೩. ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನವು ಪತ್ರಗಾರವನ್ನೇ ಹೆಚ್ಚಾಗಿ ಅವಲಂಭಿಸಿದೆ. ವಿದೇಶಿ ಪ್ರವಾಸಿಗರ ಹಾಗೂ ಬ್ರಿಟಿಷ್ ಆಡಳಿತಗಾರರ ಮತ್ತು ಮಿಶನರಿಗಳ ವರದಿಗಳು ಮತ್ತು ದಾಖಲೆಗಳು ಈ ಅಧ್ಯಯನಕ್ಕೆ ನೆರವಾದ ಪ್ರಮುಖ ಆಕರಗಳು. ಅದರೊಂದಿಗೆ ಭಾರತೀಯ ಕ್ರೈಸ್ತರ ಕುರಿತು ಈಗಾಗಲೇ ಪ್ರಕಟಗೊಂಡ ಕೃತಿಗಳು, ಸ್ಮರಣಾ ಸಂಚಿಕೆಗಳು, ಪತ್ರಿಕಾ ವರದಿಗಳು ಮತ್ತು ಲೇಖನಗಳು ಜಿಲ್ಲೆಯ ಇತಿಹಾಸವನ್ನು ಅರ್ಥೈಸಿಕೊಳ್ಳುವುದಕ್ಕೆ ನೆರವಾಗುತ್ತದೆ. ಅಂತೆಯೇ, ಕ್ಷೇತ್ರ ಕಾರ್ಯವನ್ನು ಪ್ರಶ್ನಾವಳಿ ಮತ್ತು ಸಂದರ್ಶನ ಮುಖಾಂತರ ಮಾಡಲಾಗಿದೆ. ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಲಾದ ಮಾಹಿತಿಯನ್ನು ಈ ನಿಬಂಧದ ರಚನೆಯಲ್ಲಿ ಬಳಸಲಾಗಿದೆ. ಹೀಗೆ, ಲಭ್ಯವಿರುವ ಎಲ್ಲ ದಾಖಲೆಗಳ ಬಳಕೆ ಮತ್ತು ಅದರೊಂದಿಗೆ ಅಗತ್ಯದ ಎಚ್ಚರಿಕೆಗಳೊಂದಿಗೆ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

# ಕೊನೆ ಟಿಪ್ಪಣಿ

೧. ಜಾನ್ ಸ್ಟುರಕ್, *ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನುವೆಲ್ಸ್-ಸೌತ್ ಕೆನರಾ*, ಸಂಪುಟ ೧ (೨ ಸಂಪುಟಗಳು) ಮದ್ರಾಸ್: ಸೂಪರಿಟೆಂಡೆಂಟ್,ಮದ್ರಾಸ್ ಪ್ರೆಸಿಡೆನ್ಸಿ , ೧೮೯೪, ಪುಟ ೧

೨. ಮುಕುಂದ ಪ್ರಭು ಎಂ, ( ಪ್ರ.ಸಂ.) *ಪೊಲಿ - ಕೆನರಾ ೨೦೦*, ಮಂಗಳೂರು : ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ೨೦೦೦ , ಪುಟ ೨೩೩

೩. ಜಾನ್ ಸ್ಟುರಕ್, *ಪೂರ್ವೋಕ್ತ* ಪುಟ ೧

೪. ಸ್ಟುವರ್ಟ್ ಹೆಚ್.ಎ., *ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನುವೆಲ್ಸ್-ಸೌತ್ ಕೆನರಾ*, ಸಂಪುಟ ೨(೨ ಸಂಪುಟಗಳು) ಮದ್ರಾಸ್: ಸೂಪರಿಟೆಂಡೆಂಟ್,ಮದ್ರಾಸ್ ಪ್ರೆಸಿಡೆನ್ಸಿ , ೧೮೯೫ , ಪುಟ ೧

೫. ಗಣಪತಿ ರಾವ್ ಐಗಳ್ ಎಂ., *ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ*, ಉಡುಪಿ: ರಾಷ್ಟಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ೨೦೦೪. ( ಮೊದಲ ಮುದ್ರಣ ೧೯೨೩) ಪುಟ ೧

೬. ಜಾನ್ ಸ್ಟುರಕ್, *ಪೂರ್ವೋಕ್ತ* ಪುಟ ೩

೭. ಮೋಹನ್ ಕೃಷ್ಣ ರೈ ಕೆ., *ಕೆನರಾದ ವಿಭಜನೆ ಹತ್ತಿ ರಾಜಕೀಯದ ವಿಶ್ಲೇಷಣೆ*, ಹಂಪಿ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೧೧, ಪುಟ ೧೯

೮. ಅದೇ,ಪುಟಗಳು ೧೯, ೨೦

೯. ಗಣಪತಿ ರಾವ್ ಐಗಳ್ ಎಂ., *ಪೂರ್ವೋಕ್ತ*, ಪುಟ ೭ರಲ್ಲಿ ಸಂಪಾದಕೀಯದ ಅಡಿ ಟಿಪ್ಪಣಿಯಲ್ಲಿ ಈ ಮಾಹಿತಿ ಇದೆ.

೧೦. *“ದ ಮ್ಯಾಂಗಲೋರ್ ಮ್ಯಾಗಝಿನ್”*, ಸಂಪುಟ-೧ ದ ಆರ್ಗನ್ ಆಂಡ್ ರೆಕಾರ್ಡ್ ಆಫ್ ಸೈಂಟ್ ಅಲೋಶಿಯಸ್ ಕಾಲೇಜು, ಕೊಡಿಯಾಲ್‌ಬೈಲ್ ಪ್ರೆಸ್, ೧೮೯೮, ಪುಟ ೭೭ (ಮ್ಯಾಂಗಲೂರ್ ಮ್ಯಾಗಝಿನ್, ಇನ್ನು ಮುಂದೆ ಎಂ.ಎಂ)

೧೧. ಜೆರೋಮ್.ಎ. ಸಲ್ಡಾನ, '' ಕನ್ನಡ ಜಿಲ್ಲೆಯಲ್ಲಿ ಕೊಂಕಣಿ ಕ್ರೈಸ್ತರು'' , *ಪಂಚಕಜ್ಜಾಯ*, ೧೩ನೇ ಕರ್ನಾಟಕ ಸಾಹಿತ್ಯ ಸಮ್ಮೇಳನ,ಕೆನರೀಸ್ ಮಿಶನ್ ಪ್ರೆಸ್ ಎಂಡ್ ಬುಕ್ ಡಿಪೊ, , ೧೯೨೭, ಪುಟ ೨೨

೧೨. ವಿಶಾಂಝ್ ಪಿಂಟೊ, ''ಮೈಗ್ರೇಶನ್ ಆಫ್ ದ ಕಥೋಲಿಕ್ಸ್ ಆಫ್ ಸೌತ್ ಕೆನರಾ ಎಂಡ್ ಇಟ್ಸ್ ಸೋಶಿಯೊ- ಇಕಾನಾಮಿಕ್ ಡೈಮೆನ್ಶನ್ಸ್ (೧೯೦೦-೧೯೮೦)'' ಅಪ್ರಕಟಿತ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ೨೦೦೯ ಪುಟಗಳು ೩೦,೩೧

೧೩. ಸೆವ್ರಿನ್ ಸಿಲ್ವಾ, “ಹಿಸ್ಟರಿ ಆಫ್ ಕ್ರಿಶ್ಚಿಯಾನಿಟಿ ಕೆನರಾ'' ಸಂಪುಟ -೧ ಬಾಂಬೆ ೧೯೫೭ ಪುಟ ೩೯: ಜೆ.ಮೂರ್ , (*ಹಿಸ್ಟರಿ ಆಫ್ ದ ಡಯಾಸಿಸ್ ಆಫ್ ಮ್ಯಾಂಗಲೂರ್*, ಇನ್ನು ಮುಂದೆ ಹೆಚ್.ಡಿ.ಒ.ಎಂ.ಮಂಗಳೂರು) ೧೯೨೭ ಪುಟ ೧೭ ಜೆ.ಗರ್ಸನ್ ಡ ಕುನ್ಹಾ, 'ದ ಪೋರ್ಚುಗೀಸ್ ಇನ್ ಸೌತ್ ಕೆನರಾ ' ಪುಟಗಳು ೨೬೯-೨೬೨.

೧೪. *ಡೈರೆಕ್ಟರಿ ಆಫ್ ದ ಡಯಾಸಿಸ್ ಆಫ್ ಮ್ಯಾಂಗಲೂರ್*, ಮ್ಯಾಂಗಲೂರ್, ೧೯೬೪ ಪುಟ ೧೧; ಜೆ. ಮೂರ್ ಪೂರ್ವೋಕ್ತ ಪುಟ ೧೬

೧೫. ಜಾರ್ಜ್ ಎಂ.ಮೊರಾಯಸ್ , ಮ್ಯಾಂಗಲೂರ್ : ಎ ಹಿಸ್ಟರಿಕಲ್ ಸ್ಕೆಚ್, ಮ್ಯಾಂಗಲೂರ್ ೧೯೨೭ , ಪುಟ ೧೧

೧೬. ಸೆವ್ರಿನ್ ಸಿಲ್ವಾ , *ಹಿಸ್ಟರಿ ಆಫ್ ಕ್ರಿಶ್ಚಿಯಾನಿಟಿ ಇನ್ ಕೆನರಾ ಸಂಪುಟ*-೧ ಬಾಂಬೆ ೧೯೫೭ ಪುಟ ೩೮

೧೭. ಪ್ರೆಡರಿಕ್ ಸಿ. ದನ್ವೆರ್ಸ್, *ದ ಪೋರ್ಚುಗೀಸ್ ಇನ್ ಇಂಡಿಯಾ ಬೀಯಿಂಗ್ ಎ ಹಿಸ್ಟರಿ ಆಫ್ ದ ರೈಸ್ ಎಂಡ್ ಡಿಕ್ಲೈನ್ ಆಫ್ ದೆಯರ್ ಈಸ್ಟರ್ನ್ ಎಂಪೈರ್* , ಸಂಪುಟ ೧ (೨ ಸಂಪುಟಗಳು), ಲಂಡನ್: ೧೮೯೪ ಪುಟ ೫೩೪; ಮೊರಾಯಸ್, ಜಾರ್ಜ್ ಎಂ., *ಮ್ಯಾಂಗಲೂರ್: ಎ ಹಿಸ್ಟೋರಿಕಲ್ ಸ್ಕೆಚ್*, ಮಂಗಳೂರು: ೧೯೨೭. ಪುಟ ೧೧

೧೮. ಸೆವ್ರಿನ್ ಸಿಲ್ವಾ, *ಪೂರ್ವೋಕ್ತ* . ಪುಟ ೫೯; ಹೆಚ್.ಡಿ.ಒ.ಎಂ. *ಪೂರ್ವೋಕ್ತ* ,ಪುಟ ೨೮; ಎಸ್.ಜೆ.ಪಿರೇರಾ, *ಲೈಫ್ ಆಫ್ ದ ವೆನೆರೇಬಲ್ ಫಾ! ಜೋಸೆಪ್ ವಾಜ್ ದ ಅಪೋಸ್ತಲ್ ಆಫ್ ಸಿಲೋನ್*, ರಾಂಚಿ : ೧೯೪೩, ಪುಟಗಳು ೨೦.೨೧

೧೯. ಹೆಚ್.ಡಿ.ಒ.ಎಂ.*ಪೂರ್ವೋಕ್ತ*, ಪುಟಗಳು ೩೦,೩೧, ಸೆವ್ರಿನ್ ಸಿಲ್ವಾ , *ಪೂರ್ವೋಕ್ತ*, ಪುಟ ೬೪

೨೦. ಸಾಮ್ಯುವೆಲ್ ಮಿಲಿ , ಕೆನರಾ : ಪಾಸ್ಟ್ ಆಂಡ್ ಪ್ರೆಸೆಂಟ್, ಮೊದಲ ಮುದ್ರಣ , ಮದ್ರಾಸ್, ೧೮೭೫ ಪುಟ ೪೦

೨೧. ಬಾರ್ಕೂರು, ಉದಯ, *ಹೈದರಾಲಿ-ಟಿಪ್ಪೂ: ಇತಿಹಾಸ ಕಥನ*, ಮಂಗಳೂರು: ಮಾನವತಾ ವೇದಿಕೆ, ೨೦೦೩ ಪುಟಗಳು ೪೬,೪೭

೨೨. ಹೆಚ್‌ಡಿಒಎಂ. *ಪೂರ್ವೋಕ್ತ*, ಪುಟಗಳು ೩೫, ೩೬; ಸೆವ್ರಿನ್ ಸಿಲ್ವಾ *ಪೂರ್ವೋಕ್ತ*, ಪುಟ ೯೬

೨೩. ಬಾರ್ಕೂರು ಉದಯ, *ಪೂರ್ವೋಕ್ತ*, ಪುಟಗಳು ೪೬,೪೭

೨೪. ಬಾರ್ಕೂರು ಉದಯ, *ಪೂರ್ವೋಕ್ತ*, ಪುಟಗಳು ೪೯,೫೦; ಪಿಯುಸ್ ಫಿಡೆಲಿಸ್ ಪಿಂಟೊ, *ಆಂಗ್ಲೋ-ಮೈಸೂರು ಸಂಬಂಧದ ಹಿನ್ನಲೆಯಲ್ಲಿ ಕರಾವಳಿ ಕರ್ನಾಟಕದ ಕೊಂಕಣಿ ಕ್ರೈಸ್ತರು (೧೭೬೧-೧೭೯೯)*, ಮಂಗಳೂರು: ಸಮನ್ವಯ ಪ್ರಕಾಶನ, ೧೯೯೯ ಪುಟಗಳು ೩೨-೪೩

೨೫. ಮಾರ್ಕ್ ವಿಲ್ಕ್ಸ್, *ಹಿಸ್ಟಾರಿಕಲ್ ಸ್ಕೆಚ್ಚಸ್ ಆಫ್ ದ ಸೌತ್ ಆಫ್ ಇಂಡಿಯಾ ಇನ್ ಆ್ಯನ್ ಎಟೆಮ್ಟ್ ಟು ಟ್ರೇಸ್‌ದ ಹಿಸ್ಟರಿ ಆಫ್ ಮೈಸೂರ್*, ಸಂಪುಟ ೨, ಪುಟ ೭೬೬

೨೬. ಬಾರ್ಕೂರು ಉದಯ, *ಪೂರ್ವೋಕ್ತ*,ಪುಟಗಳು ೭೫, ೭೬

೨೭. ಮಾರ್ಕ್ ವಿಲ್ಕ್ಸ್, ಹಿಸ್ಟೋರಿಕಲ್ ಸ್ಕೆಚಸ್ ಆಫ್ ದ ಸೌತ್ ಆಫ್ ಇಂಡಿಯಾ, ಸಂಪುಟ ೩ ಮೈಸೂರು ೧, ಲಂಡನ್: ೧೮೧೭, ಪುಟಗಳು ೪೪೯, ೪೫೦

೨೮. ಪಿಯಸ್ ಪಿಢೆಲಿಸ್ ಪಿಂಟೊ, *ಪೂರ್ವೋಕ್ತ*, ಪುಟಗಳು ೭೬,೭೭; ಮಾರ್ಕ ವಿಲ್ಕ್ಸ್ *ಪೂರ್ವೋಕ್ತ*, ಸಂಪುಟ.೨, ಪುಟ ೪೫೦

೨೯. ಮಾರ್ಕ್ ವಿಲ್ಕ್ಸ್ *ಪೂರ್ವೋಕ್ತ*,ಸಂಪುಟ.೨, ಪುಟ ೪೫೦.

೩೦. ಪಿಯಸ್ ಫಿಡೆಲಿಸ್ ಪಿಂಟೊ, *ಪೂರ್ವೋಕ್ತ*, ಪುಟಗಳು ೭೯,೮೦

೩೧. ಅದೇ, ಪುಟ ೮೨

೩೨. 'ರಾಕಣೊ' (ಕೊಂಕಣಿ) ಬೆಳ್ಳಿಹಬ್ಬದ ಸಂಚಿಕೆ (೧೯೩೮-೧೯೬೩), ಕೊಡಿಯಾಲ್ ಬೈಲ್ ಪ್ರೆಸ್, ಮಂಗಳೂರು, ೧೯೬೩, ಪುಟ ೬೩

೩೩. ಅದೇ, ಪುಟ ೮೫

೩೪. ಅದೇ, ಪುಟ ೯೭ ; ಜೆ.ಎ. ದುಬ್ವಾಸ್, *ಲೆಟರ್ಸ್ ಆನ್‌ದ ಸ್ಟೇಟ್ ಆಫ್ ಕ್ರಿಶ್ಚಿಯಾನಿಟಿ ಇನ್ ಇಂಡಿಯ*, ಲಂಡನ್: ೧೮೨೩ ಪುಟ ೭೪; ಜೇಮ್ಸ್‌ಸ್ಕರ್ರಿ, *ದ ಕ್ಯಾಪ್ಟಿವಿಟಿ*, ಲಂಡನ್: ೧೮೨೪.ಪುಟ ೧೦೩; ಮಾರ್ಕ್ ವಿಲ್ಕ್ಸ್ *ಪೂರ್ವೋಕ್ತ*, ಸಂಪುಟ ೨ ಪುಟ ೧೧೦.

೩೫. ಜೆ.ಸ್ಟರಕ್, *ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನುವೆಲ್ಸ್- ಸೌತ್ ಕೆನರಾ* ಸಂಪುಟ ೧, (೨ ಸಂಪುಟಗಳು) ಮದ್ರಾಸ್: ೧೮೯೪ ಪುಟ ೭೮

೩೬. ಜಾರ್ಜ್ ಎಂ. ಮೊರಾಯಸ್, *ಪೂರ್ವೋಕ್ತ* ,ಪುಟ ೫೭; ಸೆವ್ರಿನ್ ಸಿಲ್ವಾ ,ಸಂಪುಟ ೧, *ಪೂರ್ವೋಕ್ತ* , ಪುಟಗಳು ೧೫೬,೧೫೭; ಫ್ರಾನ್ಸಿಸ್ ಬುಕಾನನ್ ಸಂಪುಟ ೩, ಪುಟ ೭೫

೩೭. ಜಾರ್ಜ್ ಎಂ. ಮೊರಾಯಸ್, *ಪೂರ್ವೋಕ್ತ*,ಪುಟ ೬೯

೩೮. ಮಾರ್ಕ್ ವಿಲ್ಕ್ಸ್, *ಪೂರ್ವೋಕ್ತ*,ಪುಟ ೫೩೦

೩೯. ವಾಲ್ಟರ್ ಹ್ಯಾಮಿಲ್ಟನ್, *ಈಸ್ಟ್ ಇಂಡಿಯ ಗಜೆಟಿಯರ್*, ಲಂಡನ್: ೧೮೧೨, ಪುಟ ೨೨೮

೪೦. "ಬಂದಡ್ ಆನಿಂ ಬಂದಡೇ ಉಪ್ರಾಂತ್" *ರಾಕ್ಣೊ, (ಕೊಂಕಣಿ)* ೧೮ ಆಗಸ್ಟ್, ೧೯೪೧, ಕೋಡಿಯಾಲ್‌ಬೈಲ್ ಪ್ರೆಸ್. ಮಂಗಳೂರು , ಪುಟ ೩

೪೧. ಟಿ.ಡಬ್ಲ್ಯು ಎಮ್. ಮಾರ್ಶಲ್, *ಕ್ರಿಶ್ಚಿಯನ್ ಮಿಶನ್ಸ್*, ಸಂಪುಟ ೧, ಲಂಡನ್: ೧೮೬೩. ಪುಟ ೨೪೭

೪೨. ಎಸ್.ಡಿ.ಎಲ್. ಅಳಗೋಡಿ, *ಭಾರತದಲ್ಲಿ ಕ್ರೈಸ್ತ ಧರ್ಮದ ಇತಿಹಾಸ ಪ್ರಮುಖ ಪ್ರಸ್ತಾವಗಳ ವಿಮರ್ಶಾತ್ಮಕ ಅಧ್ಯಯನ*, ಮಂಗಳೂರು: ಕರ್ನಾಟಕ ತಿಯೋಲಾಜಿಕಲ್ ಕಾಲೇಜು, ೨೦೦೧, ಪುಟಗಳು ೧೮-೨೦

೪೩. *ಅದೇ*, ಪುಟಗಳು ೨೧-೨೫

೪೪. *ಅದೇ*, ಪುಟಗಳು ೨೬-೨೭

೪೫. *ಅದೇ*, ಪುಟಗಳು ೨೬-೨೭

೪೬. ಸಿ.ಬಿ.ಫರ್ತ್, *ಇಂಟ್ರೊಡಕ್ಷನ್ ಟು ಇಂಡಿಯನ್ ಚರ್ಚ್ ಹಿಸ್ಟರಿ*, ಅಲಹಾಬಾದ್: ೧೯೬೧, ಪುಟ ೧೫೪

೪೭. ಅಭಯ್ ಕುಮಾರ್ ಕೌಕ್ರಾಡಿ, *ಮುಗೇರರು ಜನಾಂಗ ಜಾನಪದ ಅಧ್ಯಯನ*, ಮಂಗಳೂರು : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಶಾರದಾ ಪ್ರೆಸ್, ೧೯೯೭, ಪುಟ ೧

೪೮. ಕ್ರೈಸ್ತ ಧರ್ಮದ ಪ್ರಚಾರವನ್ನೇ ಪ್ರಧಾನ ಉದ್ದೇಶವನ್ನಾಗಿ ಇಟ್ಟುಕೊಂಡು ಕ್ರೈಸ್ತೇತರರ ನಡುವೆ ಕೆಲಸ ಮಾಡುವವನೇ 'ಮಿಶನರಿ'. 'ಮಿಶನ್' ಎಂದರೆ 'ಕಳುಹಿಸುವಿಕೆ', a sending; " ನೀವು ಲೋಕದ ಎಲ್ಲ ಕಡೆಗೆ ಹೋಗಿ, ಪ್ರತಿಯೊಬ್ಬರಿಗೂ ಸುವಾರ್ತೆಯನ್ನು ಸಾರಿ', ಎಂದು ಯೇಸುಕ್ರಿಸ್ತನು ತನ್ನ ಶಿಷ್ಯರಿಗೆ ಕೊಟ್ಟ ಆದೇಶವೇ ಈ ಕಳುಹಿಸುವಿಕೆಯ ಮೂಲ ಕಾರಣ.

೪೯. ಕನ್ನಡದಲ್ಲಿ ಬಳಕೆಯಲ್ಲಿರುವ ಲಿಪ್ಯಂಪರ ಕ್ರಮಕ್ಕೆ ಅನುಗುಣವಾಗಿ ಅನ್ಯದೇಶಿಯ ಪದಗಳು ಹೆಚ್ಚಿನ ಮಟ್ಟಿಗೆ ಇಂಗ್ಲಿಷ್ ಉಚ್ಚಾರವನ್ನೇ ಉಳಿಸಿಕೊಳ್ಳುತ್ತವೆ. ಈ ಕ್ರಮದ ಪ್ರಕಾರ Catholic ಪದದ ಲಿಪ್ಯಂತರಿತ ರೂಪ 'ಕ್ಯಾಥಲಿಕ್'. ಆದರೆ ಪ್ರಕೃತ ಪ್ರಬಂಧದಲ್ಲಿ 'ಕಥೋಲಿಕ' ರೂಪವನ್ನು ಬಳಸಿದುದರ ಕಾರಣಗಳು- ೧) ಕಥೋಲಿಕೋಸ್ (ಗ್ರೀಕ್), ಕಥೋಲಿಕುಸ್ (ಲ್ಯಾಟಿನ್) ಮೂಲ ರೂಪಗಳಿಗೆ ಈ ರೂಪ ಹೆಚ್ಚು ಸಮೀಪವಾಗಿದೆ. ೨) ಕಥೋಲಿಕ ಮತದ ಸಾಹಿತ್ಯ ಸಂಪ್ರದಾಯದಲ್ಲಿ ಇಂದಿನವರೆಗೂ ಇದೊಂದೇ ರೂಪ ಪ್ರಯೋಗವಾಗಿದೆ.

೫೦. ಎಡ್ವರ್ಡ್ ನೊರೋನ್ಹ, ಪೂರ್ವೋಕ್ತ, ಪುಟ ೨೨

## ಕರ್ನಾಟಕ ರಾಜ್ಯದಲ್ಲಿ ದಕ್ಷಿಣ ಕನ್ನಡ ಜಿಲ್ಲೆ



# ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ



# ಅಧ್ಯಾಯ- ೨

## ಶಿಕ್ಷಣ

ಪ್ರಾಚೀನ ಕಾಲದಿಂದ ಭಾರತ ದೇಶವು ಜ್ಞಾನದ ತೊಟ್ಟಿಲಾಗಿತ್ತು. ಕ್ರಿ. ಪೂ. ೩೦೦ರಲ್ಲಿ ಚಂದ್ರಗುಪ್ತ ಮೌರ್ಯನ ಆಸ್ಥಾನಕ್ಕೆ ಭೇಟಿ ನೀಡಿದ ಗ್ರೀಕ್ ರಾಯಭಾರಿ ಮೆಗಾಸ್ತನಿಸನು, 'ತತ್ವಶಾಸ್ತ್ರ ಮತ್ತು ವಿಜ್ಞಾನಗಳನ್ನು ಬಹಳ ಯಶಸ್ಸಿನಿಂದ ಮತ್ತು ಗೌರವದಿಂದ ಅಳವಡಿಸಿಕೊಂಡಿದ್ದ ಮಹತ್ವಪೂರ್ಣ ಸಮಾಜ'ವನ್ನು ಕಂಡಿದ್ದನು. ನಂತರ ಭಾರತವನ್ನು ಆಳಿದ ಮುಸ್ಲಿಂ ಅರಸರು ಕೂಡಾ ಜ್ಞಾನ ಕೇಂದ್ರಗಳ ಸ್ಥಾಪನೆ ಮತ್ತು ನಿರ್ವಹಣೆಯಲ್ಲಿ ಹಿಂದೆ ಬಿದ್ದಿಲ್ಲ.[೧] ಕೆನರಾ ಜಿಲ್ಲೆಯಲ್ಲಿ ಹಿಂದೂಗಳು, ಮುಸ್ಲಿಮರು ಮತ್ತು ರೋಮನ್ ಕಥೋಲಿಕ ಕ್ರೈಸ್ತರು ತಮ್ಮದೇ ಆದ ಶಿಕ್ಷಣ ಸಂಸ್ಥೆಗಳನ್ನು ಹೊಂದಿದ್ದರು. ಕಥೋಲಿಕರಿಗೆ ಅವರು ಕ್ರೈಸ್ತಮತ ಸ್ವೀಕರಿಸುವ ಮೊದಲು ಲಭಿಸಿದ್ದು ಭಾರತೀಯ ಶಿಕ್ಷಣ. ಕೆನರಾದಲ್ಲಿ ಐಗಳ ಮಠವೆಂದು ಕರೆಯಲ್ಪಡುತ್ತಿದ್ದ ಅದರದೇ ಆದ ಶಾಲೆಗಳು ಇದ್ದವು. ಆಗ ಸುಶಿಕ್ಷಿತರಾಗಿದ್ದ ಕೆಲವು ಕ್ರೈಸ್ತರು ಈ ಐಗಳ ಮಠಗಳಲ್ಲಿ ಶಿಕ್ಷಣ ಪಡೆದವರಾಗಿರಬಹುದು.[೨] ಇಲ್ಲಿ ಉಪಾಧ್ಯಾಯರ ಮಗ, ಉಪಾಧ್ಯಾಯರ ಗುರುವಿನ ಮಗ, ಐಶ್ವರ್ಯವಂತನ ಮಗ, ಗುರುಕುಲದಲ್ಲಿದ್ದು ಕಲಿಯಲು ಮನಸ್ಸಿದ್ದು ಆರ್ಥಿಕ ಅನುಕೂಲವಿದ್ದವರ ಗಂಡು ಮಕ್ಕಳು, ಬ್ರಾಹ್ಮಣರ ಗಂಡು ಮಕ್ಕಳು ವಿದ್ಯಾಭ್ಯಾಸ ಮಾಡಬಹುದಿತ್ತು.[೩] ಮುಸ್ಲಿಮರ ಶಿಕ್ಷಣ ಸಂಸ್ಥೆಗಳನ್ನು 'ಮಕ್ತಾಬ್ಸ್' ಅಥವಾ 'ಮದರಸಾ'ಗಳೆಂದು ಕರೆಯುತ್ತಿದ್ದರು. ಮಸೀದಿಗಳಲ್ಲಿ ಅರೇಬಿಕ್ ಭಾಷೆಯಲ್ಲಿ ನೀಡಲಾಗುತ್ತಿದ್ದ ಮುಸ್ಲಿಮರ ಶಿಕ್ಷಣ ಇಸ್ಲಾಂ ಧರ್ಮಕ್ಕೆ ಮಾತ್ರ ಸೀಮಿತವಾಗಿರುತ್ತಿತ್ತು. ಈ ಎರಡೂ ಪಂಗಡಗಳು ಹೆಣ್ಣು ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಚಿಂತನೆ ಮಾಡಿರಲಿಲ್ಲ. ಅಂತೆಯೇ, ಕಥೋಲಿಕ ಕ್ರೈಸ್ತರು ಇಗರ್ಜಿಗಳ 'ಮುಖಮಂಟಪ' ಅಥವಾ 'ಪಡಸಾಲೆ'ಯಲ್ಲಿ ಧರ್ಮಗುರುಗಳಿಂದ ವಿದ್ಯಾಭ್ಯಾಸವನ್ನು ಪಡೆಯುತ್ತಿದ್ದರು. ಇಂತಹ ಶಾಲೆಗಳನ್ನು 'ಇಗರ್ಜಿ ಶಾಲೆ' ಅಥವಾ 'ಚರ್ಚ್ ಶಾಲೆ' ಎಂದು ಕರೆಯುತ್ತಿದ್ದರು.[೪] ೧೭೦೨ರಲ್ಲಿ ಬಂಟ್ವಾಳದ ಮೊಡಂಕಾಪು ಎಂಬಲ್ಲಿ ಒರಟ್ರಿ ಸಭೆಯ ಫಾ. ಮೈಕಲ್ ಡಿ'ಮೆಲ್ಲೊರವರು ಆರಂಭಿಸಿದ 'ಇನ್ಫೆಂಟ್ ಜೀಸಸ್ ಪ್ರಾಥಮಿಕ ಶಾಲೆ'ಯು ಕಥೋಲಿಕರ ಮೊತ್ತ ಮೊದಲ ಶಾಲೆ ಎನ್ನಲಾಗುತ್ತದೆ. ಕ್ರಮೇಣ, ಇದೇ ರೀತಿಯ ಶಾಲೆಗಳು ಬೋಳಾರ, ಉರ್ವ, ಒಮ್ಜೂರ್, ಕುಂದಾಪುರ, ಬಜ್ಪೆ, ಬೆಳ್ಮಣ್ಣು, ಬರಿಮಾರು, ಸೀರುಡೆ, ಜೆಪ್ಪು, ಬೊಂಡಂತಿಲ, ಕಿನ್ನಿಗೋಳಿ, ಸುರತ್ಕಲ್, ಪಾಂಗಾಳ, ಶಿರ್ವ, ಕಳತ್ತೂರು, ಬೊಂದೆಲ್,

ಹಂಪನಕಟ್ಟಾ - ಮಿಲಾಗ್ರಿಸ್ ಮುಂತಾದ ಕಡೆಗಳಲ್ಲಿ ಆರಂಭವಾಗಿದೆ. ಶಿರ್ತಾಡಿ, ನಾರಾವಿ ಹಾಗೂ ಗರ್ಡಾಡಿಯಲ್ಲಿ ಆದಿ ದ್ರಾವಿಡ ಜನಾಂಗದವರಿಗೆ ಶಿಕ್ಷಣ ನೀಡಲು ಫಾ। ಜೋನ್. ವಿ. ಪಿಂಟೋ, ಫಾ। ಪಾವುಸ್ತಿನ್ ಕೋರ್ಟಿ ಹಾಗೂ ಫಾ। ಗವಿರಾಘಿಯವರು ಶ್ರಮಿಸಿದರು. ಯೇಸುಸಭೆಯ ಫಾ। ದಿಯಾಮಾಂತಿಯವರು ಕೊರಗ ಜನಾಂಗದ ಮಕ್ಕಳಿಗಾಗಿ ಮತ್ತು ಅನಾಥ ಮಕ್ಕಳಿಗಾಗಿ ಶಾಲೆಗಳನ್ನು ಆರಂಭಿಸಿದರು [೫]

ಬ್ರಿಟಿಷ್ ಮತ್ತು ಟಿಪ್ಪು ಸುಲ್ತಾನರ ನಡುವಿನ ಯುದ್ಧಗಳಿಂದಾಗಿ ಭಾರತೀಯ ಶಿಕ್ಷಣ ವ್ಯವಸ್ಥೆಯು ಅಸ್ತವ್ಯಸ್ತವಾಯಿತು. ಜಿಲ್ಲೆಗೆ ಪಾಶ್ಚಾತ್ಯ ಶಿಕ್ಷಣವನ್ನು ಒದಗಿಸುವ ವಸಾಹತು ಕ್ರಮವು ಸಾಕಷ್ಟು ತಡವಾಗಿ ಬಂತು. ಬಂಧನ ಮುಕ್ತರಾದ ಬಳಿಕ ಕೆನರಾಕ್ಕೆ ವಾಪಸ್ಸಾದ ಕಥೋಲಿಕ ಕ್ರೈಸ್ತರು ತಮ್ಮ ಮನೆ, ಆಸ್ತಿಪಾಸ್ತಿ ಎಲ್ಲವನ್ನೂ ಕಳೆದುಕೊಂಡ ಸ್ಥಿತಿಯಲ್ಲಿದ್ದರು. ಅವರ ಆಸ್ತಿ ಪಾಸ್ತಿ ಹಿಂದೂಗಳ ಅಧೀನವಾಗಿತ್ತು. ತತ್ಕಾಲದ ವ್ಯವಸ್ಥೆಗೆಂದು ಅವರಿಗೆ ವಹಿಸಿ ಹೋಗಿದ್ದ ಕ್ರೈಸ್ತರು, ಹಿಂದಿರುಗಿ ಬಂದ ಮೇಲೆ, ಅನುಭವಿಸುತ್ತಿದ್ದವರು ಆಸ್ತಿಯನ್ನು ಹಿಂದಿರುಗಿಸಲು ನಿರಾಕರಿಸಿದರು. ಸ್ವಂತ ಇಚ್ಛೆಯಿಂದ ನೀಡಿ ಪಡೆದವರು ಮತ್ತು ವ್ಯವಹರಿಸಿ ಹಿಂದಿರುಗಿ ಪಡೆದವರು ಕೇವಲ ೧೪೧ ಕುಟುಂಬಗಳು ಮಾತ್ರ.[೬] ಪರಿಸ್ಥಿತಿ ಹೀಗಿರುವಾಗ, 'ಮಾಸ್ಟರ್ ಗಾಬ್ರಿಯಲ್' ಎಂದೇ ಹೆಸರುವಾಸಿಯಾಗಿದ್ದ ಗೋವಾದ ಧರ್ಮಗುರುಗಳು, ೧೮೧೭ರಲ್ಲಿ ರೊಜಾರಿಯೋ ಚರ್ಚಿನಲ್ಲಿ ಧರ್ಮಗುರುಗಳಾಗಿ ಸೇವೆ ಸಲ್ಲಿಸುತ್ತಿದ್ದಾಗ, ತಮ್ಮ ನಿವಾಸದ ಕೋಣೆಯೊಂದರಲ್ಲಿ ಕ್ರೈಸ್ತ ಮಕ್ಕಳಿಗೆ, ಪೋರ್ಚುಗೀಸ್ ಮತ್ತು ಲ್ಯಾಟಿನ್ ಭಾಷೆಯಲ್ಲಿ ಶಿಕ್ಷಣ ನೀಡುತ್ತಿದ್ದರು. ಲ್ಯಾಟಿನ್ ಅಧ್ಯಯನ ೮-೯ವರ್ಷಗಳಲ್ಲಿ ಮುಗಿಸಿದ ಬಳಿಕ, ೨-೩ ವರ್ಷಗಳ ಪೋರ್ಚುಗೀಸ್ ಕಲಿಕೆಯೊಂದಿಗೆ ೧೦-೧೧ ವರ್ಷಗಳ ಅಧ್ಯಯನ ಪೂರ್ಣಗೊಳ್ಳುತ್ತಿತ್ತು. ಆ ಬಳಿಕ ಖಾಸಗಿಯಾಗಿ ಮನೆಪಾಠ ಪಡೆದು, ಇಂಗ್ಲೀಷ್ ಕಲಿತು ನಂತರ ಸರ್ಕಾರಿ ಕೆಲಸಕ್ಕೆ ಪ್ರಯತ್ನಿಸಬೇಕಿತ್ತು. ಇದು ಸ್ಥಿತಿವಂತರಿಗೆ ಮಾತ್ರ ಸಾಧ್ಯವಾಗುತ್ತಿತ್ತು. ಮಾಸ್ಟರ್ ಗಾಬ್ರಿಯೆಲ್ ಅವರ ಕಾಲದಲ್ಲಿ ಮುದ್ರಿತ ಪುಸ್ತಕಗಳು ವಿರಳವಾದುದ್ದರಿಂದ, ಕೆಲವರಲ್ಲಿ ಮಾತ್ರ ಪುಸ್ತಕಗಳು ಇರುತ್ತಿದ್ದವು. ಇತರರು ಪುಸ್ತಕ ಇರುವವರ ಹತ್ತಿರ ನಕಲು ಮಾಡಬೇಕಿತ್ತು. ಇಂಗ್ಲೀಷ್ ಸ್ಪೆಲ್ಲಿಂಗ್ ಪುಸ್ತಕ ಸಹ ದೊರೆಯುತ್ತಿರಲಿಲ್ಲವಾದ್ದರಿಂದ ಕೈ ಬರಹದಲ್ಲಿ ಅದನ್ನು ಬರೆದಿಟ್ಟು ಕೊಳ್ಳಬೇಕಾಗಿತ್ತು. ಆದರೆ, ಪೋರ್ಚುಗೀಸ್ ಮತ್ತು ಲ್ಯಾಟಿನ್ ಪುಸ್ತಕಗಳನ್ನು ಮಾತ್ರ ಮಿತವಾಗಿ ತರಿಸಿಕೊಳ್ಳುತ್ತಿದ್ದರು. ಕಾಲಕ್ರಮೇಣ, ಇಂಗ್ಲೀಷ್ ಪಸ್ತಕಗಳೂ ಸುಲಭವಾಗಿ ಕೈಗೆಟುಕುವಂತಾಯಿತು.[೭] ಕ್ರೈಸ್ತರಲ್ಲಿ ಕೆಲವರು ಸುಶಿಕ್ಷಿತರಿದ್ದರು ಮತ್ತು ಅವರಿಗೆ ಸರಕಾರಿ ಕೆಲಸಗಳು ದೊರೆತ್ತಿದ್ದವು. ಸಾಲ್ವದೋರ್ ಪಿಂಟೋ ಎಂಬುವರೊಬ್ಬರು ಶ್ರೀರಂಗಪಟ್ಟಣದಲ್ಲಿ ಟಿಪ್ಪುವಿನ ಮುನ್ಶಿ ಆಗಿ ಹೆಸರು ಗಳಿಸಿದವರು ಮಂಗಳೂರಿನಲ್ಲಿ

ಜಿಲ್ಲಾ ನ್ಯಾಯಾಲಯದಲ್ಲಿ ಶಿರೆಸ್ತೇದಾರರಾಗಿ ನೇಮಿಸಲ್ಪಟ್ಟರು.[೮] ಯಜಮಾನ ಮತ್ತು ಸೇವಕನಾಗಿ, ವ್ಯಾಪಾರ ಮತ್ತು ಕೃಷಿ ನಿರತರಾಗಿ ಕ್ರೈಸ್ತ ಸಮಾಜ ಬಹಳ ಮುಂದಿದೆ ಮತ್ತು ಮನ್ನಣೆಯನ್ನು ಗಳಿಸಿದೆ ಎಂಬುದಕ್ಕೆ ೧೮೨೪ರಲ್ಲಿ ಅಂದಿನ ಕೆನರಾದ ಕಲೆಕ್ಟರ್ ಥೋಮಸ್ ಹ್ಯಾರಿಸ್ ಸಾಕ್ಷಿಯನ್ನೊದಗಿಸುತ್ತಾರೆ.[೯] ಜೆ.ಸ್ಟೋಕ್ಸ್ ಎಂಬ ಬ್ರಿಟಿಷ್ ಕಂದಾಯ ಆಯುಕ್ತರು ೧೮೩೦ರಲ್ಲಿ ಕಥೋಲಿಕ ಕ್ರೈಸ್ತರ ಬುದ್ಧಿವಂತಿಕೆ ಮತ್ತು ಜ್ಞಾನದ ಆಳದ ಕುರಿತು ಹೀಗೆ ಹೇಳುತ್ತಾರೆ, "ಸ್ವಾಭಾವಿಕ ಜ್ಞಾನ ಶಕ್ತಿಯಿಂದ ಅವರು ಬ್ರಾಹ್ಮಣರಿಗೆ ಸರಿಸಮ ಇದ್ದರೆ, ನಡತೆಯಲ್ಲಿ ಮತ್ತು ನೈತಿಕ ತಿಳುವಳಿಕೆಯಲ್ಲಿ ಅವರು ಬ್ರಾಹ್ಮಣರಿಗಿಂತಲೂ ಮುಂದಿದ್ದಾರೆ". ೧೮೩೩ರಲ್ಲಿ ಕುಲಶೇಖರದಲ್ಲಿ ಫಾ। ಲಾದಿಸ್ಲಾಸ್ ದೆ ಲೋಜ್‌ರವರು ಸೈಂಟ್ ಜೋಸೆಪ್ಸ್ ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಿದ್ದರು. ಕಾಲಕ್ರಮೇಣ ಕಥೋಲಿಕ ಕ್ರೈಸ್ತರ ಸಂಖ್ಯೆಯೂ ಹೆಚ್ಚುತ್ತಾ ಬಂದಿತು. ೧೮೧೮ರಲ್ಲಿ ಕೆನರಾದ ಒಟ್ಟು ಜನಸಂಖ್ಯೆ ೬,೭೦,೩೫೫ ಇತ್ತು. ಇದರಲ್ಲಿ ೨೧,೨೮೦ ಕ್ರೈಸ್ತರಿದ್ದರು ಮತ್ತು ೧೮೩೭ರಲ್ಲಿ ಅವರ ಜನಸಂಖ್ಯೆ ೨೫,೧೭೧ಕ್ಕೇರಿತು.[೧೦]

೧೮೩೮ರಲ್ಲಿ ಜಗದ್ಗುರು ಗ್ರೆಗೊರಿ ಘಿಗಿ೬ರವರು ಕೆನರಾವನ್ನು ವೆರಾಪೋಲಿ ವಿಕಾರಿಯೇಟ್‌ಗೆ ಒಪ್ಪಿಸಿದರು. ಅಲ್ಲಿಯವರೆಗೆ, ಕಥೋಲಿಕ ಕ್ರೈಸ್ತರು ಜಿಲ್ಲೆಗೆ, ಬಾಸೆಲ್ ಮಿಶನ್‌ಕ್ಕಿಂತ ಸುಮಾರು ಮೂರು ಶತಮಾನಗಳಷ್ಟು ಹಿಂದೆಯೇ ಆಗಮಿಸಿದ್ದರೂ, ಸಮುದಾಯವರಿಗಾಗಿ ಸ್ಥಾಪಿಸಿದ 'ಚರ್ಚ್ ಶಾಲೆ' ಗಳನ್ನು ಹೊರತು ಪಡಿಸಿ ಇನ್ಯಾವುದೇ ಆಧುನಿಕ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿರಲಿಲ್ಲ. ೧೮೪೦ರಲ್ಲಿಯೇ ಕಥೋಲಿಕ ಜನಪ್ರತಿನಿಧಿಗಳು ಜಗದ್ಗುರುಗಳಿಗೆ ಮನವಿಯೊಂದನ್ನು ಸಲ್ಲಿಸಿ ಕೆನರಾವನ್ನು ಒಂದು ಸ್ವತಂತ್ರ ವಿಕಾರಿಯೇಟ್ ಆಗಿ ರೂಪಿಸಬೇಕೆಂಬ ಬೇಡಿಕೆಯನ್ನು ಮುಂದಿಟ್ಟಿದ್ದರು. ಅವರ ಮನವಿಯನ್ನು ಪುರಸ್ಕರಿಸಿದ ಜಗದ್ಗುರುಗಳು ಸೈಂಟ್ ಆಗ್ನೆಸ್ ಕಾರ್ಮೆಲೈಟ್ ಸಭೆಯ ಬರ್ನಾರ್ಡಿನ್(೧೮೪೫-೧೮೫೩)ರವರನ್ನು ಮಂಗಳೂರಿನ ಪ್ರೊ-ವಿಕಾರ್ ಅಪೋಸ್ತಲಿಕ್ ಆಗಿ ನೇಮಿಸಿದರು. ಪ್ರೊ-ವಿಕಾರಿಯೇಟ್ ಆಗಿ ಮಂಗಳೂರನ್ನು ರೂಪಿಸಿದರೂ, ಇನ್ನೂ ಅದು ವೆರಪೋಲಿ ವಿಕಾರಿಯೇಟ್‌ನ ಭಾಗವಾಗಿತ್ತು. ಬಿಷಪ್ ಬರ್ನಾರ್ಡಿನ್ ಅವರು ೧೮೪೮ರಲ್ಲಿ ಮಂಗಳೂರಿನ ಮಿಲಾಗ್ರಿಸ್ ಇಂಗ್ಲಿಷ್ ಮಾಧ್ಯಮ ಶಾಲೆಯನ್ನು ಆರಂಭಿಸಿದರು. ಈ ಶಾಲೆಯ ಉಸ್ತುವಾರಿಯನ್ನು ಐರಿಷ್ ಪ್ರಜೆಯಾಗಿದ್ದ ಮಿ. ಜಾನ್ ಫಿಟ್ಜರಾಲ್ಡ್ ಮತ್ತು ಫ್ರೆಂಚ್ ಪ್ರಜೆ ಮೊನ್ಸಿಯರ್ ಡುಪ್ರೆಟ್ ಅವರಿಗೆ ವಹಿಸಿಕೊಟ್ಟರು. ಇದೇ ಸಮಯದಲ್ಲಿ ಫಾ। ಪಿಯುಸ್ ನೊರೋನ್ಹಾರವರು ಮೊಂಟೆ ಮರಿಯಾನೊದಲ್ಲಿ ಸೆಮಿನರಿಯೊಂದನ್ನು ತೆರೆದಿದ್ದರು. ಅದನ್ನು ಮಿಲಾಗ್ರಿಸ್‌ಗೆ (೧೮೪೫) ಸ್ಥಳಾಂತರಿಸಿ, ಅಲ್ಲಿದ್ದ ಪುಟ್ಟ ಸೆಮಿನರಿಯೊಂದಿಗೆ ಸೇರಿಸಲಾಯಿತು.[೧೧]

೧೮೫೩ರಲ್ಲಿ ಕೆನರಾವನ್ನು ವೆರಪೋಲಿಯಿಂದ ಪ್ರತ್ಯೇಕಿಸಿ ಸೈಂಟ್ ಅಲೋಶಿಯಸ್ ಗೊನ್ಜೆಗಾದ ಕಾರ್ಮೆಲೈಟ್ ಫಾ। ಮೈಕಲ್ ಆ್ಯಂಟನಿ(೧೮೫೩-೧೮೭೦) ಅವರನ್ನು ಮಂಗಳೂರಿನ ವಿಕಾರ್ ಅಪೋಸ್ತಲಿಕ್ ಆಗಿ ನೇಮಕ ಮಾಡಲಾಯಿತು. ಹೊಸ ಧರ್ಮಾಧ್ಯಕ್ಷರು ಮೊತ್ತ ಮೊದಲು, ಸ್ಥಳೀಯರನ್ನು ಧರ್ಮಗುರುಗಳಾಗಿ ತರಬೇತಿಗೊಳಿಸುವ ಉದ್ಧೇಶದಿಂದ ಸೆಮಿನರಿಯನ್ನು ಪುನರ್ ಸಂಘಟಿಸಿ; ನಂತರ ಪ್ರತಿಯೊಂದು ಧರ್ಮಕೇಂದ್ರದಲ್ಲೂ ಮಕ್ಕಳ ಶಿಕ್ಷಣಕ್ಕಾಗಿ ಪ್ರಾಥಮಿಕ ಶಾಲೆಗಳನ್ನು ಆರಂಭಿಸಲು ಉತ್ತೇಜನ ನೀಡಿದರು.[೧೨] ಹೀಗಿರುವಾಗ, ಬಿಷಪರ ಒಪ್ಪಿಗೆಯಿಲ್ಲದೆ ಮಿಲಾಗ್ರಿಸ್ ಚರ್ಚ್ ವಠಾರದಲ್ಲಿ ಶಾಲಾ ಸಮಿತಿಯವರು ಬಾಲಿಕಾ ಶಾಲೆಯೊಂದನ್ನು (೧೮೫೭) ಆರಂಭಿಸಿದಾಗ ಕೋಪಗೊಂಡ ಬಿಷಪರು ಅದನ್ನು ಮುಚ್ಚಿಸಿದರು. ದಕ್ಷಿಣ ಕನ್ನಡದಲ್ಲಿ ಮಹಿಳಾ ಶಿಕ್ಷಣದಲ್ಲಿ ನಡೆದ ಮೊದಲ ಪ್ರಯತ್ನಕ್ಕೆ ಒದಗಿದ ಗಂಭೀರ ತಡೆ ಇದಾಗಿದೆ. ಆ ಬಳಿಕ ಮಂಗಳೂರಿನ ಯುವಜನತೆಯ ಶಿಕ್ಷಣವನ್ನು ಧಾರ್ಮಿಕರಿಗೆ ವಹಿಸಿಕೊಡುವ ನಿರ್ಧಾರವನ್ನು ಕೈಗೊಂಡರು. ಈ ಕಾರಣಕ್ಕಾಗಿ ಅವರು ಜೀಸಸ್ ಮತ್ತು ಮೇರಿ ಸಭೆಯ ಧರ್ಮಗುರು ಫಾ। ಆಂಡ್ರ್ಯೂ[೧೩] ರವರನ್ನು ಕ್ರಿಶ್ಚಿಯನ್ ಬ್ರದರ್ಸ್‌ಗಳ ಸೇವೆಯನ್ನು ಪಡೆಯಲು ಫ್ರಾನ್ಸಿಗೆ ಕಳುಹಿಸಿಕೊಟ್ಟರು. ಅವರು ಫ್ರಾನ್ಸಿನಿಂದ ಇಬ್ಬರು ಕಾರ್ಮೆಲೈಟ್ ಧರ್ಮಗುರುಗಳು[೧೪] ಹಾಗೂ ಸೈಂಟ್ ಜಾನ್ ಡೆಲಾ ಸಾಲ್ಲೆ ಸಭೆಯ ೪ ಬ್ರದರ್ಸ್‌ಗಳನ್ನು[೧೫] ಕರೆದುಕೊಂಡು ಮಂಗಳೂರನ್ನು ತಲುಪಿದರು. ಆ ಬ್ರದರ್ಸ್‌ಗಳು ೧೮೫೮ರಲ್ಲಿ ಬೋಳಾರದಲ್ಲಿ ಸೈಂಟ್ ಮೇರಿಸ್ ಇಂಗ್ಲಿಷ್ ಶಾಲೆಯನ್ನು ಆರಂಭಿಸಿದರು. ತತ್‌ಕ್ಷಣ ಆ ಸ್ಥಳ ಸಾಕಷ್ಟು ಕೇಂದ್ರಸ್ಥಾನದಲ್ಲಿ ಇಲ್ಲವೆಂಬುದನ್ನು ಆಧರಿಸಿ ಅದರ ವಿರುದ್ಧ ಪ್ರತಿರೋಧ ವ್ಯಕ್ತವಾಯಿತು.[೧೬] ಕೆನರಾ ಮತ್ತು ಮಲಬಾರಿನ ಶಾಲೆಗಳ ತಪಾಸಣಾಧಿಕಾರಿಯಾಗಿದ್ದ ಗಾರ್ತ್‌ವೈಟ್ ಅವರು, ಬೋಳಾರಿನ ಕ್ಯಾಥಡ್ರೆಲ್ ಸಮೀಪವಿದ್ದ 'ಕ್ರಿಶ್ಚಿಯನ್ ಬ್ರದರ್ಸ್' ನಡೆಸುತ್ತಿದ್ದ ಸೈಂಟ್ ಮೇರೀಸ್ ಶಾಲೆಯ ಕುರಿತು ೧೮೬೭ರಲ್ಲಿ ಸಲ್ಲಿಸಿದ ವರದಿ ಹೀಗಿದೆ: "ಈ ಶಾಲೆಯನ್ನು ಒಂಭತ್ತು ವರ್ಷಗಳ ಹಿಂದೆ ಸ್ಥಾಪಿಸಲಾಗಿದೆ. ಕಳೆದ ವರ್ಷದ ಪ್ರಾರಂಭದಿಂದ ಪರಿಶೀಲನೆಯನ್ನು ನಡೆಸಲಾಗಿದೆ. ಇದು ಬಹಳ ದೊಡ್ಡ ಶಾಲೆಯಾಗಿದ್ದು, ಹಿಂದೊಮ್ಮೆ ವರ್ಷಾವಧಿಯಲ್ಲಿ ಇಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ ೨೮೫ ಮತ್ತು ಶಿಕ್ಷಕರ ಸಂಖ್ಯೆ ೬ ಇತ್ತು. ಈ ಶಾಲೆಯ ಉನ್ನತ ತರಗತಿಯೆಂದರೆ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಸಿದ್ಧತೆ ನಡೆಸುವ ತರಗತಿ. ಕಳೆದ ಮಾರ್ಚ್ ತಿಂಗಳಲ್ಲಿ ಈ ಶಾಲೆಯ ಪರಿಶೀಲನೆ ನನ್ನಿಂದ ನಡೆದು, ಇದರ ಪ್ರತಿಫಲವಾಗಿ, ಶಾಲೆಯ ಕಾರ್ಯ ಚತುರತೆಗೆ ಅತ್ಯಂತ ಸಮರ್ಥ ರೀತಿಯಾಗಿ ರೂ ೭೮೭-೮-೦ ಮೊತ್ತದ ಅನುದಾನ ದೊರೆತಿದೆ. ಶಾಲೆಯ ಸುಮಾರು ಅರ್ಧದಷ್ಟು ವಿದ್ಯಾರ್ಥಿಗಳು ಕ್ರೈಸ್ತ ಸಮುದಾಯದ ಅತ್ಯಂತ ಬಡವರ್ಗದವರು. ಅವರಿಗೆ ಶಾಲಾ ಶುಲ್ಕವನ್ನು ಪಾವತಿಸುವುದಾಗಲೀ, ಪಠ್ಯಪುಸ್ತಕಗಳನ್ನು ಖರೀದಿಸುವುದಾಗಲೀ ಸಾಧ್ಯವಿಲ್ಲ. ಗೌರವಯುತವಾಗಿ ತಮ್ಮ ದೇಹವನ್ನು ಮುಚ್ಚಿಕೊಳ್ಳುವ ಉಡುಪು ಕೂಡಾ ಅವರಲ್ಲಿ ಇಲ್ಲ.

'ಬ್ರದರ್ಸ್'ಗಳ ಪ್ರಯತ್ನವಿಲ್ಲದೆ ಹೋಗಿದ್ದರೆ ಈ ಮಕ್ಕಳು ನಿರ್ಲಕ್ಷಿತರಾಗಿ ಉಳಿಯಬೇಕಿತ್ತು." ಈ ಶಾಲೆಯನ್ನು ಇನ್ನೂ ಉನ್ನತ ಮಟ್ಟಕ್ಕೆ ಏರಿಸುವ ಬಯಕೆ ಬಿಷಪ್ ಅವರಿಗೆ ಇತ್ತು. ಆದರೆ ಅವರ ಕುರಿತು ವೈರತ್ವವಿರುವ ಪಕ್ಷದವರಿಂದ ಬ್ರದರ್ಸ್‌ಗಳ ಬೋಧನೆಯ ವಿರುದ್ಧ ಜನರ ಮನಸ್ಸಿನಲ್ಲಿ ಪೂರ್ವಾಗ್ರಹವನ್ನು ತುಂಬಲಾಯಿತು. ಇದರಿಂದ ಸೈಂಟ್ ಮೇರಿಸ್ ಶಾಲೆಯನ್ನು ೭ ಎಪ್ರಿಲ್ ೧೮೫೮ರಲ್ಲಿ ಮುಚ್ಚಲಾಯಿತು. ಆದರೆ, ಕೆಲವು ತಿಂಗಳು ಕಳೆದ ನಂತರ ಶಾಲೆಯನ್ನು ಪುನರಾಂಭಿಸಿದರು. ಇದೇ ಸಮಯದಲ್ಲಿ ಅವರು ಬ್ರದರ್ಸ್ ಅವರ ನಿರ್ದೇಶನದಲ್ಲಿ ಕಣ್ಣಾನೂರು, ಕಲ್ಲಿಕೋಟೆ, ತಲ್ಲಿಚೇರಿ ಮತ್ತು ಮಾಹೆಯಲ್ಲಿ ಶಾಲೆಗಳನ್ನು ತೆರೆದರು. ಸ್ಥಳೀಯ ಚರ್ಚುಗಳ ಪಾದ್ರಿಗಳ ಪ್ರೋತ್ಸಾಹದಿಂದ ಕೆನರಾದ ಒಳಭಾಗಗಳಲ್ಲಿಯೂ ಅನೇಕ ಮಾತೃಭಾಷಾ ಪ್ರಾಥಮಿಕ ಶಾಲೆಗಳನ್ನು ಬಿಷಪರು ಪ್ರಾರಂಭಿಸಿದರು.[೧೭] ಬಿಷಪ್ ಮೈಕಲ್‌ರವರ ಅವಧಿಯಲ್ಲಿ ಶಿಕ್ಷಣ ಗರಿಷ್ಟ ಮಟ್ಟವನ್ನು ತಲುಪಿತ್ತು. ಬಿಷಪರ ಪ್ರೋತ್ಸಾಹ ಹುಡುಗರ ಶಿಕ್ಷಣಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಪುರುಷರಿಗೆ ನೀಡುವ ಶಿಕ್ಷಣಕ್ಕಿಂತ ಮಹಿಳೆಯರಿಗೆ ಶಿಕ್ಷಣ ಒದಗಿಸುವುದರಿಂದ ಜನರ ಶೈಕ್ಷಣಿಕ ಮತ್ತು ನೈತಿಕ ಧ್ವನಿಗೆ ಆಗಾಧ ಪ್ರಮಾಣದ ಪ್ರಚೋದನೆ ದೊರೆಯುವುದು ಎಂದು ಅವರು ಬಲವಾಗಿ ನಂಬಿದ್ದರು. ಆದುದರಿಂದ, ಅವರು ಕಾನ್ವೆಂಟ್ ಶಾಲೆಗಳ ಸ್ಥಾಪನೆಗೆ ಕೂಡ ಪ್ರಾಮಾಣಿಕ ಪ್ರಯತ್ನ ನಡೆಸಿದರು. ಹೊಸ ಶಾಲೆಯ ಸ್ಥಾಪನೆ ಹಾಗೂ ಈಗಾಗಲೇ ಇರುವ ಶಾಲೆಗಳ ನಿರ್ವಹಣೆಗಾಗಿ ಧಾರಾಳವಾಗಿ ಹಣ ವಿನಿಯೋಗಿಸಿದರು.[೧೮] ಬ್ರದರ್ಸ್‌ಗಳನ್ನು ಮಾತ್ರವಲ್ಲ ಹೆಣ್ಣುಮಕ್ಕಳ ಶಾಲೆಯ ಜವಾಬ್ದಾರಿಯನ್ನು ವಹಿಸಿಕೊಳ್ಳುವ ಸಿಸ್ಟರ್ಸ್ ಆಫ್ ಅಪರೀಶನ್ ಸಭೆಯವರನ್ನು ಕರೆ ತರುವ ಜವಾಬ್ದಾರಿಯನ್ನೂ ಫಾ। ಆ್ಯಂಡ್ರೂರವರಿಗೆ ಬಿಷಪರು ಒಪ್ಪಿಸಿದ್ದರು. ಬ್ರದರ್ಸ್‌ಗಳೊಂದಿಗೆ, ನಾಲ್ಕು ಫ್ರೆಂಚ್ ಧರ್ಮಭಗಿನಿಯರು ಮತ್ತು ಇಂಗ್ಲಿಷ್ ಧರ್ಮಭಗಿನಿಯೊಬ್ಬರು ಬಂದಿದ್ದರು. ಹೀಗೆ ಮಂಗಳೂರಿಗೆ ಬಂದ ಫ್ರಾನ್ಸಿನ ನನ್(ಧರ್ಮಭಗಿನಿ)ಗಳು ೧೮೪೫ರಲ್ಲಿ ಬಾಲಕಿಯರಿಗಾಗಿ ಬೋಳಾರದಲ್ಲಿ ಶಾಲೆಯೊಂದನ್ನು ತೆರೆದರು. ಆದರೆ, ೧೮೫೦ರಲ್ಲಿ ಅವರು ಕಣ್ಣಾನೂರಿಗೆ ಸ್ಥಳಾಂತರಗೊಂಡಾಗ ಶಾಲೆಯ ಉಸ್ತುವಾರಿಯನ್ನು ಬಿಷಪ್ ಮೈಕಲ್‌ರವರಿಂದ ಸ್ಥಾಪಿಸಲ್ಪಟ್ಟಿದ್ದ ಕಾರ್ಮೆಲೈಟ್ ಟರ್ಶರಿಗಳು [೧೯] ವಹಿಸಿಕೊಂಡರು.[೨೦] ಗ್ರಾಮೀಣ ಪ್ರದೇಶಗಳಲ್ಲಿ ಕ್ರೈಸ್ತ ಮಹಿಳೆಯರು ಸ್ಥಳೀಯ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಿಗೆ ಹೋಗುತ್ತಿದ್ದರು. ಈ ಶಾಲೆಗಳು ವ್ಯಕ್ತಿಗಳಿಂದ, ಬೋರ್ಡ್‌ಗಳಿಂದ ಅಥವಾ ಚರ್ಚ್‌ಗಳಿಂದ ನಡೆಸುತ್ತಿದ್ದ ಶಾಲೆಗಳಾಗಿರುತ್ತಿದ್ದವು.[೨೧] ಹೀಗೆ ಕ್ರೈಸ್ತರು ಜಿಲ್ಲೆಯಲ್ಲಿ ಅವರಿಗೆ ಒದಗಿಸಲಾದ ಶೈಕ್ಷಣಿಕ ಅವಕಾಶಗಳನ್ನು ಬಳಸಿಕೊಂಡಿದ್ದಾರೆ.[೨೨] ಇದರ ಫಲವಾಗಿ ೧೯ ಶತಮಾನ ಬರುವುದರೊಳಗೆ ಈ ಸಮುದಾಯದಲ್ಲಿ ಮೆಟ್ರಿಕ್, ಎಫ್. ಎ. ಮತ್ತು ಪದವಿ ಶಿಕ್ಷಣ ಪಡೆದವರ ನಿರ್ದಿಷ್ಟ ಗುಂಪೇ ಇತ್ತು. ಮಂಗಳೂರು ನಗರದಲ್ಲಿ ಲಭ್ಯವಿದ್ದ ಶಿಕ್ಷಣ, ಅದರಲ್ಲಿಯೂ ಉನ್ನತ ಶಿಕ್ಷಣದ ಅವಕಾಶಗಳು ಸಾಕಷ್ಟು ದುಬಾರಿಯಾಗಿದ್ದು, ಮುಖ್ಯವಾಗಿ ಕ್ರೈಸ್ತ ಸಮುದಾಯದ

ಉನ್ನತ ವರ್ಗದವರಿಗೆ ಲಾಭದಾಯಕವಾಗಿದ್ದವು. ಇದರಿಂದಾಗಿ, ಈ ಸಮುದಾಯವು ನಗರವಾಸಿಗಳು ಮತ್ತು ಗ್ರಾಮೀಣವಾಸಿಗಳು, ಮತ್ತು ಸುಶಿಕ್ಷಿತರು ಮತ್ತು ಅಶಿಕ್ಷಿತರೆಂದು ಒಡೆದುಹೋಯಿತು.[೨೩] ಆದರೆ ಒಂದು ವ್ಯವಸ್ಥಿತ ರೀತಿಯಲ್ಲಿ ಆಧುನಿಕ ಮಾದರಿಯ ಶಾಲೆಗಳನ್ನು ತೆರೆದು ವಿದ್ಯಾ ಕ್ಷೇತ್ರದಲ್ಲಿ ದುಡಿಯಲು ಕಥೋಲಿಕ ಕ್ರೈಸ್ತರು ಆರಂಭಿಸಿದ್ದು ೧೮೭೦ರ ಅನಂತರ. ಜಿಲ್ಲೆಯಲ್ಲಿನ ಹೆಚ್ಚಿನ ಶಾಲೆಗಳನ್ನು ಧರ್ಮಗುರುಗಳು ಮತ್ತು ನನ್‌ಗಳು ನಡೆಸುತ್ತಿದ್ದುದರಿಂದ ಕಥೋಲಿಕ ಜನಸಾಮಾನ್ಯರಿಗೆ ಶಾಲೆಗಳನ್ನು ಆರಂಭಿಸಲು ಹೆಚ್ಚು ಅವಕಾಶಗಳಿರಲಿಲ್ಲ. ಆದ್ದುದರಿಂದ ಕಥೋಲಿಕ ಜನಸಾಮಾನ್ಯರು ಜಿಲ್ಲೆಯ ಹೊರಗೆ ನೆಲೆಸಿ ಪ್ರತಿಷ್ಠಿತ ಶಾಲೆಗಳನ್ನು ನಡೆಸುತ್ತಿದ್ದಾರೆ.[೨೪] ಮೂಲ ಕದ್ರಿ ಸೈಂಟ್ ಕ್ಷೇವಿಯರ್ ಶಾಲೆ ಜೆ.ಆರ್.ಲೋಬೊ ಮತ್ತು ಎ.ಜೆ. ಲೋಬೊ ಎಂಬ ಇಬ್ಬರು ಭ್ರಾತೃಗಳ ಪ್ರಯತ್ನದ ಫಲವಾಗಿ ಸ್ಥಾಪನೆಯಾಗಿದೆ. ೧೮೬೮ರಷ್ಟು ಹಿಂದೆಯೇ ಸಣ್ಣ ಶಾಲೆ ಮತ್ತು ವಿದ್ಯಾರ್ಥಿ ಗೃಹವನ್ನು ತಮ್ಮ ಸ್ವಂತ ಹಿತ್ತಲಿನಲ್ಲಿ ಕಟ್ಟಿ, ಆ ಬಳಿಕ ಸರ್ಕಾರಿ ನಿವೇಶನ ಪಡೆದು, ೧೮೯೧ರಲ್ಲಿ ಹಳೆಶಾಲೆಯನ್ನು ಹೊಸ ಜಾಗಕ್ಕೆ ಸ್ಥಳಾಂತರಿಸಲಾಗಿದೆ. ೧೮೯೨ರಲ್ಲಿ ಮಾನ್ಯತೆ ಪಡೆದ ಈ ಶಾಲೆ ಸುತ್ತ ಮುತ್ತಲಿನ ಪ್ರದೇಶಗಳ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವನ್ನು ನೀಡಿದೆ. ಆದರೆ, ಸರಕಾರ ಜಾರಿಗೆ ತಂದ ಮಾಧ್ಯಮಿಕ ಶಾಲಾಕ್ರಮದ ನಿಬಂಧನೆಗಳಿಂದಾಗಿ ಶಾಲೆಯಲ್ಲಿ ವಿದ್ಯಾರ್ಥಿಗಳ ಹಾಜರಾತಿ ಇಳಿಯಿತು. ಭರವಸೆ ಕಳೆದುಕೊಂಡಂತೆ ಗೋಚರಿಸಿದ ಆ ಸಂಸ್ಥೆಗೆ ೧ ಜೂನ್ ೧೯೧೧ರಂದು 'ಗಾಂಧಿ' ಖ್ಯಾತಿಯ ಮಾರ್ಸೆಲ್ ಡಿ'ಸೋಜಾರವರು ಮುಖ್ಯೋಪಾಧ್ಯಾಯರಾಗಿ, ಶಾಲೆಯ ಆಡಳಿತವನ್ನು ಕೈಗೆತ್ತಿಕೊಂಡು ಮಂಗಳೂರಿನ ಅಗ್ರಮಾನ್ಯ ಶಾಲೆಯಾಗಿ ಪರಿವರ್ತಿಸಿದರು.[೨೫] ಆ ಶಾಲೆ ಈಗ 'ವಿದ್ಯಾಬೋಧಿನಿ ಶಾಲೆ'ಎಂಬ ಹೆಸರನ್ನು ಪಡೆದಿದೆ ಎನ್ನಲಾಗುತ್ತದೆ.[೨೬] ಅಂತೆಯೇ, ಬೋಳಾರಿನಲ್ಲಿ ಸಾಲ್ವದೋರ್ ಡಿ'ಸೋಜಾ, ಬಂಟ್ವಾಳ-ಮಾಣಿಪಳ್ಳದಲ್ಲಿ ಜೋಸೆಫ್ ಮಚಾದೊ, ಶಂಕರಪುರ-ಕುರ್ಕಾಲು ಎಂಬಲ್ಲಿ ಲಾದ್ರು ನೊರೋನ್ಹಾ, ಕಾವಳಪಡೂರಿನಲ್ಲಿ ಬೆಂಜಮಿನ್ ಗೊನ್ಸಾಲ್ವಿಸ್, ಬೊಂದೆಲ್‌ನಲ್ಲಿ ಪಾಸ್ಕಲ್ ಮಸ್ಕರೇನ್ಹಸ್, ಪೆರ್ಮನ್ನೂರಿನಲ್ಲಿ ನೊರೆಂಞ ದಿಯಾಗ್ ಡಿ'ಸೋಜಾ ಮುಂತಾದ ಕ್ರೈಸ್ತ ಜನಸಾಮಾನ್ಯರು ಶಾಲೆಗಳನ್ನು ಆರಂಭಿಸಿ ನಂತರ ಚರ್ಚಿನ ಆಡಳಿತಕ್ಕೆ ಹಸ್ತಾಂತರಿಸಿದ್ದಾರೆ.[೨೭] ಮಂಗಳೂರಿನ ಕಾಫಿ ತೋಟಗಾರರಾದ ಆ್ಯಂಟನಿ ಆರನ್ಹಾರವರು ೧೯೫೮ರಲ್ಲಿ ಪುಣೆಯಲ್ಲಿ ಆರಂಭಿಸಿದ ರೋಸರಿ ಶಾಲೆ, ಬೊಂಬಾಯಿಯಲ್ಲಿ ನೀರುಡೆಯ ಅಗಸ್ಟಿನ್ ಫ್ರಾನ್ಸಿಸ್ ಪಿಂಟೋರವರು ಸ್ಥಾಪಿಸಿರುವ ಸಮೂಹ ಶಾಲೆಗಳು ಮತ್ತು ಡೋರತಿ ಮಿನೇಜಸ್‌ರವರು ಬೆಂಗಳೂರಿನ ರಾಜಾಜಿನಗರದಲ್ಲಿ ೧೯೬೮ರಿಂದ ನಡೆಸುತ್ತಿರುವ ಕಾರ್ಮೆಲ್ ಹೈಸ್ಕೂಲ್ ಇತ್ಯಾದಿ ಕಥೋಲಿಕ ಜನಸಾಮಾನ್ಯರು ನಡೆಸುತ್ತಿರುವ ಕೆಲವು ಶಿಕ್ಷಣ ಸಂಸ್ಥೆಗಳು.[೨೮]

## ೨.೧. ಭಾರತದ ಪಶ್ಚಿಮ ಕರಾವಳಿಯತ್ತ ಬಾಸೆಲ್ ಮಿಶನ್

ವಸಾಹತು ಸರಕಾರ ಬ್ರಿಟಿಷೇತರ ಮಿಶನ್ನುಗಳಿಗೆ ಸುವಾರ್ತಾ ಪ್ರಸಾರಣೆಗೆ ಅನುಮತಿ ನೀಡಿದ ತಕ್ಷಣ ಬಾಸೆಲ್ ಮಿಶನ್ ಸಂಸ್ಥೆ , ಮೂವರು ಆದ್ಯ ಮಿಶನರಿಗಳನ್ನು ಭಾರತದಲ್ಲಿ ತನ್ನ ಪ್ರಥಮ ಕೇಂದ್ರವನ್ನು ತೆರೆಯುವುದಕ್ಕಾಗಿ ಆರಿಸಿತು. ೧೨ ಜುಲೈ ೧೮೩೪ರಂದು ಅವರು, ಮಲಬಾರ್ ತಲುಪಿ ಅಲ್ಲಿಂದ ಮುಂದೆ ಪ್ರಯಾಣ ಬೆಳೆಸಿ, ೩೦ ಅಕ್ಟೋಬರ್ ೧೮೩೪ ರಂದು ಮಂಗಳೂರಿನ ಬೊಕ್ಕಪಟ್ಟಣದಲ್ಲಿ ಕಾಲೂರಿದರು. ಮಂಗಳೂರಿನ ಸಬ್ ಕಲೆಕ್ಟರ್ ಫಿಂಡ್ಲೆ ಆ್ಯಂಡರ್ಸನ್ ಮಿಶನರಿಗಳಿಗೆ ಭವ್ಯ ಸ್ವಾಗತ ನೀಡಿ ಅಗತ್ಯದ ಎಲ್ಲಾ ನೆರವನ್ನು ನೀಡಿದರು. ಅವರ ನೆರವಿನಿಂದ ಹಳೆ ಬಂದರಿನ ನೀರೆಶ್ವಾಲ್ಯದಲ್ಲಿ ಮನೆಯೊಂದನ್ನು ಖರೀದಿಸಿ ಬಾಸೆಲ್ ಮಿಶನ್‌ನ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸಿದ್ದರು.[೨೯] ಪ್ರಾರಂಭದಲ್ಲಿ ಭಾನುವಾರದ ಪ್ರಾರ್ಥನೆಗಾಗಿ ಹಳೆ ಬಂದರಿನ ನಿರೇಶ್ವಾಲ್ಯದ ಒಂದು ಸಭಾಂಗಣದಲ್ಲಿ , ಸ್ಥಳೀಯ ಕ್ರೈಸ್ತ ಧರ್ಮ ಸ್ವೀಕರಿಸಿದವರೊಂದಿಗೆ ಸೇರುತ್ತಿದ್ದರು.[೩೦] ಆ ಕಾಲದಲ್ಲಿ ಇಡೀ ಬಲ್ಮಠ ಪ್ರದೇಶ, ಸರ್ಕಾರಿ ಕಟ್ಟಡ ಮತ್ತು ಕಛೇರಿಗಳನ್ನೊಳಗೊಂಡಿತ್ತು. ಆದರೆ, ೧೮೩೭ರ ಕೂರ್ಗ್ ಬಂಡಾಯದ ಸಮಯದಲ್ಲಿ, ಮಂಗಳೂರಿಗೆ ಆಗಮಿಸಿದ ಬಂಡಾಯಗಾರರು, ಬಲ್ಮಠದಲ್ಲಿದ್ದ ಸರ್ಕಾರಿ ಆಸ್ತಿಪಾಸ್ತಿಗಳೆಲ್ಲವನ್ನೂ ನಾಶಮಾಡಿ ಸುಟ್ಟುಬಿಟ್ಟರು. ಮುಂದೆ ೧೮೪೦ ರಲ್ಲಿ ಮದ್ರಾಸ್ ಸರ್ಕಾರ ಆ ಸ್ಥಳವನ್ನು ಹರಾಜು ಮಾಡಿದಾಗ ಸರ್. ಹೆಚ್. ಎಂ. ಬ್ಲೇರ್ ಎಂಬ ಅಂದಿನ ಕೆನರಾದ ಕಲೆಕ್ಟರ್ ಅದನ್ನು ಖರೀದಿಸಿ ಉಚಿತವಾಗಿ ಬಾಸೆಲ್ ಮಿಶನ್ನಿಗೆ ಹಸ್ತಾಂತರಿಸಿದರು.

## ೨.೨. ಬಾಸೆಲ್ ಮಿಶನ್ ಮತ್ತು ಪಾಶ್ಚಿಮಾತ್ಯ ಶಿಕ್ಷಣ

ಇಂದು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಇಡೀ ರಾಷ್ಟದಲ್ಲಿ ತಮ್ಮ ಶಿಕ್ಷಣ ಕೇಂದ್ರಗಳಿಗೆ ಹೆಸರುವಾಸಿಯಾಗಿದ್ದರೆ, ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿಯಾಗಿದ್ದರೆ ಅದಕ್ಕೆ ಭದ್ರ ಬುನಾದಿ ಹಾಕಿಕೊಟ್ಟವರು ಬಾಸೆಲ್ ಮಿಶನರಿಗಳು. ಸಾಮಾಜಿಕ ಪ್ರಗತಿಯಲ್ಲಿ ಇದೊಂದು ಮಹತ್ವದ ಮೈಲಿಗಲ್ಲಾಯಿತು. [೩೧] ಬಾಸೆಲ್ ಮಿಶನ್ನಿನ ಬಹುತೇಕ ಮತಾವಲಂಬಿಗಳು ಬಿಲ್ಲವರು, ಮೊಗವೀರರು ಮತ್ತು ಬಂಟರಾಗಿದ್ದಾರೆ. ಇವರೆಲ್ಲರೂ ಸಮಾಜದ ಕೆಳವರ್ಗದವರು ಹಾಗೂ ಉನ್ನತ ಜಾತಿಯವರಿಂದ ವಿಶೇಷವಾಗಿ ಬ್ರಾಹ್ಮಣರಿಂದ 'ಶೂದ್ರ'ರೆಂದು ಕರೆಯಿಸಿಕೊಂಡು ಹೊರಗುಳಿದವರು. ಬಾಸೆಲ್ ಮಿಶನ್ ಸ್ಥಳೀಯ ಕ್ರೈಸ್ತರಿಗೆ ಶಿಕ್ಷಣವನ್ನು ಕಡ್ಡಾಯಗೊಳಿಸಿ ಅವರನ್ನು ಮೇಲಕ್ಕೆತ್ತುವ ಕಾರ್ಯವನ್ನು ನಡೆಸಿತು. ಅಲ್ಲದೆ, ಅಲಕ್ಷಿತ ಜನರ ಕಲ್ಯಾಣಕ್ಕಾಗಿ ಬಾಸೆಲ್ ಮಿಶನ್ ವಿಶೇಷವಾಗಿ ಗಮನವನ್ನು ಹರಿಸಿದೆ.

ಆದ್ದುದರಿಂದಲೇ, ಮಿಶನ್ ಶಾಲೆಗಳಲ್ಲಿ ಕೆಳವರ್ಗದವರಿಗೆ, ಅದುವರೆಗೆ ಅಶಿಕ್ಷಿತರಾಗಿದ್ದವರಿಗೆ ಮತ್ತು ಕಾರ್ಮಿಕರಿಗೆ ಓದು ಮತ್ತು ಬರಹದ ಅವಕಾಶ ದೊರೆಯಿತು.

## ೨.೩. ಶಿಕ್ಷಣದ ಉದ್ದೇಶ

ಶಾಲೆಗಳ ಮೂಲಕ ಸಮುದಾಯವನ್ನು ಸುಶಿಕ್ಷಿತಗೊಳಿಸುವುದು ಮತ್ತು ಸುವಾರ್ತೆಯನ್ನು ಸಾರುವುದು ಮಿಶನ್ನಿನ ಶಿಕ್ಷಣ ಕಾರ್ಯದ ಮುಖ್ಯ ಗುರಿಯಾಗಿತ್ತು.[೩೨] ೧೮೭೨ರ ಬಾಸೆಲ್ ಮಿಶನ್ ವರದಿಯ ಪ್ರಕಾರ ಶಿಕ್ಷಣದ ಉದ್ದೇಶ ಇದಾಗಿತ್ತು: "ಧರ್ಮಬೋಧನೆ ಅತ್ಯಂತ ಅಗತ್ಯವಾದುದು ಮತ್ತು ಕಲಿಸುವುದನ್ನು ನಿರ್ಲಕ್ಷಿಸುವಂತಿಲ್ಲ ಎಂಬುದನ್ನು ಮಿಶನರಿಗಳು ಮನಗಂಡು, ಶಾಲೆಗಳನ್ನು ಸ್ಥಾಪಿಸುವುದು ಮಿಶನ್ನಿನ ಕೆಲಸವಲ್ಲ ಎನ್ನುವ ಗುಂಪಿಗಾಗಲೀ ಅಥವಾ ಶೈಕ್ಷಣಿಕ ಸಂಸ್ಥೆಗಳ ಮೂಲಕ ಭಾರತದಲ್ಲಿ ಕ್ರೈಸ್ತ ಧರ್ಮ ಸ್ಥಾಪನೆ ಮಾಡಬಹುದೆಂಬ ವಿಶ್ವಾಸವನ್ನು ಹೊಂದಿರುವ ಗುಂಪಿಗಾಗಿಯಾಗಲೀ ಮಿಶನರಿಗಳು ಸೇರಿದವರಲ್ಲ".[೩೩] ಮಿಶನ್ ಪ್ರಾಥಮಿಕ ಶಾಲೆಗಳನ್ನು ಪ್ರತಿಯೊಂದು ಸಭೆ(ಚರ್ಚ್)ಗಳಲ್ಲಿ ಹಾಗೂ ಹೊರ ಠಾಣ್ಯಗಳಲ್ಲಿ ಸ್ಥಾಪಿಸಿದೆ. ಸಾಕಷ್ಟು ಸಂಖ್ಯೆಯಲ್ಲಿ ಕ್ರೈಸ್ತ ಮಕ್ಕಳು ಇರುವಲ್ಲಿ, ಅದು ಸಣ್ಣ ಜಮಾವಣೆ ಆಗಿದ್ದರೂ ಕೂಡಾ ಅಲ್ಲಿ ಶಾಲೆಯೊಂದನ್ನು ತೆರೆಯುವುದೆಂದು ಮಿಶನರಿಗಳು ತಮ್ಮನ್ನು ಸಮರ್ಥಿಸಿಕೊಂಡಿದ್ದಾರೆ.[೩೪] ಶಾಲೆಗಳನ್ನು ಆರಂಭಿಸಿ, ಅಲ್ಲಿ ಮಕ್ಕಳಿಗೆ ಬೈಬಲ್ ಶಿಕ್ಷಣ ನೀಡಿದಲ್ಲಿ, ಅವರನ್ನು ತಮ್ಮ ಧರ್ಮದ ಕಡೆಗೆ ಸೆಳೆಯುವುದು ಸುಲಭವೆಂದು ಮಿಶನರಿಗಳ ನಂಬಿಕೆಯಾಗಿತ್ತು. "ಇಲ್ಲಿಯ ಜನತೆಯ ಮೂಢನಂಬಿಕೆಗಳಲ್ಲೂ, ಸ್ವಧರ್ಮದಲ್ಲಿಯ ಅಂಧನಿಷ್ಠೆಯನ್ನೂ ಸಡಿಲಿಸಿ ಕ್ರೈಸ್ತ ಧರ್ಮದಲ್ಲಿ ಆಸಕ್ತಿಯನ್ನು ಕುದುರಿಸುವುದರ ಪ್ರಥಮ ಸೋಪಾನವೆಂದರೆ ಪಾಶ್ಚಾತ್ಯ ಶಿಕ್ಷಣ ಕ್ರಮವೇ – ಎಂದು ಅವರು ನಂಬಿದ್ದರು" ಎಂದು ಡಾ. ಶ್ರೀನಿವಾಸ ಹಾವನೂರ ಹೇಳಿದ್ದಾರೆ.[೩೫] ಈ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರಲು ಅವರು ಜನರಾಡುವ ವಿವಿಧ ಭಾಷೆಗಳಲ್ಲಿ ಉತ್ತಮ ಸಾಹಿತ್ಯ ಕೃತಿಗಳನ್ನು ಅಚ್ಚು ಹಾಕಿಸಿ ಪ್ರಕಟಿಸ ತೊಡಗಿದರು.[೩೬]

ಪ್ರಾಥಮಿಕ ಶಾಲೆಗಳಲ್ಲಿ ಬೈಬಲ್ ಚರಿತ್ರೆ, ಬೈಬಲ್ ಪಠ್ಯಗಳ ವಿವರಣೆ ಮತ್ತು ಕಂಠಪಾಠ ಮಾಡಿಸಲಾಗುತ್ತಿತ್ತು. ಮಾಧ್ಯಮಿಕ ಶಾಲೆಗಳಲ್ಲಿ ಹಳೆ ಮತ್ತು ಹೊಸ ಒಡಂಬಡಿಕೆಗಳ ಆಯ್ದ ಭಾಗಗಳನ್ನು ಓದಿ, ವಿವರಿಸಿ ಕಂಠಪಾಠ ಮಾಡಿಸಲಾಗುತ್ತಿತ್ತು. ದೈನಂದಿನ ಕೆಲಸ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತಿತ್ತು.[೩೭]

ಬಾಸೆಲ್ ಮಿಶನ್ ಧಾರ್ಮಿಕ ಹಾಗೂ ಸಾರ್ವತ್ರಿಕ ಎಂಬ ಎರಡು ವಿಧದ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿತ್ತು.

## ೨.೪. ಧಾರ್ಮಿಕ ಶಿಕ್ಷಣ ಸಂಸ್ಥೆಗಳು

ಬಾಸೆಲ್ ಮಿಶನ್ ಸಂಸ್ಥೆ ಸುವಾರ್ತಾ ಸೇವಕರ ತರಬೇತಿಗಾಗಿ ಸೆಮಿನರಿ(ಗುರುಮಠ)ಯನ್ನು ಹಾಗೂ ಸ್ಥಳೀಯ ಕ್ರೈಸ್ತ ಮಕ್ಕಳಿಗಾಗಿ ಭಾನುವಾರ ಶಾಲೆಗಳನ್ನು ಆರಂಭಿಸಿತು.

### ೨.೪.೧. ಸೆಮಿನರಿ

ಮಂಗಳೂರಿನ ಉಪದೇಶಿಗಳ ಶಾಲೆ ಅಸ್ತಿತ್ವಕ್ಕೆ ಬಂದದ್ದು ೧೮೪೭ರಲ್ಲಿಯಾದರೂ, ಅದರ ಮೊದಲು ಹಲವಾರು ಪ್ರಯತ್ನಗಳು ನಡೆದಿದ್ದವು. ಆದ್ಯ ಮಿಶನರಿ ರೆವೆ.ಹೆಬಿಕ್ ಅವರು ೧೮೩೬ರಲ್ಲಿಯೇ ಸೆಮಿನರಿಯ ಸ್ಥಾಪನೆಗೆ ಪ್ರಯತ್ನಿಸಿದ್ದರು. ಇಬ್ಬರು ಯೂರೋಪಿಯನ್ ಮೂಲದ ಸೈನಿಕರ ಮಕ್ಕಳನ್ನು ರೆವೆ. ಹೆಬಿಕ್ ಅವರ ಕೈಗೆ ಒಪ್ಪಿಸಿದ್ದಾಗ, ಅವರಿಗಾಗಿ ಅನಾಥಾಲಯವೊಂದನ್ನು ತೆರೆದು, ಆ ಮಕ್ಕಳನ್ನು ಬೆಳೆಸಿ ಸೆಮಿನರಿಗೆ ಬೇಕಾದ ಮೊದಲ ಫಲಗಳಾಗಿಸಿಕೊಳ್ಳಬೇಕೆಂದು ಎಣಿಸಿದ್ದರು.[೩೮] ಆದರೆ ಅವರ ಯೋಜನೆ ಕೈಗೂಡಲಿಲ್ಲ. ಸುವಾರ್ತೆಯನ್ನು ಸಾರಲು ಸೇವಕರ ಅಭಾವವಿದ್ದುದರಿಂದ ಸುವಾರ್ತಾ ಸೇವಕರ ತರಬೇತಿಗಾಗಿ ಒಂದು ಗುರುಮಠವನ್ನು ಸ್ಥಾಪಿಸಬೇಕೆಂಬ ಮಹಾದಾಕಾಂಕ್ಷೆಯು ಆದ್ಯ ಸುವಾರ್ತಾ ಪ್ರೇಷಿತರಲ್ಲಿ ಉಂಟಾಯಿತು. ಈ ಪ್ರಯುಕ್ತ ೧೮೪೦ರಲ್ಲಿ ನೀರೇಶ್ವಾಲ್ಯದಲ್ಲಿ ಹುಡುಗರ ವಸತಿ ಗೃಹದಿಂದೊಡಗೂಡಿದ ಶಾಲೆಯೊಂದನ್ನು ದ್ವಯೋದ್ದೇಶದಿಂದ ಸ್ಥಾಪಿಸಿದರು- ಗುರುಗಳ ತರಬೇತಿ ಮತ್ತು ಅನಾಥ ಮಕ್ಕಳ ವಿದ್ಯಾಭ್ಯಾಸ. ಆ ಹುಡುಗರ ವಸತಿ ಗೃಹವು ೧೮೪೩ರಲ್ಲಿ ಬಲ್ಮಠಕ್ಕೆ ಸ್ಥಳಾಂತರಿಸಲ್ಪಟ್ಟಿತು. ಕ್ರಮೇಣ ೧೮೪೭ರಲ್ಲಿ ಗುರುಮಠವು ವಸತಿ ಗೃಹದಿಂದ ವಿಭಜಿಸಲ್ಪಟ್ಟು ಕ್ರಮಾನುಸಾರವಾದ ದೈವಶಾಸ್ತ್ರ ಕಲಿಕೆ ಆರಂಭವಾಯಿತು. ೧೮೪೭ರಲ್ಲಿ ಗುರುಗಳ ತರಬೇತಿಗಾಗಿ ಸೇರಿದ ೯ ಮಂದಿಯಲ್ಲಿ ರೆವೆ. ಸೆಬಾಸ್ತಿನ್ ಪುರ್ತಾದೊರವರು ಒಬ್ಬರು. ದೈವಶಾಸ್ತ್ರ ತರಬೇತಿಗಾಗಿ ಯೋಗ್ಯ ವಿದ್ಯಾರ್ಥಿಗಳು ದೊರೆಯುವಂತೆ ಬೇರೆ ಬೇರೆ ಕಡೆಗಳಲ್ಲಿ ಪ್ರೌಢಶಾಲೆಗಳು ಸ್ಥಾಪಿಸಲ್ಪಟ್ಟವು.[೩೯]

೧೮೫೮ರಲ್ಲಿ ಸೆಮಿನರಿಯಲ್ಲಿ ಪ್ರವೇಶ ಪಡೆಯುವ ೧೩ರಿಂದ ೧೮ರ ನಡುವಿನ ವಯಸ್ಸಿನ ಹುಡುಗರಿಗೆ ತರಬೇತಿ ನೀಡಲು ಸನ್ನಾಹ ಶಾಲೆಯನ್ನು ಪ್ರಾರಂಭಿಸಲಾಯಿತು. ಈ ಶಾಲೆಗಳಲ್ಲಿ ಕೂಡ ಇಂಗ್ಲಿಷಿನ ಸ್ಥಾನದಲ್ಲಿ ಕನ್ನಡವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಮಿಶನ್ನಿನ ಉದ್ದೇಶ ಮಿಶನರಿಗಳು ಉನ್ನತ ವಿಚಾರಗಳ ಕಡೆಗೆ ಸಾಗುವ ಮೊದಲು ಭದ್ರ ತಳಹದಿಯನ್ನು ನಿರ್ಮಿಸುವುದಾಗಿದೆ. ತಳಹದಿಯ ಭದ್ರತೆ, ಸಮಯ ಮತ್ತು ವಿದ್ಯಾರ್ಥಿಗಳ ಸಾಮರ್ಥ್ಯವನ್ನು ಅನುಸರಿಸಿ ಮಿಶನರಿಗಳ ಸಾಹಸದ ಉನ್ನತಿ ಇರುತ್ತದೆ.[೪೦] ಇಲ್ಲಿ ನಾಲ್ಕು ವರ್ಷದ ಅಧ್ಯಯನದಲ್ಲಿ ಸಾಮಾನ್ಯ ಪಠ್ಯಕ್ರಮದೊಂದಿಗೆ ವಿದ್ಯಾರ್ಥಿಗಳನ್ನು ಸೆಮಿನರಿಗಾಗಿ ಅಥವಾ ಶಿಕ್ಷಕ ತರಬೇತಿ ಶಾಲೆಗಳಿಗಾಗಿ ಸಿದ್ಧಗೊಳಿಸಲಾಯಿತು.[೪೧] ಹೀಗೆ ಸೆಮಿನರಿಯು ತರಬೇತಿ ಕ್ಷೇತ್ರವಾಗುವುದರೊಂದಿಗೆ, ಮೆಟ್ರಿಕ್ಯುಲೇಶನಿಗೆ ವಿದ್ಯಾರ್ಥಿಗಳನ್ನು ಸಿದ್ಧಗೊಳಿಸುವ

ಮಾಧ್ಯಮಿಕ ಶಾಲೆ ಕೂಡ ಆಗಿತ್ತು. ೧೮೬೩ರಂದು ಉಪದೇಶಿಗಳ ಸೆಮಿನರಿಯನ್ನು ಬಲ್ಮಠದಲ್ಲಿ ಸ್ಥಾಪಿಸುವುದರೊಂದಿಗೆ ಅದು ಇಡೀ ಬಾಸೆಲ್ ಮಿಶನ್‌ನ ಏಕೈಕ ಸೆಮಿನರಿ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಮುಂದೆ ೧೮೯೦ರ ವರೆಗೆ ಸಣ್ಣ ಪುಟ್ಟ ಸಮಸ್ಯೆಗಳನ್ನು ಹೊರತಾಗಿ ಯಾವುದೇ ಒಡಕಿಲ್ಲದೆ ಬಲ್ಮಠ ಸೆಮಿನರಿಯು ಮುನ್ನಡೆಯಿತು.[೪೨] ೧೮೭೦ರಲ್ಲಿ ಗ್ರೇಟರ್ ಮತ್ತು ಬರ್ಗ್‌ಪೆಲ್ಡ್‌ಟ್ (Bergfeldt) ಅವರುಗಳು ಸಾಮಾನ್ಯ ಸಮಿತಿಗೆ ಮನವಿಯೊಂದನ್ನು ಸಲ್ಲಿಸಿ ಬಲ್ಮಠ ಸೆಮಿನರಿಯನ್ನು ಪ್ರತ್ಯೇಕಿಸಬೇಕೆಂದು ವಿನಂತಿಸಿಕೊಂಡರು ಮತ್ತು ೧೮೮೮ರಲ್ಲಿ ಅದಕ್ಕೆ ಒಪ್ಪಿಗೆ ಸಿಕ್ಕಿತು. ಆದುದರಿಂದ ೧೮೯೦ರಿಂದ ೧೯೧೪ರವರೆಗೆ ಬಲ್ಮಠ ಮತ್ತು ತಲಚೇರಿಗಳಲ್ಲಿ ಎರಡು ಸೆಮಿನರಿಗಳು ಏಕಕಾಲದಲ್ಲಿ ಕಾರ್ಯ ನಿರ್ವಹಿಸಿದವು.

ಮೊದಲ ಮಹಾಯುದ್ಧದ ಕಾಲದಲ್ಲಿ ಭಾರತದಲ್ಲಿ ಬಾಸೆಲ್ ಮಿಶನ್ ಅನಾಥವಾದುದರಿಂದ ಸೆಮಿನರಿಯನ್ನು ಮುಚ್ಚಬೇಕಾಯಿತು. ಅದು ಪುನಃ ಪ್ರಾರಂಭವಾದ್ದು ೧೯೨೯ ರಲ್ಲಿ. ಎರಡನೆ ಮಹಾಯುದ್ಧದ ಕಾಲದಲ್ಲಿ ಇನ್ನೊಮ್ಮೆ ಸೆಮಿನರಿ ಕ್ಷೀಣದೆಸೆಗಿಳಿಯಿತು. ೧೯೪೭ರಲ್ಲಿ ಸೆಮಿನರಿಯನ್ನು ಎಲ್.ಟಿ.ಹೆಚ್. ಮಟ್ಟದ ವ್ಯಾಸಂಗಕ್ಕಾಗಿ ಸೆರಾಂಪೂರ್ ವಿಶ್ವವಿದ್ಯಾಲಯದೊಂದಿಗೆ ಸಂಯೋಜಿಸಲಾಯಿತು. ಮಂಗಳೂರಿನ ಸೆಮಿನರಿ ಮುಚ್ಚಲ್ಪಟ್ಟಿದ್ದಾಗ ಸಭಾ ಸೇವಕರ ತರಬೇತಿಗೆ ನೆರವಾದದ್ದು ತುಮಕೂರಿನ ಯೂನಿಯನ್ ಕೆನರೀಸ್ ಸೆಮಿನರಿ, ಮೊದಲ ಮಹಾ ಯುದ್ಧೋತ್ತರ ಕಾಲದಲ್ಲಿ ಬಾಸೆಲ್ ಮಿಶನ್ ಸಭೆಗಳ ಅಭ್ಯರ್ಥಿಗಳು ಅಲ್ಲೇ ತರಬೇತಿ ಹೊಂದಿದ್ದರೂ ೧೯೨೯ರ ಬಳಿಕ ಪುನಃ ತುಮಕೂರು ಮತ್ತು ಮಂಗಳೂರು ಪ್ರತ್ಯೇಕ ಸೆಮಿನರಿಗಳಾಗಿ ಮುಂದುವರಿದುವು. ೧೯೬೦ರ ದಶಕವನ್ನು ದೇವಶಾಸ್ತ್ರಿಯ ಶಿಕ್ಷಣ ಕ್ಷೇತ್ರದಲ್ಲಿ ಸಹಕಾರದ ಕಾಲವೆಂದು ಗುರುತಿಸಲಾಗಿದೆ. ಡಾ। ರಾನ್ಸನ್ ಮತ್ತು ಡಾ. ಹಾರೀಸ್ ಎಂಬಿಬ್ಬರು ಒಂದೇ ಪ್ರದೇಶದಲ್ಲಿರುವ ಸಮಾನ ಭಾಷೆಯ ಸೆಮಿನರಿಗಳು ಪರಸ್ಪರ ಸಹಕರಿಸುವುದು ಮಾತ್ರವಲ್ಲ ಸಂಯೋಜನೆಯ ಕಡೆಗೆ ಮುನ್ನಡೆಯಬೇಕೆಂದು ಪ್ರತಿಪಾದಿಸಿದ್ದರು. ೧೯೬೧ರಲ್ಲಿ ಬೆಂಗಳೂರಿನ ಯುನೈಟೆಡ್ ಥಿಯೋಲಾಜಿಕಲ್ ಕಾಲೇಜಿನಲ್ಲಿ ಸೇರಿದ ಪ್ರತಿನಿಧಿಗಳು ಕರ್ನಾಟಕದಲ್ಲಿ ಎಲ್.ಟಿ.ಹೆಚ್. ಮಟ್ಟದ ಒಂದೇ ಸೆಮಿನರಿ ಇರಬೇಕೆಂದು ಸಮ್ಮತಿಸಿ, ಮಂಗಳೂರಿನಲ್ಲಿ ದೈವಶಾಸ್ತ್ರ ವಿದ್ಯಾಪೀಠವನ್ನು ಸ್ಥಾಪಿಸಲು ಒಪ್ಪಿಕೊಳ್ಳಲಾಯಿತು. ಹೀಗೆ ೧೯೬೫ರಲ್ಲಿ ಕರ್ನಾಟಕ ಥಿಯೋಲಾಜಿಕಲ್ ಕಾಲೇಜು ಮಂಗಳೂರಿನಲ್ಲಿ ಅಸ್ತಿತ್ವಕ್ಕೆ ಬಂತು. ಜರ್ಮನ್ ಮಿಶನರಿಗಳು ಸುವಾರ್ತಾ ಪ್ರಸಾರಕ್ಕಾಗಿ ಮಾತ್ರ ತಾವು ಕನ್ನಡ ನಾಡಿಗೆ ಬಂದಿದ್ದೇವೆಂದು ಭಾವಿಸದೇ ಕನ್ನಡ ಭಾಷೆ, ಸಂಸ್ಕೃತಿ ಮತ್ತು ಜನಜೀವನದ ಭಾಗವಾಗಿ ಕಾರ್ಯ ಮಾಡಿದರು. ಮಹತ್ತರವಾದುದನ್ನು ಸಾಧಿಸಬೇಕೆಂಬ ಸಂಕಲ್ಪ ಶಕ್ತಿಯಿಂದ ಅವರು ಪ್ರತಿಕೂಲ ಪರಿಸ್ಥಿತಿಯಲ್ಲೂ ಧೃತಿಗೆಡದೆ ಧೃಢವಾದ ಮನಸ್ಸಿನಿಂದ ದುಡಿದು ಹೊಸ ಮನ್ವಂತರವನ್ನೇ ನಿರ್ಮಾಣ ಮಾಡಿದರು.[೪೩]

### ೨.೪.೨. ಭಾನುವಾರ ಶಾಲೆಗಳು

ಬಾಸೆಲ್ ಮಿಶನ್ ತನ್ನೆಲ್ಲಾ ಠಾಣ್ಯಗಳಲ್ಲಿ ಮತ್ತು ಉಪಠಾಣ್ಯಗಳಲ್ಲಿ ಸಭೆಗಳನ್ನು ಸ್ಥಾಪಿಸಿದ ಬಳಿಕ ಮಿಶನ್ನಿನ ಬಾಲಕ-ಬಾಲಕಿಯರಿಗಾಗಿ ಭಾನುವಾರ ಶಾಲೆಗಳನ್ನು ಆರಂಭಿಸಿತು. ದಕ್ಷಿಣ ಕನ್ನಡದಲ್ಲಿ ಧರ್ಮೋಪದೇಶ (Catechism) ನೀಡುವ ಪವಿತ್ರ ಕಾರ್ಯವನ್ನು ಬೇರೆ ಬೇರೆ ಪ್ರಾರ್ಥನಾ ಸಂಘಗಳ ಸದಸ್ಯರುಗಳು ಹಾಗೂ ಮಿಶನರಿ ಸ್ತ್ರೀಯರು ನಡೆಸಿಕೊಂಡು ಹೋಗುತ್ತಾರೆ. ಧರ್ಮೋಪದೇಶ ತರಗತಿಗಳಿಗೆ ಹಾಜರಾಗುತ್ತಿದ್ದ ದಕ್ಷಿಣ ಕನ್ನಡದ ವಿದ್ಯಾರ್ಥಿಗಳ ಸಂಖ್ಯೆ ೧೯೧೪ರ ಕೊನೆಯಲ್ಲಿ ೧೧೮೩.[೪೪]

### ೨.೫.ಸಾರ್ವತ್ರಿಕ ಶಿಕ್ಷಣ ಸಂಸ್ಥೆಗಳು

ಬಾಸೆಲ್ ಮಿಶನ್ ಪ್ರಾರಂಭದಲ್ಲಿ ಕ್ರೈಸ್ತ ಧರ್ಮ ಸ್ವೀಕರಿಸಿದವರ ಶಿಕ್ಷಣಕ್ಕಾಗಿ ಲೌಕಿಕ (ಸೆಕ್ಯುಲರ್) ಶಾಲೆಗಳನ್ನು ಸ್ಥಾಪಿಸಿದೆ. ಅದೇ ಸಮಯದಲ್ಲಿ ಇತರರ ಬಗ್ಗೆ ಸಹ ಮಿಶನ್ ಅಲೋಚಿಸಿ, ಕ್ರೈಸ್ತರಿಗಾಗಿ ಮತ್ತು ಕ್ರೈಸ್ತೇತರರಿಗಾಗಿ ಎಂಬ ಎರಡು ವಿಧದ ಶಾಲೆಗಳನ್ನು ಸ್ಥಾಪಿಸಿದೆ.

### ೨.೫.೧. ಕ್ರೈಸ್ತರಿಗಾಗಿ ಶಾಲೆಗಳು

ಪ್ರಾಥಮಿಕ ಮತ್ತು ಉನ್ನತ ಎಂಬ ಎರಡು ವಿಧದ ಶಿಕ್ಷಣವನ್ನು ಕ್ರೈಸ್ತರಿಗಾಗಿ ಆರಂಭಿಸಲಾಯಿತು. ಕ್ರೈಸ್ತ ಧರ್ಮ ಸ್ವೀಕರಿಸಿದವರ ಮಕ್ಕಳಿಗೆ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ನೀಡಲಾಗುತ್ತಿತ್ತು. ಆದರೆ, ಉನ್ನತ ಶಿಕ್ಷಣ ಸಂಸ್ಥೆಗಳಾದ ಮಾಧ್ಯಮಿಕ ಶಾಲೆಗಳನ್ನು ಹಾಗೂ ಸೆಮಿನರಿಯನ್ನು ದೇಶೀ ಉಪದೇಶಿಗಳಿಗೆ ತರಬೇತು ನೀಡುವ ಉದ್ದೇಶದಿಂದ ಆರಂಭಿಸಲಾಯಿತು. ಸ್ಥಳೀಯ ಎಲ್ಲಾ ಕ್ರೈಸ್ತರಿಗೆ ಶಿಕ್ಷಣ ಒದಗಿಸುವುದು ತಮ್ಮ ಕರ್ತವ್ಯವೆಂಬ ಭಾವನೆ ಯೂರೋಪು ಮತ್ತು ಅಮೇರಿಕಾಗಳಲ್ಲಿನ ಮಿಶನರಿ ಸಮಾಜದ್ದಾಗಿದೆ. ಆದರೆ ಮಿಶನ್ನಿನ ಸೇವೆಯಲ್ಲಿ ಪ್ರವೇಶಿಸಲು ಇಷ್ಟ ಪಡದವರಿಗೆ ಕೂಡಾ ಶಿಕ್ಷಣ ನೀಡುವುದು ತಮ್ಮ ಜವಾಬ್ದಾರಿಯಲ್ಲವೆಂಬ ಅಭಿಪ್ರಾಯವನ್ನು ಬಾಸೆಲ್ ಮಿಶನ್ ಎತ್ತಿ ಹಿಡಿದಿದೆ.[೪೫] ಕ್ರೈಸ್ತರ ಶಿಕ್ಷಣದ ಉದ್ದೇಶದ ಬಗ್ಗೆ ಮಿಶನ್ ಹೀಗೆನ್ನುತ್ತದೆ: "ಮಿಶನರಿಗಳು ಮಿಶನ್ನಿನ ಎಲ್ಲಾ ಸಭೆಗಳಲ್ಲೂ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಲು ಶಕ್ತಿಮೀರಿ ಪ್ರಯತ್ನಿಸುವುದು ಸಭೆಯ ಆದ್ಯ ಕರ್ತವ್ಯವೆಂದು ಮನವರಿಕೆಯಾಗಿದೆ. ಹೀಗೆ ಮಾಡುವುದರಿಂದ ಅತೀ ಬಡವರೂ, ಅಜ್ಞಾನಿಗಳೂ ದೇವರ ಚಿತ್ತದಂತೆ ಬೆಳೆದು, ಅವರಿಗೆ ಲಭಿಸಿದ ಶಿಕ್ಷಣದಿಂದ ಸುವಾರ್ತೆಯನ್ನು ಓದಿ ಅರ್ಥಮಾಡಿಕೊಂಡು ಸಭೆಯ ಪ್ರಜ್ಞಾವಂತ ಸದಸ್ಯರಾಗಬಹುದು".[೪೬]

ಬಾಸೆಲ್ ಮಿಶನ್ ಸಂಸ್ಥೆಗೆ ಉನ್ನತ ಶಿಕ್ಷಣದಲ್ಲಿ ನಂಬಿಕೆ ಇಲ್ಲ ಎಂಬ ಸಾಮಾನ್ಯವಾದ ಗ್ರಹಿಕೆ ಕ್ರೈಸ್ತರಲ್ಲಿದೆ. ಆದರೆ, ಇಂತಹ ಆರೋಪಗಳಲ್ಲಿ ಹುರುಳಿಲ್ಲ ಎಂಬುದಾಗಿ ಎಫ್. ಪ್ಯೂಬರ್ ಅಭಿಪ್ರಾಯ ಪಡುತ್ತಾರೆ, "ಮಿಶನ್ ಕ್ರೈಸ್ತರ ಬದುಕಿನ ಸ್ಥಿತಿಗತಿಗಳು ಮತ್ತು ಅವರ ಸದ್ಯದ ಬೌದ್ಧಿಕ ಸಾಮರ್ಥ್ಯಗಳಿಂದ ಅವರ ಸಂಖ್ಯೆಯನ್ನು ಗಮನಿಸಿದಾಗ ಮಿಶನ್ ಶಾಲೆಗಳು ಸಾಕಷ್ಟು ಇರುವುದು ಸಾಬೀತಾಗುತ್ತದೆ. ಮಿಶನನ್ನು ಟೀಕಿಸುವವರು ಬಾಸೆಲ್ ಮಿಶನ್ನಿನ ಮೂಲಸ್ಥಾನದ ಬೆಂಬಲಿಗರನ್ನು ನಂಬಿಸುವುದು ಎಷ್ಟು ಕಷ್ಟವೆಂಬುದನ್ನು ತಿಳಿದುಕೊಂಡಿಲ್ಲ. ಇವರಲ್ಲಿ ಬಹಳಷ್ಟು ಮಂದಿ ತಮ್ಮ ಸ್ವಂತ ಮಕ್ಕಳಿಗೆ ಬಹಳ ಕಷ್ಟಪಟ್ಟು ಪ್ರಾಥಮಿಕ ಶಿಕ್ಷಣವನ್ನು ನೀಡುತ್ತಿದ್ದಾರೆ. ಹೀಗಿರುವಾಗ ಮಿಶನ್ನಿನ ಖರ್ಚಿನಲ್ಲಿ ಭಾರತದ ಸ್ಥಳೀಯ ಕ್ರೈಸ್ತರ ಮಕ್ಕಳಿಗೆ ವಿಶ್ವವಿದ್ಯಾಲಯ ಶಿಕ್ಷಣವನ್ನು ನೀಡುವುದು ಮಿಶನ್ ಕಾರ್ಯದ ಭಾಗವೇ ಆಗಿದೆ. ಇಲ್ಲಿಯವರೆಗೆ ಸ್ಥಳೀಯ ಕ್ರೈಸ್ತ ಯುವಜನತೆಗೆ ಮೆಟ್ರಿಕ್ ಪರೀಕ್ಷೆಗಿಂತ ಮುಂದೆ ಶಿಕ್ಷಣವೊದಗಿಸಲು ಸಹಾಯ ನೀಡುವುದು ಯಾಕೆ ಸಾಧ್ಯವಾಗಲಿಲ್ಲ ಎಂಬುದಕ್ಕೆ ಕಾರಣ ಹುಡುಕುವುದು ಸುಲಭ. ಬಾಸೆಲ್ ಮಿಶನ್ ಒದಗಿಸುವ ಸೌಲಭ್ಯಗಳು ಮತ್ತು ಅವಕಾಶಗಳನ್ನು ಬಳಸುವ ಹುಡುಗರ ಸಂಖ್ಯೆ ಬಹಳ ಕಡಿಮೆ. ಹೀಗಾಗಿ ಉನ್ನತ ಶಿಕ್ಷಣದ ಕುರಿತು ಮನವಿ ಎಲ್ಲರಿಗಿಂತ ಮೊದಲು ಈ ಯುವಜನತೆಗೇ ಸಲ್ಲಬೇಕಾಗಿದೆ. ಇವರು ಸಾಮರ್ಥ್ಯ ಮತ್ತು ಶಕ್ತಿಯ ಕೊರತೆಯಿಂದ ಬಳಲುತ್ತಿದ್ದಾರೆ. ಉನ್ನತ ಶಿಕ್ಷಣಕ್ಕೆ ಅಗತ್ಯವಿರುವ ಯೋಗ್ಯತೆಯುಳ್ಳವರು ಹೇಗೆ ಬೇಕಾದರೂ ತಮ್ಮ ದಾರಿಯನ್ನು ಹುಡುಕಿಕೊಂಡು ತಮ್ಮ ಉದ್ದೇಶವನ್ನು ಪೂರೈಸಿ ಕೊಳ್ಳುವರೆಂಬುದಕ್ಕೆ ಮಿಶನ್ ಹೊಂದಿರುವ ಕೆಲವು ಪದವಿಧರರೇ ಸಾಕ್ಷಿ. ಇದು ಜಗತ್ತಿನ ಎಲ್ಲಾ ಕಡೆಗಳಲ್ಲಿ ನಡೆಯುವಂತಹುದೇ".[೪೭]

ಬಾಸೆಲ್ ಮಿಶನರಿಗಳು ತಮ್ಮನ್ನು ತಾವೇ ಸಮರ್ಥಿಸಿಕೊಳ್ಳುವ ಪ್ರಯತ್ನ ಮಾಡಿದರಾದರೂ, ಕಾರ್ಯರೂಪದಲ್ಲಿ ದಕ್ಷಿಣ ಕನ್ನಡದ ಬಾಸೆಲ್ ಮಿಶನರಿಗಳು, ಕ್ರೈಸ್ತರು ಉನ್ನತ ಶಿಕ್ಷಣ ಪಡೆಯುವುದನ್ನು ಬಯಸಲಿಲ್ಲ. ಮೂಲ್ಕಿಯ ಮಿ. ಕೆಪ್ಲರ್‌ರವರು ಉನ್ನತ ಶಿಕ್ಷಣದ ಬಗ್ಗೆ ಮಿಶನರಿಗಳ ಅಸಡ್ಡೆಯನ್ನು ಕುರಿತು ೧೮೯೩ರಲ್ಲಿ ಹೀಗೆ ವರದಿ ಮಾಡಿದ್ದಾರೆ: "ಯೇಸುಸಭೆಯವರು ಮಾಡುವಂತೆ ಬಾಸೆಲ್ ಮಿಶನ್ನಿನ ಗೃಹ ಸಮಿತಿಯವರು ಮಹಾವಿದ್ಯಾಲಯಗಳನ್ನು ಸ್ಥಾಪಿಸುವುದರ ಮೂಲಕ ತಮ್ಮವರೇ ಆದ ಕ್ರೈಸ್ತರಿಗೆ ಉನ್ನತ ಉದ್ಯೋಗವನ್ನು ಪಡೆಯಲು ಸಹಾಯ ಮಾಡಲು ಸಿದ್ಧರಿದ್ದಾರೆ. ಒಂದು ವೇಳೆ ಅವರು ಹಾಗೆ ಮಾಡದಂತೆ ಮಿಶನರಿಗಳು ತಡೆಯಬೇಕಷ್ಟೇ. ಮಿಶನರಿಗಳಿಗೆ ಕ್ರೈಸ್ತರು ಉನ್ನತಿ ಸಾಧಿಸುವುದು ಬೇಕಿಲ್ಲ. ಯಾಕೆಂದರೆ ಅವರಿಗೆ ತಮ್ಮ ಕಾರ್ಯಗಾರಗಳಲ್ಲಿ ಮತ್ತು ಇತರ ಸಂಸ್ಥೆಗಳಲ್ಲಿ ಕೆಲಸಗಾರರು ಮತ್ತು ಸಹಾಯಕರ ಅವಶ್ಯಕತೆ ಇದೆ ಮತ್ತು ಕ್ರೈಸ್ತರನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳಬೇಕಾಗಿದೆ".[೪೮] ಮಿಶನ್ ಶಾಲೆಗಳಲ್ಲಿ ಕಲಿತ ಕ್ರೈಸ್ತರು ತಮ್ಮ ಶಿಕ್ಷಣ ಮುಗಿದ ನಂತರ ಮಿಶನ್ ಸಂಸ್ಥೆಗಳಲ್ಲಿ ಕೆಲಸ ಮಾಡಬೇಕೆಂದು ಅವರು ಸ್ಪಷ್ಟವಾಗಿ ತಿಳಿಸುತ್ತಿದ್ದರು. ಮಿಶನ್‌ನಿಂದ ಹೊರಗೆ ಉದ್ಯೋಗಕ್ಕೆ ಸೇರಿಕೊಳ್ಳುವವರ ಕುರಿತು

ಅಸಂತುಷ್ಟಿಯನ್ನು ವ್ಯಕ್ತ ಪಡಿಸಲಾಗುತ್ತಿತ್ತು. ಯಾಕೆಂದರೆ ಕ್ರೈಸ್ತ ವ್ಯಕ್ತಿಯೊಬ್ಬ ಸರಕಾರಿ ಅಥವಾ ಸಾರ್ವಜನಿಕ ಸಂಸ್ಥೆಗಳನ್ನು ಸೇರಿಕೊಂಡರೆ ಅವನು ಹೆಮ್ಮೆ ತಾಳಬಹುದು ಮತ್ತು ಲಂಚದ ಆಮಿಷಕ್ಕೆ ಒಳಗಾಗಬಹುದು ಎಂದು ತಿಳಿಯಲಾಗುತ್ತಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಮಿಶನರಿಗಳಿಗೆ ತಮ್ಮ ಶ್ರೇಷ್ಠತೆಯ ಬಿಂಬವನ್ನು ಉಳಿಸಿಕೊಳ್ಳುವುದು ಬೇಕಿತ್ತು. ಸ್ಥಳೀಯ ಕ್ರೈಸ್ತರು ಉನ್ನತ ಶಿಕ್ಷಣದಿಂದ ಲಾಭ ಪಡೆದು ತಮ್ಮ ಮೂರ್ತಿ ಭಂಜನೆಯನ್ನು ಮಾಡುವುದಕ್ಕೆ ಅವಕಾಶ ನೀಡಲು ಮಿಶನರಿಗಳು ತಯಾರಿರಲಿಲ್ಲ.[೪೯] ಸತ್ಯವ್ರತ ಪತ್ರಿಕೆಯು ೧೯೨೮ರಲ್ಲಿ 'ವಿದ್ಯಾನಿಧಿ' ಸಂಗ್ರಹದ ಸಂದರ್ಭವನ್ನು ಉಲ್ಲೇಖಿಸಿ ಹೀಗೆ ಅಭಿಪ್ರಾಯ ಪಡುತ್ತದೆ: "ಪ್ರೊಟೆಸ್ಟೆಂಟ್ ಸಮಾಜವು ದಕ್ಷಿಣ ಕನ್ನಡದಲ್ಲಿ ಬೆಳಕಿಗೆ ಬಂದು ಸುಮಾರು ಒಂದು ಶತಮಾನ ಸಮೀಪಿಸಿದರೂ ಇನ್ನೂ ಈ ಸಮಾಜವು ಪ್ರೌಢ ಶಿಕ್ಷಣದ ಅಭಾವದಿಂದ 'ಗಂಜೀ ಕ್ರೈಸ್ತ' ರೆಂಬ ನಾಮಧೇಯವನ್ನು ಪಡೆದಿದೆ".[೫೦] ಗ್ರಾಮೀಣ ಪ್ರದೇಶದ ಜನರಿಗೆ ತಮ್ಮ ಮಕ್ಕಳನ್ನು ಅದರಲ್ಲಿಯೂ ವಿಶೇಷವಾಗಿ ಹೆಣ್ಣು ಮಕ್ಕಳನ್ನು, ಶಾಲೆಗೆ ಕಳುಹಿಸುವುದರಲ್ಲಿ ಹೆಚ್ಚಿನ ಉಪಯೋಗವೇನೂ ಕಾಣುವುದಿಲ್ಲ. ಆದುದರಿಂದ ಅವರ ಮಕ್ಕಳನ್ನು ನಿಯಮಿತವಾಗಿ ಶಾಲೆಗೆ ಕಳುಹಿಸುವಂತೆ ಮಾಡುವುದು ಕಷ್ಟದ ಕೆಲಸ. ಅವರಿಂದ ಶಾಲಾ ಶುಲ್ಕವನ್ನು ವಸೂಲಿ ಮಾಡುವುದಂತೂ ಇನ್ನೂ ಕಷ್ಟ. ಆದರೆ ನಗರಗಳಲ್ಲಿ ಮಿಶನ್ ಕ್ರೈಸ್ತರಿಂದಾಗಿ ಶಿಕ್ಷಣವು ಹೆಚ್ಚು ಮೌಲ್ಯಭರಿತವಾಗುತ್ತಿದೆ. ಇದರ ಪರಿಣಾಮವಾಗಿ ಶಾಲೆಗಳ ಹಾಜರಾತಿ ನಿಯಮಿತಗೊಂಡಿದೆ. ಇನ್ನು ಕೆಲವರು ಮತ್ತಷ್ಟು ಮುಂದುವರಿದು, ತಮ್ಮ ಮಕ್ಕಳು ಉನ್ನತ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಗೌರವಯುತ ಹುದ್ದೆಗೆ ಅರ್ಹರಾಗಬೇಕೆಂಬ ನಿರೀಕ್ಷೆಯಲ್ಲಿ ಇರುತ್ತಾರೆ ಮತ್ತು ಕೆಲವರು ತಮ್ಮ ಶಿಕ್ಷಣ ಮತ್ತು ನೆಮ್ಮದಿಯ ವೇತನಗಳಿಗೆ ಮಿಶನ್‌ಗೆ ಕೃತಜ್ಞರಾಗಿದ್ದಾರೆ.

ಬಾಸೆಲ್ ಮಿಶನ್ ಕ್ರೈಸ್ತರಿಗಾಗಿ ಈ ಮುಂದೆ ಹೆಸರಿಸಿದ ಶಾಲೆಗಳನ್ನು ಸ್ಥಾಪಿಸಿತು.

### ೨.೫.೧.೧.ಶಿಶುವಿಹಾರ/ ನರ್ಸರಿಗಳು

ಮಕ್ಕಳನ್ನು ನೋಡಿಕೊಳ್ಳುವುದು ಖಂಡಿತವಾಗಿಯೂ ಹೆತ್ತವರಿಗೆ ಅಸಾಧ್ಯವಾದಾಗ ಮಿಶನ್ ಮುಖ್ಯವಾಗಿ ಕೈಗಾರಿಕಾ ಕೇಂದ್ರಗಳಲ್ಲಿ, ಶಿಶು ವಿಹಾರಗಳನ್ನು ಸ್ಥಾಪಿಸಿತು. ಕ್ರೈಸ್ತ ಮಕ್ಕಳಿಗೆ ಶುಚಿತ್ವವನ್ನು ಮತ್ತು ಶಿಸ್ತನ್ನು ಕಲಿಸಿ, ಅವರನ್ನು ಬೀದಿ ಪಾಲಾಗುವ ಅಪಾಯದಿಂದ ರಕ್ಷಿಸಲಾಗಿದೆ. ಶಿಶು ವಿಹಾರದಲ್ಲಿ ಬೈಬಲ್ ಕಥೆಗಳಲ್ಲಿ ಮತ್ತು ಮಕ್ಕಳ ಹಾಡುಗಳಲ್ಲಿ ಅವರು ತೋರಿಸುವ ಆಸಕ್ತಿಯು, ಅವರು ತಮ್ಮ ಆಟಗಳಿಂದ ಪಡೆಯುವ ಆನಂದಕ್ಕಿಂತ ಕಡಿಮೆಯೇನಿಲ್ಲ ಎಂಬುದು ಮಿಶನರಿಗಳ ಅನಿಸಿಕೆಯಾಗಿದೆ.[೫೧]

### ೨.೫.೧.೨.ಶಿಶುಶಾಲೆ (ಇನ್‌ಫ್ಯಾಂಟ್ ಸ್ಕೂಲ್)

ಬಾಸೆಲ್ ಮಿಶನ್ ಮಂಗಳೂರು ಮತ್ತು ಉಡುಪಿಯಲ್ಲಿ ಶಿಶು ಶಾಲೆಗಳನ್ನು ಸ್ಥಾಪಿಸಿತು. ಇಲ್ಲಿ ಮೂರರಿಂದ ಆರು ವರ್ಷದ ನಡುವಿನ ವಯೋಮಾನದ ಮಕ್ಕಳನ್ನು ಸೇರಿಸಲಾಗುತ್ತಿತ್ತು. ದೈನಂದಿನ ಕೂಲಿ ಕೆಲಸ ಮಾಡುವ ಮಹಿಳೆಯರ ಮಕ್ಕಳಿಗಾಗಿ ಈ ಶಾಲೆಯನ್ನು ಪ್ರಾರಂಭಿಸಲಾಗಿದೆ. ಈ ರೀತಿಯ ಶಾಲೆಗಳನ್ನು ಬಹುತೇಕ ಪ್ರೊಬೆಟ್‌ರವರು ಜರ್ಮನಿಯಲ್ಲಿ ನಡೆಸುತ್ತಿರುವ 'ಕಿಂಡರ್ ಗಾರ್ಟನ್' ಮಾದರಿಯಲ್ಲಿ ನಡೆಸಲಾಗುತ್ತಿದೆ.[೫೨] ಅದೇ ರೀತಿಯಲ್ಲಿ ಬಹಳ ಚಿಕ್ಕ ವಯಸ್ಸಿನ ಕ್ರೈಸ್ತ ಮಕ್ಕಳಿಗಾಗಿ ಶ್ರೀಮತಿ ವುರ್ತ್‌ರವರು ಮಂಗಳೂರಿನಲ್ಲಿ ಶಿಶುಶಾಲೆಯನ್ನು ತೆರೆದರು ಅದನ್ನು ಇಬ್ಬರು ಸ್ಥಳೀಯ ಶಿಕ್ಷಕಿಯರ ನೆರವಿನಿಂದ ನಡೆಸಿಕೊಂಡು ಹೋಗುತ್ತಿದ್ದಾರೆ.[೫೩]

### ೨.೫.೧.೩.ಪೆರೋಕಿಯಲ್ (ಪ್ಯಾರಿಷಿನ) ಶಾಲೆಗಳು

ಕ್ರೈಸ್ತ ಮಕ್ಕಳಿಗಾಗಿ ಇರುವ ಪ್ರಾಥಮಿಕ ಶಾಲೆಗಳನ್ನು ಪೆರೋಕಿಯಲ್ ಶಾಲೆಗಳೆಂದು ಕರೆಯಲಾಗುತ್ತದೆ. ೧೮೪೮ರಿಂದಾಚೆಗೆ ಮಿಶನ್ ತನ್ನ ಎಲ್ಲಾ ಮುಖ್ಯ ಠಾಣ್ಯಗಳಲ್ಲಿ ಹಾಗೂ ಉಪಠಾಣ್ಯಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಿದೆ. ಕ್ರೈಸ್ತ ಸಭೆ ಇರುವ ಕಡೆಗಳಲ್ಲೆಲ್ಲಾ ಒಂದೊಂದು ಶಾಲೆ ಇರಬೇಕು ಹಾಗೂ ಕ್ರೈಸ್ತ ಶಿಕ್ಷಕ ಅದನ್ನು ನಿರ್ವಹಿಸಬೇಕೆಂಬ ನಿಯಮವನ್ನು ಜಾರಿಗೊಳಿಸಲಾಯಿತು. ಹೆತ್ತವರು ೬ ರಿಂದ ೧೪ ವರ್ಷ ವಯೋಮಿತಿಯ ಮಕ್ಕಳನ್ನು ಕಡ್ಡಾಯವಾಗಿ ಶಾಲೆಗಳಿಗೆ ಕಳುಹಿಸಬೇಕೆಂದೂ ನಿಯಮವನ್ನು ತರಲಾಯಿತು. ಓದು ಬರಹ ತಿಳಿಯದ ಮಕ್ಕಳನ್ನು ಸಭೆಯ ಸದಸ್ಯತ್ವದಿಂದ ಹೊರಗಿಡಲಾಗುತ್ತಿತ್ತು. ಈ ಶಾಲೆಗಳ ಉದ್ದೇಶವೇನೆಂದರೆ, ಸ್ಥಳೀಯ ಸಭೆಗೆ ಸೇರುವ ಪ್ರತಿಯೊಂದು ಕ್ರೈಸ್ತ ಮಗು, ಹುಡುಗ ಅಥವಾ ಹುಡುಗಿ ಓದುವುದನ್ನು ಮತ್ತು ಸುವಾರ್ತೆಯನ್ನು ತಿಳಿದುಕೊಳ್ಳುವಂತೆ ಮಾಡುವುದು ಮತ್ತು ಅವರು ಸಮಾಜದ ಬುದ್ಧಿವಂತ ಮತ್ತು ಪ್ರಯೋಜನಕಾರಿ ಸದಸ್ಯರಾಗಲು ನೆರವಾಗುವುದು.[೫೪] ಈ ಶಾಲೆಗಳಿಗೆ ಕ್ರೈಸ್ತೇತರ ಮಕ್ಕಳು ಕೂಡಾ ಸೇರಿಕೊಂಡಿದ್ದಾರೆ. ಅದರಲ್ಲಿ ವಿಶೇಷವಾಗಿ ಬೇರೆ ಶಾಲೆಗಳಿಲ್ಲದ ತೀರಾ ಒಳ ಭಾಗದಲ್ಲಿರುವ ಹಳ್ಳಿ ಪ್ರದೇಶಗಳಲ್ಲಿ. ಆದರೆ ಕ್ರೈಸ್ತ ಮಕ್ಕಳಿಗೆಂದೇ ಶಿಕ್ಷಣ ನೀಡುವ ಸ್ಪಷ್ಟ ಉದ್ದೇಶದಿಂದ ಸ್ಥಾಪಿಸಲಾದ ಶಾಲೆಗಳಲ್ಲಿ ನಿಯಮ ಪ್ರಕಾರ ಕ್ರೈಸ್ತೇತರರನ್ನು ಹೊರತುಪಡಿಸಿ, ಕ್ರೈಸ್ತ ಮಕ್ಕಳಿಗೆ ಶಿಕ್ಷಣ ನೀಡುವುದು ಮಿಶನ್ನಿನ ಆಯ್ಕೆಯಾಗಿತ್ತು. ಈ ರೀತಿಯ ಶಾಲೆಗಳಲ್ಲಿ ಧಾರ್ಮಿಕ ಪಾಠಗಳನ್ನು ವ್ಯವಸ್ಥಿತವಾಗಿ ಮತ್ತು ನಿಖರವಾಗಿ ಮಾಡುವುದು ಸಾಧ್ಯವಿದೆ. ಇದನ್ನು ಕ್ರೈಸ್ತ ಮಕ್ಕಳ ಅಗತ್ಯಗಳಿಗೆ ಅನುಗುಣವಾಗಿ ಅಳವಡಿಸಿಕೊಳ್ಳಬಹುದಾಗಿದೆ. ಕ್ರೈಸ್ತೇತರರು ಹೆಚ್ಚು ಸಂಖ್ಯೆಯಲ್ಲಿ ಕಲಿಯುವ ಶಾಲೆಗಳಲ್ಲಿ ಕೆಲವೊಮ್ಮೆ ಕ್ರೈಸ್ತ ಮಕ್ಕಳ ನೈತಿಕತೆಗಳ ಮೇಲೆ ಪ್ರತಿಕೂಲ ಪ್ರಭಾವ ಉಂಟಾಗುವುದನ್ನು ಮಿಶನರಿಗಳು ಕಂಡುಕೊಂಡಿದ್ದಾರೆ. ಕೆಲವು ಕ್ರೈಸ್ತರು, ಅದರಲ್ಲಿಯೂ ವಿಶೇಷವಾಗಿ ಕೃಷಿ

ವರ್ಗದವರು ತಮ್ಮ ಮಕ್ಕಳಿಗೆ ಶಿಕ್ಷಣ ನೀಡುವುದರಲ್ಲಿ ಬಹಳ ಉಪೇಕ್ಷೆಯನ್ನು ತೋರಿಸುವುದು ನಿಜವಾಗಿಯೂ ಮರುಕದ ಸಂಗತಿಯಾಗಿದೆ. ಇದರ ಪರಿಣಾಮವೇನೆಂದರೆ ಕೆಲವು ಮಿಶನ್ ಶಾಲೆಗಳಲ್ಲಿ ಮಕ್ಕಳ ಹಾಜರಾತಿ ಅಷ್ಟೊಂದು ಸಮಾಧಾನಕರವಾಗಿಲ್ಲ.[೫೫]

ಪೆರೋಕಿಯಲ್ ಶಾಲೆಗಳು ಕ್ರೈಸ್ತ ಮಕ್ಕಳ ಹೆತ್ತವರಿಂದ ಹಾಗೂ ಸ್ನೇಹಿತರಿಂದ ಮಿಶನ್ನಿಗೆ ನೀಡಲ್ಪಟ್ಟ ಕ್ರೈಸ್ತೇತರ ಮಕ್ಕಳ ಶಿಕ್ಷಣಕ್ಕಾಗಿ ಇರುವಂಥವು. ಇವು ಭಾಗಶಃ ಪ್ರಾಥಮಿಕ ಶಾಲೆಗಳು ಮತ್ತು ಭಾಗಶಃ ವಸತಿ ಶಾಲೆಗಳಾಗಿವೆ. ಪ್ರಾರಂಭಿಕ ವರ್ಷಗಳಲ್ಲಿ ಸಮಾಜದ ಎಲ್ಲಾ ಕ್ರೈಸ್ತ ಮಕ್ಕಳಿಗೆ ಬೋಧನೆ ಮಾತ್ರವಲ್ಲ, ಬಟ್ಟೆ ಮತ್ತು ಆಹಾರವನ್ನು ಕೂಡಾ ಒದಗಿಸಲಾಗುತ್ತಿತ್ತು. ಆದರೆ ನಂತರದ ದಿನಗಳಲ್ಲಿ ಶಿಕ್ಷಣ ನೀಡುವ ಸಾಮರ್ಥ್ಯವುಳ್ಳ ಹೆತ್ತವರ ಮಕ್ಕಳನ್ನು ಅವರ ಸ್ವಂತ ಕುಟುಂಬಗಳಿಗೆ ಹಿಂದೆ ಕಳುಹಿಸಿ, ಅವರಿಗೆ ಧಾರ್ಮಿಕ ಬೋಧನೆ ಮತ್ತು ಎಂದಿನ ಶಾಲಾ ಬೋಧನೆಯನ್ನು ಪೆರೋಕಿಯಲ್ ಶಾಲೆಗಳಲ್ಲಿ ಒದಗಿಸಲಾಗಿದೆ. ಅನಾಥರು ಮತ್ತು ಬಡತನ ಹಾಗೂ ಇನ್ನಿತರ ಕಾರಣಗಳಿಂದ ತಮ್ಮ ಮಕ್ಕಳಿಗೆ ಶಿಕ್ಷಣ ಒದಗಿಸಲು ಅಸಮರ್ಥರಾಗಿದ್ದ ಹೆತ್ತವರ ಮಕ್ಕಳನ್ನು ಅನಾಥಾಲಯಗಳಿಗೆ ಕಳುಹಿಸಿ, ಅಲ್ಲಿ ಅವರಿಗೆ ಸಾದಾ ಶಿಕ್ಷಣವನ್ನು ಜೊತೆಗೆ ಹೆಚ್ಚಿನ ಶ್ರಮವಿಲ್ಲದ ಕೈ ಕೆಲಸವನ್ನು ನೀಡಲಾಗಿದೆ. ಹೆಣ್ಣು ಮಕ್ಕಳಿಗೆ ಸಂಬಂಧಿಸಿದಂತೆ ಇದೇ ರೀತಿಯ ಕ್ರಮವನ್ನು ಅನುಸರಿಸಿದ ಮಿಶನ್ ಅವರನ್ನು ಅವರ ಹೆತ್ತವರು ಇರುವಲ್ಲಿಗೆ ಕಳುಹಿಸಲು ಪ್ರಾರಂಭಿಸಿದೆ. ಅದರೂ ಅವರಿಗೆ ಮಿಶನ್ ಸಂಸ್ಥೆಗಳಲ್ಲಿ ಓದು, ಬರಹ ಮತ್ತು ಹೊಲಿಗೆ ತರಬೇತಿ ಸಿಗುವ ವ್ಯವಸ್ಥೆ ಮಾಡಲಾಗಿದೆ. ಹಾಗಿದ್ದರೂ, ಸೂಕ್ತ ಶಿಕ್ಷಣವನ್ನು ಪಡೆಯಲು ಅಸಮರ್ಥರಾದ ವಸತಿ ಶಾಲೆಗಳ ಹುಡುಗಿಯರನ್ನು ಅಥವಾ ಮನೆಯಲ್ಲಿ ಕ್ರೈಸ್ತೇತರ ಪ್ರಭಾವದಿಂದ ರಕ್ಷಿಸಿಕೊಳ್ಳಲಾಗದವರನ್ನು ಅಲ್ಲಿಯೇ ಉಳಿಸಿಕೊಳ್ಳಲಾಗಿದೆ. ಈ ವಿದ್ಯಾರ್ಥಿನಿಯರ ಸಂಖ್ಯೆ ಯಾವಾಗಲೂ ಹೆಚ್ಚು ಇರುತ್ತಿತ್ತು. ಈ ಶಾಲೆಗಳಿಂದಾಗಿ ಅತ್ಯಂತ ಕೆಳವರ್ಗದ ಜನರ ಮಕ್ಕಳು ಕೂಡಾ ಮಾನಸಿಕವಾಗಿ ಉನ್ನತಿಯನ್ನು ಸಾಧಿಸುವುದು ಸಾಧ್ಯವಾಗಿದೆ; ಅನೇಕ ಸಂದರ್ಭಗಳಲ್ಲಿ ಅವರಿಗೆ ನೀಡಲಾಗುತ್ತಿದ್ದ ಬೌದ್ಧಿಕ ಮತ್ತು ನೈತಿಕ ತರಬೇತಿಯು ನಂತರದ ವರ್ಷಗಳಲ್ಲಿ ಉನ್ನತ ವರ್ಗದ ಶೈಕ್ಷಣಿಕ ಸಂಸ್ಥೆಗಳಲ್ಲಿ ಕಲಿತ ಮೇಲ್ವರ್ಗದ ಮಕ್ಕಳೊಂದಿಗೆ ಸ್ಪರ್ಧೆ ನಡೆಸಲು ಮತ್ತು ಕೆಲವೊಮ್ಮೆ ಮೇಲುಗೈ ಸಾಧಿಸುವುದಕ್ಕೆ ಅವಕಾಶವನ್ನು ಒದಗಿಸಿದೆ.[೫೬]

ಬಾಸೆಲ್ ಮಿಶನ್ ತನ್ನ ಆಧುನೀಕರಣ ಕಾರ್ಯಕ್ರಮವನ್ನು ಕಾರ್ಯರೂಪಕ್ಕೆ ತರಲು ಆಯ್ಕೆ ಮಾಡಿಕೊಂಡ ಸಾಧನಗಳಲ್ಲಿ ಮಿಶನ್ ಕಾರ್ಖಾನೆಗಳು ಮಾತ್ರವಲ್ಲ, ಶಾಲಾ ಶಿಕ್ಷಣವೂ ಸೇರಿದೆ. ಶಿಕ್ಷಣವು ನಾಗರೀಕರಣದ ಪ್ರಯತ್ನದ ಮೂಲಾಧಾರಗಳಲ್ಲಿ ಒಂದಾಗಿದೆ; ಮಿಶನ್ ಕ್ರೈಸ್ತರ ಮಕ್ಕಳಿಗೆ ಮಿಶನ್ ಶಾಲೆಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಲಾಗಿದೆ. ಸಂವಿಧಾನವು ನಾಗರಿಕ ಸಂಹಿತೆಯ ಪೂರ್ಣರೂಪದ ಸಂಕೇತವಾಗಿದ್ದು, ಸಭೆಯ ಸದಸ್ಯರ ಸಾಮಾಜಿಕ ನಡವಳಿಕೆಗೆ ನಿರ್ದಿಷ್ಟ

ನಿಯಮಗಳ ಗುಂಪನ್ನು ಹೊಂದಿರುವಂತಹದ್ದಾಗಿದೆ. ಇದರಲ್ಲಿರುವ ಅವಕಾಶಗಳು ಮಿಶನ್ ಪರಿಕಲ್ಪನೆಯಲ್ಲಿದ್ದ ಆಧುನಿಕ ಕ್ರೈಸ್ತ ಸಮಾಜದ ಸಾಮಾನ್ಯ ಕಲ್ಪನೆಗೆ ನಿರ್ದಿಷ್ಟ ಮತ್ತು ವಿವರಣಾತ್ಮಕ ರೂಪವನ್ನು ನೀಡುವುದಾಗಿದೆ.[೫೭]

### ೨.೫.೧.೪.ಮಾಧ್ಯಮಿಕ ಶಾಲೆಗಳು

ಮಿಶನ್‌ನವರು ಉಪದೇಶಿಗಳ ಮತ್ತು ಶಿಕ್ಷಕರ ಪೂರೈಕೆಗಾಗಿ ಸನ್ನಾಹ ಶಾಲೆಗಳ ರೂಪದಲ್ಲಿ ಮಾಧ್ಯಮಿಕ ಶಾಲೆಗಳನ್ನು ಮಂಗಳೂರು ಮತ್ತು ಉಡುಪಿಯಲ್ಲಿ ಸ್ಥಾಪಿಸಿದರು. ಮಾಧ್ಯಮಿಕ ಶಾಲೆಯಲ್ಲಿ ಹುಡುಗರು ೪ ವರ್ಷಗಳ ಕಾಲ ವಿದ್ಯಾಭ್ಯಾಸ ನಡೆಸಿ ಮುಂದೆ ಶಿಕ್ಷಕರಾಗುವುದಾದರೆ ಎರಡು ವರ್ಷಗಳ ತರಬೇತಿ ಮತ್ತು ಉಪದೇಶಿಕರಾಗುವುದಾದರೆ ೩-೪ ವರ್ಷಗಳ ತರಬೇತಿಗಾಗಿ ಮಂಗಳೂರಿಗೆ ತೆರಳಬೇಕಿತ್ತು.[೫೮]

### ೨.೫.೧.೫.ತರಬೇತಿ ಶಾಲೆಗಳು

ಶಿಕ್ಷಕರಿಗೆ ತಾತ್ವಿಕ ಜ್ಞಾನ, ಪ್ರಾಯೋಗಿಕ ಮತ್ತು ಶೈಕ್ಷಣಿಕ ಕೌಶಲ್ಯಗಳ ಕೊರತೆಯಿಂದಾಗಿ ಮಿಶನರಿಗಳಿಗೆ ಶಾಲೆಗಳನ್ನು ನಡೆಸುವುದು ಕಷ್ಟವಾಗಿ ಪರಿಣಮಿಸಿದೆ. ಈ ನ್ಯೂನತೆಯನ್ನು ಹೋಗಲಾಡಿಸುವ ಉದ್ದೇಶದಿಂದ ಕ್ರೈಸ್ತರಿಗಾಗಿ ಶಿಕ್ಷಕ ತರಬೇತಿ ಶಾಲೆಗಳನ್ನು ಉಡುಪಿ ಮತ್ತು ಮಂಗಳೂರಿನಲ್ಲಿ ಸ್ಥಾಪಿಸಲಾಗಿದೆ. ಆದರೆ ಕಾರಣಾಂತರದಿಂದ ಉಡುಪಿಯ ತರಬೇತಿ ಶಾಲೆಯನ್ನು ೧೯೧೪ರಲ್ಲಿ ಮುಚ್ಚಲಾಗಿದೆ. ಕೆನರಾದಲ್ಲಿ ಮಿಶನ್ನಿನ ಶಿಕ್ಷಕರನ್ನು ಮಂಗಳೂರಿನ ಸರಕಾರಿ ತರಬೇತಿ ಶಾಲೆಗೆ ಕಳುಹಿಸಲಾಗುತ್ತಿತ್ತು. ಅದರೆ ಅದರ ನಂತರ ಅವರು ಉಡುಪಿಯಲ್ಲಿರುವ ಮಿಶನ್ನಿನ ಖಾಸಗಿ ಮಿಶನ್ ತರಬೇತಿ ಶಾಲೆಯಲ್ಲಿ ಒಂದು ವರ್ಷ ಹೆಚ್ಚಿನ ತರಬೇತಿ ಪಡೆಯಬೇಕಿತ್ತು. ಅಲ್ಲಿ ಅವರಿಗೆ ಬೈಬಲ್ ಮತ್ತು ಧಾರ್ಮಿಕ ವಿಚಾರಗಳನ್ನು, ಸಂಗೀತವನ್ನು ಕಲಿಸುವುದರೊಂದಿಗೆ ಶಿಕ್ಷಣಶಾಸ್ತ್ರ ಮತ್ತು ವಿಧಾನವನ್ನು ಹೆಚ್ಚುವರಿ ಪಠ್ಯಕ್ರಮವಾಗಿ ಕಲಿಸಲಾಗುತ್ತಿತ್ತು.[೫೯] ಅವರಿಗೆ ಹುಡುಗರ ಶಾಲೆಗಳ ಕಿರಿಯ ತರಗತಿಗಳಲ್ಲಿ ಹಿರಿಯ ಶಿಕ್ಷಕರ ಮತ್ತು ಅಲ್ಲಿ ಅಧಿಕಾರ ಸ್ಥಾನದಲ್ಲಿದ್ದ ಮಿಶನರಿಯೊಬ್ಬರ ಸಮಕ್ಷಮದಲ್ಲಿ ಪಾಠ ಹೇಳುವಂತೆ ತಿಳಿಸಲಾಗುತ್ತಿತ್ತು.[೬೦] ಸರ್ಕಾರ ಮಂಗಳೂರಿನಲ್ಲಿ ಮಹಿಳೆಯರಿಗಾಗಿ ಶಿಕ್ಷಣ ತರಬೇತಿ ಶಾಲೆಯನ್ನು ತೆರೆಯುವುದಾಗಿ ಘೋಷಿಸಿದ್ದರಿಂದ, ಮಂಗಳೂರಿನಲ್ಲಿದ್ದ ಮಹಿಳಾ ತರಬೇತಿ ಸಂಸ್ಥೆಯನ್ನು ೧೯೧೨ರಲ್ಲಿ ಮುಚ್ಚಲಾಗಿದೆ. ಭವಿಷ್ಯದಲ್ಲಿ ಮಿಶನ್ನಿನ ಹೆಣ್ಣು ಮಕ್ಕಳು ಸರಕಾರಿ ತರಬೇತಿ ಶಾಲೆಗೆ ಹೋಗಬೇಕು ಮತ್ತು ಅವರ ಧಾರ್ಮಿಕ ಮತ್ತು ನೀತಿಶಿಕ್ಷಣ ಸೌಲಭ್ಯವನ್ನು ಮಿಶನ್ ಕಲ್ಪಿಸಬೇಕು ಎಂದಾಗಿದೆ.[೬೧] ಹುಡುಗಿಯರು ಇಂಗ್ಲಿಷಿನ ಉತ್ತಮ ಜ್ಞಾನವನ್ನು ಹೊಂದಲು ಬಯಸಿದರೆ, ಅದನ್ನು

ಹೆತ್ತವರು ಮೆಚ್ಚಿಕೊಳ್ಳಲಾರಂಭಿಸಿದರು ಮತ್ತು ಆ ಬದಲಾವಣೆಯನ್ನು ಮಿಶನ್ ಸಂತೋಷದಿಂದಲೇ ಸ್ವಾಗತಿಸಿದೆ. ಕೆಲವು ಹುಡುಗಿಯರು ತಾವೇ ಸ್ವತಃ ಶಿಕ್ಷಕಿಯರಾಗುವ ಯೋಗ್ಯತೆಯನ್ನು ಗಳಿಸುವರೆಂಬ ಭರವಸೆ ಮಿಶನ್ನಿನದಾಗಿತ್ತು. ಆಗಾಗಲೇ ಇಬ್ಬರು, ಶಾಲಾ ಶಿಕ್ಷಕಿಯರಾಗಿ ಉದ್ಯೋಗಕ್ಕೆ ಸೇರಿಕೊಂಡಿದ್ದರು.[೬೨] ಮಿಶನ್ನಿಗೆ ಪ್ರಾಥಮಿಕ ಮತ್ತು ಕೆಳಮಾಧ್ಯಮಿಕ ತರಗತಿಗಳಿಗಾಗಿ ಕ್ರೈಸ್ತ ಶಾಲಾ ಶಿಕ್ಷಕರನ್ನು ಒದಗಿಸಿ ಕೊಡಲಾಗಿದೆ. ಆದರೆ ಮೆಟ್ರಿಕ್ ಕಲಿತು ತರಬೇತಿ ಹೊಂದಿದವರ ಮತ್ತು ಪದವೀಧರರ ಸಂಖ್ಯೆ ಬಹಳ ಕಡಿಮೆಯಾಗಿದ್ದು ಮಿಶನರಿಗಳ ಅಗತ್ಯಗಳಿಗೆ ಇದು ಎಷ್ಟೂ ಸಾಲದಂತಿದೆ. ಉನ್ನತ ಶಿಕ್ಷಣದ ಕೊರತೆಯನ್ನು ದೊಡ್ಡ ತಡೆಯಾಗಿ ಪರಿಗಣಿಸಿರುವ ಮಿಶನರಿಗಳು ಅದನ್ನು ಸರಿದೂಗಿಸಲು ಪ್ರಾಮಾಣಿಕ ಪ್ರಯತ್ನವನ್ನು ನಡೆಸುತ್ತಿದ್ದಾರೆ.[೬೩]

೧೯೬೪ರಲ್ಲಿ ಹೆಬಿಕ್ ತಾಂತ್ರಿಕ ಶಾಲೆಯನ್ನು, ಬಲ್ಮಠದಲ್ಲಿ ಈ ಭಾಗದ ಯುವಜನತೆಗೆ ಉದ್ಯೋಗವಕಾಶವನ್ನು ಸೃಷ್ಟಿಸಲು, ಅಗತ್ಯವಾಗಿ ಬೇಕಾದ ಕೌಶಲ್ಯಯುಕ್ತ ತಂತ್ರಜ್ಞರನ್ನು ತಯಾರು ಮಾಡಿ ಕಾರ್ಖಾನೆಗಳಿಗೆ ಉಪಕಾರವೆಸಗಲು ಸ್ಥಾಪಿಸಲಾಗಿದೆ. ಪ್ರಸ್ತುತ ಹೆಬಿಕ್ ತಾಂತ್ರಿಕ ಶಾಲೆಯು, ಎಸ್.ಎಸ್.ಎಲ್.ಸಿ. ಉತ್ತೀರ್ಣರಾದ ಹುಡುಗರಿಗಾಗಿ ಮೂರು ವರ್ಷಗಳ ತರಬೇತಿಯನ್ನು ನೀಡುತ್ತಿದೆ. ಈ ತರಬೇತಿಯು ಉದ್ಯೋಗ ದೊರಕಿಸುವಂಥದ್ದಾಗಿದೆಯಲ್ಲದೆ, ತರಬೇತಿ ಹೊಂದಿದ ವಿದ್ಯಾರ್ಥಿಗಳು ಸ್ವ-ಉದ್ಯೋಗಿಗಳಾಗಿ ಸ್ವಾವಲಂಬಿಗಳಾಗಲೂ, ಆಧುನಿಕ ಕೈಗಾರಿಕಾ ಸಂಸ್ಥೆಗಳ ಅಗತ್ಯಗಳನ್ನು ಪೂರೈಸಬಲ್ಲ ಸಂಪನ್ಮೂಲ ತಂತ್ರಜ್ಞರಾಗುವಂತೆಯೂ ಅವರನ್ನು ತಯಾರು ಮಾಡುವ ಗುರಿಯನ್ನು ಹೊಂದಿದೆ. ಈ ಉದ್ದೇಶಕ್ಕಾಗಿಯೇ, ಇಂಜಿನಿಯರಿಂಗ್ ಸಂಸ್ಥೆಗಳಿಂದ ನೌಕರಿಯ ಆದೇಶಗಳನ್ನು ಸ್ವೀಕರಿಸಲಾಗುತ್ತದೆ, ಮಾತ್ರವಲ್ಲ, ತರಬೇತಿ ಹೊಂದಿದ ಅಭ್ಯರ್ಥಿಗಳು ವಿವಿಧ ತಾಂತ್ರಿಕ ಕೌಶಲ್ಯಗಳನ್ನು ಸರಿಯಾಗಿ ಮತ್ತು ಪರಿಣಾಮಕಾರಿಯಾಗಿ ನಿಭಾಯಿಸುವಂತೆ ತರಬೇತಿ ನೀಡಲಾಗುತ್ತದೆ.[೬೪]

### ೨.೫.೧.೬.ಔದ್ಯೋಗಿಕ ಶಾಲೆಗಳು (Vocational Schools)

ಬಾಸೆಲ್ ಮಿಶನ್ ಸಂಸ್ಥೆಯು ಮಂಗಳೂರು(ಬಲ್ಮಠ) ಮತ್ತು ಉಡುಪಿಯಲ್ಲಿ ಮಿಶನ್ ಶಾಲೆಗಳ ಹತ್ತಿರವೇ ಕೈಗಾರಿಕಾ ಶಾಲೆಗಳನ್ನು ಸ್ಥಾಪಿಸಿದೆ. ಇಲ್ಲಿ ಹುಡುಗಿಯರಿಗೆ ತರಬೇತಿ ಹೊಂದಿದ ಶಿಕ್ಷಕರಿಂದ ಹೊಲಿಗೆಯನ್ನು ಕಲಿಸಲಾಗುತ್ತಿದೆ.[೬೫] ಮಹಿಳೆಯರಿಗೆ ಬೆರಳಚ್ಚು, ಶೀಘ್ರಲಿಪಿ, ಕಂಪ್ಯೂಟರ್ ಸೈನ್ಸ್, ಸೆಕ್ರೇಟೇರಿಯಲ್ ಪ್ರಾಕ್ಟೀಸ್ ಇತ್ಯಾದಿ ಕೋರ್ಸ್‌ಗಳನ್ನು ತೆರೆಯಲಾಗಿದ್ದು, ಈ ಕೋರ್ಸ್‌ಗಳು ಅವರು ಭಾರತದಲ್ಲಿ ಮಾತ್ರವಲ್ಲದೆ ಹೊರದೇಶಗಳಲ್ಲೂ ಉದ್ಯೋಗ ಗಳಿಸಲು ಸಹಕಾರಿಯಾಗಿವೆ.[೬೬] ಅಂತೆಯೇ ಹೊಲಿಗೆ ಹಾಗೂ ಕಸೂತಿ ಕೈಗಾರಿಕೆ ಮಹಿಳೆಯರಿಗಾಗಿಯೇ ಇದ್ದು ,ಇಲ್ಲಿ ಹೊಲಿಗೆ, ಕಸೂತಿ, ಬಟ್ಟೆಗಳಿಗೆ ಬಣ್ಣ ಹಾಕುವುದು ಮುಂತಾದ ಕೌಶಲ್ಯಗಳನ್ನು ಕಲಿಸಲಾಗುತ್ತದೆ. ಈ ಮೂಲಕ ಸಮಾಜದ ದುರ್ಬಲ

ವರ್ಗದ ಮಹಿಳೆಯರು ಸ್ವ-ಉದ್ಯೋಗಿಗಳಾಗಿ ಸ್ವಾವಲಂಬನೆಯ ಜೀವನ ಸಾಗಿಸಲು ಅವಕಾಶ ನೀಡಲಾಗುತ್ತಿದೆ.[೬೭]

### ೨.೫.೧.೭.ರಾತ್ರಿ ಶಾಲೆಗಳು:

ಸ್ಥಳೀಯ ಕ್ರೈಸ್ತ ಮತಾವಲಂಬಿಗಳಿಗೆ ಶಿಕ್ಷಣ ನೀಡುವ ಉದ್ದೇಶದಿಂದ ಕೈಗಾರಿಕಾ ಕೇಂದ್ರಗಳಿರುವಲ್ಲೆಲ್ಲಾ ರಾತ್ರಿ ಶಾಲೆಗಳನ್ನು ಸ್ಥಾಪಿಸಲಾಗಿದೆ. ಬಾಸೆಲ್ ಮಿಶನ್ ೧೮೮೫ರಲ್ಲಿ ನೇಯ್ಗೆ ಕಾರ್ಖಾನೆ ಮತ್ತು ತಾಂತ್ರಿಕ ಸಂಸ್ಥೆಯ ಕೆಲಸ ಕಲಿಯುವವರಿಗಾಗಿ, ಮಂಗಳೂರಿನಲ್ಲಿ ಎರಡು ರಾತ್ರಿ ಶಾಲೆಗಳನ್ನು ಸ್ಥಾಪಿಸಿದೆ. ೧೮೮೮ರಲ್ಲಿ ಇನ್ನೂ ಎರಡು ರಾತ್ರಿ ಶಾಲೆಗಳು ಜೆಪ್ಪು ಮತ್ತು ಕುದ್ರೋಳಿಯ ಹಂಚು ಕಾರ್ಖಾನೆಗಳ ಬಳಿ ಪ್ರಾರಂಭವಾದವು. ಈ ಶಾಲೆಗಳು ಕಾರ್ಮಿಕರಿಗೆ ಕಲಿಕೆ ಮತ್ತು ಗಳಿಕೆಯಲ್ಲಿ ಹೆಚ್ಚು ನೆರವನ್ನು ನೀಡಿವೆ.[೬೮] ಮಂಗಳೂರಿನ ಬಲ್ಮಠದಲ್ಲಿರುವ ಯುನೈಟೆಡ್ ಬಾಸೆಲ್ ಮಿಶನ್ ಕ್ರಿಶ್ಚಿಯನ್ (ಯು.ಬಿ.ಎಂ.ಸಿ.) ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಕರ್ನಾಟಕ ಕ್ರಿಶ್ಚಿಯನ್ ಎಜುಕೇಷನಲ್ ಸೊಸೈಟಿಯವರು ನಡೆಸುತ್ತಿರುವ 'ಜನತಾ ವಿದ್ಯಾ ಕೇಂದ್ರ', ರಾತ್ರಿ ಶಾಲೆಯು ೧೯೭೪ರಿಂದ ನಡೆಯುತ್ತಿದ್ದು ೫ನೇ ತರಗತಿಯಿಂದ ಪ್ರೌಢಶಾಲಾ ಮಟ್ಟದ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತಿದೆ.[೬೯]

### ೨.೫.೨.ಕ್ರೈಸ್ತೇತರರಿಗಾಗಿ ಶಾಲೆಗಳು

ಕ್ರೈಸ್ತೇತರರಿಗಾಗಿ ಇದ್ದಂತಹ ಶಾಲೆಗಳು ಕ್ರೈಸ್ತ ತಿಳುವಳಿಕೆಯನ್ನು ಕ್ರೈಸ್ತೇತರ ಮಕ್ಕಳಿಗೆ ಒದಗಿಸುವ ಸಾಧನಗಳೆಂದು ಗುರುತಿಸಲ್ಪಡುತ್ತವೆ. ಆದುದರಿಂದ ಕ್ರೈಸ್ತೇತರರ ಮಕ್ಕಳಿಗಾಗಿ ಶಾಲೆಗಳನ್ನು ಪ್ರಾರಂಭಿಸುವುದರಲ್ಲಿ ಬಾಸೆಲ್ ಮಿಶನ್ ಕ್ರೈಸ್ತಧರ್ಮ ಬೋಧನೆಯ ಗುರಿಯನ್ನು ಹೊಂದಿತ್ತು. ಮಿಶನ್ ಶಾಲೆಗಳಲ್ಲಿ ಯಾವಾಗಲೂ ಕ್ರೈಸ್ತ ಶಿಕ್ಷಕರ ನೇಮಕಾತಿಗೆ ಪ್ರಾಶಸ್ತ್ಯವಿರುತ್ತಿತ್ತು. ಕ್ರೈಸ್ತೇತರ ಬೋಧಕ ಸಿಬ್ಬಂದಿಗಳು ಬಹಳ ಕಡಿಮೆ ಸಂಖ್ಯೆಯಲ್ಲಿ ಇರುತ್ತಿದ್ದರು. ಅದರಲ್ಲಿಯೂ ತರಬೇತಿ ಹೊಂದಿದ ಕ್ರೈಸ್ತ ಶಿಕ್ಷಕರು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲದಾಗ ಮಾತ್ರ ಅವರನ್ನು ನೇಮಕ ಮಾಡಿಕೊಳ್ಳಲಾಗಿದೆ. ಮಿಶನ್ ಶಾಲೆಗಳಲ್ಲಿ ಹಿಂದೂ ಗ್ರಂಥಗಳನ್ನು ಹೊರತುಪಡಿಸಲಾಗಿತ್ತು. ಶಾಲಾ ಶಿಕ್ಷಕರನ್ನು ಜಾಗರೂಕತೆಯ ಮೇಲುಸ್ತುವಾರಿ ಮತ್ತು ನಿಯಮಿತ ಪರೀಕ್ಷೆಯ ಮೂಲಕ ನಿರ್ಬಂಧದಲ್ಲಿ ಇಡಲಾಗುತ್ತಿತ್ತು. ಮೂಲಸ್ಥಾನದಿಂದ ಕೆಲವು ಅಂತರದಲ್ಲಿ ಶಾಲೆಗಳನ್ನು ಸ್ಥಾಪಿಸುವ ಉದ್ದೇಶವು ಅನೇಕ ಕ್ರೈಸ್ತೇತರ ಮಕ್ಕಳಿಗೆ ಕಲಿಕಾ ಅವಕಾಶವನ್ನು ಕಲ್ಪಿಸುವುದು ಮಾತ್ರವಲ್ಲ ಆ ಪ್ರದೇಶಗಳಲ್ಲಿ ನೆಲೆಸಿರುವವರ ಮನಸ್ಸಿನಲ್ಲಿ ಮತ್ತು ಪ್ರೀತಿಯಲ್ಲಿ ಮಿಶನರಿಗಳಿಗೆ ಸ್ಥಾನವನ್ನು ಕಲ್ಪಿಸುವುದು ಕೂಡಾ ಆಗಿತ್ತು.[೭೦] ಕ್ರೈಸ್ತೇತರಿಗೆ ಬಾಸೆಲ್ ಮಿಶನ್ ಈ ಕೆಳಗಿನ ಶಾಲೆಗಳನ್ನು ಪ್ರಾರಂಭಿಸಿತು.

೨.೫.೨.೧. ಪ್ರಾಥಮಿಕ ದೇಶೀ ಭಾಷಿಕ ಶಾಲೆಗಳು

ಕ್ರೈಸ್ತ ಸಭೆ ಇನ್ನೂ ರೂಪುಗೊಳ್ಳುವ ಮೊದಲೇ ಬಾಸೆಲ್ ಮಿಶನ್, ಕ್ರೈಸ್ತೇತರಿಗೆ ದಕ್ಷಿಣ ಕನ್ನಡದಲ್ಲಿ ಶಾಲೆಯನ್ನು ಸ್ಥಾಪಿಸಿದೆ. ಮಿಶನ್ನಿನ ಮೊದಲ ಕನ್ನಡ ಶಾಲೆಯನ್ನು ರೆವೆ.ಸಾಮುವೆಲ್ ಹೆಬಿಕ್ ಅವರು ೯ ಮೇ ೧೮೩೬ರಂದು ಸ್ಥಾಪಿಸಿದರು. ನಗರದ ಮನೆಗಳಿಗೆ ಭೇಟಿ ನೀಡಿ ಮಕ್ಕಳನ್ನು ಶಾಲೆಗೆ ಕಳುಹಿಸಬೇಕೆಂದು ವಿನಂತಿಸಿಕೊಂಡಾಗ ಶಾಲೆಗಳ ಮೂಲಕ ಈ ಮಿಶನರಿಯು ಜನರ ಮನಸ್ಸನ್ನು ಆಕರ್ಷಿಸಿ ತನ್ನ ಸುವಾರ್ತಾ ಪ್ರಸಾರ ಮಾಡುತ್ತಾರೆಂಬುದಾಗಿ ಬ್ರಾಹ್ಮಣ ವರ್ಗದವರು ಭಾವಿಸಿದರು. ಅಲ್ಲದೆ ಪಟ್ಟಣದ ಬೇರೆ ಬೇರೆ ಭಾಗಗಳಲ್ಲಿ ೫ ಶಾಲೆಗಳನ್ನು ತೆರೆದು, ಮಿಶನರಿಗಳು ತೆರೆದ ಶಾಲೆಗೆ ಮಕ್ಕಳು ಹೋಗದಂತೆ ತಡೆಗಟ್ಟಿದರು. ಜನರ ವಿರೋಧಭಾವದಿಂದ ಇವರು ಹಿಮ್ಮೆಟ್ಟದೆ ಪ್ರೀತಿಯಿಂದಲೂ ಸಹನೆಯಿಂದಲೂ ತನ್ನ ಸೇವೆಯನ್ನು ಮುಂದುವರಿಸುತ್ತಾ ಬಂದುದರಿಂದ ಶಾಲೆಗೆ ಬರುವ ಮಕ್ಕಳ ಸಂಖ್ಯೆಯು ಏರುತ್ತಾ ಬಂದುದಲ್ಲದೆ ಬೇರೆ ಶಾಲೆಗಳನ್ನು ಸ್ಥಾಪಿಸುವ ಅಗತ್ಯತೆ ಕಂಡು ಬಂತು.[೮೧]

೨.೫.೨.೨ ಆಂಗ್ಲೊ-ದೇಶೀ ಭಾಷಿಕ ಶಾಲೆಗಳು

೧೮೩೭ರಲ್ಲಿ ರೆವೆ. ಮೋಗ್ಲಿಂಗ್‌ರವರು ಮೊದಲ ಆಂಗ್ಲ-ದೇಶೀ ಭಾಷಿಕ ಶಾಲೆಯನ್ನು ಮಂಗಳೂರಿನಲ್ಲಿ ತೆರೆದರು. ಶಿಕ್ಷಣ ಎಂಬುದು ಮೇಲ್ವರ್ಗದವರಿಗೆ ಮತ್ತು ಪುರುಷರಿಗೆ ಮಾತ್ರ ಸೀಮಿತವಾಗಿದ್ದ ಆ ಕಾಲದಲ್ಲಿ ಜಾತಿ ಭೇದ, ಲಿಂಗ ಭೇದವಿಲ್ಲದೆ ಸರ್ವರಿಗೂ ದೊರಕಬೇಕೆಂದು ಪ್ರಯತ್ನಿಸಲಾಯಿತು. ಶಿಕ್ಷಣವು ವಿಧವೆ, ಬ್ರಾಹ್ಮಣ ಬಾಲಕಿಯರು, ಪರಿಶಿಷ್ಟ ಜಾತಿ ಮತ್ತು ಪಂಗಡದವರು ಎಂಬ ವ್ಯತ್ಯಾಸಗಳಿಲ್ಲದೆ ಎಲ್ಲರಿಗೂ ಲಭಿಸುವ ಹಾಗೆ ಮಾಡಿ ಶಿಕ್ಷಣ ಕ್ರಾಂತಿಗೆ ಕಾರಣರಾದರು. ಸಾಮಾಜಿಕ ಪ್ರಗತಿಯಲ್ಲಿ ಇದೊಂದು ಮಹತ್ವದ ಮೈಲಿಗಲ್ಲಾಯಿತು. ಇದರಿಂದ ಪ್ರೇರೇಪಿತರಾದ ಕಥೋಲಿಕ ಕ್ರೈಸ್ತರು ಕೂಡಾ ಶಾಲೆಗಳನ್ನು ಆರಂಭಿಸಿದರು.[೮೨] ೧೮೫೧ರಲ್ಲಿ ಎರಡು ಇಂಗ್ಲಿಷ್ ಶಾಲೆಗಳಿದ್ದವು: ಒಂದು ಮಂಗಳೂರಿನಲ್ಲಿ ಇನ್ನೊಂದು ಕಲ್ಲಿಕೋಟೆಯಲ್ಲಿ. ಇಂಗ್ಲಿಷ್ ಶಾಲೆಯಲ್ಲಿ ಇಂಗ್ಲಿಷ್ ಭಾಷೆಯೊಂದಿಗೆ, ಅಧ್ಯಯನದ ಬಹುತೇಕ ಪಠ್ಯಶಾಖೆಗಳನ್ನು ಕಲಿಸಲಾಗುತ್ತಿತ್ತು. ೧೮೫೧ರವರೆಗೆ ಮಂಗಳೂರಿನ ಇಂಗ್ಲಿಷ್ ಶಾಲೆಯಲ್ಲಿ ಕಲಿಯುವ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿದ್ದು, ಶಾಲೆ ಅತ್ಯಂತ ಸುಸ್ಥಿತಿಯಲ್ಲಿತ್ತು.

೧೮೭೨ರ ವರದಿಯ ಪ್ರಕಾರ ಆಂಗ್ಲ ದೇಶೀ ಭಾಷಿಕ ಶಾಲೆಗಳ ಮುಖ್ಯ ಉದ್ದೇಶ, "ಉನ್ನತ ಮಟ್ಟದ ಶಿಕ್ಷಣದ ಗುರಿಯನ್ನು ಹೊಂದಿದ್ದ ಹಿಂದೂ ಯುವಕರನ್ನು ಕ್ರೈಸ್ತಾಚಾರನಿಷ್ಠೆಯ ಪ್ರಭಾವಕ್ಕೆ ಒಳಪಡಿಸುವುದು". ಈ ಶಾಲೆಗಳಲ್ಲಿ ಪಾಠ ಪ್ರವಚನಗಳನ್ನು ಸ್ವಸ್ಥ ಹಾಗೂ ಜಾತ್ಯಾತೀತ ರೀತಿಯಿಂದ

ನಡೆಸಲು ಮಿಶನ್ ಬಹಳ ಶ್ರಮಪಟ್ಟಿತಾದರೂ, ಮಿಶನರಿಗಳು ಮುಖ್ಯ ಗುರಿಯ ಕಡೆಗಿನ ತಮ್ಮ ದೃಷ್ಟಿಯಿಂದ ವಿಚಲಿತರಾಗಲಿಲ್ಲ. ಹುಬ್ಬಳ್ಳಿಯ ಮಿಶನ್ ಶಾಲೆಯ ಪರಿಶೀಲನಾಧಿಕಾರಿ ಮಿ. ಜಿಗ್ಲರ್ ಅವರು ಬರೆಯುತ್ತಾರೆ, "......ನಾವು (ಮಿಶನರಿಗಳು) ಶಾಲೆಯ ಪ್ರಧಾನ ಗುರಿಯ ಕಡೆಗೆ ಇನ್ನೊಂದು ಹೆಜ್ಜೆಯನ್ನು ಇಟ್ಟಿದ್ದೇವೆ. ಅದು ಯಾವುದೆಂದರೆ ಕ್ರೈಸ್ತೇತರ ಧರ್ಮವನ್ನು ದುರ್ಬಲಗೊಳಿಸುವುದು ಮತ್ತು ಸುವಾರ್ತೆಯ ಅಮೂಲ್ಯ ಬೀಜವನ್ನು ಹೃದಯದಲ್ಲಿ ಬಿತ್ತುವುದು. ಕೆಲವು ವರ್ಷಗಳ ಹಿಂದೆ ಅನೇಕ ಹುಡುಗರು ತಮ್ಮ ಧರ್ಮದಲ್ಲಿರುವ ಕ್ರೈಸ್ತೇತರ ವ್ಯವಸ್ಥೆಗಳನ್ನು ಹೆಚ್ಚು ಕಡಿಮೆ ಭಾವಾವೇಶದಿಂದ ಸಮರ್ಥಿಸಿಕೊಳ್ಳುತ್ತಿದ್ದರು. ಈಗ ಕೆಲವೊಮ್ಮೆ ಅವರು ಹೀಗೆ ಹೇಳುವುದನ್ನು ನೀವು ಕೇಳಬಹುದು, 'ನಮ್ಮ ಪುಸ್ತಕದಲ್ಲಿರುವ ಹಿಂದೂ ದೇವರ ಕುರಿತಾದ ಎಲ್ಲಾ ಪ್ರತಿಪಾದನೆಗಳು ಅಸತ್ಯವಾಗಿವೆ.' ಇದರಿಂದ ನನಗೆ ಹೆಚ್ಚು ಪ್ರೋತ್ಸಾಹ ದೊರೆತ ಹಾಗಾಗಿದೆ. ನಾನು (ಮಿ. ಜಿಗ್ಲರ್) ಅವರ ಹುಸಿ ಧರ್ಮದ ಮೇಲೆ ನೇರ ಪ್ರಹಾರವನ್ನು ನಡೆಸಿದ್ದು ತುಂಬಾ ಕಡಿಮೆ., ಆದರೆ ಸುವಾರ್ತೆಯ ಸಾದಾ ಬೆಳಕು ಕ್ರೈಸ್ತೇತರರ ಕತ್ತಲನ್ನು ಹೋಗಲಾಡಿಸುವುದನ್ನು ನಾನು (ಮಿ. ಜಿಗ್ಲರ್) ಇಷ್ಟ ಪಡುತ್ತೇನೆ ...... ಬೈಬಲ್ ಪಾಠಗಳಲ್ಲಿ ಹಿಂದೆ ಅಸಡ್ಡೆ ಮತ್ತು ದ್ವೇಷವನ್ನು ವ್ಯಕ್ತಪಡಿಸುತ್ತಿದ್ದವರು ಈಗ ಜೀವಂತಿಕೆಯ ಆಸಕ್ತಿ ತೋರಿಸುವುದನ್ನು ನೀವು ಕಾಣುವಿರಿ".[೬೩] ದೇಶೀಯರನ್ನು ಯೇಸು ಸ್ವಾಮಿಯ ಕಡೆಗೆ ನಡೆಸುವುದರಲ್ಲಿ ಶಾಲೆಗಳು ಮುಖ್ಯ ಸಾಧನಗಳೆಂದು ಮಿಶನ್ ಸಂಘದವರು ಆರಂಭದಿಂದಲೇ ತಿಳಿದುಕೊಂಡಿದ್ದರು. ಶಾಲೆಗಳಿಂದ ಮಹತ್ತಾದ ಫಲವೂ ಹುಟ್ಟಿ ಬಂತೆಂದು ಒಂದು ಮಿಶನ್ ವರದಿಯಿಂದ ತಿಳಿದುಬರುತ್ತದೆ. ಇಂಗ್ಲಿಷ್ ಭಾಷೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಬ್ರಾಹ್ಮಣ ಮತದ ಆನಂದರಾವ್ ಕೌಂಡಿನ್ಯ ಮತ್ತು ಸಾಮ್ಯುವೆಲ್ ಕಂಶಿಕ ಎಂಬುವವರು ೬ ಜನವರಿ ೧೮೪೪ರಂದು ರೆವೆ. ಮೋಗ್ಲಿಂಗ್‌ರವರಿಂದ ದೀಕ್ಷಾಸ್ನಾನವನ್ನು ಪಡೆದರು. ೧೮೪೭ರಲ್ಲಿ ಸ್ಥಾಪಿಸಲ್ಪಟ್ಟ ಸೆಮಿನರಿ ತರಬೇತಿಗೆ ದೀಕ್ಷಾಸ್ನಾನ ಪಡೆದ ೨೦ ವಿದ್ಯಾರ್ಥಿಗಳಲ್ಲಿ ೯ ಮಂದಿ ಯುವಕರು ಸೇರಿದ್ದರು.[೬೪] ೧೮೪೩ನೇ ಇಸವಿಯ ಕೊನೆಯ ದಿನದಂದು ಬ್ರಾಹ್ಮಣರಾಗಿದ್ದ ಆನಂದರಾವ್ ಕೌಂಡಿನ್ಯ ಅವರ ಕ್ರೈಸ್ತ ಮತ ಸ್ವೀಕಾರ ಮತ್ತು ಇತರ ಇಬ್ಬರು ಬ್ರಾಹ್ಮಣ ಸ್ನೇಹಿತರಾದ ಭಗವಂತ ರಾವ್ ಮತ್ತು ಮುಕುಂದ ರಾವ್ ಅವರ ಮತಾಂತರದ ಒಲವು ಜನರಲ್ಲಿ ಎಚ್ಚರಿಕೆಯನ್ನು ಮೂಡಿಸಿತು. ಇದರಿಂದ ರಥಬೀದಿ ಶಾಲೆಯ ಹಾಜರಾತಿ ಸಾಕಷ್ಟು ಇಳಿಮುಖವಾಯಿತು. ಹಾಗಿದ್ದರೂ, ಕೆಲವು ಸಮಯ ಕಳೆದ ಬಳಿಕ, ರೋಮನ್ ಕಥೋಲಿಕ ಹುಡುಗರು ಕೆಲವು ಮುಸ್ಲಿಮರು ಮತ್ತು ಕೆಳಜಾತಿಯ ಹಿಂದೂ ಹುಡುಗರು ಶಾಲೆಗೆ ಹಿಂತಿರುಗಿದರು. ಪ್ರತಿಭಾವಂತ ವಿದ್ಯಾರ್ಥಿಗಳು ವಿಭಿನ್ನ ಜಾತಿಯವರಾಗಿದ್ದರು. ಇವರಲ್ಲಿ ಹೆಚ್ಚಿನವರು ಬ್ರಾಹ್ಮಣರು ಮತ್ತು ಪೋರ್ಚುಗೀಸರು.[೬೫] ಮಿಶನ್ನಿನ ಅನ್ಯಧರ್ಮೀಯರ ಶಾಲೆಯಲ್ಲಿ , ದೇಶೀ ಮತ್ತು ಆಂಗ್ಲ-ದೇಶೀ ಭಾಷಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆಯು ೧೮೬೬ರ ವರದಿಯಲ್ಲಿ ದಾಖಲಾಗಿರುವುದಕ್ಕಿಂತ ಸುಮಾರು ೨೦೦ರಷ್ಟು ಕಡಿಮೆ ಇದೆ.

ಮಿಶನರಿ ಕಾರ್ಯದ ಈ ಶಾಖೆಯಲ್ಲಿ ಮಿಶನರಿಗಳು ಹಲವು ವರ್ಷಗಳಿಂದ ಹಿಂಚಲನೆಯಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಇದಕ್ಕೆ ಭಾಗಶಃ ಹಣದ ಕೊರತೆ ಮತ್ತು ಅನ್ಯಧರ್ಮೀಯ ಶಿಕ್ಷಕರ ಅಧೀನ ವಿದ್ಯಾರ್ಥಿಗಳ ಅಸಾಮರ್ಥ್ಯ ಕಾರಣವಾಗಿದೆ. ಇದರಿಂದಾಗಿ ಈ ಕ್ಷೇತ್ರದಿಂದ ಮಿಶನ್ ಭಾಗಶಃ ಹಿಂತೆಗೆದುಕೊಳ್ಳುವಂತೆ ಗೃಹ ಸಮಿತಿ ಆದೇಶ ನೀಡಿದೆ. ಇನ್ನೂ ಉತ್ತಮ ರೀತಿಯಲ್ಲಿ ತರಬೇತಿಯನ್ನು ಹೊಂದಿರುವ ಮತ್ತು ನಂಬಿಕೆಗೆ ಪಾತ್ರವಾಗಿರುವ ಕ್ರೈಸ್ತ ಶಾಲಾ ಶಿಕ್ಷಕರನ್ನು ಈ ಕ್ಷೇತ್ರಕ್ಕೆ ಇಳಿಸುವ ಅವಕಾಶ ದೊರೆತ ನಂತರ ಮತ್ತೊಮ್ಮೆ ಅದು ಈ ಕ್ಷೇತ್ರದಲ್ಲಿ ಮರುಪ್ರವೇಶವನ್ನು ಪಡೆಯಲಿದೆ.[೭೬]

### ೨.೫.೨.೩. ಪ್ರೌಢಶಾಲೆಗಳು

೧೮೯೭ರ ವೇಳೆಗೆ, ಮಂಗಳೂರು, ಉಡುಪಿ ಮತ್ತು ಕಾಸರಗೋಡಿನಲ್ಲಿ ಒಟ್ಟು ಮೂರು ಪ್ರೌಢಶಾಲೆಗಳನ್ನು ಬಾಸೆಲ್ ಮಿಶನ್ ನಡೆಸುತ್ತಿತ್ತು.[೭೭] ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡುವುದರೊಂದಿಗೆ ಸಾಲದ ಸೌಲಭ್ಯವನ್ನು ಒದಗಿಸುತ್ತಿತ್ತು. ಇದಕ್ಕಾಗಿಯೇ ೨೦,೦೦೦ ರೂಪಾಯಿಯ 'ಸಹಾಯನಿಧಿ'ಯನ್ನು ಪ್ರಾರಂಭಿಸಿದ ಮಿಶನ್ ಇದರ ಪ್ರಯೋಜನವನ್ನು ಪಡೆಯಲು ಕರಾವಳಿಯುದ್ದಕ್ಕೂ ವಿದ್ಯಾರ್ಥಿಗಳಿಗೆ ಅವಕಾಶ ನೀಡಿತ್ತು. ಬಡ್ಡಿ ರಹಿತ ಸಾಲವನ್ನು ಈ ನಿಧಿಯಿಂದ ಉನ್ನತ ಶಿಕ್ಷಣ ಪಡೆಯಲಿಚ್ಛಿಸುವವರಿಗೆ ನೀಡುತ್ತಿತ್ತು. ಮಿಶನ್ನಿನ ಕೆಲಸದಲ್ಲಿ ನೆರವಾಗಬಲ್ಲಂಥವರಿಗೆ ಆದ್ಯತೆಯನ್ನು ನೀಡಲಾಗುತ್ತಿತ್ತು.[೭೮] ಮಂಗಳೂರು ಬಾಸೆಲ್ ಮಿಶನ್ ಪ್ರೌಢಶಾಲೆಯಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ಬಹುಮಾನ ಕೊಡುವುದಕ್ಕೆ 'ಏಲರ್ ಫಂಡ್' (Ohler Fund) ಎಂಬ ನಿಧಿ ಸ್ಥಾಪನೆಯಾಗಿದೆ.[೭೯] ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಿಶನ್ ನಿರ್ವಹಿಸುತ್ತಿರುವ ಎರಡು ಪ್ರೌಢಶಾಲೆಗಳು ಸಭೆಯ ಮಕ್ಕಳಿಗಿಂತ ಕ್ರೈಸ್ತೇತರರಿಗೆ ಹೆಚ್ಚು ಉಪಯುಕ್ತವಾಗಿವೆ.

### ೨.೫.೨.೪. ಬ್ರಾಹ್ಮಣ ಹೆಣ್ಣುಮಕ್ಕಳ ಶಾಲೆಗಳು

ಬ್ರಾಹ್ಮಣ ಹುಡುಗಿಯರಿಗಾಗಿ ಬಾಸೆಲ್ ಮಿಶನ್ ೧೮೫೫ ಮತ್ತು ೧೮೫೭ರಲ್ಲಿ ಎರಡು ಪ್ರತ್ಯೇಕ ಶಾಲೆಗಳನ್ನು ಮಂಗಳೂರಿನಲ್ಲಿ ಸ್ಥಾಪಿಸಿದೆ. ಈ ಶಾಲೆಗಳ ಉಸ್ತುವಾರಿಯನ್ನು ಶ್ರೀಮತಿ ಗ್ರೇಟರ್ ವಹಿಸಿಕೊಂಡಿದ್ದರು. ಇವರ ನಂತರ ಶ್ರೀಮತಿ ವಾಲ್ಜ್ ಮತ್ತು ಶ್ರೀಮತಿ ಫ್ಲೈಡೆರರ್ ಬ್ರಾಹ್ಮಣ ಹೆಣ್ಮಕ್ಕಳ ಶಾಲೆಯ ನಿರ್ವಹಣೆಯನ್ನು ನೋಡಿಕೊಂಡರು. ಶ್ರೀಮತಿ ರಿತ್ತರ್ ಮತ್ತು ಉಡುಪಿಯ ಪ್ರಮುಖ ವ್ಯಕ್ತಿಗಳ ಪ್ರಯತ್ನಗಳಿಂದಾಗಿ ೧೮೮೩ರಲ್ಲಿ ಉಡುಪಿಯಲ್ಲಿ ಬ್ರಾಹ್ಮಣ ಹುಡುಗಿಯರ ಇನ್ನೊಂದು ಶಾಲೆಯನ್ನು ತೆರೆಯಲಾಗಿದೆ. ಬಾಸೆಲ್ ಮಿಶನ್ ಬ್ರಾಹ್ಮಣ ಹುಡುಗಿಯರಿಗಾಗಿಯೇ ಪ್ರತ್ಯೇಕವಾಗಿ ಈ ಶಾಲೆಗಳನ್ನು ತೆರೆಯಲು ಕಾರಣ ಅವರಲ್ಲಿ ಸುವಾರ್ತೆಯನ್ನು ಪ್ರಸಾರ ಮಾಡುವುದು ಮತ್ತು ಈ ಉನ್ನತ ಜಾತಿಯ

ಮಹಿಳೆಯರಲ್ಲಿ ಮಿಶನರಿ ಪ್ರಭಾವವನ್ನು ಹರಡಿ, ಬಲಗೊಳಿಸುವುದಾಗಿದೆ. ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್ನಿಗೆ ವಿರೋಧ ವ್ಯಕ್ತಗೊಂಡದ್ದು ಬ್ರಾಹ್ಮಣ ಸಮುದಾಯದಿಂದ ಮಾತ್ರ. ಹೀಗಾಗಿ, ಅದನ್ನು ಮೀರುವ ಉದ್ದೇಶದಿಂದಲೇ ಈ ಕ್ರಮಗಳನ್ನು ವಿನ್ಯಾಸಗೊಳಿಸಲಾಗಿತ್ತು. ಈ ಶಾಲೆಗಳ ಪ್ರಭಾವದ ಕುರಿತು ೧೮೭೯ರಲ್ಲಿ ಬಾಸೆಲ್‌ನಿಂದ ಭಾರತಕ್ಕೆ ಭೇಟಿ ನೀಡಿದ ತಪಾಸಣಾಧಿಕಾರಿ ಸ್ಕಾಟ್ ಅವರು ಹೇಳಿದ್ದು ಹೀಗಿದೆ: " ಈ ಶಾಖಾ ಕೆಲಸವು ಜನರ ಬದುಕಿನಲ್ಲಿ ಯಾವ ರೀತಿಯ ಪ್ರಭಾವವನ್ನು ಬೀರಿದೆ ಎಂದು ತಿಳಿದುಕೊಳ್ಳಲು ನಾನು ಚಕಿತಗೊಂಡಿದ್ದೇನೆ. ಬ್ರಾಹ್ಮಣ ಹುಡುಗಿಯರ ಪ್ರಕಾಶಮಯ ಮತ್ತು ಚುರುಕು ಮುಖವನ್ನು ನೋಡಿ ನಾನು ಸಂತುಷ್ಟನಾಗಿದ್ದೇನೆ. ಭಾರತದ ಮಹಿಳೆಯರು ಅಂಧಶ್ರದ್ಧೆ ಮತ್ತು ಆಧ್ಯಾತ್ಮಿಕ ಸಾವಿನ ಸಂಕೋಲೆಯಿಂದ ಮುಕ್ತಗೊಳ್ಳುವುದನ್ನು ನೋಡಲು ನಾನು ಬಯಸುತ್ತೇನೆ".[೮೦] ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರಿಗಾಗಿಯೇ, ಅದರಲ್ಲಿಯೂ ಬ್ರಾಹ್ಮಣ ಹೆಣ್ಣು ಮಕ್ಕಳಿಗೆ, ಪ್ರತ್ಯೇಕವಾದ ಶಾಲೆಯನ್ನು ಸ್ಥಾಪಿಸುವುದು ಮಿಶನರಿಗಳ ಸಾಮಾಜಿಕ ಕಾಳಜಿಯನ್ನು ದೃಢಪಡಿಸುತ್ತದೆ. ಮೊದಮೊದಲು ಈ ಶಾಲೆಗೆ ಬ್ರಾಹ್ಮಣ ಪುರುಷರಿಂದಲೇ ವಿರೋಧವಿದ್ದರೂ ಕ್ರಮೇಣ ಇಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಹೆಚ್ಚಾಯಿತು. ಹೆಣ್ಮಕ್ಕಳ ಶಾಲೆಗಿದ್ದ ಇನ್ನೊಂದು ತೊಡಕೆಂದರೆ ಬಾಲ್ಯ ವಿವಾಹ. ವಿವಾಹದ ನಂತರ ಕೇವಲ ೧೦ ಅಥವಾ ೧೨ ವರ್ಷಕ್ಕೆ ಶಾಲೆಯನ್ನು ತ್ಯಜಿಸಬೇಕಾದ ಪರಿಸ್ಥಿತಿಯನ್ನು ಬ್ರಾಹ್ಮಣ ಹೆಣ್ಣು ಮಕ್ಕಳು ಎದುರಿಸುತ್ತಿದ್ದರು.[೮೧] ಈ ಎಲ್ಲ ವಿಘ್ನಗಳ ನಡುವೆಯೂ ಬಾಸೆಲ್ ಮಿಶನ್ ಶಾಲೆಗಳಲ್ಲಿ ಕಲಿಯುತ್ತಿದ್ದ ಬ್ರಾಹ್ಮಣ ಪುರುಷರು ನಂತರದ ದಿನಗಳಲ್ಲಿ ತಮ್ಮ ಹೆಂಡತಿಯರನ್ನು ಈ ಶಾಲೆಗೆ ಕಳುಹಿಸುತ್ತಿದ್ದರು. ಈ ಅವಕಾಶವನ್ನು ಸಮೃದ್ಧವಾಗಿ ಬಳಸಿಕೊಂಡವರು ಮಂಗಳೂರಿನ ಸಾರಸ್ವತ ಬ್ರಾಹ್ಮಣ ಹೆಣ್ಣು ಮಕ್ಕಳು.

**೨.೫.೨.೫. ಕಿವುಡರ ಮತ್ತು ಪಂಚಮರ ಶಾಲೆಗಳು**

ಮಿಸ್ಟರ್ ಸಿಕೆಮಿಯರ್ ಅವರ ಮೇಲ್ವಿಚಾರಣೆಯಲ್ಲಿ ಕಿವುಡ ಮಕ್ಕಳಿಗಾಗಿ ೧೮೬೭ರಲ್ಲಿ ಪ್ರಾಥಮಿಕ ಶಾಲೆಯನ್ನು ಮಂಗಳೂರಿನಲ್ಲಿ ತೆರೆಯಲಾಗಿದೆ.[೮೨] ೧೮೭೯ರಲ್ಲಿ, ಬಾಸೆಲ್‌ನಿಂದ ಮಂಗಳೂರಿಗೆ ಆಗಮಿಸಿದ ತಪಾಸಣಾಧಿಕಾರಿ ಸ್ಕಾಟ್ ಅವರ ಶಿಫಾರಸಿನ ಮೇರೆಗೆ ಕಿವುಡ ಮಕ್ಕಳಿಗಾಗಿ ಹಾಗೂ ಪಂಚಮರಿಗಾಗಿ ಶಾಲೆಗಳು ಪ್ರಾರಂಭವಾದವು.[೮೩] ಮಡಿಕೇರಿ ಗುಡ್ಡ (ಮರ್ಕೆರಾ ಹಿಲ್) ಮಿಶನ್ ಶಾಲೆಯಲ್ಲಿ ೧೯೦೨ರಲ್ಲಿ ಕಿವುಡ ಮತ್ತು ಮೂಕ ಮಕ್ಕಳಿಗಾಗಿ ಒಂದು ಪ್ರತ್ಯೇಕ ತರಗತಿಯನ್ನು ತೆರೆದು ಆ ಮಕ್ಕಳು ಎಲ್ಲರಂತೆ ಶಿಕ್ಷಣದಲ್ಲಿ ತೊಡಗಿಸಿಕೊಳ್ಳುವಂತೆ ಅನುವು ಮಾಡಿಕೊಡಲಾಗಿದೆ.[೮೪] ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಾಸೆಲ್ ಮಿಶನ್ ಸಂಸ್ಥೆಯ ನಿಯಮದ ಪ್ರಕಾರ ಅದು ಪ್ರಾರಂಭಿಸುವ ಪ್ರತಿ ಹತ್ತು ಶಾಲೆಗಳಲ್ಲಿ ಒಂದು ಶಾಲೆಯನ್ನು ಪಂಚಮರ ಶಿಕ್ಷಣಕ್ಕಾಗಿ ಮೀಸಲಿಡಲಾಗುತ್ತಿತ್ತು. ಈ ರೀತಿಯ ಒಂದು ಶಾಲೆಯನ್ನು ೧೯೧೧ರಲ್ಲಿ ಪುತ್ತೂರಿನಲ್ಲಿ ತೆರೆಯಲಾಗಿದೆ.[೮೫] ಬೆಳ್ತಂಗಡಿಯಲ್ಲಿ ಬೈರರ ಮಕ್ಕಳಿಗಾಗಿ

ಒಂದು ಶಾಲೆಯನ್ನು ತೆರೆದು ಅವರ ಕೇರಿಯಲ್ಲಿಯೇ ಒಬ್ಬನ ಮನೆಯ ಚೌಕಿಯಲ್ಲಿ ಅದನ್ನು ನಡೆಸುತ್ತಾ ಬಂದು, ನಂತರ ಅವರಿಗಾಗಿ ಕಟ್ಟಿದ ಒಂದು ಛಾವಣಿ ಶಾಲೆಯಲ್ಲಿ ೨ ಮಾರ್ಚ್ ೧೯೨೫ರಿಂದ ತರಗತಿಗಳು ನಡೆಯುತ್ತಿವೆ. ಬೈರರ ಮಕ್ಕಳೊಂದಿಗೆ ಪಂಚಮರ ಮಕ್ಕಳಿಗೂ ಸೇರಿಸಿಕೊಳ್ಳಲಾಗುತ್ತಿತ್ತು.[೮೬] ಶೂದ್ರರು, ಅಸ್ಪೃಶ್ಯರು ಎಂದು ಕರೆಯಿಸಿಕೊಳ್ಳುತ್ತಿದ್ದ ರಾಣ್ವೆಯವರು, ಪರವರು, ನಲಿಕೆಯವರು, ಹೊಲೆಯರು, ಕೊರಗರು ಇತ್ಯಾದಿ ಹಿಂದುಳಿದ ವರ್ಗದವರೂ ಅಕ್ಷರಸ್ಥರಾಗಿ ಬುದ್ಧಿಶಾಲಿಗಳೂ, ಆರೋಗ್ಯವಂತರೂ ಆಗಬೇಕೆಂಬ ಉದ್ದೇಶದಿಂದ ರೆವೆ. ಫಿಶರ್ ಅವರು ಕಾರ್ಕಳ ಪೇಟೆಯ ಸುವಾರ್ತಿಕರ ವಸತಿಯ ಪಕ್ಕದಲ್ಲೇ ಒಂದು ಪಂಚಮ ಶಾಲೆಯನ್ನು ಪ್ರಾರಂಭಿಸಿದರು. ಆ ಮಕ್ಕಳಿಗೆ ವಿದ್ಯೆಯೊಂದಿಗೆ ಶುಚಿತ್ವ ಹಾಗೂ ದುರಾಭ್ಯಾಸಗಳನ್ನು ಹೋಗಲಾಡಿಸಲು ಮಾರ್ಗದರ್ಶನ ನೀಡಲಾಗುತ್ತಿತ್ತು.[೮೭] ಕಾಲಕ್ರಮೇಣ ಬೈಲೂರಿನಲ್ಲಿ ಹಾಗೂ ಮೂಡಬಿದರೆಯಲ್ಲಿ ಪಂಚಮ ಶಾಲೆಗಳನ್ನು ತೆರೆಯುವ ಮೂಲಕ ಹಿಂದುಳಿದ ವರ್ಗದವರ ವಿದ್ಯಾಭ್ಯಾಸಕ್ಕಾಗಿ ಶ್ರಮಿಸಿದರು.[೮೮]

ರೆವೆ. ಹೆಬಿಕ್‌ರವರು ದಕ್ಷಿಣ ಕನ್ನಡದ ಮೊದಲ ಕನ್ನಡ ಮಾಧ್ಯಮ ಶಾಲೆಯನ್ನು ಆರಂಭಿಸಿದಾಗ ಆದರಲ್ಲಿ ಕೇವಲ ನಾಲ್ಕು ವಿದ್ಯಾರ್ಥಿಗಳು ಇದ್ದರು. ೧೮೬೬ರ ಸಮೀಕ್ಷೆಯ ಪ್ರಕಾರ ಮಂಗಳೂರು, ಮೂಲ್ಕಿ, ಉಡುಪಿ ಮತ್ತು ಕೊಡಗು ವ್ಯಾಪ್ತಿಯಲ್ಲಿ ಒಟ್ಟು ೧೮ ಶಾಲೆಗಳಿದ್ದು ಅವುಗಳಲ್ಲಿ ೫೬೪ ವಿದ್ಯಾರ್ಥಿಗಳು ತಮ್ಮ ವಿದ್ಯಾಭ್ಯಾಸವನ್ನು ನಡೆಸುತ್ತಿದ್ದರು.[೮೯] ವರುಷಗಳು ಉರುಳಿದಂತೆ ಶಾಲೆಯ ಸಂಖ್ಯೆ ವೃದ್ಧಿಯಾಯಿತು. ಅಂದರೆ ೧೮೭೬ರಲ್ಲಿ ಮಂಗಳೂರು, ಮೂಲ್ಕಿ, ಉಡುಪಿ, ಹೊನ್ನಾವರ ಹಾಗೂ ಆನಂದಪುರಗಳಲ್ಲಿನ ೨೩ ಶಾಲೆಗಳಲ್ಲಿ ಒಟ್ಟು ೬೦೭ ವಿದ್ಯಾರ್ಥಿಗಳಿದ್ದರು. ೧೮೯೧ರಲ್ಲಿ ೪೫ ಶಾಲೆಗಳಲ್ಲಿ ೨೭೧೫ ವಿದ್ಯಾರ್ಥಿಗಳು, ೧೯೦೬ರಲ್ಲಿ ೬೫ ಶಾಲೆಗಳು ಮತ್ತು ೪೩೬೨ ವಿದ್ಯಾರ್ಥಿಗಳು ಇದ್ದರು. ೧೯೧೪ರಲ್ಲಿ ಪ್ರಥಮ ಮಹಾಯುದ್ಧವು ಪ್ರಾರಂಭವಾಗುವ ವೇಳೆಗೆ ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿ ಬಾಸೆಲ್ ಮಿಶನ್ ಶಾಲೆಗಳ ಸಂಖ್ಯೆ ೮೧ಕ್ಕೂ, ವಿದ್ಯಾರ್ಥಿಗಳ ಸಂಖ್ಯೆ ೭೯೬ಕ್ಕೂ ತಲುಪಿತ್ತು.[೯೦] ೧೯೨೭ರಲ್ಲಿ ಒಟ್ಟು ೫೮ ಶಾಲೆಗಳಿದ್ದು ೧೮೬೦ ವಿದ್ಯಾರ್ಥಿಗಳು ವಿದ್ಯಾಭ್ಯಾಸ ನಡೆಸುತ್ತಿದ್ದರು. ಅಂತೆಯೇ ೧೯೪೭ರಲ್ಲಿ ೩೨ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳು ಹಾಗೂ ೩ ಪ್ರೌಢಶಾಲೆಗಳು ಬಾಸೆಲ್ ಮಿಶನ್ ಸಂಸ್ಥೆಯ ಅಧೀನದಲ್ಲಿದ್ದವು. ಮಿಶನರಿಗಳು ಸ್ವದೇಶಕ್ಕೆ ಹಿಂದಿರುಗಿದ ಬಳಿಕ ಸಭೆಗಳ ಆಡಳಿತದಲ್ಲಿ ಶಾಲೆಗಳ ನಿರ್ವಹಣೆಯನ್ನು ಮುಂದುವರಿಸಲಾಗಿದೆ. ಅಲ್ಲದೆ, ಚರ್ಚ್ ಆಫ್ ಸೌತ್ ಇಂಡಿಯಾ, ಕರ್ನಾಟಕ ದಕ್ಷಿಣ ಸಭಾಪ್ರಾಂತ್ಯ ಕೂಡಾ ತನ್ನ ಸೇವಾ ವ್ಯಾಪ್ತಿಯ ಶಾಲೆಗಳ ಆಡಳಿತವನ್ನು ಮುಂದುವರಿಸಿಕೊಂಡು ಬಂದಿರುತ್ತದೆ. ಶಾಲೆಗಳ ಉತ್ತಮ ನಿರ್ವಹಣೆಗಾಗಿ ೧೯೭೪ರಲ್ಲಿ ಕರ್ನಾಟಕ ಸದರ್ನ್ ಡಯಾಸಿಸ್ ಎಜುಕೇಷನ್ ಸೊಸೈಟಿ ಎಂಬ ವಿದ್ಯಾ ಸಂಸ್ಥೆಯು ಸ್ಥಾಪನೆಗೊಂಡಿದೆ. ಒಟ್ಟು ೫೩ ವಿದ್ಯಾಸಂಸ್ಥೆಗಳನ್ನು ಈ ಸಂಸ್ಥೆಯು ಹೊಂದಿದೆ. ಇವುಗಳಲ್ಲಿ ಹೆಚ್ಚಿನ ಶಾಲೆಗಳು ಕನ್ನಡ

ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆಗಳಾಗಿದ್ದು ಸಮಾಜದ ಅತೀ ಬಡ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಪ್ರಾಧಾನ್ಯತೆ ನೀಡಿ ಜ್ಞಾನಾರ್ಜನೆಯ ಕೈಂಕರ್ಯವನ್ನು ಮುಂದುವರಿಸುತ್ತಿದೆ.[೬೧] ಅಲ್ಲದೆ ೮ ಶಾಲೆಗಳು ಪ್ರತ್ಯೇಕ ಆಡಳಿತಕ್ಕೆ ಒಳಪಟ್ಟಿವೆ ಹಾಗೂ ೪ ದೇಶೀಯ ಕ್ರೈಸ್ತರು ನಡೆಸುವ ಶಾಲೆಗಳಾಗಿವೆ. [ಹೆಚ್ಚಿನ ಮಾಹಿತಿಗಾಗಿ ಅನುಬಂಧ ೧ನ್ನು ಪರಿಶೀಲಿಸಿ]

ಬಾಸೆಲ್ ಮಿಶನ್‌ಗಿಂತ ಮೊದಲು ದಕ್ಷಿಣ ಕನ್ನಡದಲ್ಲಿ ಕೂಡ ಧಾರ್ಮಿಕ ಶಾಲೆಗಳನ್ನು ಹೊರತುಪಡಿಸಿದರೆ ಬೇರೆ ಶಾಲೆಗಳೇ ಇರಲಿಲ್ಲ. ಇದ್ದ ಯಾವ ಶಾಲೆಯೂ ಕೂಡಾ ತಮ್ಮ ಸಮುದಾಯವನ್ನು ಹೊರತುಪಡಿಸಿ ಹೊರಗಿನ ಜಾತಿಯವರಿಗೆ ಪ್ರವೇಶ ನೀಡುತ್ತಿರಲಿಲ್ಲ. ಭಾರತದಲ್ಲಿ ಅಸ್ತಿತ್ವದಲ್ಲಿದ್ದ ಸಾಂಪ್ರದಾಯಿಕ ಶಿಕ್ಷಣ, ಉನ್ನತ ಜಾತಿಯವರಿಗೆ ಸೀಮಿತವಾಗಿದ್ದು ಇಲ್ಲಿ ಮಹಿಳೆಯರಿಗೆ, ಪರಿಶಿಷ್ಟ ಜಾತಿ ಮತ್ತು ನಿಮ್ನ ವರ್ಗದವರಿಗೆ ಪ್ರವೇಶವಿರಲಿಲ್ಲ. ಮೇಲ್ಜಾತಿಯ ಮಹಿಳೆಯರು ಕೂಡಾ, ಕೆಲವೇ ಕೆಲವರನ್ನು ಹೊರತುಪಡಿಸಿ, ವಿದ್ಯಾವಂತರಾಗಿರಲಿಲ್ಲ. ಯಾವುದೇ ಜಾತಿಯ ಮಹಿಳೆಗೆ ಶಿಕ್ಷಣ ಪಡೆಯುವ ಅವಕಾಶವಿರಲಿಲ್ಲವೆಂಬುದು ಗಮನಿಸಬೇಕಾದ ಅಂಶ.[೬೨] ಮಂಗಳೂರಿಗೆ ಬಾಸೆಲ್ ಮಿಶನ್ ಬಂದ ನಂತರವೇ ಕೆಳಜಾತಿಗಳ ಜನರು ಶಾಲೆಗಳಿಗೆ ಬರಲು ಪ್ರಾರಂಭವಾದುದು. ಆದ್ದುದರಿಂದ, 'ಶಾಲೆ ಸಂಸ್ಕೃತಿ' ಮತ್ತು 'ಪಾಶ್ಚಾತ್ಯ ಶಿಕ್ಷಣ'ದ ಸ್ಥಾಪನೆಯ ಕೀರ್ತಿ ಬಾಸೆಲ್ ಮಿಶನ್ನಿಗೆ ಸೇರುತ್ತದೆ. ಆ ಕಾಲದಲ್ಲಿ ಪ್ರೊಟೆಸ್ಟೆಂಟ್ ಕ್ರೈಸ್ತ ಸಭಾ ಸೇವೆಗಾಗಿ ಭಾರತಕ್ಕೆ ಹರಿದು ಬರುತ್ತಿದ್ದ ವಿದೇಶಿ ವಾರ್ಷಿಕ ಧನ ಸಹಾಯ ೨೦ ಲಕ್ಷ ರೂಪಾಯಿಯಷ್ಟಿತ್ತು. ಬಹುತೇಕ ಈ ಮೊಬಲಗು ಶಿಕ್ಷಣ ಹಾಗೂ ಮುದ್ರಣಕ್ಕೆ ವೆಚ್ಚವಾಗುತ್ತಿತ್ತು. ಬಾಸೆಲ್ ಮತ ಪ್ರಚಾರಕರು ದಕ್ಷಿಣ ಕನ್ನಡದಲ್ಲಿ ೧೯೪೭ರವರೆಗೆ ೧೨,೨೦೧ ಕ್ರೈಸ್ತರ ಸಂಘಟಿತ ಗುಂಪನ್ನು ಸೃಷ್ಟಿಸುವುದರಲ್ಲಿ ಸಫಲರಾಗಿದ್ದಾರೆ. ಆದರೆ ಇತರ ಮಿಶನ್ ಸಂಸ್ಥೆಗಳ ಸುವಾರ್ತಾ ಪ್ರಸಾರದ ಯಶಸ್ಸಿನೊಡನೆ ಹೋಲಿಸಿದರೆ, ದಕ್ಷಿಣ ಕನ್ನಡದಲ್ಲಿ ಸುವಾರ್ತಾ ಪ್ರಸಾರದಲ್ಲಿ ಬಾಸೆಲ್ ಮಿಶನ್ನಿನ ದಾಖಲೆ ಅಷ್ಟು ಚಮತ್ಕಾರಿಕವಾಗಿ ಇಲ್ಲ. ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯಿದ್ದಾಗ ಬಾಸೆಲ್ ಮಿಶನ್ ಸ್ವಾತಂತ್ರ್ಯ ಹೋರಾಟದಲ್ಲಿ ಹೆಚ್ಚು ಆಕ್ರಮಣಕಾರಿಯಾಗಿ ಭಾಗವಹಿಸಲಿಲ್ಲ. ಜೊತೆಗೆ ಭಾರತೀಯ ಕ್ರೈಸ್ತರೂ ಅದರಲ್ಲಿ ಪಾಲ್ಗೊಳ್ಳಲು ಪ್ರೋತ್ಸಾಹಿಸಲಿಲ್ಲ. ಯಾಕೆಂದರೆ ರಾಷ್ಟ್ರೀಯ ಚಳುವಳಿಯ ಉದ್ದೇಶಗಳು ಮತ ಪ್ರಸಾರದ ಬಾಗಿಲನ್ನು ಮುಚ್ಚಿ ಬಿಡುವುದು ಮತ್ತು ಭಾರತೀಯ ಕ್ರೈಸ್ತರಿಗೆ ತೊಂದರೆ ಆಗುವುದೆಂಬ ಸಂದೇಹ ಮಿಶನರಿಗಳಿಗಿತ್ತು.[೬೩] ಮಿಶನ್ನಿನ ಇವರ ಪ್ರೇರಣೆಯಿಂದ ಬ್ರಿಟಿಷ್ ಸರಕಾರ ಹಾಗೂ ಕ್ರೈಸ್ತೇತರರೂ ಶಿಕ್ಷಣ ಕೇಂದ್ರಗಳನ್ನು ಪ್ರಾರಂಭಿಸತೊಡಗಿದರು.

## ೨.೬.ಅಪೋಸ್ತಲಿಕ್ ಕಾರ್ಮೆಲ್ ಧರ್ಮಭಗಿನಿಯರ ಆಡಳಿತಕ್ಕೊಳಪಟ್ಟಿರುವ ಶಿಕ್ಷಣ ಸಂಸ್ಥೆಗಳು.

ಸೈಂಟ್ ಆ್ಯನ್ಸ್ ಕಾನ್ವೆಂಟ್ ಮತ್ತು ಶಾಲೆಗಳು ಪ್ರಾರಂಭಗೊಂಡದ್ದು ಆಂಗ್ಲ ಮಹಿಳೆ ಮಿಸ್ ಸೋಫಿ ಲೀವ್ಸ್‌ರವರ ಪ್ರೇರಣೆಯಿಂದ. ಮಿಸ್ ಲೀವ್ಸ್ ಅಥವಾ ಮೇರಿ ತೆರೆಸಾ ವೆರೋನಿಕಾ ಆಫ್ ಜೀಸಸ್ ಅವರು ಕಾರ್ಮೆಲೈಟ್ ಟರ್ಶರಿ ಸಭೆಯ ಸ್ಥಾಪಕರಾಗಿದ್ದಾರೆ. ಈ ಸಭೆಯು ಮಂಗಳೂರಿನಿಂದ ಹಿಡಿದು ತಿರುವನಂತಪುರದವರೆಗಿನ ಕರಾವಳಿ ಪ್ರದೇಶದ ಶಿಕ್ಷಣ ಕಾರ್ಯದಲ್ಲಿ ತೊಡಗಿಸಿಕೊಂಡಿದೆ. ೧೮೪೫ರಲ್ಲಿ ಆಗ ಮಂಗಳೂರಿನ ಅಪೋಸ್ತಲಿಕ್ ವಿಕಾರ್ ಆಗಿದ್ದ ಮೈಕಲ್ ಆ್ಯಂಟನಿಯವರು ಮದರ್ ವೆರೋನಿಕಾ ಅವರು ಕಳುಹಿಸಿದ ಫ್ರಾನ್ಸಿನ ಸಿಸ್ಟರ್ಸ್ ಆಫ್ ಸೈಂಟ್ ಜೋಸೆಫ್ ಆಫ್ ದ ಅಪರೀಶನ್ ಸಭೆಯ ನನ್(ಧರ್ಮಭಗಿನಿ)ಗಳಿಂದ ಕೆನರಾದಲ್ಲಿ ಹೆಣ್ಣುಮಕ್ಕಳ ಶಾಲೆಯನ್ನು ಪ್ರಾರಂಭಿಸಿದರು. ಇದರ ಮುಂಚೂಣಿಯಲ್ಲಿದ್ದ ಪುಟ್ಟ ಗುಂಪಿನ ನೇತೃತ್ವ ಮಿಸ್ ಮೆಕೆಂಜಿ ಹೆಸರಿನ ಬ್ರಿಟಿಷ್ ಮಹಿಳೆಯದಾಗಿತ್ತು. ಕಾನ್ವೆಂಟಿನ ಸುಪೀರಿಯರ್ ಆಗಿ ನಿಯುಕ್ತಿಗೊಂಡ ಇವರು ಶಾಲೆಯ ಜವಾಬ್ದಾರಿಯನ್ನೂ ಕೂಡಾ ವಹಿಸಿಕೊಂಡರು. ಪ್ರಾರಂಭದಲ್ಲಿ ಮಲಬಾರ್ ಕರಾವಳಿಯಲ್ಲಿ ಬೀಡು ಬಿಟ್ಟಿದ್ದ ಸೇನಾಪಡೆಯ ಆಂಗ್ಲ ಅಧಿಕಾರಿಗಳ ಮಕ್ಕಳು ಮತ್ತು ನಗರದ ಶ್ರೀಮಂತ ಕುಟುಂಬಗಳ ಕಥೋಲಿಕ ಹುಡುಗಿಯರು ಈ ಶಾಲೆಗೆ ಬರತೊಡಗಿದರು. ಕ್ರಮೇಣ ಸೈಂಟ್ ಆ್ಯನ್ಸ್ ಶಾಲೆಯಲ್ಲಿ ನೀಡಲಾಗುತ್ತಿದ್ದ ಇಂಗ್ಲಿಷ್ ಶಿಕ್ಷಣದ ಆಕರ್ಷಣೆಗೆ ಒಳಗಾಗಿ ಹೊರಪ್ರದೇಶಗಳಿಂದ ಕೂಡಾ ವಿದ್ಯಾರ್ಥಿಗಳು ಬರತೊಡಗಿದ್ದರಿಂದ ಅವರಿಗಾಗಿ ವಸತಿನಿಲಯವನ್ನು ತೆರೆಯಲಾಯಿತು. ಆದರೆ, ೧೮೬೨ರಲ್ಲಿ ಅಪರೀಶನ್ ಸಭೆಯವರು ಕಣ್ಣಾನೂರಿಗೆ ಸ್ಥಳಾಂತರಗೊಂಡಾಗ ಶಾಲೆಯ ಉಸ್ತುವಾರಿಯನ್ನು ಬಿಷಪ್ ಮೈಕಲ್‌ರವರಿಂದ ಸ್ಥಾಪಿಸಲ್ಪಟ್ಟಿದ್ದ ಕಾರ್ಮೆಲೈಟ್ ಟರ್ಶರಿಗಳು ವಹಿಸಿಕೊಂಡರು. ೧೮೭೦ರಲ್ಲಿ ಹೊಸ ಬಿಷಪರಾದ ಮಾರಿ ಎಫ್ರೆಮ್‌ರವರ ಆಹ್ವಾನದ ಮೇರೆಗೆ, ಮದರ್ ವೆರೋನಿಕಾರವರಿಂದ ಫ್ರಾನ್ಸಿನ ಬಾಯೋನ್‌ನಲ್ಲಿ ಸ್ಥಾಪಿಸಲ್ಪಟ್ಟಿದ ಅಪೋಸ್ತಲಿಕ್ ಕಾರ್ಮೆಲ್ ಸಭೆಯವರು ಮಂಗಳೂರಿಗೆ ಆಗಮಿಸಿ 'ರೆಡ್ ಸ್ಕೂಲ್' ಎಂದು ಕರೆಯಲ್ಪಡುತ್ತಿದ್ದ ಆ ಶಾಲೆಯನ್ನು ಮುನ್ನಡೆಸುವ ಜವಾಬ್ದಾರಿಯನ್ನು ವಹಿಸಿಕೊಂಡರು.[೯೪].

'ರೆಡ್ ಸ್ಕೂಲ್' ನಂತರ 'ಸೈಂಟ್ ಆ್ಯನ್ಸ್ ಸ್ಕೂಲ್' ಎಂಬ ಪುನರ್ನಾಮಕರಣದೊಂದಿಗೆ ಅಪೋಸ್ತಲಿಕ್ ಕಾರ್ಮೆಲ್ ಧರ್ಮಭಗಿನಿಯರ ಪ್ರಥಮ ಶಿಕ್ಷಣ ಸಂಸ್ಥೆ ಎಂಬ ಗೌರವಕ್ಕೆ ಪಾತ್ರವಾಯಿತು. ಸೈಂಟ್ ಆ್ಯನ್ಸ್ ಶಾಲೆಯ ಗುಣಮಟ್ಟವನ್ನು ಮಿಸ್ಟರ್ ಮಾರ್ಸ್‌ಡೆನ್‌ರವರು ೧೮೮೬ರ ತಮ್ಮ ವರದಿಯಲ್ಲಿ ಈ ರೀತಿ ವ್ಯಕ್ತಪಡಿಸಿದ್ದಾರೆ," ನಾನು ಯಾವಾಗಲೂ ಎಲ್ಲಾ ಅಭ್ಯಾಸ ಬರವಣಿಗೆಗಳಲ್ಲಿ ಅಚ್ಚುಕಟ್ಟುತನ, ನಿಖರತೆ ಮತ್ತು ವಿಧಾನ ಎದ್ದು ಕಾಣುವುದನ್ನು ಗಮನಿಸಿದ್ದೇನೆ. ಈ ಶಾಲೆಯಲ್ಲಿ ಮಾತನಾಡುವ

ಇಂಗ್ಲಿಷ್ ಭಾಷೆಯು ....... ಉಚ್ಚಾರಣೆ ಮತ್ತು ನುಡಿಗಟ್ಟುಗಳಲ್ಲಿ ದಕ್ಷಿಣ ಕನ್ನಡದ ಬೇರೆ ಯಾವುದೇ ಶಾಲೆಗಳಲ್ಲಿ ನಾನು ಕೇಳಿದ ಇಂಗ್ಲಿಷ್ ಭಾಷೆಗಿಂತ ಉತ್ತಮವಾಗಿದೆ. ಕ್ರೈಸ್ತರಿಗಾಗಿ ಮಂಗಳೂರಿನಲ್ಲಿರುವ ಪ್ರಾಥಮಿಕ ಶಾಲೆಯೊಂದಿಗೆ ಇದೀಗ ಅವರ ಹೆಣ್ಣು ಮಕ್ಕಳ ಉನ್ನತ ಶಿಕ್ಷಣಕ್ಕಾಗಿ ಪ್ರೌಢಶಾಲಾ ಮಟ್ಟವನ್ನು ತಲುಪಿರುವ ಈ ಶಾಲೆಯನ್ನು ಹೊಂದಿರುವ ಬಹು ದೊಡ್ಡದಾದ ಮತ್ತು ಪ್ರವರ್ಧಮಾನಕ್ಕೆ ಬರುವಂತಹ ಸಂಸ್ಥೆ ಇದು. ........ಉನ್ನತ ಜಾತಿಯ ಬ್ರಾಹ್ಮಣ ಹುಡುಗಿಯರಿಗಾಗಿ ಶಾಲೆ ಮತ್ತು ಕೆಳಜಾತಿಯವರಿಗಾಗಿ ಬೇರೆ ಅನೇಕ ಶಾಲೆಗಳನ್ನು ಪ್ರಾರಂಭಿಸುವ ಉದ್ದೇಶ ಈ ಸಂಸ್ಥೆಗೆ ಇದೆ. ಸೈಂಟ್ ಆ್ಯನ್ಸ್ ಶಾಲೆಯ ವಿಶಿಷ್ಟ ಯಶಸ್ಸನ್ನು ತುಲನೆ ಮಾಡಿದ ನಂತರ, ಅದೇ ಆಡಳಿತದ ಕೆಳಗೆ ಮತ್ತು ಅದೇ ವ್ಯವಸ್ಥೆಯಲ್ಲಿ ತರಬೇತಿಯನ್ನು ಹೊಂದಿದ ಶಿಕ್ಷಕಿಯರ ಅಧ್ಯಾಪನದೊಂದಿಗೆ ಪ್ರಾರಂಭಿಸಲಾದ ಈ ಹೊಸ ಶಾಲೆಗಳು ಅತ್ಯಂತ ಹೆಚ್ಚು ಯಶಸ್ಸನ್ನು ಹೊಂದುತ್ತವೆ ಎಂದು ನಿರೀಕ್ಷಿಸಬಹುದಾಗಿದೆ."[೯೫] ೧೮೯೧ರಷ್ಟು ಹಿಂದೆಯೇ ಜಿಲ್ಲೆಯ ಕೆಲವು ಮೂಲನಿವಾಸಿಗಳು ತಮ್ಮ ಮಾತೃಭಾಷೆಯಾಗಿ ಇಂಗ್ಲೀಷನ್ನು ಉಲ್ಲೇಖಿಸುತ್ತಿದ್ದರು. ಇದಕ್ಕೆ ಕಾರಣ ಐದನೇ ತರಗತಿಯ ನಂತರ ಶಿಕ್ಷಣ ಮಾಧ್ಯಮ ಇಂಗ್ಲಿಷ್ ಆಗಿರುವುದಾಗಿದೆ. ಮಿಶನರಿ ಶಾಲೆಗಳಲ್ಲಿ ಕಲಿತ ಮಹಿಳೆಯರು ಕೂಡಾ ಮನೆಯಲ್ಲಿ ತಮ್ಮ ಮಕ್ಕಳೊಂದಿಗೆ ಇಂಗ್ಲಿಷಿನಲ್ಲಿ ಮಾತನಾಡುತ್ತಿದ್ದರು. ಇದರ ಫಲವಾಗಿ ಸುಶಿಕ್ಷಿತರು ಇಂಗ್ಲಿಷನ್ನು ಆಯ್ದುಕೊಂಡರು. ಮಿಶನರಿಗಳು ನಡೆಸುತ್ತಿದ್ದ ಶಾಲೆಗಳಲ್ಲಿ ಇಂಗ್ಲಿಷ್ ಜ್ಞಾನವನ್ನು ಪಡೆಯುವ ಸಲುವಾಗಿ ಸ್ಥಳೀಯ ಭಾಷೆಗಳಿಗೆ ಅವಕಾಶ ನೀಡದಿರುವ ಸಂಪ್ರದಾಯವಿತ್ತು.[೯೬]

೧೯೬೪ರಲ್ಲಿ ಸೈಂಟ್ ಆ್ಯನ್ಸ್ ಸ್ಕೂಲ್ ಒಂದು ಸೆಕೆಂಡರಿ ಸ್ಕೂಲಾಗಿ ಹಾಗೂ ೧೯೯೬ರಲ್ಲಿ ಪದವಿ ಪೂರ್ವ ಕಾಲೇಜಾಗಿ ಉನ್ನತೀಕರಿಸಲಾಗಿದೆ. ಶಾಲೆಯಲ್ಲಿ ಔಪಚಾರಿಕ ವಿದ್ಯಾಭ್ಯಾಸವನ್ನು ಮಾಡಲು ಅನಾನುಕೂಲವಿರುವ ಬಡ ವಿದ್ಯಾರ್ಥಿಗಳಿಗಾಗಿ ದೆಹಲಿಯ ರಾಷ್ಟ್ರೀಯ ಮುಕ್ತ ಶಾಲೆಯನ್ನು ಸ್ಥಾಪಿಸಲಾಗಿದೆ.[೯೭] ಪ್ರಸ್ತುತ ಮಂಗಳೂರಿನ ಮಹಿಳೆಯರು ಶಿಕ್ಷಣದಲ್ಲಿ ಇಷ್ಟು ಏಳಿಗೆಯನ್ನು ಸಾಧಿಸಿ, ನಾಯಕತ್ವವನ್ನು ವಹಿಸಿಕೊಂಡು ಮೌಲ್ಯಯುಕ್ತ ಜ್ಞಾನವನ್ನು ಸಂಪಾದಿಸಲು ೧೮೭೦ರಲ್ಲಿ ಸ್ಥಾಪನೆಯಾದ ಸೈಂಟ್ ಆ್ಯನ್ಸ್ ಶಾಲೆ ಕಾರಣವಾಗಿದೆ. ಸಂಸ್ಥೆಯ ಹಿರಿಯ ವಿದ್ಯಾರ್ಥಿಗಳು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಛಾಪನ್ನು ಮೂಡಿಸಿದ್ದಾರೆ. ಇದಕ್ಕೊಂದು ಉತ್ತಮ ನಿದರ್ಶನ ಸಾಮಾಜಿಕ ಕಾರ್ಯಕರ್ತೆ ಕಮಲಾದೇವಿ ಚಟ್ಟೋಪಾಧ್ಯಾಯ.

ಸೈಂಟ್ ಆ್ಯನ್ಸ್ ಶಾಲೆ ಮತ್ತು ಅದರ ಶಾಖಾ ಸಂಸ್ಥೆಗಳಿಗಾಗಿ ನಡೆಸಲಾಗುತ್ತಿದ್ದ ಶಿಕ್ಷಕ ತರಬೇತಿಯ ವಿಧಾನದಿಂದ ತೃಪ್ತಿಗೊಂಡ ಸಾರ್ವಜನಿಕ ಶಿಕ್ಷಣ ವಿಭಾಗವು ಈ ರೀತಿಯ ಕಾರ್ಯವನ್ನು ಇನ್ನೂ ಹೆಚ್ಚಿನ ಶಾಲೆಗಳಿಗೆ ವಿಸ್ತರಿಸುವ ತನ್ನ ಬಯಕೆಯನ್ನು ೧೮೮೭ರಲ್ಲಿ ವ್ಯಕ್ತಪಡಿಸಿತು.

ಈ ಸೂಚನೆಯನ್ನು ಕಾರ್ಯರೂಪಕ್ಕೆ ತರುವ ದೃಷ್ಟಿಯಿಂದ ಮೂವರು ಹಿರಿಯ ನನ್‌ಗಳನ್ನು [೯೮] ಮದ್ರಾಸಿನ ಪ್ರೆಸಿಡೆನ್ಸಿ ಶಾಲೆಗೆ ಕಳುಹಿಸಿಕೊಡಲಾಯಿತು. ಇದು ಮಹಿಳೆಯರ ತರಬೇತಿಗಾಗಿ ಇದ್ದಂತಹ ಸಂಸ್ಥೆ. ಮಂಗಳೂರಿನ ಸೈಂಟ್ ಆ್ಯನ್ಸ್ ಶಾಲೆಯು ೧೮೯೦ರಲ್ಲಿ ಸಾಮಾನ್ಯ ತರಬೇತಿ ಶಾಲೆಯಾಗಿ ಸರಕಾರದಿಂದ ಮಾನ್ಯತೆ ಪಡೆಯುವ ಗೌರವಕ್ಕೆ ಪತ್ರವಾಯಿತು. [೯೯] ಮಹಿಳಾ ಸಬಲೀಕರಣ ಹಾಗೂ ಆರ್ಥಿಕವಾಗಿ ಅವರನ್ನು ಸದೃಢಗೊಳಿಸುವುದು ತರಬೇತಿ ಶಾಲೆಯ ಮುಖ್ಯ ಉದ್ದೇಶವಾಗಿತ್ತು. ಸೇವಾ ಮನೋಭಾವ, ಸಮಾಜೋ- ಆರ್ಥಿಕ ಪರಿಸ್ಥಿತಿ, ಮಹಿಳೆಯರೇ ಕುಟುಂಬವನ್ನು ನಿಭಾಯಿಸಬೇಕಾದ ಅನಿವಾರ್ಯತೆ ಹೆಚ್ಚಿನ ಸಂಖ್ಯೆಯ ಮಹಿಳೆಯರು ಶಿಕ್ಷಕ ತರಬೇತಿ ಶಾಲೆಗೆ ಸೇರಲು ಮುಖ್ಯ ಕಾರಣಗಳಾದವು. ಇದು ಉತ್ತಮ ತರಬೇತಿ ಹೊಂದಿದ ಶಿಕ್ಷಕರ ಕೊರತೆಯನ್ನೂ ಬಹಳಷ್ಟು ಮಟ್ಟಿಗೆ ನೀಗಿಸಿತು. ಪ್ರಾರಂಭದಲ್ಲಿ ೮ನೇ ತರಗತಿ ಮುಗಿಸಿದ, ವಿದ್ಯಾರ್ಥಿಗಳಿಗೆ 'ಟೀಚಿಂಗ್ ಸರ್ಟಿಫಿಕೇಟ್ ಲೋವರ್' (ಟಿ.ಸಿ.ಎಲ್.), ಎಸ್.ಎಸ್.ಎಲ್.ಸಿ. ಹಾಗೂ ಪದವಿ ಪೂರ್ವ ಕಾಲೇಜು ಶಿಕ್ಷಣ ಮುಗಿಸಿದವರಿಗೆ ತರಬೇತಿಯ ಬಳಿಕ 'ಟೀಚರ್ ಸರ್ಟಿಫಿಕೇಟ್ ಹೈಯರ್'(ಟಿ.ಸಿ.ಹೆಚ್.) ಪದವಿಗಳನ್ನು ನೀಡಲಾಗುತ್ತಿತ್ತು. ಆದರೆ, ಈಗ ಹೊಸ ನಿಯಮದ ಪ್ರಕಾರ ಡಿಪ್ಲೋಮ ಇನ್ ಎಜುಕೇಷನ್ (ಡಿ.ಎಡ್.) ತರಬೇತಿ ಪಡೆಯಲಿಚ್ಛಿಸುವವರು ಕನಿಷ್ಠ ಪದವಿ ಪೂರ್ವ ಶಿಕ್ಷಣ ಮುಗಿಸಿರಬೇಕು.

ಸೈಂಟ್ ಆ್ಯನ್ಸ್ ಶಿಕ್ಷಣ ಮಹಾ ವಿದ್ಯಾಲಯವನ್ನು ೧೯೪೩ ಸ್ಥಾಪಿಸಲಾಗಿದೆ. ಇದು ಇಡೀ ಪಶ್ಚಿಮ ಕರಾವಳಿಯಲ್ಲಿ ಸ್ಥಾಪನೆಯಾದ ಮೊದಲ ಎಲ್.ಟಿ. ಪದವಿ ಕಾಲೇಜು ಎಂಬ ಗೌರವಕ್ಕೆ ಪಾತ್ರವಾಗಿದೆ. ೧೯೫೭ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಅಧೀನಕ್ಕೊಳಪಡುವುದರೊಂದಿಗೆ ಬಿ.ಟಿ. ಹಾಗೂ ಬಿ.ಎಡ್. ಪದವಿಗಾಗಿ ತರಬೇತಿ ನೀಡುತ್ತಿತ್ತು. ೧೯೮೦ರಿಂದ ಸೈಂಟ್ ಆನ್ಸ್ ಶಿಕ್ಷಕ ಕಾಲೇಜು, ಮಂಗಳೂರು ವಿಶ್ವವಿದ್ಯಾಲಯದ ಸ್ವಾಮ್ಯಕ್ಕೊಳಪಟ್ಟಿದೆ. ೧೯೯೨ರಲ್ಲಿ ಎಂ.ಎಡ್ ಕೋರ್ಸ್ ಆರಂಭಿಸಿದೆ. ೨೦೦೨ರಿಂದೀಚೆಗೆ ಸೈಂಟ್ ಆ್ಯನ್ಸ್ ಶಿಕ್ಷಣ ಕಾಲೇಜು, ಕರ್ನಾಟಕದ ರಾಜ್ಯ ಮುಕ್ತ ವಿಶ್ವವಿದ್ಯಾಲಯದ (ಕೆ.ಎಸ್.ಓ.ಯು.) ಎಂ.ಎಡ್ ಕೋರ್ಸ್‌ಗೆ ಅಧ್ಯಯನ ಕೇಂದ್ರವಾಗಿ ಸೇವೆ ಸಲ್ಲಿಸುತ್ತಿದೆ. ೨೦೦೬ರಿಂದ ಪ್ರಿ-ಪ್ರೈಮರಿ ಟೀಚರ್ ಟ್ರೈನಿಂಗ್ ಕೋರ್ಸ್ ಆರಂಭಿಸಿದೆ. ಅಲ್ಲದೆ ೨೦೦೮ರಿಂದ ಇಂದಿರಾ ಗಾಂಧಿ ಮುಕ್ತ ವಿಶ್ವವಿದ್ಯಾಲಯದ ಬಿ.ಇಡ್ ಹಾಗೂ ಡಿಪ್ಲೋಮ ಕೋರ್ಸ್‌ಗಳಿಗೆ ಅಧ್ಯಯನ ಕೇಂದ್ರವಾಗಿ ಸಹಕರಿಸುತ್ತಿದೆ. ೨೦೦೮ರಿಂದ ಸ್ವಾಯತ್ತತೆ ಪಡೆದಿರುವ ಸೈಂಟ್ ಆನ್ಸ್ ಶಿಕ್ಷಣ ಮಹಾವಿದ್ಯಾಲಯ ಪಿ.ಹೆಚ್‌ಡಿ. ಪದವಿಗೆ ಸಂಶೋಧನಾ ಕೇಂದ್ರವಾಗಿದೆ.[೧೦೦]

ಕಥೋಲಿಕ ಹುಡುಗಿಯರಿಗಾಗಿ ದೊಡ್ಡ ಪ್ರಮಾಣದ ಕಾರ್ಯಗಳು ನಡೆಯುತ್ತಿದ್ದರೆ, ಅವರ ಓಂದೂ ಸೋದರಿಯರಿಗಾಗಿ ಮಾಡಿದ್ದು ಬಹಳ ಕಡಿಮೆ. ಹಾಗೆಂದು ಶಾಲಾ ಪ್ರವೇಶದಲ್ಲಿ ಜಾತಿ,

ಮತದ ನಿರ್ಬಂಧವಿತ್ತು ಎಂದಲ್ಲ. ಆದರೆ ನಗರದ ಹಿಂದೂ ವಿಭಾಗದವರು ಕಾಪಾಡಿಕೊಂಡು ಬಂದಂತಹ ಅಂತರ ಮತ್ತು ಬೇರೆ ಹಲವು ಕಾರಣಗಳಿಂದಾಗಿ ಸಾಕಷ್ಟು ಸಂಖ್ಯೆಯ ಹಿಂದೂ ವಿದ್ಯಾರ್ಥಿಗಳು ಈಗಾಗಲೇ ಕಾರ್ಯ ನಿರ್ವಹಿಸುತ್ತಿರುವ ಶಾಲೆಗಳ ಶಿಕ್ಷಣ ಅವಕಾಶಗಳನ್ನು ಬಳಸಿಕೊಳ್ಳುವುದು ಕಷ್ಟವಾಗಿ ಪರಿಣಮಿಸಿತ್ತು. ೧೮೮೫ರಲ್ಲಿ ಶಾಲೆಯ ತಪಾಸಣಾಧಿಕಾರಿಗಳು ಉತ್ತಮ ಫಲಿತಾಂಶಕ್ಕಾಗಿ ಕನ್ಯಾಸ್ತ್ರೀಯರನ್ನು ಸನ್ಮಾನಿಸುತ್ತಾ, ಇದೇ ಆಡಳಿತದ ಕೆಳಗೆ ಜಾತಿ ಹೆಣ್ಮಕ್ಕಳ ಶಾಲೆಯನ್ನು ಪ್ರಾರಂಭಿಸುವ ವಿಚಾರಕ್ಕೆ ಪ್ರೋತ್ಸಾಹ ನೀಡಿದರು. ಅವರು ಸಾರ್ವಜನಿಕ ಶಿಕ್ಷಣ ವಿಭಾಗಕ್ಕೆ ಬರೆದ ಪತ್ರದಲ್ಲಿ ಈ ರೀತಿಯ ಶಾಲೆಯನ್ನು ಕ್ರೈಸ್ತ ಮಿಶನ್ನಿನವರು ಪ್ರಾರಂಭಿಸಿದರೆ ನಗರದ ಹಿಂದೂ ಮಹಿಳೆಯರ ಶಿಕ್ಷಣಕ್ಕೆ ಅವಕಾಶ ನೀಡಿದಂತಾಗುತ್ತದೆ ಎಂಬ ಆಶಾಪೂರ್ಣ ನಿರೀಕ್ಷೆಯನ್ನು ಅವರು ವ್ಯಕ್ತಪಡಿಸಿದ್ದಾರೆ. ಇದರಿಂದಾಗಿ ಹಿಂದೂಗಳ ವಾಸಸ್ಥಾನದ ನಡುಭಾಗದಲ್ಲಿ ನಿವೇಶನವೊಂದನ್ನು ಖರೀದಿ ಮಾಡಿದ ಮಿಶನ್ ಅಲ್ಲಿ ಶಾಲೆಯ ನಿರ್ಮಾಣ ಮಾಡಿತು. ಹೀಗೆ, ೧೮೮೭ರಲ್ಲಿ, ದಿವಂಗತ ರಾಣಿ ಚಕ್ರವರ್ತಿನಿಯ ಉತ್ಸವದ ಸಂದರ್ಭದಲ್ಲಿ ಡಾ. ಡಂಕನ್ ಅವರಿಂದ ಡೊಂಗರಕೇರಿ ವಿಕ್ಟೋರಿಯಾ ಜಾತಿ ಹೆಣ್ಮಕ್ಕಳ ಶಾಲೆಯ ಉದ್ಘಾಟನೆ ನಡೆಸಲಾಯಿತು.[೧೧೧] ಈ ರೀತಿಯಲ್ಲಿ ಅಪೋಸ್ತಲಿಕ್ ಕಾರ್ಮೆಲ್ ಧರ್ಮಭಗಿನಿಯರು ಕ್ರೈಸ್ತ ಮಹಿಳೆಯರ ಶಿಕ್ಷಣ ಮಾತ್ರವಲ್ಲದೆ ಕ್ರೈಸ್ತೇತರ ಮಹಿಳೆಯರ ಶಿಕ್ಷಣಕ್ಕೂ ಅವಕಾಶವನ್ನು ಕಲ್ಪಿಸಿಕೊಡುವ ಮೂಲಕ ಶಿಕ್ಷಣ ಕ್ಷೇತ್ರದಲ್ಲಿ ಹೊಸ ಚಿಂತನೆಗೆ ದಾರಿ ಮಾಡಿಕೊಟ್ಟರು. ೧೯೨೦ರಲ್ಲಿ ಡೊಂಗರಕೇರಿ ಶಾಲೆಯನ್ನು ಲೇಡಿಹಿಲ್‌ಗೆ ಸ್ಥಳಾಂತರಿಸಲಾಯಿತು.[೧೧೨]

ಮಂಗಳೂರು ನಗರದ ವಾಯುವ್ಯ ಭಾಗಗಳಲ್ಲಿ ವಾಸ ಮಾಡಿರುವ ಮಕ್ಕಳಿಗೂ ಬರಲು ಸುಲಭವಾಗುವ ರೀತಿಯಿಂದ ಹಂಪನಕಟ್ಟೆಯಲ್ಲಿ ಸೈಂಟ್ ಮೇರಿಸ್ ಪ್ರಾಥಮಿಕ ಶಾಲೆಯನ್ನು ತೆರೆಯಲಾಯಿತು. ಲೇಡಿ ಮೇರಿ ವೊರ್ಟ್ಲೆ ಮೊಂಟೆಗೋ ಅವರ ವಿಶಿಷ್ಟ ರೀತಿಯ ಅಧಿಕೃತ ಪ್ರಕಟಣೆ ಗಳಲ್ಲಿ ಮಹಿಳಾ ಶಿಕ್ಷಣದ ಕುರಿತಾದ ಅವರ ವಿಚಾರ ಹೀಗಿದೆ, "ಮಹಿಳೆಯರು ಸಂತೋಷವಾಗಿರಲು ಕಲಿಯುವಿಕೆ ಅಗತ್ಯವೆಂದು ನನ್ನ ಭಾವನೆ. ಅವರ ನೀತಿ ಮತ್ತು ನಡತೆಗಳಲ್ಲಿನ ತಪ್ಪುಗಳಿಗೆ ಸಾಮಾನ್ಯ ತಳಹದಿಯಾಗಿರುವುದು ಅಜ್ಞಾನ". ಇದೇ ವೇಳೆ ಅವರು ಹೇಳುತ್ತಾರೆ, "ಸೂಜಿಯನ್ನು ಬಳಸುವುದು ಹೇಗೆಂದು ಮಹಿಳೆಗೆ ಗೊತ್ತಿಲ್ಲದಿರುವುದು, ಪುರುಷರಿಗೆ ಖಡ್ಗದ ಬಳಕೆ ತಿಳಿದಿಲ್ಲದಿರುವುದಷ್ಟೇ ನಾಚಿಕೆಗೇಡಿನ ಸಂಗತಿಯಾಗಿದೆ". ಈ ರೀತಿಯ ಗಾಢ ನಂಬಿಕೆಯಿಂದ ಪ್ರಭಾವ ಹೊಂದಿರುವ ಕನ್ಯಾಸ್ತ್ರೀಯರು ಸಾದಾ ಮತ್ತು ಅಲಂಕಾರಿಕ ವೈವಿಧ್ಯತೆಗಳನ್ನು ಒಳಗೊಂಡಿರುವ ಕಸೂತಿ ಕೆಲಸಕ್ಕಾಗಿ ತಮಗೆ ಸಾಧ್ಯವಾದಷ್ಟು ಸಮಯವನ್ನು ಮೀಸಲಿಡುವ ಪ್ರಯತ್ನವನ್ನು ನಡೆಸುತ್ತಾರೆ. ಸಂಗೀತ, ಚಿತ್ರಕಲೆ ಮತ್ತು ಕಸೂತಿ ವಿಶೇಷ ಗಮನವನ್ನು ಪಡೆದಿದೆ.[೧೧೩] ಈ ಶಾಲೆ ಮುಂದೆ ಮಾನ್ಯುವೆಲ್ ಸಾಲ್ವದೋರ್

ಮಸ್ಕರೇನ್ಹಸ್‌ರವರು ಮಂಗಳೂರಿನ ಫಳ್ನೀರಿನಲ್ಲಿರುವ ಮಾರ್ಜಿಲಿನಲ್ಲಿ ದಾನವಾಗಿ ನೀಡಿದ ಸ್ಥಳಕ್ಕೆ ವರ್ಗಾವಣೆಗೊಂಡಿತು.[೧೦೪]

ಕಂಕನಾಡಿ ಮತ್ತು ಕದ್ರಿ ನಡುವಿನ ಪ್ರದೇಶವನ್ನು 'ಬೆಂದೂರ್' ಅಂದರೆ 'ಬೆಂದ ಊರು' ಅಥವಾ 'ಬರಡು ಭೂಮಿ' ಎಂದು ಕರೆಯುತ್ತಾರೆ. ಇಲ್ಲಿ ಸೈಂಟ್ ಆ್ಯಗ್ನೆಸ್ ಹೈಯರ್ ಪ್ರೈಮರಿ ಶಾಲೆ (೧೯೧೪), ಸೈಂಟ್ ಆ್ಯಗ್ನೆಸ್ ಹೈಸ್ಕೂಲ್, ಸೈಂಟ್ ಆ್ಯಗ್ನೆಸ್ ಕಾಲೇಜು (೧೯೨೧) ಸೈಂಟ್ ಆ್ಯಗ್ನೆಸ್ ಇಂಗ್ಲಿಷ್ ಪ್ರೈಮರಿ ಸ್ಕೂಲ್ (೧೯೬೫) ಹಾಗೂ ಸೈಂಟ್ ಆ್ಯಗ್ನೆಸ್ ಸ್ನಾತಕೋತ್ತರ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವನ್ನು ಆರಂಭಿಸಲಾಗಿದೆ.[೧೦೫] ಸೈಂಟ್ ಆ್ಯಗ್ನೆಸ್ ಮಹಾವಿದ್ಯಾಲಯವು ಜಿಲ್ಲೆಯ ಪ್ರಥಮ ಕ್ರೈಸ್ತ ಮಹಿಳಾ ಮಹಾವಿದ್ಯಾಲಯವಾಗಿದೆ. ಅಲ್ಲದೆ, ಭಾರತದಲ್ಲಿ ಖಾಸಗಿ ಆಡಳಿತದಲ್ಲಿ, ಸಂಪೂರ್ಣವಾಗಿ ಭಾರತೀಯರಿಂದಲೇ ನಡೆಸಲಾಗುತ್ತಿದ್ದ ಪ್ರಥಮ ಮಹಿಳಾ ಮಹಾವಿದ್ಯಾಲಯವಾಗಿದೆ. ೧೯೨೪ರಲ್ಲಿ ಈ ಕಾಲೇಜನ್ನು ಮದ್ರಾಸ್ ವಿಶ್ವವಿದ್ಯಾಲಯದ ಪ್ರಥಮ ದರ್ಜೆ ಕಾಲೇಜಾಗಿ ಉನ್ನತೀಕರಿಸಲಾಯಿತು.[೧೦೬]

ಉಡುಪಿಯ ಸೈಂಟ್ ಸಿಸಿಲೀಸ್ ಶಾಲೆ ೨೦ ಮೇ ೧೯೧೮ರಲ್ಲಿ ಕೇವಲ ೯ ವಿದ್ಯಾರ್ಥಿಗಳೊಂದಿಗೆ ಆರಂಭಗೊಂಡಿತು. ಶಿವಳ್ಳಿ ಬ್ರಾಹ್ಮಣರ ಪ್ರಾಬಲ್ಯ ಇರುವ ಉಡುಪಿಯಲ್ಲಿ ಆರಂಭದಲ್ಲಿ ಪೋಷಕರು ಮತ್ತು ಹೆತ್ತವರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಹಿಂಜರಿಯುತ್ತಿದ್ದರು. ಪ್ರಾರಂಭದಲ್ಲಿ ಶಾಲೆಗೆ ಸ್ವಲ್ಪ ಹಿನ್ನಡೆಯಾದರೂ, ಕಾಲಕ್ರಮೇಣ ಸರ್ಕಾರದ ಪ್ರೋತ್ಸಾಹ ಮತ್ತು ಸ್ಥಳೀಯರ ನೆರವಿನಿಂದ ಪರಿಸ್ಥಿತಿಯಲ್ಲಿ ಸ್ವಲ್ಪ ಮಟ್ಟಿಗೆ ಸುಧಾರಣೆಯಾಗಿದೆ. ೧೯೨೦ರಲ್ಲಿ ಧರ್ಮಾಧ್ಯಕ್ಷ ಪೌಲ್ ಪೆರಿನಿಯವರು ದಾನವಾಗಿ ನೀಡಿದ ಸ್ಥಳದಲ್ಲಿ ಹೊಸ ಕಟ್ಟಡವನ್ನು ನಿರ್ಮಿಸಿ ಹೆಚ್ಚಿನ ತರಗತಿಗಳು ಆರಂಭಗೊಂಡವು. ಅಲ್ಲದೆ ಆಸುಪಾಸಿನ ಪ್ರದೇಶಗಳಾದ ಉದ್ಯಾವರ, ಮಲ್ಪೆ, ಕೆಮ್ಮಣ್ಣು, ಕಲ್ಯಾಣಪುರ ಮುಂತಾದ ಸ್ಥಳಗಳ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ವಸತಿ ನಿಲಯವನ್ನೂ ಆರಂಭಿಸಲಾಗಿದೆ. ಇದರಿಂದಾಗಿ, ದೂರದ ಊರುಗಳಾದ ಚಿಕ್ಕಮಗಳೂರು, ಬೆಳ್ತಂಗಡಿ , ಬಂಟ್ವಾಳ, ಮಂಗಳೂರು, ಸುರತ್ಕಲ್‌ಗಳಿಂದ ಶಿಕ್ಷಣಕ್ಕಾಗಿ ವಿದ್ಯಾರ್ಥಿಗಳು ಬರುವಂತಾಗಿದೆ.[೧೦೭]

ಹೆಣ್ಮಕ್ಕಳಿಗೆ ಶಾಲೆ, ಯುವಕರಿಗೆ ವೃತ್ತಿ ಶಿಕ್ಷಣ ಮತ್ತು ನಿರ್ಗತಿಕರಿಗೆ ಅನಾಥಾಶ್ರಮ ಆರಂಭಿಸುವ ಉದ್ದೇಶದಿಂದ ಅಪೋಸ್ತಲಿಕ್ ಕಾರ್ಮೆಲ್ ಧರ್ಮಭಗಿನಿಯರು ಕುಂದಾಪುರಕ್ಕೆ ಬಂದರು. ೧೯೩೦ರಲ್ಲಿ ಸಂತ ಜೋಸೆಫರ ಶಾಲೆಯನ್ನು ತೆರೆದು ವಿದ್ಯಾಭ್ಯಾಸ ನೀಡತೊಡಗಿದರು. ನಿರುದ್ಯೋಗಿ ಯುವಕರಿಗೆ ಉದ್ಯೋಗ ಕಲ್ಪಿಸುವ ಉದ್ದೇಶದಿಂದ ಹಗ್ಗ ಹೆಣೆಯುವುದು ಮತ್ತು ಹೂವು ಕಟ್ಟುವುದನ್ನು ಕಲಿಸಿಕೊಟ್ಟರು. ಗ್ರಾಮೀಣ ಬಡ ಹೆಣ್ಮಕ್ಕಳನ್ನು ಸಂಪರ್ಕಿಸಿ ಅನಾಥಾಶ್ರಮದಲ್ಲಿ ಆಶ್ರಯ ನೀಡಿ ವಿದ್ಯಾಭ್ಯಾಸ ನೀಡಿದರು.[೧೦೮] ಇನ್ಫೆಂಟ್ ಜೀಸಸ್ ಚರ್ಚ್ ನಡೆಸುತ್ತಿದ್ದ ಹಿರಿಯ ಪ್ರಾಥಮಿಕ ಶಾಲೆಯೊಂದು ಬಂಟ್ವಾಳದ

ಮಡಂಕಾಪುವಿನಲ್ಲಿತ್ತು. ಇಲ್ಲಿ ವಿದ್ಯಾಭ್ಯಾಸ ನಡೆಸಿದ ವಿದ್ಯಾರ್ಥಿಗಳು ತಮ್ಮ ಮುಂದಿನ ಶಿಕ್ಷಣಕ್ಕಾಗಿ ಮಂಗಳೂರು ಅಥವಾ ಕ್ರೈಸ್ತೇತರರು ನಡೆಸುತ್ತಿದ್ದ ಶಾಲೆಗೆ ಹೋಗಬೇಕಾದ ಅನಿವಾರ್ಯತೆ ಇತ್ತು. ಗ್ರಾಮೀಣ ಬಡ ಹೆಣ್ಮಕ್ಕಳು ತಮ್ಮ ಶಿಕ್ಷಣವನ್ನು ಅರ್ಧದಲ್ಲಿ ಮೊಟಕುಗೊಳಿಸಿ ಉದ್ಯೋಗ ಅರಸಿ ದೂರದೂರುಗಳಿಗೆ ಪ್ರಯಾಣಿಸುವುದನ್ನು ತಪ್ಪಿಸುವ ಉದ್ದೇಶದಿಂದ ಹೆಣ್ಮಕ್ಕಳ ಪ್ರೌಢಶಾಲೆ, ಪದವಿ ಪೂರ್ವ ವಿದ್ಯಾಲಯ ಹಾಗೂ ಪದವಿ ಕಾಲೇಜನ್ನು ಆರಂಭಿಸಲಾಗಿದೆ.[೧೦೯]

ಅಪೋಸ್ತಲಿಕ್ ಕಾರ್ಮೆಲ್ ಧರ್ಮಭಗಿನಿಯರು ವೃತ್ತಿ ಶಿಕ್ಷಣ ಕ್ಷೇತ್ರಕ್ಕೆ ಸ್ವಲ್ಪ ತಡವಾಗಿಯೇ ಕಾಲಿರಿಸಿದರು. ಔಪಚಾರಿಕ ಶಿಕ್ಷಣ ಪಡೆಯಲೊಲ್ಲದ ಗ್ರಾಮೀಣ ಬಡ ಹೆಣ್ಮಕ್ಕಳು, ಕುಟುಂಬದ ಜವಾಬ್ದಾರಿಯನ್ನು ನಿಭಾಯಿಸಬೇಕಾದ ಪರಿಸ್ಥಿತಿ ಎದುರಾದಾಗ ಉದ್ಯೋಗ ನಿಮಿತ್ತ ದೂರದ ಊರುಗಳಿಗೆ ಹೋಗಬೇಕಾಗುತ್ತಿತ್ತು. ಹೀಗೆ, ಹೊಟ್ಟೆ ಪಾಡಿಗಾಗಿ ಅಪರಿಚಿತ ಊರುಗಳಿಗೆ ಹೋದಾಗ ಅವರು ನಾನಾ ರೀತಿಯ ಸಮಸ್ಯೆಗಳಿಗೆ ಗುರಿಯಾಗುತ್ತಿದ್ದರು. ಇಂತಹವರ ಅನುಕೂಲಕ್ಕಾಗಿ ಯಾವುದೇ ರೀತಿಯ ಯೋಜನೆಗಳನ್ನು ಇದುವರೆವಿಗೂ ಧರ್ಮಭಗಿನಿಯರು ಹಮ್ಮಿಕೊಂಡಿರಲಿಲ್ಲ. ಆದರೆ ಈ ವರ್ಗದ ಹೆಣ್ಮಕ್ಕಳಿಗೆ ಏನಾದರೂ ಮಾಡಿ ವಲಸೆ ಹೋಗುವುದನ್ನು ತಪ್ಪಿಸಬೇಕೆಂದು ನಿರ್ಧರಿಸಿದ್ದರು. ಕಡೆಗೆ ಜರ್ಮನಿಯ ಮಿಸರಿಯೋರ್ ಎಂಬ ಸಂಸ್ಥೆಯಿಂದ ಆರ್ಥಿಕ ನೆರವನ್ನು ಪಡೆದು ಮೇರಿಹಿಲ್ ವಿಜಯಮಾರಿ ತಾಂತ್ರಿಕ ಶಾಲೆಯನ್ನು ಆರಂಭಿಸಿದರು. ಇಲ್ಲಿ ಯುವತಿಯರಿಗೆ ಇಂಗ್ಲಿಷ್, ಬೆರಳಚ್ಚು, ಶೀಘ್ರಲಿಪಿ, ಅಕೌಂಟೆನ್ಸಿ, ಕಛೇರಿ ನಿರ್ವಹಣೆ, ಕಂಪ್ಯೂಟರ್ ಶಿಕ್ಷಣ, ಹೊಲಿಗೆ, ಕಸೂತಿ, ವಸ್ತ್ರವಿನ್ಯಾಸ, ಪ್ರಿ-ಪ್ರೈಮರಿ ಟೀಚರ್ ಟ್ರೈನಿಂಗ್ ಡಿಪ್ಲೋಮ, ಕೇಶಾಲಂಕಾರ, ಕುಸುರಿ ಕೆಲಸ ಹಾಗೂ ವಿವಿಧ ಜೀವನವಶ್ಯಕ ಕೌಶಲ್ಯಗಳನ್ನು ಕಲಿಸಿಕೊಡಲಾಗುತ್ತದೆ. ವಸತಿ ನಿಲಯದ ೪೦ ಹಾಗೂ ಮನೆಯಿಂದ ಬರುವ ೩೫ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಪಡೆಯುವ ಅವಕಾಶಗಳಿವೆ.[೧೧೦] ಅಂತೆಯೇ, ಮಂಗಳೂರಿನ ಬೋಳಾರಿನಲ್ಲಿ ಕಾರ್ಮೆಲ್‌ನವರು ನಿರಂತರ ಶಿಕ್ಷಣ ಕೇಂದ್ರವನ್ನು ಆರಂಭಿಸಿ, ಕ್ರಮೇಣ ಅದನ್ನು ಹೊಲಿಗೆ ಕೇಂದ್ರವಾಗಿ ಮಾರ್ಪಡಿಸಲಾಗಿದೆ.[೧೧೧]



ಕುಂದಾಪುರದ ಗಂಗೊಳ್ಳಿ, ಸಮುದ್ರ ತೀರದಲ್ಲಿರುವ ಹೆಚ್ಚಾಗಿ ಬೆಸ್ತರು, ವ್ಯಾಪಾರಸ್ಥರು ಹಾಗೂ ಕಾರ್ಮಿಕರು ನೆಲೆಸಿರುವ ಹಿಂದುಳಿದ ಪ್ರದೇಶವಾಗಿದೆ. ಇಲ್ಲಿ ನೆಲೆಸಿರುವ ಕ್ರೈಸ್ತರ ಹಾಗೂ ಇತರ ಸಮುದಾಯಗಳ ಶೈಕ್ಷಣಿಕ ಅಗತ್ಯಗಳನ್ನು ಪೂರೈಸಬಲ್ಲ ಸಂಸ್ಥೆಗಳ ಕೊರತೆಯನ್ನು ಕಂಡ ಫಾ। ಮೈಕಲ್ ನೊರೋನ್ಹಾರವರು ಅಪೋಸ್ತಲಿಕ್ ಕಾರ್ಮೆಲ್ ಧರ್ಮಭಗಿನಿಯರ ಮೂಲಕ ಪ್ರೌಢಶಾಲೆಯೊಂದನ್ನು ಆರಂಭಿಸಿದರು. ಧರ್ಮಕೇಂದ್ರದಲ್ಲಿ ಶಾಲೆಗೆ ಬರುವ ಬಾಲಕಿಯರ ಸಂಖ್ಯೆ ಕಡಿಮೆ ಇದ್ದುದರಿಂದ ಸೀರುಡೆ, ಕಿನ್ನಿಗೋಳಿ ಮುಂತಾದ ಸ್ಥಳಗಳಿಂದ ಹೆಣ್ಮಕ್ಕಳನ್ನು ಕರೆತಂದು ವಸತಿ ನಿಲಯದಲ್ಲಿ ಆಶ್ರಯ

ನೀಡಲಾಗಿದೆ. ಗಂಗೊಳ್ಳಿ ಬೆಸ್ತ ಸಮುದಾಯ (ಖಾರ್ವಿ) ಅಭಿವೃದ್ಧಿ ಹೊಂದಿದ್ದರೆ ಅದು ಧರ್ಮಭಗಿನಿಯರ ನಿಸ್ವಾರ್ಥ ಸೇವೆಯಿಂದಾಗಿ ಎಂಬ ಅಭಿಪ್ರಾಯ ಖಾರ್ವಿಗಳದ್ದಾಗಿದೆ.[೧೧೨]

ಉತ್ತರ ಕರ್ನಾಟಕದ ಹಾಗೂ ತಮಿಳುನಾಡಿನಿಂದ ಕಟ್ಟಡ ಕೆಲಸಕ್ಕಾಗಿ ವಲಸೆ ಬಂದ ಕೂಲಿ ಕಾರ್ಮಿಕರು ಮಂಗಳೂರಿನ ಜ್ಯೋತಿನಗರವನ್ನು ತಮ್ಮ ವಸಾಹತುವನ್ನಾಗಿಸಿಕೊಂಡಿದ್ದಾರೆ. ಈ ಬಡ ಕೂಲಿ ಕಾರ್ಮಿಕರಲ್ಲಿ ಹೆಚ್ಚಿನವರು ಅವಿದ್ಯಾವಂತರಾಗಿರುವುದರಿಂದ ಇವರ ಒಳಿತಿಗಾಗಿ ವಯಸ್ಕರ ಶಿಕ್ಷಣ ಸಂಸ್ಥೆಯನ್ನೂ ಹಾಗೂ ಇವರ ಮಕ್ಕಳಿಗಾಗಿ ಪ್ರಾಥಮಿಕ ಶಾಲೆಯನ್ನೂ ಕಾರ್ಮೆಲ್ ಧರ್ಮಭಗಿನಿಯರು ಆರಂಭಿಸಿದ್ದಾರೆ. ೨೦೦೫ರಲ್ಲಿ ಪ್ರಾಥಮಿಕ ಶಾಲೆಯನ್ನು ಪ್ರೌಢಶಾಲೆಯಾಗಿ ಉನ್ನತೀಕರಿಸಲಾಗಿದೆ.[೧೧೩]
[ಹೆಚ್ಚಿನ ಮಾಹಿತಿಗಾಗಿ ಅನುಬಂಧ ೨ನ್ನು ಪರಿಶೀಲಿಸಿ]

ಹೀಗೆ, ಹೆಣ್ಮಕ್ಕಳ ಶಿಕ್ಷಣಕ್ಕಾಗಿಯೇ ಸ್ಥಾಪಿಸಲ್ಪಟ್ಟ ಅಪೋಸ್ತಲಿಕ್ ಕಾರ್ಮೆಲ್ ಸಭೆ, ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಯಲ್ಲಿ ಅಪಾರ ಕೊಡುಗೆಯನ್ನು ನೀಡಿದೆ. ವಸಾಹತು ಸರ್ಕಾರದಲ್ಲಿ ಉದ್ಯೋಗ ಪಡೆಯಲು ಇಂಗ್ಲಿಷ್ ಶಿಕ್ಷಣದಿಂದ ಮಾತ್ರ ಸಾಧ್ಯವಿದೆ ಎಂದು ಬಲವಾಗಿ ನಂಬಿದ್ದ ಅವರು ಕನ್ನಡ ಮಾಧ್ಯಮ ಶಾಲೆಗಳನ್ನು ಸ್ವಲ್ಪ ತಡವಾಗಿಯೇ ಆರಂಭಿಸಿದರು. ಆ ಮೂಲಕ ರಾಜ್ಯದಲ್ಲಿ ಮಾತ್ರವಲ್ಲದೆ, ಹೊರ ರಾಜ್ಯಗಳಲ್ಲಿ ಹಾಗೂ ಹೊರದೇಶಗಳಲ್ಲಿಯೂ ಉದ್ಯೋಗವಕಾಶವನ್ನು ಕಲ್ಪಿಸಿ ಕೊಟ್ಟಿದ್ದಾರೆ. ಕಾಲಕ್ರಮೇಣ ಬದಲಾದ ಪರಿಸ್ಥಿತಿಯಲ್ಲಿ ಹಲವಾರು ಕನ್ನಡ ಮಾಧ್ಯಮ ಶಾಲೆಗಳನ್ನು, ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿಯೂ ಸ್ಥಾಪಿಸಿದ್ದಾರೆ. ಜಿಲ್ಲೆಯ ಮಹಿಳೆಯರು ಶಿಕ್ಷಣದಲ್ಲಿ, ರಾಜಕೀಯ ಕ್ಷೇತ್ರದಲ್ಲಿ, ಸಾಮಾಜಿಕ ಕ್ಷೇತ್ರದಲ್ಲಿ ಮತ್ತು ಸ್ವಾತಂತ್ರ್ಯ ಸಂಗ್ರಾಮದಲ್ಲಿ, ಛಾಪನ್ನು ಮೂಡಿಸಿದ್ದರೆ, ಅದರಲ್ಲಿ ಕಾರ್ಮೆಲ್ ಧರ್ಮಭಗಿನಿಯರ ಪಾತ್ರ ಬಹಳಷ್ಟು ಇದೆ. ೧೯೫೦ರ ದಶಕದಲ್ಲಿ ಶಿಕ್ಷಕ ತರಬೇತಿ ಶಾಲೆಯನ್ನು ಆರಂಭಿಸಿ ಜಿಲ್ಲೆಯಲ್ಲಿ ಪ್ರಾರಂಭವಾದ ಹೆಚ್ಚಿನ ಶಾಲೆಗಳಿಗೆ ಶಿಕ್ಷಕರನ್ನು ಒದಗಿಸಿಕೊಡುವ ಮೂಲಕ ಅಕ್ಷರ ಕ್ರಾಂತಿಯಲ್ಲಿ ನೇರವಾಗಿ ಭಾಗಿಯಾಗಿದ್ದಾರೆ. ಸೈಂಟ್ ಆ್ಯನ್ಸ್‌ನಲ್ಲಿ ತರಬೇತಿ ಹೊಂದಿದ ಹಲವರು ರಾಜ್ಯದಲ್ಲಿ ಹಾಗೂ ಹೊರರಾಜ್ಯಗಳಲ್ಲಿ ಮುಖ್ಯವಾಗಿ ಬೊಂಬಾಯಿಯಲ್ಲಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿ ವಿದ್ಯಾದಾನ ಮಾಡುವ ಮೂಲಕ ಜಿಲ್ಲೆಯ ಕೀರ್ತಿಯನ್ನು ನಾಲ್ಕೂ ದಿಕ್ಕುಗಳಿಗೂ ಪಸರಿಸಿದ್ದಾರೆ. ಶಿಕ್ಷಣವನ್ನು ಮುಂದುವರಿಸಲು ಸಾಧ್ಯವಾಗದ ಹೆಣ್ಮಕ್ಕಳಿಗೆ ವೃತ್ತಿ ತರಬೇತಿ, ಮನೋವೈಕಲ್ಯ ಇರುವವರಿಗೆ ವಿಶೇಷ ಶಾಲೆ, ನಿರ್ಗತಿಕರಿಗೆ ಅನಾಥಾಶ್ರಮ, ಕೂಲಿ ಕಾರ್ಮಿಕರಿಗೆ ವಯಸ್ಕರ ಶಿಕ್ಷಣ, ನಿರುದ್ಯೋಗಿ ಯುವಕರಿಗೆ ಕೈಗಾರಿಕಾ ತರಬೇತಿ ಇತ್ಯಾದಿ ಸೇವಾ ಕಾರ್ಯಗಳಿಂದ ಧರ್ಮಭಗಿನಿಯರು ಜಿಲ್ಲೆಯಲ್ಲಿ ಸಾಮಾಜಿಕ ಬದಲಾವಣೆಗೆ ಕಾರಣರಾಗಿದ್ದಾರೆ.

## ೨.೭. ಯೇಸು ಸಭೆ ಹಾಗೂ ಉನ್ನತ ಶಿಕ್ಷಣದ ಪ್ರಗತಿ

ಬಿಷಪ್ ಮೈಕಲ್ ಆ್ಯಂಟನಿಯವರ ಕಾಲದಲ್ಲಿಯೇ ಮಂಗಳೂರಿನ ಜನಪ್ರತಿನಿಧಿಗಳು, ಕಾರ್ಮೆಲೈಟ್‌ರವರ ಬದಲಿಗೆ ಯೇಸುಸಭೆ (Society of Jesus) ಯವರನ್ನು ಮಂಗಳೂರು ಮಿಶನ್ನಿಗೆ ಕಳುಹಿಸಿಕೊಡುವಂತೆ ಮನವಿಗಳನ್ನು ಜಗದ್ಗುರುಗಳಿಗೆ ರವಾನಿಸಿದ್ದರು. ಮಂಗಳೂರಿಗೆ ೧೮೬೦ರಲ್ಲಿ ಭೇಟಿ ನೀಡಿದ ವಿಸಿಟರ್ ಅಪೋಸ್ತಲಿಕ್ ಮೊನ್ಸಿಞೊರ್ ಬೊನ್ನಂಡ್ ಅವರಿಗೆ ಉದ್ದವಾದ ಮನವಿಯೊಂದನ್ನು ನೀಡಲಾಗಿತ್ತು. ನೂರ ಎಂಬತ್ತು ಪ್ರಮುಖ ವ್ಯಕ್ತಿಗಳ ಸಹಿ ಇರುವ ಆ ಮನವಿಯಲ್ಲಿ ಅವರ ಸಂಕಷ್ಟವನ್ನು ತಿಳಿಸಲಾಗಿತ್ತು.[೧೧೪] ಹೀಗೆ, ಅತೃಪ್ತರಾದವರನ್ನು ಸಮಾಧಾನಪಡಿಸಲು, ಜಗದ್ಗುರುಗಳು, ಫ್ರೆಂಚ್ ಕಾರ್ಮೆಲೈಟ್ ಮಾರಿ ಎಫ್ರೆಮ್‌ರವರನ್ನು ಹೊಸ ಅಪೋಸ್ತಲಿಕ್ ವಿಕಾರ್ ಆಗಿ ಕಳುಹಿಸಿದರು. ಆದ್ದರಿಂದ, ಮಾರಿ ಎಫ್ರೆಮರ (೧೮೭೦-೭೩) ಕಾಲಾವಧಿಯಲ್ಲಿ ಯೇಸು ಸಭೆಯವರನ್ನು ತರಿಸುವ ಚಳುವಳಿ ತಣ್ಣಗಾಯಿತು.[೧೧೫]

ಬಿಷಪ್ ಮಾರಿ ಎಫ್ರೆಮರ ನಿಧನದ ಬಳಿಕ ಕಥೋಲಿಕ ಜನಪ್ರತಿನಿಧಿಗಳು ಪುನಃ ಮಂಗಳೂರು ಮಿಶನನ್ನು ಯೇಸು ಸಭೆಯವರಿಗೆ ಹಸ್ತಾಂತರಿಸಬೇಕೆಂಬ ಪ್ರತಿಭಟನೆಗೆ ಪುನಶ್ಚೇತನ ನೀಡಿದರು. ಬೊಂಬಾಯಿಯಲ್ಲಿ ಜರ್ಮನ್ ಯೇಸುಸಭೆಯವರು ಹಾಗೂ ಕಲ್ಕತ್ತಾದಲ್ಲಿ ಬೆಲ್ಜಿಯಂನ ಯೇಸುಸಭೆಯವರು ಶಿಕ್ಷಣ ಕ್ಷೇತ್ರದಲ್ಲಿ ದಾಖಲಿಸಿದ ಸಾಧನೆಗಳನ್ನು ನೋಡಿ ಅವರು ಜಗದ್ಗುರುಗಳಿಗೆ ತಮ್ಮ ಮನವಿಯನ್ನು ಸಲ್ಲಿಸಿ, ಅದೇ ಸಭೆಯವರು ಮಹಾವಿದ್ಯಾಲಯವೊಂದನ್ನು ಮಂಗಳೂರಿನಲ್ಲಿ ಪ್ರಾರಂಭಿಸಬೇಕೆಂದು ಕೋರಿಕೆ ಸಲ್ಲಿಸಿದರು.[೧೧೬] ಇನ್ನೊಮ್ಮೆ, ೧೮೭೩ರಲ್ಲಿ ಕಥೋಲಿಕ ಜನಪ್ರತಿನಿಧಿಗಳು ತಂತಿ ಸಂದೇಶವೊಂದನ್ನು ಜಗದ್ಗುರು ಪಿಯುಸ್ IXರವರಿಗೆ ಹಾಗೂ ಬೊಂಬಾಯಿಯ ವಿಕಾರ್ ಅಪೋಸ್ತಲಿಕರಿಗೆ ಕಳುಹಿಸಿ, ಮಂಗಳೂರು ವಿಕಾರಿಯೇಟನ್ನು ಯೇಸುಸಭೆಯವರಿಗೇ ಹಸ್ತಾಂತರಿಸಬೇಕೆಂದು ಕೋರಿಕೊಂಡರು.[೧೧೭]

ಕಥೋಲಿಕ ಜನಪ್ರತಿನಿಧಿಗಳ ಅಸಹನೆಗೆ ಕಾರಣವೇನೆಂದರೆ, ಸುಮಾರು ೫೦,೦೦೦ ಜನರ ಆಧ್ಯಾತ್ಮಿಕ ಅಗತ್ಯಗಳ ಪೂರೈಕೆಗೆ ಇರುವವರು ಕೇವಲ ಐದು ಮಂದಿ ಸ್ಥಳೀಯ ಭಾಷೆ ತಿಳಿಯದ ಹಾಗೂ ಇಂಗ್ಲಿಷನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗದ ಯೂರೋಪಿಯನ್ ಧರ್ಮಗುರುಗಳು ಎಂಬುದು. ಹೀಗಾಗಿ ಅವರ ದೂರು ಏನಿತ್ತೆಂದರೆ: "ಕಾರ್ಮೆಲೈಟರು ನಮ್ಮಿಂದ ಮತ್ತು ನಮ್ಮನ್ನು ಆಳುವವರಿಂದ ಗಮನಾರ್ಹ ರೀತಿಯಲ್ಲಿ ಪ್ರತ್ಯೇಕವಾಗಿ ಇರಬಯಸುವವರಾಗಿದ್ದಾರೆ. ಪ್ರತಿಯೊಂದು ಸಂದರ್ಭದಲ್ಲಿ ಅವರು ಜನಾಂಗ, ಭಾಷೆ ಮತ್ತು ನಡವಳಿಕೆಯಲ್ಲಿ ನಮ್ಮಿಂದ ದೂರವಿರುವವರೆಂಬುದನ್ನು

ತೋರಿಸಿಕೊಳ್ಳುತ್ತಾರೆ. ...... ಶಿಕ್ಷಣ, ಆಧ್ಯಾತ್ಮಿಕ ಗುಣಲಕ್ಷಣಗಳು ಮತ್ತು ಉತ್ಸಾಹದಲ್ಲಿ ಇವರಿಗಿಂತ ಸ್ಥಳೀಯ ಗುರುಗಳೂ ಕೂಡ ಹೆಚ್ಚು ಉತ್ತಮರೇನಲ್ಲ. ಇದರ ಫಲವಾಗಿ, ಕ್ರೈಸ್ತರು ಅಂಧಶ್ರದ್ಧೆಯ ಕಾರ್ಯಗಳಲ್ಲಿ ನಿರತರಾಗಿ ಪವಿತ್ರ ಗ್ರಂಥಗಳನ್ನು ನಿರ್ಲಕ್ಷಿಸುತ್ತಿದ್ದಾರೆ. ಇದು ಕ್ರೈಸ್ತ ಧರ್ಮಕ್ಕೆ ಅಪಮಾನಕಾರಿ ಸಂಗತಿಯಾಗಿದೆ. ಅವರು ಜನರನ್ನು ವಿದ್ಯಾವಂತರನ್ನಾಗಿ ಮಾಡುವುದರಲ್ಲಿ ಅಸಮರ್ಥರಾಗಿ ಕೂಡಾ ಕಾಣುತ್ತಾರೆ."[೧೧೮] ಕಥೋಲಿಕ ಸಮುದಾಯವು ತಮ್ಮ ಸಹ-ಧರ್ಮಿಯ ವ್ಯಕ್ತಿಗಳು (ಬಾಸೆಲ್ ಮಿಶನ್ನಿನವರು ವಿಭಾಗೀಯ ವೈರಿಗಳಾಗಿದ್ದರೂ) ನಡೆಸಿದ ಉತ್ತಮ ಕಾರ್ಯಗಳಿಗೆ ಪ್ರಶಂಸೆ ವ್ಯಕ್ತಪಡಿಸುತ್ತಾರೆ. ಬಾಸೆಲ್ ಮಿಶನ್‌ನವರು ಕ್ರೈಸ್ತ ಧರ್ಮ ಸ್ವೀಕರಿಸಿದ ಜನರಿಗೆ ಮಾನಸಿಕ, ದೈಹಿಕ ಮತ್ತು ಭಾವನಾತ್ಮಕವಾಗಿ ನೆರವಾಗಿದ್ದಾರೆ. ಬಾಸೆಲ್ ಮಿಶನ್ ಬಗ್ಗೆ ಕಥೋಲಿಕ ಸಮುದಾಯ ಹೀಗೆ ಅಭಿಪ್ರಾಯಿಸಿದೆ: "ಬಾಸೆಲ್ ಸೌವಾರ್ತಿಕ ಲೂಥರನ್ ಮಿಶನರಿಗಳು ಗಟ್ಟಿಯಾಗಿ ತಳವೂರಿದ ಬಳಿಕ ಉಚಿತವಾಗಿ ಅಥವಾ ಅಲ್ಪ ಖರ್ಚಿನಲ್ಲಿ ಎಲ್ಲಾ ವರ್ಗದ ಬಡವ- ಶ್ರೀಮಂತ, ಹಿಂದೂ, ಮುಸಲ್ಮಾನ ಮತ್ತು ಕಥೋಲಿಕರಿಗೆ ಇಂಗ್ಲಿಷ್ ಮತ್ತು ದೇಶೀ ಭಾಷೆಗಳನ್ನು, ಕಲೆ ಹಾಗೂ ವಿಜ್ಞಾನಗಳನ್ನು ಕಲಿಸಿದ್ದಾರೆ. ಅಲ್ಲದೆ ಯೂರೋಪಿನ ಕಾರ್ಯಪಟುತ್ವದ ಸ್ಥಳೀಯ ಭಾಷಾ ಶಿಕ್ಷಕರ ನೆರವಿನಿಂದ ಮತ್ತು ಸುಧಾರಿತ ಮುದ್ರಣಾಲಯಗಳಿಂದ ಪ್ರತಿವರ್ಷ ೨೦,೦೦೦ ಪ್ರತಿಗಳಿಗೆ ಕಡಿಮೆ ಇಲ್ಲದಂತೆ ಧಾರ್ಮಿಕ ಸಾಹಿತ್ಯ ಹಾಗೂ ಇತರ ಭಾಷೆಗಳ ಕನ್ನಡ, ತುಳು, ಮಲಯಾಳಂ ಮತ್ತು ಇಂಗ್ಲಿಷ್ ಭಾಷೆಯ ಸಾಹಿತ್ಯವನ್ನು ಪ್ರಕಟಿಸಿದ್ದಾರೆ. ಇವುಗಳಲ್ಲಿ ಹೆಚ್ಚಿನವುಗಳನ್ನು ಸರಕಾರ ಅಂಗೀಕರಿಸಿ ಪಠ್ಯಪುಸ್ತಕಗಳಾಗಿ ಸಾರ್ವಜನಿಕ ಶಾಲೆಗಳಲ್ಲಿ ಪರಿಚಯಿಸಿದೆ."[೧೧೯] ಅವರ ಉತ್ಸಾಹ ಮತ್ತು ಅವರು ಹೊಂದಿದ ಯಶಸ್ಸಿನಿಂದ, ಯೇಸು ಸಭೆಯವರು ಮಂಗಳೂರಿನಲ್ಲಿ ಮಿಶನ್ ಸ್ಥಾಪಿಸಬೇಕೆನ್ನುವುದು ಮಂಗಳೂರಿನ ಕ್ರೈಸ್ತರ ಒತ್ತಾಯವಾಗಿದೆ. ಅದರಲ್ಲಿಯೂ ವಿಶೇಷವಾಗಿ ಉನ್ನತ ಶಿಕ್ಷಣವನ್ನು ಪ್ರಾರಂಭಿಸಲು ಅವರು ಕಾರ್ಮಲೈಟ್ ಧರ್ಮಗುರುಗಳಿಗಿಂತ ಹೆಚ್ಚು ಸಮರ್ಥರಾಗಿದ್ದಾರೆ. ಮಂಗಳೂರಿನಲ್ಲಿ ಹಾಗೂ ಇಡೀ ಜಿಲ್ಲೆಯಲ್ಲಿ ಕೂಡ ಉನ್ನತ ಶಿಕ್ಷಣಕ್ಕೆ ಹೆಚ್ಚಿನ ಅವಕಾಶ ಇರಲಿಲ್ಲ. ಆ ಕಾರಣಕ್ಕಾಗಿ ಯುವಜನತೆ ಮದ್ರಾಸ್ ಅಥವಾ ಮುಂಬೈಗೆ ಹೋಗಬೇಕಿತ್ತು. ಕಡೆಗೆ ಜಗದ್ಗುರುಗಳು ದಕ್ಷಿಣ ಕನ್ನಡ ಮತ್ತು ಮಲಬಾರನ್ನು ಯೇಸು ಸಭೆಗೆ ಒಪ್ಪಿಸಿದರು.[೧೨೦] ಯೇಸು ಸಭೆಯ ಸುಪೀರಿಯರ್ ಜನರಲ್ ಫಾ। ಬೆಕ್ಸ್‌ರವರು (Beckx) ಮಂಗಳೂರು ಮಿಶನನ್ನು ೧೮೭೮ರಲ್ಲಿ ಇಟಲಿಯ ವೆನಿಸ್ ಪ್ರಾಂತ್ಯಕ್ಕೆ ಒಪ್ಪಿಸಿದರು.[೧೨೧] ಮಂಗಳೂರು ಮಿಶನನ್ನು ೧೮೮೬ರಲ್ಲಿ ಯೇಸುಸಭೆಯ ನೇತೃತ್ವದಲ್ಲಿ ಪೂರ್ಣ ಪ್ರಮಾಣದ ಧರ್ಮಪ್ರಾಂತ್ಯವಾಗಿ ಪರಿವರ್ತಿಸಲಾಯಿತು. ಯೇಸು ಸಭೆಯವರು ಚರ್ಚುಗಳನ್ನು ನಿರ್ಮಿಸಿದರು, ಕೆಲವು ಶಾಲೆಗಳನ್ನು ಪ್ರಾರಂಭಿಸಿದರು ಮತ್ತು ಒಳನಾಡಿನ ಧರ್ಮಕೇಂದ್ರಗಳಲ್ಲಿ ಶಿಕ್ಷಣಕ್ಕೆ ಪ್ರೋತ್ಸಾಹವನ್ನು ನೀಡಿದರು. ಇವರ

ಮುಖಂಡತ್ವದಲ್ಲಿ ಕಥೋಲಿಕ ಚರ್ಚ್ ವಸಾಹತು ಆಡಳಿತ ಅವರ ಜನರಿಗಾಗಿ ಒದಗಿಸಿದ ಸೌಲಭ್ಯಗಳನ್ನು ಬಳಸಿಕೊಂಡಿತು.

೧೮೭೮ ಫಾ। ಅಂಜೆಲೊ ಮುಟ್ಟಿ, ಫಾ। ಅಂಜೆಲೊ ಮಾಫ್ಫೈ, ಫಾ।ಅಗಸ್ಟಸ್ ಮುಲ್ಲರ್, ಫಾ। ಕ್ವಿಂಟಿನ್ ಸಾನಿ, ಬ್ರ। ಫ್ರಾನ್ಸಿಸ್ ಝುಂಬೋನಿ ಮತ್ತು ಬ್ರ। ಮ್ಯಾಥ್ಯೂ ಮೆನೆಘೆಟ್ಟಿ ಅವರನ್ನೊಳಗೊಂಡ ೬ ಸದಸ್ಯರ ಮೊದಲ ತಂಡ ಇಟಲಿಯಿಂದ ಹೊರಟು ೩೧ ಡಿಸೆಂಬರ್ ೧೮೭೮ರಂದು ಮಂಗಳೂರನ್ನು ತಲುಪಿತು. ಬಾಂಬೆ ಯೇಸು ಸಭೆಯ ಫಾ। ಉರ್ಬನ್ ಸ್ಟೈನ್ ಮತ್ತು ಫಾ। ಓರೋ ಅರ್ಲ್ ಅವರೂ ಕೂಡಿ ಕೊಂಡರು. ಬಾಂಬೆ ಮಿಶನ್ನಿನಿಂದ ಫಾ। ಜೋಸೆಫ್ ವಿಲ್ಲಿ ಮತ್ತು ಫಾ। ಪೋಸ್ಟಲ್ ವೈಟ್ ಎಂಬವರನ್ನು, ಹೊಸ ಧರ್ಮಗುರುಗಳಿಗೆ ನೆರವು ನೀಡಲು ಮಂಗಳೂರಿಗೆ ಕಳುಹಿಸಿಕೊಟ್ಟರು.[೧೨೨]

ಫಾ। ಜೋಸೆಪ್ ವಿಲ್ಲಿ ಅವರು ಸೈಂಟ್ ಅಲೋಸಿಯಸ್ ಮಹಾವಿದ್ಯಾಲಯವನ್ನು ೧೨ ಜನವರಿ ೧೮೮೦ರಂದು ಆರಂಭಿಸಿದರು.[೧೨೩] ಪ್ರಾರಂಭದ ದಿನಗಳಲ್ಲಿ ಕೊಡಿಯಾಲ್‌ಬೈಲಿನ ಬಿಷಪರ ನಿವಾಸದ ಎದುರುಗಡೆ ಇದ್ದ ಮೇರಿ ಮಗ್ದಲಿನ್ ಕೊಯಿಲೊ ಅವರ ಬಂಗ್ಲೆಯಲ್ಲಿ ಹಿರಿಯ ಮಾಧ್ಯಮಿಕ ನಾಲ್ಕು ಮತ್ತು ಐದನೇ ತರಗತಿಗಳನ್ನು ನಡೆಸಲಾಗಿದೆ. ಬಂಗ್ಲೆಯ ಮುಂದೆ ಹಾಕಲಾದ ಚಪ್ಪರದಲ್ಲಿ ಕಿರಿಯ ಮಾಧ್ಯಮಿಕ ನಾಲ್ಕನೇ ತರಗತಿಯನ್ನು ನಡೆಸಿದ್ದಾರೆ. ೧೮೮೧ರಲ್ಲಿ ಕೊಡಿಯಾಲ್‌ಬೈಲ್ ಮುದ್ರಣಾಲಯದ ಭಾಗವಾಗಿರುವ ಹೊಸ ಕಟ್ಟಡದಲ್ಲಿ ಮೆಟ್ರಿಕ್ ತರಗತಿಯನ್ನು ಪ್ರಾರಂಭಿಸಲಾಗಿದೆ.[೧೨೪] ಯೇಸು ಸಭೆಯ ಮಿಶನರಿಗಳು ವಿದ್ಯಾರ್ಥಿಗಳ ಧಾರ್ಮಿಕ ಮತ್ತು ಲೌಕಿಕ ಒಳಿತಿಗಾಗಿ ಸಾಕಷ್ಟು ಕಾಳಜಿ ವಹಿಸಿದರು. ಆದುದರಿಂದಲೇ, ಕಾಲೇಜು ಪ್ರಾರಂಭವಾದ ವರ್ಷ ಅವರು ಮೆಟ್ರಿಕ್ಯೂಲೇಷನ್ ತರಗತಿಗಳನ್ನು ಪ್ರಾರಂಭಿಸಲಿಲ್ಲ, ಬದಲಾಗಿ ಮೆಟ್ರಿಕ್ಯೂಲೇಷನ್ ಹಿಂದಿನ ಮೂರು ತರಗತಿಗಳನ್ನು (ಕಿರಿಯ ಮಾಧ್ಯಮಿಕ IV, ಹಿರಿಯ ಮಾಧ್ಯಮಿಕ IV, ಹಾಗೂ V) ಆರಂಭಿಸಿದರು . ಮಿಶನರಿಗಳ ಅನಿಸಿಕೆ ಏನೆಂದರೆ: "ಭಾರತೀಯ ಪರೀಕ್ಷಾ ಕ್ರಮದ ಬಗ್ಗೆ ಸ್ಪಷ್ಟ ಅನುಭವ ಇಲ್ಲದೆ ಮೆಟ್ರಿಕ್ಯೂಲೇಷನ್ ಪ್ರಾರಂಭಿಸಿದರೆ ವಿದ್ಯಾರ್ಥಿಯ ಭವಿಷ್ಯದ ಮೇಲೆ ದುಷ್ಪರಿಣಾಮ ಬೀರಬಹುದು" ಎಂಬುದಾಗಿದೆ. ಅಲ್ಲದೆ, ಯೇಸು ಸಭೆಯ ಗುರುಗಳು ನಿಯಮಿತ ಹಾಜರಿ, ಉತ್ತಮ ನಡತೆ ಮತ್ತು ಕಲಿಕೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳುವುದನ್ನು ವಿದ್ಯಾರ್ಥಿಗಳಿಂದ ಬಯಸಿದ್ದರು. ಆದರೆ, ತಪ್ಪದೆ ವಿದ್ಯಾರ್ಥಿಗಳು ಶಾಲೆಗೆ ಬರುವುದು ಆ ಕಾಲದಲ್ಲಿ ಸುಲಭದ ಕೆಲಸವಾಗಿರಲಿಲ್ಲ. ಫಾ. ಕೆವಾದಿನಿಯವರು, ಕಾಲೇಜಿನ ಮೊದಲ ವಾರ್ಷಿಕ ವರದಿಯಲ್ಲಿ (೧೮೮೫-೧೮೮೬) ಇದನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ. ಅವರ ಪ್ರಕಾರ ಶಾಲೆಗೆ ನಿಯಮಿತವಾಗಿ ಬಾರದಿರುವ ಬಗ್ಗೆ ಇನ್ನೂ ಹಲವಾರು ದೂರುಗಳಿವೆ ಎಂಬುದು. ಕಾಲೇಜಿಗೆ ತಪ್ಪದೆ ಪ್ರತಿನಿತ್ಯ ಬರುವಂತೆ ಮಾಡುವ ನಿಯಮ ಹಾಗೂ ಕಟ್ಟುನಿಟ್ಟಾದ ಶಿಸ್ತನ್ನು ಕಾಲೇಜಿನಲ್ಲಿ ಅಳವಡಿಸಿದುದ್ದರ

ಫಲವಾಗಿ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಇಳಿಮುಖವಾಯಿತು. ಫಾ। ಕೆವಾದಿನಿಯವರು ಕಾಲೇಜಿನ ಎರಡನೇ ವಾರ್ಷಿಕ ವರದಿಯಲ್ಲಿ ಹೀಗೆ ಬರೆಯುತ್ತಾರೆ: " ಕೆಲವರನ್ನು ಪ್ರತಿನಿತ್ಯ ಕಾಲೇಜಿಗೆ ಬಾರದಿರುವ ಕಾರಣಕ್ಕಾಗಿ ವಜಾ ಮಾಡಲಾಗಿದೆ, ಇತರರು ಬಿಟ್ಟು ಹೋಗಿರುತ್ತಾರೆ. ಬಿಟ್ಟು ಹೋಗಿರುವಂತಹವರು ಒಂದು ಕಾಲೇಜಿನಿಂದ ಇನ್ನೊಂದು ಕಾಲೇಜಿಗೆ ಓಡಾಡಿಕೊಂಡಿರುವ ಕಟ್ಟುನಿಟ್ಟಾದ ಶಿಸ್ತನ್ನು ಬಯಸದ ಪರ್ಯಟಣಿಗ ವಿದ್ಯಾರ್ಥಿಗಳು.[೧೨೫] ಈ ರೀತಿಯ ಕಟ್ಟುನಿಟ್ಟಿನ ಕ್ರಮಗಳು ಮುಂದೆ ಸಾಕಷ್ಟು ಫಲ ನೀಡಿತು. ಕಾಲಕ್ರಮೇಣ ವಿದ್ಯಾರ್ಥಿಗಳು ಪರಿಸ್ಥಿತಿಗೆ ಹೊಂದಿಕೊಂಡು ದಿನನಿತ್ಯ ಕಾಲೇಜಿಗೆ ಬರುವ ಪದ್ಧತಿ ರೂಢಿಯಾಯಿತು.

ಮಹಾವಿದ್ಯಾಲಯದ ಕಟ್ಟಡವನ್ನು ಇಡ್ಯಾ ಗುಡ್ಡದಲ್ಲಿ ಲಾರೆನ್ಸ್ ಲೋಬೋ ಪ್ರಭು ಅವರು ದಾನವಾಗಿ ನೀಡಿದ ನಿವೇಶನದಲ್ಲಿ ಫಾ। ಮುಟ್ಟಿಯವರು ವಿನ್ಯಾಸಗೊಳಿಸಿದ್ದಾರೆ.[೧೨೬] ಮದ್ರಾಸಿನ ಗವರ್ನರ್ ಮೌಂಟ್ ಸ್ಟುವರ್ಟ್ ಎಲ್ಫಿನ್‌ಸ್ಟನ್ ರವರು ಕಾಲೇಜಿಗೆ ಭೇಟಿ ನೀಡಿದ್ದಾಗ ಓದಿದ ವರದಿಯ ಕೆಲವು ಭಾಗಗಳು ಆ ಕಾಲದಲ್ಲಿ ಕಾಲೇಜಿನ ಸ್ಥಿತಿ ಹೇಗಿತ್ತು ಎಂಬುದರ ಮಾಹಿತಿಯನ್ನು ನೀಡುತ್ತದೆ: "ಮಹಾಪ್ರಭುಗಳಿಗೆ ತಿಳಿದಿರುವಂತೆ, ಇಂಗ್ಲಿಷ್ ಸರಕಾರವು ಎಲ್ಲಾ ಕಾಲೇಜುಗಳು ಮತ್ತು ಶಾಲೆಗಳಿಗೆ ತಮ್ಮ ವಿದ್ಯಾರ್ಥಿಗಳಿಗೆ ಸೂಕ್ತ ರೀತಿಯ ಸೌಲಭ್ಯವನ್ನು ಒದಗಿಸುವುದು ಅತ್ಯಂತ ಅಗತ್ಯ ಎಂಬುದಾಗಿ ಪದೇ ಪದೇ ತಿಳಿಸುತ್ತಾ ಬಂದಿದೆ. ಇದನ್ನು ಚೆನ್ನಾಗಿ ತಿಳಿದುಕೊಂಡು ಮತ್ತು ನಿರಂತರವಾಗಿ ಹರಿದು ಬರುತ್ತಿರುವ ಹೊಸ ವಿದ್ಯಾರ್ಥಿಗಳನ್ನು ಗಮನದಲ್ಲಿ ಇಟ್ಟುಕೊಂಡು ನಮ್ಮ ಹಿರಿಯರು ಖಾಸಗಿ ಬಂಗಲೆಗಳ ವರಾಂಡಗಳಿಗಿಂತ ಹೆಚ್ಚು ಸೌಕರ್ಯವುಳ್ಳ ಜಾಗವನ್ನು ಒದಗಿಸುವುದಕ್ಕೆ ಪ್ರಯತ್ನವನ್ನು ನಡೆಸಿದ್ದಾರೆ...... ಇದು ಸದ್ಯದ ಮತ್ತು ಭವಿಷ್ಯದ ಜನಾಂಗಗಳಿಗೆ ವರವಾಗಿ ಪರಿಣಮಿಸುವುದಲ್ಲದೆ ತಮ್ಮ ಆಡಳಿತದ ಶಾಶ್ವತ ಸ್ಮಾರಕವಾಗಿ ಉಳಿಯಲಿದೆ".[೧೨೭] ೧೮೮೨ರಲ್ಲಿ ಮಹಾವಿದ್ಯಾಲಯವನ್ನು ಮೊದಲು ಎರಡನೆಯ ದರ್ಜೆಯ ಮಹಾವಿದ್ಯಾಲಯವಾಗಿ, ಮದ್ರಾಸ್ ವಿಶ್ವವಿದ್ಯಾಲಯಕ್ಕೆ ಸೇರಿಸಲಾಗಿದೆ.[೧೨೮] ೧೮೮೭ರಲ್ಲಿ ಸೈಂಟ್ ಅಲೋಶಿಯಸ್ ಕಾಲೇಜು ಉನ್ನತೀಕರಿಸಲ್ಪಟ್ಟು ಪ್ರಥಮ ದರ್ಜೆ ಕಾಲೇಜಾಗಿದೆ. ೧೮೯೨ರಲ್ಲಿ ಮದ್ರಾಸ್ ಸರಕಾರ, ಫಾ। ಮಾಫ್ಯೆಯವರನ್ನು ಮದ್ರಾಸ್ ವಿಶ್ವವಿದ್ಯಾಲಯದ ಫೆಲೋ ಆಗಿ ನೇಮಕ ಮಾಡಿದೆ. ೧೮೯೬ರಲ್ಲಿ ಯೇಸುಸಭೆಯವರ ಧಾರ್ಮಿಕ ಪದವಿಯನ್ನು ಪರಿಗಣಿಸಿ ಕಾಲೇಜಿನಲ್ಲಿ ಬೋಧಿಸಲು ಅರ್ಹರೆಂದು ಮದ್ರಾಸ್ ಸರ್ಕಾರ ಆಜ್ಞೆಯನ್ನು ಹೊರಡಿಸಿದೆ. ೧೯೨೫ರವರೆಗೆ ಪಶ್ಚಿಮ ಕರಾವಳಿಯಲ್ಲಿದ್ದ ಪ್ರಥಮ ದರ್ಜೆ ಮಹಾವಿದ್ಯಾಲಯಗಳೆಂದರೆ ಮಂಗಳೂರಿನ ಸೈಂಟ್ ಅಲೋಶಿಯಸ್ ಮಹಾವಿದ್ಯಾಲಯ ಮತ್ತು ತಿರುವನಂತಪುರದ ಮಹಾರಾಜಾಸ್ ಕಾಲೇಜು ಮಾತ್ರ. ಈ ವಾಸ್ತವ ಸ್ಥಿತಿ ಮತ್ತು ಕಾಲೇಜಿನ ಜನಪ್ರಿಯತೆ ಮಲಬಾರ್, ಕೊಡಗು ಮತ್ತು ಇತರ ನೆರೆಯ ಜಿಲ್ಲೆಗಳ ವಿದ್ಯಾರ್ಥಿಗಳನ್ನು

ಆಕರ್ಷಿಸಿದೆ. ಈ ವಿದ್ಯಾರ್ಥಿಗಳಿಗೆ ವಸತಿ ಸೌಲಭ್ಯವನ್ನು ಕಲ್ಪಿಸುವುದಕ್ಕಾಗಿ ವಸತಿ ಗೃಹ ಮತ್ತು ವಿದ್ಯಾರ್ಥಿ ನಿಲಯಗಳನ್ನು ೧೯೦೭ರಲ್ಲಿ ನಿರ್ಮಿಸಲಾಗಿದೆ.[೧೨೯]

೧೯೩೭ರಲ್ಲಿ ಬ್ಯಾಂಕಿಂಗ್ ಮತ್ತು ವಾಣಿಜ್ಯ ವಿಷಯದಲ್ಲಿ ಸ್ನಾತಕೋತ್ತರ ಪದವಿ (ಡಿಪ್ಲೋಮ), ೧೯೬೩ರಲ್ಲಿ ಸೈಂಟ್ ಅಲೋಶಿಯಸ್ ಸಂಧ್ಯಾ ಪ್ರೌಢಶಾಲೆ ಮತ್ತು ೧೯೬೬ರಲ್ಲಿ ಸೈಂಟ್ ಅಲೋಶಿಯಸ್ ಸಂಧ್ಯಾ ಕಾಲೇಜನ್ನು ಆರಂಭಿಸಲಾಗಿದೆ. ೧೯೬೭ರಲ್ಲಿ ಸಂಧ್ಯಾ ಕಾಲೇಜಿಗೆ ಮೊದಲ ಮಹಿಳಾ ವಿದ್ಯಾರ್ಥಿಯನ್ನು ಸೇರಿಸಿಕೊಳ್ಳಲಾಗಿದೆ. ಕಾಲೇಜಿನ ಇತಿಹಾಸದಲ್ಲಿ ಮೊತ್ತ ಮೊದಲ ಬಾರಿಗೆ ೧೯೭೮ರಲ್ಲಿ ಹೈಸ್ಕೂಲು ವಿಭಾಗಕ್ಕೆ ಶಿಕ್ಷಕಿಯನ್ನು ನೇಮಿಸಿಕೊಳ್ಳಲಾಗಿದೆ. ೧೯೮೧ರಲ್ಲಿ ಸೈಂಟ್ ಅಲೋಶಿಯಸ್ ಕೈಗಾರಿಕಾ ತರಬೇತಿ ಕೇಂದ್ರ ಆರಂಭಗೊಂಡಿದೆ. ೧೯೮೫ರಲ್ಲಿ ಸೈಂಟ್ ಅಲೋಶಿಯಸ್ ಸಂಧ್ಯಾ ಕಾಲೇಜಿಗೆ ಪ್ರಥಮ ಮಹಿಳಾ ಪ್ರಾಂಶುಪಾಲರ ನೇಮಕವಾಗಿದೆ. [೧೩೦] ಅಂತೆಯೇ,ಇಂದಿರಾ ಗಾಂಧಿ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯದ ಅಧ್ಯಯನ ಕೇಂದ್ರವನ್ನು ಸ್ಥಾಪಿಸಿ, ಉನ್ನತ ಶಿಕ್ಷಣದ ಅವಕಾಶದಿಂದ ವಂಚಿತರಾದ ಗೃಹಿಣಿಯರಿಗೆ ಮತ್ತು ಗ್ರಾಮೀಣ ಪ್ರದೇಶದ ನಿವಾಸಿಗಳಿಗೆ ಪ್ರಯೋಜನ ಮಾಡಿಕೊಟ್ಟಿದ್ದಾರೆ.[೧೩೧] ೧೮೮೦ರಲ್ಲಿ ೧೬೨ ವಿದ್ಯಾರ್ಥಿಗಳು ಹಾಗೂ ೨ ಅಧ್ಯಾಪಕರನ್ನೊಳಗೊಂಡಿದ್ದ ಕಾಲೇಜು, ೧೯೮೦ರಲ್ಲಿ ೪೫೯೧ ವಿದ್ಯಾರ್ಥಿಗಳು ಹಾಗೂ ೧೪೮ ಶಿಕ್ಷಕರನ್ನು ಹೊಂದಿದೆ.[೧೩೨](ಹೆಚ್ಚಿನ ವಿವರಗಳಿಗೆ ಅನುಬಂಧ ೩ನ್ನು ಪರಾಮರ್ಶಿಸಿ)

ಜಿಲ್ಲೆಯ ಉನ್ನತ ಶಿಕ್ಷಣದ ಪ್ರಗತಿಗೆ ಸೈಂಟ್ ಅಲೋಶಿಯಸ್ ಕಾಲೇಜಿನ ಕೊಡುಗೆ ವಿಶಿಷ್ಟವಾಗಿದೆ. ಮಣಿಪಾಲ ಅಕಾಡೆಮಿ ಆಫ್ ಜನರಲ್ ಎಜುಕೇಷನ್‌ನ ಬುಲೆಟಿನ್ (ಪ್ರಕಟನೆ)ಯೊಂದರಲ್ಲಿ ಹೀಗೆ ಬರೆಯಲಾಗಿದೆ, "ಡಾ.ಪೈಯವರಿಗೆ, ಮಿಶನರಿಗಳ ಶೈಕ್ಷಣಿಕ ಚಟುವಟಿಕೆಗಳು ಸ್ಫೂರ್ತಿಯಾಗಿದ್ದವು; ಮತ್ತು ಇವತ್ತೂ ಅವರ ಸಂಸ್ಥೆಯ ವ್ಯವಸ್ಥಾಪಕರು ಹಾಗೂ ಉಪಾಧ್ಯಾಯರು ಜಿಲ್ಲೆಯ ಮೊದಲ ಪ್ರಥಮ ದರ್ಜೆ ಕಾಲೇಜಾದ ಸಂತ ಅಲೋಶಿಯಸ್‌ನ್ನು ಶೈಕ್ಷಣಿಕ ಗುಣಮಟ್ಟಕ್ಕಾಗಿ ಮತ್ತು ಶಿಸ್ತಿಗಾಗಿ ಹೊಗಳುವುದು ಮಾತ್ರವಲ್ಲದೆ ಮಾದರಿಯಾಗಿ ಪರಿಗಣಿಸುತ್ತಾರೆ. ಪ್ರತಿಯೊಂದು ಕಾಲೇಜೂ ಅದರದೇ ಆದ ವೈಶಿಷ್ಟ್ಯತೆಯನ್ನು ಹೊಂದಿದ್ದರೂ, ರಹಸ್ಯವಾಗಿ ಸಂತ ಅಲೋಶಿಯಸ್ ಕಾಲೇಜಿನೊಂದಿಗೆ ಹೋಲಿಸಿಕೊಳ್ಳಲು ಬಯಸುತ್ತದೆ.[೧೩೩] ಕಾಲೇಜಿನ ಖ್ಯಾತಿಗೆ ಕೈಗನ್ನಡಿಯಾಗಿ 'ದ ಲಿಟ್ಲ್ ಮ್ಯಾನ್' ಎಂಬ ಸಂತ ಅಲೋಶಿಯಸ್ ಪ್ರೌಢಶಾಲೆಯ ವಾರ್ಷಿಕ ಪುರವಣಿಯಲ್ಲಿ ವಿದ್ಯಾರ್ಥಿಯೊಬ್ಬ ಬರೆದಿರುವ ಲೇಖನ ಸಾಕ್ಷಿಯಾಗಿದೆ. ಅವನ ಪ್ರಕಾರ, "ಶ್ರೀಲಂಕಾದಲ್ಲಿ ಪ್ರವೇಶ ಪರೀಕ್ಷೆ ಇಲ್ಲದೆ ವೈದ್ಯಕೀಯ ಕಾಲೇಜಿಗೆ ಸೈಂಟ್ ಅಲೋಶಿಯಸ್ ಕಾಲೇಜಿನ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುತ್ತಿದ್ದರು; ಆದರೆ ತಮ್ಮದೇ ದೇಶದ ಹಾಗೂ ಇತರ ವಿದ್ಯಾರ್ಥಿಗಳು ಈ

ಪರೀಕ್ಷೆಯನ್ನು ತೆಗೆದುಕೊಳ್ಳಬೇಕಿತ್ತು.[೧೩೪] ಆದರೆ ೧೯ನೇ ಶತಮಾನದ ಪ್ರಾರಂಭದಲ್ಲಿ ಶಿಕ್ಷಣವು ಎಲ್ಲರಿಗೂ ಲಭ್ಯವಿರಲಿಲ್ಲ. ಗ್ರಾಮೀಣ ಪ್ರದೇಶಗಳ ಕ್ರೈಸ್ತರು ನಗರದಲ್ಲಿ ಲಭ್ಯವಿರುವ ಉನ್ನತ ಶಿಕ್ಷಣದ ಲಾಭವನ್ನು ಪಡೆಯುವ ಸ್ಥಿತಿಯಲ್ಲಿರಲಿಲ್ಲ. ಜಿಲ್ಲೆಯ ಒಳಭಾಗಗಳಲ್ಲಿ ಸಾರಿಗೆ ವ್ಯವಸ್ಥೆಯ ಅನುಪಸ್ಥಿತಿಯಲ್ಲಿ ಶಾಲೆಗಳ ಅಂತರ, ದೂರದ ಶಾಲೆಗಳಿಗೆ ಮಕ್ಕಳನ್ನು ಕಳುಹಿಸಲು ಹೆದರಿಕೊಳ್ಳುವುದು, ಮನೆಯಲ್ಲಿರುವ ದೊಡ್ಡ ಸಂಖ್ಯೆಯ ಮಕ್ಕಳಿಂದ ಮನೆಗೆಲಸ ಮಾಡಿಸಿಕೊಳ್ಳುವುದು, ಶಿಕ್ಷಣದ ಅನುಕೂಲತೆಯ ಕುರಿತು ಅರಿವಿಲ್ಲದಿರುವುದು ಇತ್ಯಾದಿಗಳು ಆ ಕಾಲದ ಶಿಕ್ಷಣದ ಮಂದಗತಿಯ ಪ್ರಗತಿಗೆ ಕೆಲವು ಕಾರಣಗಳು. ಹಳ್ಳಿಗಳಲ್ಲಿ ಉನ್ನತ ಶಿಕ್ಷಣದ ಅನುಕೂಲತೆಗಳನ್ನು ಬಳಸಿಕೊಂಡವರು ಭೂಮಾಲಿಕ ವರ್ಗದವರು ಮಾತ್ರ. ಈ ಪರಿಸ್ಥಿತಿಯಲ್ಲಿ ಕ್ರೈಸ್ತ ಸಮುದಾಯವು ಎರಡು ಕವಲುಗಳಾಗಿ ವಿಭಜಿಸಲ್ಪಟ್ಟಿತು. ಅವುಗಳೆಂದರೆ ಶ್ರೀಮಂತ ಮತ್ತು ಬಡವ, ನಗರವಾಸಿಗಳು ಮತ್ತು ಗ್ರಾಮವಾಸಿಗಳು, ಸುಶಿಕ್ಷಿತರು ಮತ್ತು ಅನಕ್ಷರಸ್ಥರು, ಇಂಗ್ಲಿಷ್ ಮಾತನಾಡುವವರು ಮತ್ತು ಕೊಂಕಣಿ ಮಾತನಾಡುವವರು. ಬಡವರು ಸಾಮಾನ್ಯವಾಗಿ ಹಳ್ಳಿಯಲ್ಲಿರುತ್ತಿದ್ದರು. ಶ್ರೀಮಂತರು ಮಂಗಳೂರಿನಂತಹ ನಗರದಲ್ಲಿ. ಹೀಗೆ, ವಿಶಾಂರ್ಝ್ ಪಿಂಟೋರವರು, ಪಾಶ್ಚಾತ್ಯ ಶಿಕ್ಷಣ ಮತ್ತು ಸರಕಾರಿ ಸೇವೆಗಳ ಲಭ್ಯತೆಯು ಕಥೋಲಿಕ ಸಮಯದಾಯವನ್ನು ವಿಭಜಿಸಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.[೧೩೫]

ಸಂತ ಅಲೋಶಿಯಸ್ ಕಾಲೇಜು ಉನ್ನತ ಶಿಕ್ಷಣದ ಅವಕಾಶವನ್ನು ಕಥೋಲಿಕರಿಗೆ ಮತ್ತು ಇತರಿಗೆ ನೀಡಲು ಸ್ಥಾಪಿಸಲ್ಪಟ್ಟ ಶಿಕ್ಷಣ ಸಂಸ್ಥೆಯಾಗಿದೆ. ಸಾರಿಗೆ ವ್ಯವಸ್ಥೆ ಅಷ್ಟೇನೂ ಸುಧಾರಣೆಯಾಗದಿದ್ದ ಆ ದಿನಗಳಲ್ಲಿ ದೂರದ ಊರುಗಳಿಗೆ ವಿದ್ಯಾಭ್ಯಾಸಕ್ಕಾಗಿ ಹೋಗುವುದು ಸಾಹಸ ಕಾರ್ಯವೇ ಆಗಿತ್ತು. ಹೀಗಿರುವಾಗ ತಮ್ಮ ಜಿಲ್ಲೆಯಲ್ಲಿಯೇ ಉತ್ತಮ ಗುಣಮಟ್ಟದ ಶಿಕ್ಷಣ ನೀಡುವ ಪ್ರಥಮ ದರ್ಜೆ ಕಾಲೇಜೊಂದು (ಗವರ್ನಮೆಂಟ್ ಕಾಲೇಜು[೧೩೬] ಅಸ್ತಿತ್ವದಲ್ಲಿದ್ದರೂ ಅದು ದ್ವಿತೀಯ ದರ್ಜೆ ಕಾಲೇಜಾಗಿತ್ತು) ಸ್ಥಾಪನೆಯಾದದ್ದು ಉನ್ನತ ಶಿಕ್ಷಣ ಪಡೆಯಬಯಸುವ ವಿದ್ಯಾರ್ಥಿಗಳಿಗೆ ಸುವರ್ಣ ಅವಕಾಶವನ್ನು ಕಲ್ಪಿಸಿ ಕೊಟ್ಟಿದೆ. ಜಿಲ್ಲೆಯಲ್ಲಿ ಉಂಟಾದ ಉನ್ನತ ಶಿಕ್ಷಣ ಕ್ರಾಂತಿಯ ಬೀಜಾಂಕುರ ಅಲೋಶಿಯಸ್ ಕಾಲೇಜಿನಲ್ಲಿಯೇ ಉಂಟಾಯಿತೆಂದರೆ ತಪ್ಪಾಗಲಿಕ್ಕಿಲ್ಲ. ಏಕೆಂದರೆ ಇಲ್ಲಿ ವಿದ್ಯಾಭ್ಯಾಸ ನಡೆಸಿದ ವಿದ್ಯಾರ್ಥಿಗಳೇ ಮುಂದೆ ಜಿಲ್ಲೆಯಾದ್ಯಂತ ಹೆಸರುವಾಸಿಯಾದ ಶಿಕ್ಷಣ ಸಂಸ್ಥೆಗಳ ಜನಕರಾದರು, ಮಾತ್ರವಲ್ಲದೆ ಪ್ರಪಂಚದಾದ್ಯಂತ ಹರಡಿಕೊಂಡು ದೇಶಕ್ಕೆ ಹಾಗೂ ತಾವು ಕಲಿತ ಮಾತೃ ಸಂಸ್ಥೆಗೆ ಕೀರ್ತಿ ತರುತ್ತಿದ್ದಾರೆ.

## ೨.೮.ಸ್ಯೆಂಟ್ ಜೋಸೆಪ್ಸ್ ಇಂಟರ್-ಡಯಾಸಿಸನ್ ಸೆಮಿನರಿ

ಧರ್ಮಾಧ್ಯಕ್ಷರುಗಳಾದ ಪೂಜ್ಯ ಪಾಗಾನಿ, ಕೆವಾದಿನಿ ಮತ್ತು ಪೆರಿನಿಯವರು ಮಂಗಳೂರು ಧರ್ಮಪ್ರಾಂತ್ಯವನ್ನು ಆದಷ್ಟು ಬೇಗ ದೇಶೀಯ ಧರ್ಮಗುರುಗಳ ಕೈಗೆ ಹಸ್ತಾಂತರಿಸಲು ಬೇಕಾದ ಎಲ್ಲಾ ಸಿದ್ಧತೆಗಳನ್ನು ಕಾಲಕಾಲಕ್ಕೆ ಮಾಡಿದ್ದಾರೆ. ಅಂತಹ ಕಾರ್ಯಗಳಲ್ಲಿ ಸೆಮಿನರಿ ಸ್ಥಾಪನೆ ಮತ್ತು ದೇಶೀಯ ಧರ್ಮಗುರುಗಳ ತರಬೇತಿ ಅತೀ ಮುಖ್ಯವಾಗಿವೆ. ಕೆನರಾ ಜಿಲ್ಲೆಯ ಮೊತ್ತಮೊದಲ ಗುರುಮಂದಿರವನ್ನು ಫರಂಗಿಪೇಟೆಯ ಮೊಂಟೆ ಮರಿಯಾನೊದಲ್ಲಿ (Monte Mariano) ಗೋವಾದ ಕಾರ್ಮೆಲೈಟ್ ಫಾ। ಜೋಕಿಂ ಮಿರಾಂದರವರು ಸುಮಾರು ೧೭೬೩ ಮತ್ತು ೧೭೭೮ರ ನಡುವೆ ಆರಂಭಿಸಿದರು. ಆದರೆ ಟಿಪ್ಪು ಸುಲ್ತಾನನ ವಿರುದ್ಧ ಕೆನರಾ ಕ್ರೈಸ್ತರು ಬ್ರಿಟಿಷರಿಗೆ ಸಹಾಯ ನೀಡಿದರೆಂಬ ಕಾರಣಕ್ಕಾಗಿ 'ಕೆನರಾ ಬಂಧನ'ದ ಮೊದಲು ಫಾ। ಮಿರಾಂದ ಮತ್ತು ಗುರುಮಂದಿರದ ಅಭ್ಯರ್ಥಿಗಳೆಲ್ಲರನ್ನು ಕೇರಳಕ್ಕೆ ಗಡಿಪಾರು ಮಾಡಿದನು. ಅನಂತರ ೬೦ ವರ್ಷಗಳ ಕಾಲ ಕನ್ನಡ ಜಿಲ್ಲೆಯಲ್ಲಿನ ಸೆಮಿನರಿ ಕಾರ್ಯಗಳ ಬಗ್ಗೆ ಯಾವುದೇ ಮಾಹಿತಿ ದೊರಕುವುದಿಲ್ಲ. ೧೮೪೩ರ ಸುಮಾರಿಗೆ ಫಾ। ಪಿಯೂಸ್ ನೊರೋನ್ಹಾ ಅವರು ಮೊಂಟೆ ಮರಿಯಾನೊ ಸೆಮಿನರಿಯ ರೆಕ್ಟರ್ ಆದರು.[೧೩೭] ಮಂಗಳೂರಿನ ಪ್ರಥಮ ಪ್ರೊ-ವಿಕಾರ್ ಅಪೋಸ್ತಲಿಕ್ ಬರ್ನಾರ್ಡಿನ್‌ರವರು ಬೋಳಾರದಲ್ಲಿದ್ದ ಬಿಷಪರ ನಿವಾಸದಲ್ಲಿಯೇ ಧರ್ಮಗುರುಗಳಿಗೆ ತರಬೇತಿಯನ್ನು ನೀಡಲಾರಂಭಿಸಿದರು. ಆ ಬಳಿಕ ಸೆಮಿನರಿಯನ್ನು ಕಾರವಾರದ ಸಂಕೇರಿಗೆ ವರ್ಗಾಯಿಸಲಾಗಿದೆ. ಮುಂದೆ ಅಪೋಸ್ತಲಿಕ್ ವಿಕಾರ್‌ಮೈಕಲ್ ಆ್ಯಂಟನಿಯವರು ಸೆಮಿನರಿಯನ್ನು ಮತ್ತೊಮ್ಮೆ ಮೊಂಟೆ ಮರಿಯಾನೊಗೆ ಸ್ಥಳಾಂತರಿಸಿದರು. ೧೮೭೦ರಲ್ಲಿ ಕೆನರಾದಲ್ಲಿ ೩೪ ಧರ್ಮಗುರುಗಳು ಹಾಗೂ ೧೨ ಅಭ್ಯರ್ಥಿಗಳಿದ್ದರು. ಹಿಂದೆ ಬಿಷಪರ ನಿವಾಸ ಮತ್ತು ಸೆಮಿನರಿ ಜೆಪ್ಪುವಿನಲ್ಲಿತ್ತು. ಆದರೆ, ಬಿಷಪ್ ಪಾಗಾನಿಯವರು ತಮ್ಮ ನಿವಾಸವನ್ನು ಕೊಡಿಯಾಲ್‌ಬೈಲಿಗೆ ಸ್ಥಳಾಂತರಿಸಿ ಸೆಮಿನರಿಯನ್ನು ಶಾಶ್ವತವಾಗಿ ಜೆಪ್ಪುವಿನಲ್ಲಿ ಉಳಿಸಿಕೊಂಡರು. ಯೇಸು ಸಭೆಯವರು ಧರ್ಮಗುರುಗಳಿಗೆ ಸೆಮಿನರಿಯ ಮೂಲಕ ತರಬೇತಿಯನ್ನು ನೀಡಿದರು. ಧರ್ಮಪ್ರಾಂತ್ಯದಲ್ಲಿರುವ ಸೆಮಿನರಿಯು ಪಾದ್ರಿಗಳ ಸಂಖ್ಯೆಯನ್ನು ಹೆಚ್ಚಿಸಿತು. ಇದು ಜಿಲ್ಲೆಯಲ್ಲಿ ಹೆಚ್ಚು ಧರ್ಮಕೇಂದ್ರಗಳ ಸ್ಥಾಪನೆಗೆ ದಾರಿ ಮಾಡಿಕೊಟ್ಟಿತು. ನಂತರ ಪ್ರತಿಯೊಂದು ಧರ್ಮಕೇಂದ್ರದಲ್ಲಿ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಲಾಯಿತು. ಧರ್ಮಪ್ರಾಂತ್ಯದ ಅಧಿಕಾರವನ್ನು ಪಡೆದುಕೊಂಡ ನಂತರ ಯೇಸು ಸಭೆಯವರು ಧರ್ಮ ಪರಿವರ್ತನೆಯ ಕಾರ್ಯವನ್ನು ಮುಂದುವರಿಸಿದರು. ಅವರು ಮತಪ್ರಸಾರದ ತಮ್ಮ ಕಾರ್ಯಕ್ಕಾಗಿ ಕಾರ್ಕಳದ ಸಮೀಪದ ನರೋಲ್, ಮಂಜೇಶ್ವರದ ಹತ್ತಿರ ಪಾವೂರು, ಪುತ್ತೂರಿನ ಕೊಕ್ಕಡ ಮತ್ತು

ಬೆಳ್ತಂಗಡಿಯ ಅರ್ಪಾವನ್ನು ಆಯ್ಕೆ ಮಾಡಿಕೊಂಡರು. ಈ ರೀತಿಯಲ್ಲಿ ಕ್ರೈಸ್ತ ಧರ್ಮ ಸ್ವೀಕರಿಸಿದವರಲ್ಲಿ ಬಹುಪಾಲು ಮಂದಿ ದಲಿತ ವರ್ಗಗಳಿಂದ ಬಂದವರಾಗಿದ್ದುದರಿಂದ ಅವರನ್ನು 'ನವಕ್ರೈಸ್ತರು' ಎಂದು ಕರೆಯಲಾಗುತ್ತಿತ್ತು. ಕ್ರೈಸ್ತರೊಂದಿಗೆ ಸಲೀಸಾಗಿ ಬೆರೆಯುವುದು ಇವರಿಗೆ ಸಾಧ್ಯವಾಗಲಿಲ್ಲ.[೧೩೮] ಸೆಮಿನರಿಯ ನೂರು ವರ್ಷಗಳ (೧೮೭೯-೧೯೭೯) ಕಾಲಾವಧಿಯಲ್ಲಿ ಸುಮಾರು ೧೨೦೦ ಮಂದಿ ಗುರುಗಳು ದೀಕ್ಷೆ ಪಡೆದು ಭಾರತದ ೮೮ ಧರ್ಮಪ್ರಾಂತ್ಯಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.[೧೩೯]

## ೨.೯.ಅರ್ಸುಲಾಯ್ನ್ ಧರ್ಮಭಗಿನಿಯರ ಶಿಕ್ಷಣ ಸಂಸ್ಥೆಗಳು

೧೬ನೇ ಶತಮಾನದಲ್ಲಿ ಅರ್ಸುಲೈನ್ ಸಂಸ್ಥೆಯ ಸಂಸ್ಥಾಪಕರಾದ ಅಂಜೆಲಾ ಮೆರಿಚ್ಚಿಯವರು ಇಟಲಿಯ ಬ್ರೆಸಿಯಾದಲ್ಲಿ ಮಹಿಳೆ ಮತ್ತು ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡುವ ಯೋಜನೆಯನ್ನು ಪ್ರಪ್ರಥಮವಾಗಿ ಜಾರಿಗೆ ತಂದರು. ಇವರ ಪ್ರೇರಣೆಗೊಳಪಟ್ಟು, ಯೇಸು ಸಭೆಯ ಫಾ। ಉರ್ಬನ್ ಸ್ಟೈನ್ ಅವರು ೧೮೮೭ರಲ್ಲಿ ಮಂಗಳೂರಿನ ಬೋಳಾರಿನಲ್ಲಿ ಸಂತ ಅರ್ಸುಲರ ಸಂಘಟನೆಯೊಂದನ್ನು ಸ್ಥಾಪಿಸಿದರು. ೧೯೦೧ರಲ್ಲಿ ಈ ಸಂಘಟನೆ ಶಿಕ್ಷಣ ಕ್ಷೇತ್ರಕ್ಕೆ ಕಾಲಿಟ್ಟಿತು. ಬಡವರಿಗೆ ಅರ್ಧ ದಿನದ ಉಚಿತ ಶಿಕ್ಷಣ ಹಾಗೂ ಯುವತಿಯರಿಗೆ ಹೊಲಿಗೆ ತರಬೇತಿಯಿಂದ ಪ್ರಾರಂಭವಾದ ಈ ಸಂಸ್ಥೆಯ ನಿಸ್ವಾರ್ಥ ಸೇವೆ "ಅರ್ಸುಲೈನ್ ಫ್ರಾನ್ಸಿಸ್ಕನ್ ವಿದ್ಯಾಸಂಸ್ಥೆ" ಎಂಬ ಹೆಮ್ಮರವಾಗಿ ಬೆಳೆದು ಭಾರತದ ಕರ್ನಾಟಕ, ಕೇರಳ, ತಮಿಳುನಾಡು, ಉತ್ತರ ಪ್ರದೇಶ, ನಾಗಲ್ಯಾಂಡ್, ಮಿಜೋರಾಂ ರಾಜ್ಯಗಳಿಗೆ ವಿಸ್ತರಿಸಿದೆ. ಸಂಸ್ಥೆಯ ಸಂಸ್ಥಾಪಕರು ಹಾಗೂ ಮೂಲಕರ್ತರ ನೈತಿಕ ಹಾಗೂ ಆಧ್ಯಾತ್ಮಿಕ ಮೌಲ್ಯಗಳ ಬುನಾದಿಯ ಮೇಲೆ ಅರ್ಸುಲೈನ್ ಫ್ರಾನ್ಸಿಸ್ಕನ್ ಸೋದರಿಯರು ಜೀವಿಸಲು ಬದ್ಧರಾಗಿದ್ದಾರೆ.[೧೪೦] ಸಭೆಯ ಧರ್ಮಭಗಿನಿಯರು ಸೇವೆ ಸಲ್ಲಿಸುತ್ತಿರುವ ಎಲ್ಲ ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಸಂಸ್ಥೆಗಳಲ್ಲಿ ಕಲಿಯುತ್ತಿರುವ ಪ್ರತಿಯೊಬ್ಬ ವಿದ್ಯಾರ್ಥಿಯ ಪರಿಪೂರ್ಣ ಬೆಳವಣಿಗೆ ಮತ್ತು ಆ ಮೂಲಕ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಸ್ತರಗಳಲ್ಲಿ ನ್ಯಾಯದ ಹೊಸ ಆಯಾಮವನ್ನು ತರುವುದು ಮುಖ್ಯ ಧ್ಯೇಯವಾಗಿದೆ.

### ೨.೯.೧. ಉದ್ದೇಶಗಳು

ವಿದ್ಯಾರ್ಥಿಗಳಲ್ಲಿ ಪರಿಪೂರ್ಣ ಬೆಳವಣಿಗೆಯನ್ನು ಸಾಧಿಸಲು

- ಭಾವನಾತ್ಮಕ ಸೀಮಿತವನ್ನು, ಬೌದ್ಧಿಕ ಚುರುಕುತನವನ್ನು, ನೈತಿಕ ಶಕ್ತಿಯನ್ನು, ಆಧ್ಯಾತ್ಮಿಕ ನಿಲುವನ್ನು ಸಾಮಾಜಿಕ ಬದ್ಧತೆಯನ್ನು, ಸಾಂಸ್ಕೃತಿಕ ಸಂಪನ್ನತೆಯನ್ನು ವಿದ್ಯಾರ್ಥಿಗಳು ಹೊಂದುವಂತೆ ಶ್ರಮಿಸುವುದು.

- ದೇವರೊಂದಿಗೆ ವೈಯಕ್ತಿಕ ಸಂಬಂಧವನ್ನು ಹಾಗೂ ಬದುಕಿನಲ್ಲಿ ಪ್ರೀತಿಯನ್ನು ಬೆಳೆಸಲು ಬೇಕಾದ ಶ್ರದ್ಧೆಯ ನೆಲೆಗಟ್ಟನ್ನು ವಿದ್ಯಾರ್ಥಿಗಳಲ್ಲಿ ರೂಪಿಸುವುದು.
- ವಿವಿಧ ಧರ್ಮೀಯರ ನಡುವೆ ಹಾರ್ದಿಕ ಸಂಬಂಧವನ್ನು ಬೆಳೆಸುವುದು ಹಾಗೂ ಧಾರ್ಮಿಕ-ಸಾಂಸ್ಕೃತಿಕ ವಿವಿಧತೆಯನ್ನು ಗೌರವಿಸಿ, ವಿವಿಧತೆಯಲ್ಲಿ ಏಕತೆಯ ಶಕ್ತಿಯ ಮನನ ಮಾಡಿಸುವುದು.
- ದುರ್ಬಲ ಹಾಗೂ ಶೋಷಿತ ವರ್ಗಗಳಲ್ಲಿ ವಿದ್ಯಾಭ್ಯಾಸದ ಮೂಲಕ ಆತ್ಮ ಗೌರವವನ್ನು ಬೆಳೆಸುವುದು. ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಆದ್ಯತೆ ನೀಡುವುದು.
- ಜಾಗತೀಕರಣದ ಕೆಟ್ಟ ಪರಿಣಾಮಗಳನ್ನು ಎದುರಿಸಲು ವಿದ್ಯಾರ್ಥಿಗಳನ್ನು ಸನ್ನದ್ಧರನ್ನಾಗಿಸುವುದು ಹಾಗೂ ಪ್ರಕೃತಿಯ ಬಗ್ಗೆ ಒಲವು ಬೆಳೆಸಿ, ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸುವ ಮನೋಧರ್ಮ ಬೆಳೆಸಿ, ಪರಿಸರ ಸಂರಕ್ಷಣೆ ಹಾಗೂ ಪ್ರಾಕೃತಿಕ ಸಂಪನ್ಮೂಲಗಳನ್ನು ವೃದ್ಧಿಸುವ ಬಗ್ಗೆ ಅರಿವು ಮೂಡಿಸುವುದು.
- ಸಾಮಾಜಿಕ ಪ್ರಜ್ಞೆಯನ್ನೂ, ರಾಷ್ಟ್ರಭಕ್ತಿಯನ್ನೂ ಬೆಳೆಸುವುದರ ಮೂಲಕ ಜವಾಬ್ದಾರಿಯುತ ನಾಗರಿಕರನ್ನಾಗಿ ರೂಪಿಸುವುದು.
- ಅನನ್ಯ ಅರ್ಸುಲೈನ್ ಫ್ರಾನ್ಸಿಸ್ಕನ್ ತತ್ವಗಳಾದ ಸರಳ ಬಾಳ್ವೆ, ಪ್ರಾಮಾಣಿಕತೆ, ಸೇವೆಯ ಘನತೆ, ಐಕ್ಯಮತ್ಯ, ಹಂಚಿಕೊಳ್ಳುವಿಕೆ ಇವುಗಳನ್ನು ಪ್ರಸಾರ ಮಾಡುವುದು.

ದಿ ಅರ್ಸುಲೈನ್ ಫ್ರಾನ್ಸಿಸ್ಕನ್ ಎಜ್ಯುಕೇಷನ್ ಸೊಸೈಟಿ(ರಿ.) ದೇರಳಕಟ್ಟೆಯ ಕಾರ್ಯ ವ್ಯಾಪ್ತಿಯಲ್ಲಿ ಬರುವ ಮಂಗಳೂರಿನ ಬಿಜೈನಲ್ಲಿರುವ ಲೂರ್ಡ್ಸ್ ಪ್ರೌಢಶಾಲೆ, ಬೆಳ್ತಂಗಡಿಯ ಸೈಂಟ್ ಥೆರೆಸಾ ಪ್ರೌಢಶಾಲೆ ಮತ್ತು ಮಂಗಳೂರಿನ ಕೆಲರಾಯ್ ಪದಮಲೆಯಲ್ಲಿರುವ ಅಮೃತ್ ಲಾಲ್‌ಜೀ ಪ್ರೌಢಶಾಲೆ ಈ ಮೂರು ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದೆ.[೧೪೧] ಕರ್ನಾಟಕ ರಾಜ್ಯದಲ್ಲಿ ಮೇಲಿನ ಮೂರು ಪ್ರೌಢಶಾಲೆಗಳೂ ಸೇರಿದಂತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೬, ಮೈಸೂರು ಜಿಲ್ಲೆಯಲ್ಲಿ ೧೧, ಚಿಕ್ಕಮಗಳೂರು ಜಿಲ್ಲೆಯಲ್ಲಿ ೯, ಶಿವಮೊಗ್ಗ ಜಿಲ್ಲೆಯಲ್ಲಿ ೩, ಕೊಡಗಿನಲ್ಲಿ ೧, ಬೆಂಗಳೂರು ಜಿಲ್ಲೆಯಲ್ಲಿ ೪, ಬಿಜಾಪುರ ಜಿಲ್ಲೆಯಲ್ಲಿ ೧, ಧಾರವಾಡ ಜಿಲ್ಲೆಯಲ್ಲಿ ೪, ಹಾವೇರಿ ಜಿಲ್ಲೆಯಲ್ಲಿ ೧, ಉತ್ತರ ಕನ್ನಡ ಜಿಲ್ಲೆಯಲ್ಲಿ ೨, ಹೀಗೆ ೪೨ ಶಾಲೆಗಳನ್ನು ನಡೆಸುತ್ತಿದೆ. ಅಲ್ಲದೆ ಕೇರಳ ರಾಜ್ಯದಲ್ಲಿ ೨, ತಮಿಳುನಾಡಿನಲ್ಲಿ ೧, ನಾಗಲ್ಯಾಂಡ್‌ನಲ್ಲಿ ೨, ಮಿಜೋರಾಂನಲ್ಲಿ ೧, ಉತ್ತರಪ್ರದೇಶದಲ್ಲಿ ೪ ಮತ್ತು ಪಶ್ಚಿಮ ಬಂಗಾಳದಲ್ಲಿ ೧ ಶಾಲೆಗಳನ್ನು ನಡೆಸುತ್ತಿದೆ.

ದಿ ಅರ್ಸುಲಾಯ್ನ್ ಫ್ರಾನ್ಸಿಸ್ಕನ್ ಎಜುಕೇಷನ್ ಸೊಸೈಟಿ ಒಟ್ಟು ೫೩ ಶಾಲೆಗಳನ್ನು ನಡೆಸುತ್ತಿದೆ.[೧೪೨] [ ಹೆಚ್ಚಿನ ವಿವರಗಳಿಗೆ ಅನುಬಂಧ ೪ನ್ನು ಪರಿಶೀಲಿಸಿ]

## ೨.೧೦. ಸಿಸ್ಟರ್ಸ್ ಆಫ್ ಚಾರಿಟಿ ಸಭೆಯ ಶಿಕ್ಷಣ ಸೇವೆ

ಮಂಗಳೂರಿನ ಧರ್ಮಾಧ್ಯಕ್ಷರಾಗಿದ್ದ ಬಿಷಪ್ ಅಬುಂದಿಯಸ್ ಕೆವದಿನಿಯವರು ಪತ್ರವೊಂದನ್ನು ಬರೆದು ಧರ್ಮಭಗಿನಿಯರ ಸೇವೆಯನ್ನು ಫಾ।ಮುಲ್ಲರ್ಸ್ ಆಸ್ಪತ್ರೆಗೆ ಪಡೆಯಲು ಪ್ರಯತ್ನಿಸಿದರ ಫಲವಾಗಿ ೧೮೯೮ರಲ್ಲಿ ಧರ್ಮಭಗಿನಿಯರು ಮಂಗಳೂರನ್ನು ತಲುಪಿದರು. ಆದುದರಿಂದ ಔದಾರ್ಯದ ಧರ್ಮಭಗಿನಿಯರ ಸಭೆ ಮಂಗಳೂರಿನಲ್ಲಿ ಪ್ರಥಮತಃ ಆರೋಗ್ಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸಲು ಆಗಮಿಸಿತ್ತು.[೧೪೩] ೧೯೩೨ರಲ್ಲಿ ಪ್ರತ್ಯೇಕ ಮಂಗಳೂರು ಪ್ರಾಂತ್ಯ (Province), ಸಿಸ್ಟರ್ಸ್ ಆಫ್ ಚಾರಿಟಿ ಅಸ್ತಿತ್ವಕ್ಕೆ ಬಂತು.[೧೪೪] ಸಿಸ್ಟರ್ಸ್ ಆಫ್ ಚಾರಿಟಿಯ ಶಿಕ್ಷಣದ ದೃಷ್ಟಿಕೋನ ಯೇಸು ಸ್ವಾಮಿಯ ಬೋಧನೆಯಿಂದ ಹುಟ್ಟಿಕೊಳುತ್ತದೆ; ಹಾಗೂ ಮನುಕುಲದ ಸೇವೆಯಲ್ಲಿ ತೊಡಗಿಸಿಕೊಳ್ಳಲು ಉತ್ತೇಜಿಸುತ್ತದೆ. ಶಿಕ್ಷಣ ಪ್ರಕ್ರಿಯೆಯಲ್ಲಿ ಧರ್ಮಭಗಿನಿಯರ ಮೊದಲ ಲಕ್ಷ್ಯ ಮತ್ತು ನಿಷ್ಠೆ, ಭೋಧನೆ ಹಾಗೂ ಧಾರ್ಮಿಕ ಶಿಕ್ಷಣ ನೀಡುವುದಕ್ಕೆ ಎಂಬುದು ಸ್ಪಷ್ಟ. ಇತಿಹಾಸ ಮತ್ತು ಸುವಾರ್ತೆಯನ್ನು ಬೋಧಿಸುವುದರ ಮೂಲಕ ಸಿಸ್ಟರ್ಸ್ ಆಫ್ ಚಾರಿಟಿಯವರು ವಿದ್ಯಾರ್ಥಿಗಳಲ್ಲಿ ಕ್ರೈಸ್ತ ತತ್ವಗಳಿಂದ ಆಧರಿಸಿದ ಪ್ರಾಮಾಣಿಕ ಮನಸಾಕ್ಷಿ ಹಾಗೂ ಒಳ್ಳೆಯ ಗುಣ ರೂಪುಗೊಳ್ಳುವಂತೆ ಮಾಡಿ ನಿಶ್ಚಿತಾಭಿಪ್ರಾಯದಂತೆ ಜೀವಿಸಲು ಅನುವು ಮಾಡಿಕೊಡುತ್ತದೆ. ಚಾರಿಟಿ ಧರ್ಮಭಗಿನಿಯರು ನೀಡುವ ಶಿಕ್ಷಣ, ನೈತಿಕ ಹಾಗೂ ಆಧ್ಯಾತ್ಮಿಕ ರೂಪವನ್ನು ಪಡೆದು ಧರ್ಮೋಪದೇಶ ಹಾಗೂ ನೀತಿಬೋಧೆ ತರಗತಿಗಳ ಮೂಲಕ ಬೋಧಿಸುವ ಮೌಲ್ಯಗಳು ದೇವರ ವಿಶ್ವಾಸಕ್ಕೆ ಭಾಜನವಾಗುವ ಅವಕಾಶವನ್ನು ಕಲ್ಪಿಸುತ್ತವೆ. ಧರ್ಮಭಗಿನಿಯರ ಶೈಕ್ಷಣಿಕ ನೀತಿಯು ಧಾರ್ಮಿಕ ಆಯಾಮವನ್ನು ವ್ಯಾಪಕವಾಗಿ ಹರಡುವುದಾಗಿದೆ. ಶೈಕ್ಷಣಿಕ ಸೇವೆಯ ಮೂಲಕ ಎಲ್ಲಾ ವಯಸ್ಸಿನ ಜನರಿಗೆ ಯೇಸು ಕ್ರಿಸ್ತನ ರಹಸ್ಯವನ್ನು ತಿಳಿಸಿ ದೇವರ ಪ್ರೀತಿಯನ್ನು ಧರ್ಮಭಗಿನಿಯರ ಸುಪರ್ದಿಗೆ ಒಪ್ಪಿಸಿರುವ ಮಕ್ಕಳು ಮತ್ತು ಯುವಕರಿಗೆ ಪರಿಚಯಿಸುವುದಾಗಿದೆ.[೧೪೫]

### ೨.೧೦.೧. ಪ್ರಾಥಮಿಕ ಹಾಗೂ ಪ್ರೌಢಶಾಲೆಗಳು

ಜೆಪ್ಪುವಿನ ಇನ್ಫೆಂಟ್ ಮೇರಿಸ್ ಶಾಲೆಯನ್ನು ಮಕ್ಕಳಿಗೆ ಓದು, ಬರಹ ಮತ್ತು ಗಣಿತ ಕಲಿಸಲು ಯೇಸುಸಭೆಯವರು ಆರಂಭಿಸಿ, ೧೯೧೩ರಲ್ಲಿ ಚಾರಿಟಿ ಸಭೆಯವರಿಗೆ ಹಸ್ತಾಂತರಿಸಿದರು. ಆ ಬಳಿಕ, ಭ। ಅಂಜೆಲಾ ನೊರೋನ್ಹಾರವರ ನೇತೃತ್ವದಲ್ಲಿ ಸರ್ಕಾರದಿಂದ ಶಾಲೆಗೆ ಮಂಜೂರಾತಿ ಪಡೆದು

ಮೇಲ್ದರ್ಜೆಗೇರಿಸಲಾಗಿದೆ. ಫಾ। ಮುಲ್ಲರ್ಸ್ ಚಾರಿಟೇಬಲ್ ಸಂಸ್ಥೆಗಳಲ್ಲಿ ಹಾಗೂ ಸಂತ ಜೋಸೆಫರ ಆಶ್ರಮ ಕಾರ್ಯಗಾರಗಳಲ್ಲಿ ಕೆಲಸ ಮಾಡುವ ಮಹಿಳೆಯರ ಮಕ್ಕಳ ಆರೈಕೆಗಾಗಿ ಜೆಪ್ಪುವಿನ ಇನ್ಫೆಂಟ್ ಮೇರಿಸ್ ಕೈಗಾರಿಕಾ ಶಾಲೆಯಲ್ಲಿ 'ಕ್ರೆಶ್' ಒಂದನ್ನು ತೆರೆಯಲಾಗಿದೆ.[೧೪೬]

ಕಾಸರಗೋಡಿನ ಬೇಳದ ಕಪಿತಾನಿಯೊ ಕಾನ್ವೆಂಟ್ ಹಾಗೂ ಶಾಲೆಯನ್ನು, ಮಂಗಳೂರಿನ ದೇರೆಬೈಲಿನ ನಿವಾಸಿ ಸಿಲ್ವೆಸ್ಟರ್ ರೇಗೋರವರು ದಾನವಾಗಿ ನೀಡಿದ ಸ್ಥಳದಲ್ಲಿ ಚಾರಿಟಿ ಸಭೆಯವರು ಕಟ್ಟಿಸಿದ್ದಾರೆ (೧೯೩೨). ಧರ್ಮಭಗಿನಿಯರ ಆಗಮನವನ್ನು ಬಂಟರು ಹಾಗೂ ಕ್ರೈಸ್ತೇತರರು ತೀವ್ರವಾಗಿ ವಿರೋಧಿಸಿದ್ದರು. ಕೇವಲ ಒಂಭತ್ತು ವಿದ್ಯಾರ್ಥಿಗಳೊಂದಿಗೆ ಗ್ರಾಮೀಣ ಪ್ರದೇಶವಾದ ಬೇಳದಲ್ಲಿ ಪ್ರಾಥಮಿಕ ಶಾಲೆ ಆರಂಭವಾಗಿತ್ತು. ಧರ್ಮಭಗಿನಿಯರ ನಿರಂತರ ಪರಿಶ್ರಮದ ಫಲವಾಗಿ ಹೆತ್ತವರು ನಿಧಾನವಾಗಿ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲಾರಂಭಿಸಿದರು. ಅಷ್ಟೆಲ್ಲಾ ಪ್ರಯತ್ನಗಳ ಹೊರತಾಗಿಯೂ ೧೯೪೮ರಲ್ಲಿ ವಿದ್ಯಾರ್ಥಿಗಳ ಸಂಖ್ಯೆ ನೂರರ ಗಡಿ ದಾಟಿರಲಿಲ್ಲ. ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿಸಲೇಬೇಕೆಂದು ನಿರ್ಧರಿಸಿದ ಧರ್ಮಭಗಿನಿಯರು ೧೯೫೮ರಲ್ಲಿ ಅನಾಥಾಶ್ರಮವನ್ನು ಸ್ಥಾಪಿಸಿದರು. ಆ ಬಳಿಕ ನಿಧಾನವಾಗಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಯಿತು.[೧೪೭] ೨೦೦೫ ಕಿಂಡರ್ ಗಾರ್ಟನ್ ವಿಭಾಗವನ್ನೂ,[೧೪೮] ೧೯೯೯ರಲ್ಲಿ ರಾಷ್ಟ್ರೀಯ ಮುಕ್ತ ಶಾಲೆಯನ್ನೂ ಬೇಳದ ಕಪಿತಾನಿಯೊ ಶಾಲೆಯಲ್ಲಿ ಆರಂಭಿಸಲಾಗಿದೆ.[೧೪೯]

ಬೆಳ್ತಂಗಡಿ ತಾಲೂಕಿನ ನಾರಾವಿಯಲ್ಲಿ ಯೇಸು ಸಭೆಯ ಫಾ। ಪೌಸ್ತಿನ್ ಕೋರ್ಟಿಯವರು ೧೯೦೫ರಲ್ಲಿ ಒಂದು ಮಿಶನ್ ಠಾಣ್ಯವನ್ನು ಆರಂಭಿಸಿ ಫಾ। ಗವಿರಾಘಿಯವರ ನೆರವಿನಿಂದ ಅದನ್ನು ನಡೆಸುತ್ತಿದ್ದರು. ೧೯೩೪ರಲ್ಲಿ ನಾರಾವಿ ಮಿಶನ್‌ಗೆ ಸುವಾರ್ತಾ ಪ್ರಚಾರಕ್ಕಾಗಿ ಚಾರಿಟಿ ಧರ್ಮಭಗಿನಿಯರನ್ನು ಕರೆಸಿಕೊಂಡರು. ಮಿಶನರಿಗಳ ಸೇವಾಕಾರ್ಯದಿಂದಾಗಿ ಅನಾದಿ ಕಾಲದಿಂದಲೂ ನಡೆದು ಬರುತ್ತಿದ್ದ ಗುಲಾಮಗಿರಿಯಿಂದ ಕ್ರೈಸ್ತ ಮತ ಸ್ವೀಕರಿಸಿದ ಆದಿವಾಸಿಗಳನ್ನು ಬಿಡಿಸಲಾಗಿದೆ. ೧೯೪೦ರಿಂದ ಧರ್ಮಭಗಿನಿಯರು ಸಂತ ಪೌಲರ ಹಿರಿಯ ಪ್ರಾಥಮಿಕ ಶಾಲೆಯನ್ನು ನಾರಾವಿಯಲ್ಲಿ ನಡೆಸುತ್ತಿದ್ದಾರೆ. ೧೯೬೬ರಲ್ಲಿ ಪ್ರಾಥಮಿಕ ಶಾಲೆಯನ್ನು ಉನ್ನತೀಕರಿಸಿ ಜನರಿಗೆ ನಾರಾವಿ ಹೈಸ್ಕೂಲಿಗೆ ತಮ್ಮ ಮಕ್ಕಳನ್ನು ಕಳುಹಿಸುವ ಭಾಗ್ಯ ದೊರಕಿಸಿಕೊಟ್ಟರು.[೧೫೦] ಅಂತೆಯೇ, ೧೯೩೫ರಂದು ಜೋಪಡಿಯೊಂದರಲ್ಲಿ ಅಂಜೆಲೂರಿನ ಏಂಜಲ್ಸ್ ಪ್ರಾಥಮಿಕ ಶಾಲೆಯನ್ನು ಇಬ್ಬರು ಶಿಕ್ಷಕಿಯರು ಹಾಗೂ ೬೨ ವಿದ್ಯಾರ್ಥಿಗಳೊಂದಿಗೆ ಆರಂಭಿಸಲಾಗಿದೆ.[೧೫೧]

ಮೂಡಬಿದ್ರೆಯ ಆಲಂಗಾರ್‌ನಲ್ಲಿ ಸಣ್ಣ ಸಣ್ಣ 'ಗುಡಿಸಲುಗಳಲ್ಲಿ' ಅಥವಾ 'ಕೊಪ್ಪ'ಗಳಲ್ಲಿ ಜನರು ಜೀವಿಸುತ್ತಿದ್ದರು. ಆ ಗುಡಿಸಲುಗಳ ಪಕ್ಕದಲ್ಲಿ ಒಂದು ಜೋಪಡಿ ಶಾಲೆಯನ್ನು ಲೂಥರನ್

ಶಿಕ್ಷಕರೊಬ್ಬರು ನಡೆಸುತ್ತಿದ್ದರು. ಹೀಗಿರುವಾಗ, ಕಾರ್ಕಳದಲ್ಲಿದ್ದ ಮಿಶನರಿಯವರೊಂದಿಗೆ ಉಂಟಾದ ಭಿನ್ನಾಭಿಪ್ರಾಯದಿಂದಾಗಿ, ಸ್ವ -ಇಚ್ಛೆಯಿಂದ ಶಾಲೆಯ ಒಡೆತನವನ್ನು ಫಾ। ಕೋರ್ಟಿಯವರಿಗೆ ಒಪ್ಪಿಸಲು ನಿರ್ಧರಿಸಿದರು. ಫಾ।ಕೋರ್ಟಿಯವರು ಶಾಲೆಯನ್ನು ನಡೆಸುವ ಜವಾಬ್ದಾರಿಯನ್ನು ಸಹಾಯಕರಾದ ಫಾ।ಗಸ್ಪರ್ ಪಿಂಟೋರವರಿಗೆ ವಹಿಸಿಕೊಟ್ಟರು. ಕಾಲಕ್ರಮೇಣ ಶಾಲೆಯಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುತ್ತಿದ್ದಂತೆಯೇ ಶಾಲೆಯ ವಿಸ್ತರಣೆಯನ್ನು ಮಾಡಲಾಗಿದೆ. ಮೊನ್ಸಿಞೊರ್ ಎಲಿಯಾಸ್ ಡಿಸೋಜರವರ ಕಾಲದಲ್ಲಿ ಚಾರಿಟಿ ಧರ್ಮಭಗಿನಿಯರಿಗಾಗಿ ಕಾನ್ವೆಂಟೊಂದನ್ನು ಸ್ಥಾಪಿಸಿ ಶಾಲೆಯನ್ನು ನಿಭಾಯಿಸುವ ಜವಾಬ್ದಾರಿಯನ್ನು ವಹಿಸಿದರು. ಸಂತ ಥೋಮಸರಿಗೆ ಅರ್ಪಿಸಿದ್ದ ಶಾಲೆಯಲ್ಲಿ ಧರ್ಮಭಗಿನಿಯರು ಜವಾಬ್ದಾರಿ ವಹಿಸಿಕೊಂಡಾಗ ಕೇವಲ ೩೬ ವಿದ್ಯಾರ್ಥಿಗಳು ಇದ್ದರು. ಆದರೆ ತರಗತಿಗಳಿಗೆ ಹಾಜರಾಗುತ್ತಿದ್ದವರು ೧೮ ಮಂದಿ ಮಾತ್ರ. ಆದುದರಿಂದ ಶಾಲೆಯ ಅವಧಿ ಮುಗಿದ ಬಳಿಕ ಗ್ರಾಮಗಳಿಗೆ ತೆರಳಿದ ಧರ್ಮಭಗಿನಿಯರು ಹೆತ್ತವರ ಮನವೊಲಿಸಿ ವಿದ್ಯಾರ್ಥಿಗಳಿಗೆ ಶಾಲೆಗೆ ಕಳುಹಿಸಿಕೊಡುವಂತೆ ಮನವಿ ಮಾಡಿಕೊಂಡರು. ಪರಿಣಾಮವಾಗಿ ತಿಂಗಳ ಅಂತ್ಯದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ೧೦೦ಕ್ಕೆ ಏರಿತ್ತು. ಆ ಕಾಲದಲ್ಲಿ ಆಲಂಗಾರಿನ ಸುತ್ತಮುತ್ತ ಐದು ಮೈಲು ವಿಸ್ತೀರ್ಣದಲ್ಲಿ ಇದ್ದಂತಹ ಏಕೈಕ ಕಥೋಲಿಕ ಶಾಲೆ ಇದಾದುದರಿಂದ ವಿದ್ಯಾರ್ಥಿಗಳು ದೂರದ ಸ್ಥಳಗಳಿಂದಲೂ ಹರಿದು ಬರುತ್ತಿದ್ದರು.[೧೫೨]

ಕಾಸರಗೋಡಿನ ಕುಂಬ್ಳೆದಲ್ಲಿ ಹೋಲಿ ಫ್ಯಾಮಿಲಿ ಪ್ರಾಥಮಿಕ ಶಾಲೆಯನ್ನು ಚಾರಿಟಿ ಧರ್ಮಭಗಿನಿಯರು ೧೯೩೩ರಂದು ಸ್ಥಾಪಿಸಿದರು. ಕಾನ್ವೆಂಟ್ ಶಾಲೆ ಆರಂಭವಾಗಿದೆ ಎಂಬ ಸುದ್ದಿ ಹರಡುತ್ತಲೇ ಎಲ್ಲಾ ಸಮುದಾಯದ ಜನರೂ ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸಲು ಮುಗಿಬಿದ್ದರು. ಈ ರೀತಿಯಲ್ಲಿ ಅತ್ಯಲ್ಪ ಸಮಯದಲ್ಲಿ ಜನಮನ ಗೆದ್ದ, ಈ ಶಾಲೆಗೆ ಸರ್ಕಾರಿ ಶಾಲೆ ಅಥವಾ ಬೋರ್ಡ್ ಸ್ಕೂಲಿನಿಂದ ಸ್ಪರ್ಧೆ ಎದುರಿಸಬೇಕಾಯಿತು. ಒಂದು ಸಂದರ್ಭದಲ್ಲಿ ಹೆತ್ತವರ ಮನವೊಲಿಸಿ ಕ್ರೈಸ್ತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದ ಎಲ್ಲಾ ವಿದ್ಯಾರ್ಥಿಗಳನ್ನು ಶಾಲೆಯಿಂದ ಬಿಡಿಸಿ ಬೋರ್ಡ್ ಸ್ಕೂಲಿಗೆ ಸೇರಿಸಿದಂತ ಘಟನೆ ನಡೆದು ಹೋಲಿ ಫ್ಯಾಮಿಲಿ ಶಾಲೆ ಮುಚ್ಚಬೇಕಾದ ಪರಿಸ್ಥಿತಿ ಉಂಟಾಗಿತ್ತು. ಆದರೆ ಸ್ವಲ್ಪ ಸಮಯದ ಬಳಿಕ ಪರಿಸ್ಥಿತಿ ಬದಲಾಗಿ ಶಾಲೆಗೆ ಯಥಾ ಪ್ರಕಾರ ವಿದ್ಯಾರ್ಥಿಗಳ ಸೇರ್ಪಡೆಯಾಗತೊಡಗಿತು.[೧೫೩] ಅಂತೆಯೇ, ೧೯೬೦ರಲ್ಲಿ ಕನ್ನಡ ಮಾಧ್ಯಮ ನರ್ಸರಿಯನ್ನು ಹೋಲಿ ಫ್ಯಾಮಿಲಿ ಪ್ರಾಥಮಿಕ ಶಾಲೆಯಲ್ಲಿ ತೆರೆಯಲಾಗಿದೆ.[೧೫೪] ಬೇಳದ ಕಪಿತಾನಿಯೊ ಶಾಲೆಯಲ್ಲಿ, ಆರಂಭಗೊಂಡಿದ್ದ ರಾಷ್ಟ್ರೀಯ ಮುಕ್ತ ಶಾಲೆಯನ್ನು ಸ್ಥಳಾಂತರಿಸಿ, ಸಂತ ಮೋನಿಕಾರ ರಾಷ್ಟ್ರೀಯ ಮುಕ್ತ ಶಾಲೆ ಎಂದು ಪುನರ್ನಾಮಕರಣ ಮಾಡಲಾಗಿದೆ.[೧೫೫]

ಬಿಷಪ್ ವಿ.ಆರ್. ಫೆರ್ನಾಂಡಿಸರ ಕೋರಿಕೆ ಮೇರೆಗೆ ಬ್ರಹ್ಮಾವರ ತಲುಪಿದ ಧರ್ಮಭಗಿನಿಯರು ಪ್ಯಾರಿಶ್ ಶಾಲೆಯಲ್ಲಿ ತಮ್ಮ ಸೇವೆಯನ್ನು ಆರಂಭಿಸಿದರು. ೧೯೪೧ರಲ್ಲಿ ಕಿರಿಯ ಪ್ರಾಥಮಿಕ ಶಾಲೆಯನ್ನು ಉನ್ನತೀಕರಿಸಿದರು. ಮುಂದೆ ಬ್ರಹ್ಮಾವರ ಚರ್ಚಿನ ಕಾಪುಚಿನ್ ಧರ್ಮಗುರುಗಳಾಗಿದ್ದ ಫಾ। ಆಲ್ಫ್ರೆಡ್ ರೋಚ್ ಅವರ ನೆರವಿನಿಂದ ಹುಡುಗಿಯರಿಗಾಗಿ ೧೯೬೩ರಲ್ಲಿ ನಿರ್ಮಲ ಪ್ರೌಢಶಾಲೆ ಸ್ಥಾಪನೆಯಾಯಿತು. ೧೯೩೦ರಿಂದೀಚೆಗೆ ಹುಡುಗರನ್ನೂ ಈ ಶಾಲೆಯಲ್ಲಿ ಸೇರಿಸಿಕೊಳ್ಳಲಾಗುತ್ತಿದೆ.[೧೫೬] ಮೊನ್ಸಿಞೊರ್ ವಿಲಿಯಂ ಲೂವಿಸ್ ಅವರ ಮನವಿಯ ಮೇರೆಗೆ ಕಾರ್ಕಳ ತಾಲೂಕಿನ ಅತ್ತೂರಿಗೆ ಆಗಮಿಸಿದ ಧರ್ಮಭಗಿನಿಯರು, ಸಂತ ಲಾರೆನ್ಸರ ಹಿರಿಯ ಪ್ರಾಥಮಿಕ ಶಾಲೆ ಮತ್ತು ಅನಾಥಾಶ್ರಮದ ಜವಾಬ್ದಾರಿಯನ್ನು ನಿಭಾಯಿಸುತ್ತಿದ್ದಾರೆ.[೧೫೭] ಉಡುಪಿ ಜಿಲ್ಲೆಯ ಬೆಳ್ಮಣ್ ಧರ್ಮಕೇಂದ್ರದ ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕಿಯರಾಗಿ ಧರ್ಮಭಗಿನಿಯರು ೧೯೬೬ರಿಂದ ಸೇವೆ ಸಲ್ಲಿಸುತ್ತಿದ್ದಾರೆ. ೧೯೩೨ರಲ್ಲಿ ಹೈಸ್ಕೂಲ್ ಸ್ಥಾಪಿಸಿದಾಗ ಸರ್ಕಾರ ನಡೆಸುತ್ತಿದ್ದ ಏಕೈಕ ಸರ್ಕಾರಿ ಪ್ರೌಢಶಾಲೆಯಿಂದ ತೀವ್ರ ಪ್ರತಿರೋಧ ಎದುರಿಸ ಬೇಕಾಯಿತು.[೧೫೮] ಯೇಸುಸಭೆಯ ಫಾ। ವಿಲಿಯಂ ಸಿಕ್ವೇರಾ ಅವರು ಜೆಪ್ಪು ಅನಾಥಾಶ್ರಮದ ಕೆಲವು ಕುಟುಂಬಗಳನ್ನು ಆಯ್ದು ಬೆಳ್ವೆಯಲ್ಲಿ ಪ್ರಾರಂಭಿಸಿದ ಕೃಷಿ ವಸಾಹತುವಿಗೆ ಸ್ಥಳಾಂತರಿಸಿ ಅವರ ಮಕ್ಕಳಿಗಾಗಿ ಒಂದು ಶಾಲೆಯನ್ನು ಆರಂಭಿಸಿದಾಗ ಧರ್ಮಭಗಿನಿಯರು ಶಾಲೆಯ ಜವಾಬ್ದಾರಿಯನ್ನು ಉಳಿದವರೊಂದಿಗೆ ಹಂಚಿಕೊಳ್ಳಲಾರಂಭಿಸಿದರು. ೧೯೭೬ರ ನಂತರ ಅನಾಥಾಶ್ರಮ ಕ್ಷೀಣಿಸತೊಡಗಿದರೂ, ಭಗಿನಿಯರ ಪರಿಶ್ರಮದ ಫಲವಾಗಿ ಶಾಲೆ ಏಳಿಗೆಯನ್ನು ಪಡೆದಿದೆ.[೧೫೯] ೧೯೬೬ರಲ್ಲಿ ಜೆಪ್ಪುವಿನಲ್ಲಿ ಜೆರೊಸಾ ಪ್ರೌಢಶಾಲೆಯನ್ನೂ ಇಂಗ್ಲಿಷ್ ಮೀಡಿಯಂ ನರ್ಸರಿ ಹಾಗೂ ಪ್ರಾಥಮಿಕ ತರಗತಿಗಳನ್ನೂ ಆರಂಭಿಸಲಾಗಿದೆ. ೧೯೭೪ರಲ್ಲಿ ಹುಡುಗರ ಶಿಕ್ಷಣಕ್ಕೂ ಅವಕಾಶ ನೀಡುತ್ತಿದ್ದಾರೆ.[೧೬೦]

ಉಡುಪಿ ಜಿಲ್ಲೆಯ ಉದ್ಯಾವರ ಧರ್ಮಕೇಂದ್ರದ ವ್ಯಾಪ್ತಿಯಲ್ಲಿ ಸಂತ ಫ್ರಾನ್ಸಿಸ್ ಕ್ಷೇವಿಯರ್ ಕಾನ್ವೆಂಟನ್ನು ೧೯೪೧ರಲ್ಲಿ ಸ್ಥಾಪಿಸಿ ಚರ್ಚ್ ಶಾಲೆಯಲ್ಲಿ ಧರ್ಮಭಗಿನಿಯರು ಸೇವೆಯನ್ನು ಆರಂಭಿಸಿದರು. ಉದ್ಯಾವರದ ಕಥೋಲಿಕರು ಬಹು ದಿನಗಳಿಂದ ಪ್ರೌಢಶಾಲೆ ಸ್ಥಾಪಿಸಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿದ್ದರು. ಅವರ ಮನವಿಯನ್ನು ಪುರಸ್ಕರಿಸಿ ೧೯೩೨ರಲ್ಲಿ ಪ್ರೌಢಶಾಲೆಯನ್ನು ಆರಂಭಿಸಲಾಗಿದೆ. ಮಂಗಳೂರಿನ ಕಪಿತಾನಿಯೊ ಪ್ರಾಥಮಿಕ ಇಂಗ್ಲಿಷ್ ಮಾಧ್ಯಮ ಶಾಲೆಯಲ್ಲಿ ೨೦೦೬ರಲ್ಲಿ ಕಿಂಡರ್ ಗಾರ್ಟನ್ ಆರಂಭಿಸಲಾಗಿದೆ.

## ೨.೧೦.೨. ವಾಣಿಜ್ಯ ಮತ್ತು ತಾಂತ್ರಿಕ ಸಂಸ್ಥೆ

೧೯೬೦ರಲ್ಲಿ ಮಂಗಳೂರು ಮತ್ತು ಆಸುಪಾಸಿನ ಗ್ರಾಮೀಣ ಯುವ ಮಹಿಳೆಯರಿಗೆ ವೃತ್ತಿ ಶಿಕ್ಷಣ ತರಬೇತಿ ನೀಡುವ ಸಲುವಾಗಿ ಕಪಿತಾನಿಯೊ ಕಾಮರ್ಸ್ ಮತ್ತು ಟೆಕ್ನಿಕಲ್ ಇನ್‌ಸ್ಟಿಟ್ಯೂಟ್ ಸ್ಥಾಪಿಸಲ್ಪಟ್ಟಿದೆ. ಇಲ್ಲಿ ಸೆಕ್ರೆಟೇರಿಯಲ್ ಮತ್ತು ಕಂಪ್ಯೂಟರ್ ಕೋರ್ಸ್‌ಗಳನ್ನು ನಡೆಸಿ ಅವುಗಳಲ್ಲಿ ಡಿಪ್ಲೊಮಾ ಮತ್ತು ಪ್ರಮಾಣಪತ್ರಗಳನ್ನು ನೀಡಲಾಗುತ್ತದೆ. ಹೊಲಿಗೆ ಮತ್ತು ತಾಂತ್ರಿಕ ಶಾಲೆಗಳ ಮೂಲಕವಾಗಿ ಅಭಿರುಚಿ, ಜ್ಞಾನ ಮತ್ತು ಕೌಶಲ್ಯಗಳನ್ನು ಅಭಿವೃದ್ಧಿ ಪಡಿಸುವುದರೊಂದಿಗೆ, ಕಾರ್ಯತತ್ಪರತೆ ಮತ್ತು ಸ್ವ-ಉದ್ಯೋಗಕ್ಕೆ ಉತ್ತೇಜಿಸಲಾಗುತ್ತದೆ.[೬೧] ಆದರೆ ಹಲವಾರು ವರ್ಷಗಳಿಂದ ನಡೆಸಿಕೊಂಡು ಬರುತ್ತಿದ್ದ ತಾಂತ್ರಿಕ ಹಾಗೂ ವಾಣಿಜ್ಯ ಸಂಸ್ಥೆಯನ್ನು ೨೦೦೬ರಲ್ಲಿ ಮುಚ್ಚಲಾಯಿತು.[೬೨]

## ೨.೧೦.೩. ಶಿಕ್ಷಕ ತರಬೇತಿ ಸಂಸ್ಥೆ

ಶಿಕ್ಷಣಕ್ಕೆ ವಿಶೇಷ ಆದ್ಯತೆ ನೀಡಲು ಸರಕಾರ ಬದ್ಧವಾಗಿದ್ದ ಆ ದಿನಗಳಲ್ಲಿ ದಕ್ಷಿಣ ಕನ್ನಡದಲ್ಲಿ ಶೈಕ್ಷಣಿಕ ಕೊರತೆ ಬಹಳವಾಗಿದ್ದುದರಿಂದ, ಶಿಕ್ಷಣ ಇಲಾಖೆಯು ಶಿಕ್ಷಕರಿಗೆ ತುರ್ತಾಗಿ ತರಬೇತಿ ನೀಡುವ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳಲು ಪ್ರೋತ್ಸಾಹಿಸಿತು. ಆದುದರಿಂದ ೧೯೪೬ರಲ್ಲಿ ಕಪಿತಾನಿಯೊ ಶಾಲೆಯನ್ನು, ಈ ತುರ್ತು ತರಬೇತಿ ನೀಡುವ ಸಂಸ್ಥೆಯನ್ನಾಗಿ ಆಯ್ಕೆ ಮಾಡಲಾಯಿತು. ಅನಂತರದ ವರ್ಷಗಳಲ್ಲಿ ಈ ಸೇವೆ ಒಂದು ಖಾಯಂ ವ್ಯವಸ್ಥೆಯಾಗಿ ಮುಂದುವರಿದಿದೆ. ಶಿಕ್ಷಕ ತರಬೇತಿ ಸಂಸ್ಥೆಯು ಅದರ ಉದ್ದೇಶಗಳಾದ ನಾಯಕತ್ವ, ವ್ಯಕ್ತಿತ್ವ ವಿಕಸನ ಮತ್ತು ಸಮಾಜಸೇವೆ ಇವುಗಳನ್ನು ಪರಿಣಾಮಕಾರಿಯಾಗಿ ವಿದ್ಯಾರ್ಥಿಗಳಲ್ಲಿ ಬೆಳೆಸುವುದರೊಂದಿಗೆ ಅವರಲ್ಲಿ ಸಾಮಾಜಿಕ ಜಾಗೃತಿ, ನೈತಿಕ ಮೌಲ್ಯಗಳನ್ನು ಅಳವಡಿಸುವುದರಲ್ಲೂ ತೊಡಗಿಸಿಕೊಂಡಿದೆ.[೬೩]

## ೨.೧೦.೪. ಗೃಹಿಣಿ ಶಾಲೆ

ಯುವ ಮಹಿಳೆಯರಿಗೆ ಸುವ್ಯವಸ್ಥಿತವಾಗಿ, ವೈಜ್ಞಾನಿಕವಾಗಿ ಮನೆಯ ನಿರ್ವಹಣೆಯನ್ನು ನಡೆಸುವುದನ್ನು ಕಲಿಸುವುದೇ ಗೃಹಿಣಿ ಶಾಲೆಯ ಪ್ರಧಾನ ಉದ್ದೇಶವಾಗಿದೆ. ಇದರಿಂದಾಗಿ ಆರೋಗ್ಯಪೂರ್ಣವಾದ ಸಂತೋಷಕರವಾದ ಮತ್ತು ನೈತಿಕ ನೆಲೆಗಟ್ಟಿನಿಂದ ಕೂಡಿದ, ಒಟ್ಟಿನಲ್ಲಿ ಸಂಪೂರ್ಣ ಹೊಸ ದೃಷ್ಟಿಕೋನದಿಂದ ಕೂಡಿದ ಬದುಕನ್ನು ರೂಪಿಸಲು ಅವಕಾಶವಿದೆ.

### ೨.೧೦.೫.ಕೈಗಾರಿಕಾ ಶಾಲೆ

'ಶಿಕ್ಷಣ ಎಂದರೆ ಜೀವನಾನುಭಗಳ ಮೂಲಕ ಜೀವನಕ್ಕೆ ನಡೆಸುವ ತಯಾರಿ' ಎಂಬ ಜಾಗೃತಿಯೊಂದಿಗೆ ಸಿಸ್ಟರ್ಸ್ ಆಫ್ ಚಾರಿಟಿಯವರು ಔಪಚಾರಿಕ (Formal system) ವಿಧಾನಕ್ಕಿಂತ ಹೊರಗಿನದಾದ ಶಿಕ್ಷಣಾರ್ಥಿಗಳ ಅಗತ್ಯ ಮತ್ತು ಆಸಕ್ತಿಗಳನ್ನಾಧರಿಸಿದ ಬದಲಿ ವ್ಯವಸ್ಥೆಯ ಶಿಕ್ಷಣ ಒದಗಿಸುವಲ್ಲಿ ತೊಡಗಿಸಿಕೊಂಡಿದ್ದಾರೆ. ಈ ರೀತಿಯ ಅನೌಪಚಾರಿಕ ಶಿಕ್ಷಣ ಪಡೆಯುವ ತಂಡಗಳನ್ನು, ಶಾಲೆಗಳಿಲ್ಲದ ಹಳ್ಳಿಗಳಲ್ಲಿ ಮತ್ತು ಸಾಮಾನ್ಯ ಶಾಲೆಗಳಿಗೆ ಹೋಗಲು ಸಾಧ್ಯವಾಗದ ಹುಡುಗ, ಹುಡುಗಿಯರಿರುವಲ್ಲಿ, ಸಂಘಟಿಸಲಾಗುತ್ತಿದೆ.[೧೬೪] ೧೯೧೩ರಲ್ಲಿ ಜೆಪ್ಪುವಿನಲ್ಲಿ ಇನ್ಫೆಂಟ್ ಮೇರಿಸ್ ಕೈಗಾರಿಕಾ ಶಾಲೆಯನ್ನು ಆರಂಭಿಸಿ, ಅನಾಥ ಹೆಣ್ಮಕ್ಕಳಿಗೆ ಕಸೂತಿ ಮತ್ತು ಹೊಲಿಗೆ ತರಬೇತಿ ನೀಡಿ, ಸ್ವತಂತ್ರ ಜೀವನ ನಡೆಸಲು ಕಲಿಸಲಾಗಿದೆ. ಹೊಸೈರಿ ವಿಭಾಗವನ್ನು ೧೯೮೯ರಲ್ಲಿ ಮುಚ್ಚಲಾಗಿದೆ. ಆದರೆ ಕೈಗಾರಿಕಾ ಶಾಲೆ ಚೆನ್ನಾಗಿ ಕಾರ್ಯಾಚರಿಸುತ್ತಿದೆ. ಈ ಕೈಗಾರಿಕಾ ಶಾಲೆಯಲ್ಲಿ ತರಬೇತಿ ಹೊಂದಿದ ಹುಡುಗಿಯರನ್ನು ಸೈಂಟ್ ಜೋಸೆಫ್ಸ್ ಅಸೈಲಮ್ ಕಾರ್ಯಗಾರದಲ್ಲಿ ತರಬೇತಿ ಪಡೆಯುತ್ತಿದ್ದ ಹುಡುಗರಿಗೆ ಮದುವೆ ಮಾಡಿಕೊಟ್ಟು, ಅವರು ಜೀವನದಲ್ಲಿ ಸ್ವಾವಲಂಭಿಗಳಾಗಲು ಅವಕಾಶ ಕಲ್ಪಿಸಲಾಗಿದೆ. ಅದೃಷ್ಟಹೀನರಾದವರಿಗೆ ಅನ್ನಹಾರಗಳನ್ನು ನೀಡಿ ಆಶ್ರಯವನ್ನು ಒದಗಿಸಿದರಷ್ಟೇ ಸಾಲದು; ಅವರು ತಮ್ಮ ಜೀವನ ನಿರ್ವಹಣೆಯಲ್ಲಿ ಸ್ವಾವಲಂಬಿಗಳಾಗುವಂತೆಯೂ ಅವರಿಗೆ ಕಲಿಸಿಕೊಡಬೇಕು. ಆದುದರಿಂದ ಜೆಪ್ಪು ಆಶ್ರಮದಲ್ಲಿರುವ ನಿವಾಸಿಗಳಿಗೆ ಶಿಕ್ಷಣ ನೀಡುವುದೇ ಅಲ್ಲದೆ, ವೃತ್ತಿ ಕೌಶಲ್ಯ ತರಬೇತಿ, ಹೊಲಿಗೆ ಮತ್ತು ಕಸೂತಿಗಳಲ್ಲಿ ಸಹ ತರಬೇತಿ ನೀಡಿ ಕೈಗಾರಿಕಾ ಶಾಲೆಗಳಲ್ಲಿ, ಇಸ್ತ್ರಿ ಅಂಗಡಿಗಳಲ್ಲಿ ಇಂಥವರಿಗೆ ಉದ್ಯೋಗವಕಾಶವನ್ನೂ ಕಲ್ಪಿಸಲಾಗುತ್ತದೆ. ಹೀಗಾಗಿ, ಅಂಥವರು ಜೀವನದಲ್ಲಿ ಒಂದು ನೆಲೆ ಕಂಡುಕೊಂಡಾಗ, ಅವರು ಸಾಮಾನ್ಯ, ಗೌರವಯುತ ಬದುಕು ಸಾಗಿಸಲು ಅವಕಾಶವಾಗುತ್ತದೆ.[೧೬೫] ಕಾಸರಗೋಡು ತಾಲೂಕಿನ ಬೇಳ ಎಂಬಲ್ಲಿ ೧೯೯೨ರಿಂದ ಹೊಲಿಗೆ ತರಬೇತಿಯನ್ನು, ಕಸೂತಿ ಕಾರ್ಯದಲ್ಲಿ ತರಬೇತಿ ಪಡೆದವರು ನೀಡುತ್ತಿದ್ದಾರೆ. ಇದರಿಂದ, ಸಾಕಷ್ಟು ಮಹಿಳೆಯರಿಗೆ ಸ್ವ ಉದ್ಯೋಗದ ಅವಕಾಶ ಸಿಕ್ಕಿದಂತಾಗಿದೆ.[೧೬೬] ೧೯೯೦ರಲ್ಲಿ ಶಾಲೆಯನ್ನು ತ್ಯಜಿಸಿದವರಿಗಾಗಿ ಹೊಲಿಗೆ ತರಗತಿಗಳನ್ನು ಕುಂಬ್ಳದ ಹೋಲಿ ಫ್ಯಾಮಿಲಿ ಶಾಲೆಯಲ್ಲಿ ಪ್ರಾರಂಭಿಸಲಾಗಿದೆ. ಆದರೆ ೨೦೦೯ರಲ್ಲಿ ಹೊಲಿಗೆ ತರಗತಿಗಳನ್ನು ನಿಲ್ಲಿಸಲಾಗಿದೆ.[೧೬೭] ಉಡುಪಿ ಜಿಲ್ಲೆಯ ಉದ್ಯಾವರ ಚರ್ಚ್ ಶಾಲೆಯಲ್ಲಿ ಧರ್ಮಭಗಿನಿಯರು ಮಹಿಳೆಯರಿಗೆ ಹೊಲಿಗೆ, ಕಸೂತಿ ಮುಂತಾದ ತರಗತಿಗಳನ್ನು ನಡೆಸುತ್ತಿದ್ದರು. ೨೦೦೭ರಿಂದ ಅಂಜೆಲೂರಿನ ಗಾರ್ಡಿಯನ್ ಏಂಜಲ್ಸ್ ಶಾಲೆಯಲ್ಲಿ ಹೊಲಿಗೆ ತರಗತಿಗಳನ್ನು ನಡೆಸಲಾಗುತ್ತಿದೆ.[೧೬೮]

ಚಾರಿಟಿ ಧರ್ಮ ಭಗಿನಿಯರು ಜಿಲ್ಲೆಯಲ್ಲಿ ಕಾಲಕಾಲಕ್ಕೆ ಅವಶ್ಯಕತೆಗನುಗುಣವಾಗಿ ಶಾಲೆ, ಕೈಗಾರಿಕಾ ತರಬೇತಿ ಕೇಂದ್ರ, ವಸತಿ ನಿಲಯ, ಅನಾಥಾಶ್ರಮ ಮುಂತಾದವುಗಳನ್ನು ಸ್ಥಾಪಿಸಿ ಮುನ್ನಡೆಸತೊಡಗಿದರು. ಅವರು ಸ್ಥಾಪಿಸಿದ ವಿದ್ಯಾಸಂಸ್ಥೆಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಅನುಕೂಲವಾಗುವಂತೆ ಸಿಸ್ಟರ್ಸ್ ಆಫ್ ಚಾರಿಟಿ ಎಜುಕೇಷನ್ ಸೊಸೈಟಿಯನ್ನು ಆರಂಭಿಸಿದರು. ಅಲ್ಲದೆ, ಚಾರಿಟಿ ಸಭೆ ಯವರು ಮಂಗಳೂರು ಧರ್ಮಪ್ರಾಂತ್ಯದ ಕಥೋಲಿಕ ವಿದ್ಯಾ ಮಂಡಲಿಯ ಅಧೀನದಲ್ಲಿರುವ ಸಾಕಷ್ಟು ಶಾಲೆಗಳನ್ನು ತಮ್ಮ ಧರ್ಮಭಗಿನಿಯರ ಮೂಲಕ ನಡೆಸಿ ವಿದ್ಯಾರ್ಜನೆಗೆ ಕಾರಣೀಭೂತರಾಗಿದ್ದಾರೆ. ಕರ್ನಾಟಕ ರಾಜ್ಯದಾದ್ಯಂತ ವ್ಯಾಪಿಸಿರುವ ಮಂಗಳೂರು ಪ್ರಾಂತ್ಯದ ಚಾರಿಟಿ ಧರ್ಮ ಭಗಿನಿಯರು ೧೯೯೮ರಲ್ಲಿ ೪೯ ಕಡೆಗಳಲ್ಲಿ ತಮ್ಮ ಕಾನ್ವೆಂಟ್‌ಗಳನ್ನು ಸ್ಥಾಪಿಸಿ ನಾನಾ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.[೧೬೯] [ ಹೆಚ್ಚಿನ ವಿವರಗಳಿಗೆ ಅನುಬಂಧ ೫ನ್ನು ಪರಾಮರ್ಶಿಸಿ]

## ೨.೧೧. ಕಥೋಲಿಕ ಶಿಕ್ಷಣ ಮಂಡಳಿ (Catholic Board of Education)

ಬಿಷಪ್ ಮಾರಿ ಎಫ್ರೆಮ್‌ರ ಮರಣದ ನಂತರ ಸೇಕ್ರೆಟ್ ಹಾರ್ಟ್ ಆಫ್ ಜೀಸಸ್ ಸಭೆಯ ಫಾ. ಪೌಲ್‌ರವರು ಮಂಗಳೂರು ವಿಕಾರಿಯೇಟ್‌ನ ಪ್ರೋ-ಎಡ್ಮಿನಿಸ್ಟ್ರೇಟರ್ ಆದರು. ಆದರೆ ೧೮೭೬ರಲ್ಲಿ ವಿಕಾರಿಯೇಟನ್ನು ಪುನಃ ವೆರಪೋಲಿಯ ವ್ಯಾಪ್ತಿಯಾಳಗೆ ತಂದು ಫಾ. ವಿಕ್ಟರ್ ಎಂಬವರನ್ನು ಪ್ರೋ-ಎಡ್ಮಿನಿಸ್ಟ್ರೇಟರ್ ಅಪೋಸ್ತಲಿಕ್ ಆಗಿ ನೇಮಕ ಮಾಡಲಾಗಿದೆ. ೧೮೭೯ರಲ್ಲಿ ಜಗದ್ಗುರುಗಳ ಆಜ್ಞೆಯ ಮೇರೆಗೆ ವಿಕಾರಿಯೇಟನ್ನು ಯೇಸು ಸಭೆಯವರಿಗೆ ಒಪ್ಪಿಸಿ, ಫಾ. ನಿಕೊಲಸ್ ಮರಿಯ ಪಾಗಾನಿ ಯವರನ್ನು ಮಂಗಳೂರು ಮಿಶನ್ನಿನ ಪ್ರೋ-ವಿಕಾರ್ ಅಪೋಸ್ತಲಿಕ್ ಆಗಿ ಆರಿಸಲಾಯಿತು. ೧೮೮೬ರಲ್ಲಿ ಮಂಗಳೂರು ಧರ್ಮಪ್ರಾಂತ್ಯ ಅಸ್ತಿತ್ವಕ್ಕೆ ಬಂದಾಗ, ಫಾ. ಪಾಗಾನಿಯವರನ್ನು ಬಿಷಪರನ್ನಾಗಿ ಅಭಿಷಿಕ್ತಗೊಳಿಸಲಾಯಿತು. ೧೮೭೯ರಿಂದ ೧೯೨೮ರವರೆಗೆ ಮಂಗಳೂರು ಧರ್ಮಪ್ರಾಂತ್ಯದ ಆಡಳಿತವನ್ನು ಧರ್ಮಾಧ್ಯಕ್ಷರುಗಳಾದ ಯೇಸುಸಭೆಯ ಪಾಗಾನಿ, ಕೆವಾದಿನಿ ಮತ್ತು ಪೆರಿನಿ ಎಂಬುವವರು ನಡೆಸಿದ್ದಾರೆ. ಇವರುಗಳ ಕಾಲದಲ್ಲಿ ಹೆಚ್ಚು ಹೆಚ್ಚು ದೇಶೀಯ ಧರ್ಮಗುರುಗಳಿಗೆ ತರಬೇತಿ ನೀಡಿ, ಧರ್ಮಪ್ರಾಂತ್ಯದ ಜವಾಬ್ದಾರಿಯನ್ನು ಅವರೇ ವಹಿಸಿಕೊಳ್ಳುವಂತೆ ಅವರನ್ನು ಅಣಿಗೊಳಿಸಲಾಗಿದೆ ಮಾತ್ರವಲ್ಲದೆ, ಪ್ರತಿಯೊಂದು ಚರ್ಚ್ ವಠಾರದಲ್ಲಿ ಒಂದೊಂದು ಶಾಲೆಯನ್ನು ಆರಂಭಿಸುವಂತೆ ಮಾಡಿ, ೧೯೨೮ರಲ್ಲಿ ಫಾ. ವಲೇರಿಯನ್ ಡಿ'ಸೋಜಾ ಎಂಬ ಡಯಾಸಿಸ್‌ನ ಮೊದಲ ದೇಶಿಯ ಬಿಷಪರ ಕೈಗೆ ಧರ್ಮಪ್ರಾಂತ್ಯದ ಆಡಳಿತವನ್ನು ಹಸ್ತಾಂತರಿಸಲಾಗಿದೆ. ಕ್ರೈಸ್ತರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಲ್ಲಲ್ಲಿ ಸ್ಥಾಪಿಸಿದಂತಹ ಶಾಲೆಗಳು ಸ್ಥಳೀಯ ಧರ್ಮಗುರುಗಳ ಮಾರ್ಗದರ್ಶನದಲ್ಲಿ ಹಾಗೂ ಊರವರ ಸಹಕಾರದಿಂದ ನಡೆಯುತ್ತಾ ಬಂದವು.

ದೂರದ ಹಳ್ಳಿಗಳಲ್ಲಿರವ ಈ ಶಾಲೆಗಳು ಧರ್ಮಕೇಂದ್ರ, ಸರಕಾರದ ಇಲಾಖೆಗಳು ಹಾಗೂ ಸಮುದಾಯದೊಂದಿಗೆ ಸೂಕ್ತ ಸಂವಹನ ಮತ್ತು ಸಂಬಂಧವನ್ನು ಹೊಂದಿರಬೇಕಿತ್ತು. ಏಕರೂಪದ ಆಡಳಿತದ ವಿಧಿ-ವಿಧಾನಗಳನ್ನು ರೂಪಿಸಬೇಕಿತ್ತು. ಗುರುಗಳ ವರ್ಗಾವಣೆಯ ನಂತರ ಆ ಸ್ಥಳದಲ್ಲಿ ಶಿಕ್ಷಣದ ಕೈಂಕರ್ಯವನ್ನು ಸಮಾನ ಆಸಕ್ತಿಯಿಂದ, ನಿರಂತರತೆಯಿಂದ ಹಾಗೂ ದೂರದೃಷ್ಟಿಯಿಂದ ಮುಂದುವರೆಸುವ ಅವಶ್ಯಕತೆ ಇತ್ತು. ಸಾಧನೆಯ ಹಾದಿಯಲ್ಲಿ ಬರುವ ಎಡರುತೊಡರುಗಳನ್ನು ಗ್ರಾಮೀಣ ಪ್ರದೇಶದ ಶಾಲೆಗಳು ಸಮರ್ಥವಾಗಿ ನಿಭಾಯಿಸಲು ಆಧಾರ ವ್ಯವಸ್ಥೆಯನ್ನು ಏರ್ಪಡಿಸಬೇಕಿತ್ತು. ಇದನ್ನು ಗ್ರಹಿಸಿದ ಅಂದಿನ ಬಿಷಪ್ ವಿ. ಆರ್. ಫೆರ್ನಾಂಡಿಸ್(೧೯೩೧-೧೯೫೫)ರವರು ಶಾಲೆಗಳ ಏಕರೂಪದ ಆಡಳಿತೆಗಾಗಿ, ಕಾರ್ಯಕ್ರಮಗಳ ಸಮನ್ವತೆಗಾಗಿ, ಗುಣಮಟ್ಟವನ್ನು ಕಾಪಾಡಲಿಕ್ಕಾಗಿ, ಅವಿಭಜಿತ ದಕ್ಷಿಣ ಕನ್ನಡ ಹಾಗೂ ಕಾಸರಗೋಡು ಜಿಲ್ಲೆಗಳಲ್ಲಿ ಹರಡಿದ್ದ ಕ್ರೈಸ್ತ ವಿದ್ಯಾಸಂಸ್ಥೆಗಳನ್ನು ೧೯೩೨ರಲ್ಲಿ ಒಂದೇ ಸೂರಿನಡಿ ತಂದು 'ಕಥೋಲಿಕ ಶಿಕ್ಷಣ ಮಂಡಳಿ'ಯನ್ನು ಸ್ಥಾಪಿಸಿದರು.[೧೭೦] ಆಗ ಧರ್ಮಪ್ರಾಂತ್ಯ (ಧಾರ್ಮಿಕರೂ ಸೇರಿ) ನಡೆಸುತ್ತಿದ್ದ ಕಥೋಲಿಕ ಶಿಕ್ಷಣ ಸಂಸ್ಥೆಗಳ ಒಟ್ಟು ಸಂಖ್ಯೆ ೧೦೩ ಪ್ರಾಥಮಿಕ, ೮ ಮಾಧ್ಯಮಿಕ, ೫ ಪ್ರೌಢಶಾಲೆಗಳು ಹಾಗೂ ಎರಡು ಮಹಾವಿದ್ಯಾಲಯಗಳು.[೧೭೧] ೧೮೬೦ರ 'ಸೊಸ್ಯಾಟೀಸ್ ರೆಜಿಸ್ಟ್ರೇಷನ್ ಆ್ಯಕ್ಟ್' ಪ್ರಕಾರ ೧೯೫೬ರಲ್ಲಿ ಮಂಗಳೂರು ಧರ್ಮ ಪ್ರಾಂತ್ಯದ ಕಥೋಲಿಕ ಶಿಕ್ಷಣ ಮಂಡಳಿಯನ್ನು ನೊಂದಾಯಿಸಲಾಗಿದೆ.[೧೭೨] ಪ್ರಸ್ತುತ ಕಥೋಲಿಕ ಶಿಕ್ಷಣ ಮಂಡಳಿಯ ಅಧೀನದಲ್ಲಿರುವ ಶಿಕ್ಷಣ ಸಂಸ್ಥೆಗಳು ಇಂತಿವೆ.

### ೨.೧೧.೧. ಪ್ರಾಥಮಿಕ ಶಾಲೆಗಳು

ಮಂಗಳೂರು ಮಿಶನ್ ಕಾರ್ಮೆಲೈಟ್ ಸಭೆಯ ಪಾಲನೆಯಲ್ಲಿದ್ದಾಗ ಮುಖ್ಯವಾಗಿ ಬಿಷಪ್ ಮೈಕಲ್ ಆ್ಯಂಟನಿಯವರ ಕಾಲದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿಯನ್ನು ಕಂಡಿದೆ. ಮುಂದೆ, ಮಿಶನ್ನಿನ ಜವಾಬ್ದಾರಿಯನ್ನು ಯೇಸು ಸಭೆಯವರು ವಹಿಸಿಕೊಂಡಾಗ ಅವರು ಶಿಕ್ಷಣಕ್ಕೆ ತಮ್ಮ ಮೊದಲ ಆದ್ಯತೆಯನ್ನು ನೀಡಿದರು. ಪರಿಣಾಮವಾಗಿ, ಹಳ್ಳಿ ಹಳ್ಳಿಗಳಲ್ಲಿಯೂ ಪ್ಯಾರಿಷ್‌ನ ಅಧೀನದಲ್ಲಿ ಪ್ರಾಥಮಿಕ ಶಾಲೆಗಳು ಆರಂಭಗೊಂಡಿವೆ. ಇವುಗಳಲ್ಲಿ ಮುಖ್ಯವಾಗಿ ಮಂಗಳೂರಿನ ಮೇರಿಮಜಲಿನ ಸಂತ ಜೋಸೆಪರ ಪ್ರಾಥಮಿಕ ಶಾಲೆಯನ್ನು ಹಾಗೂ ಉರ್ವದ ಬೋಳೂರು ಕಥೋಲಿಕ್ ಶಾಲೆಯನ್ನು ೧೮೭೫ರಲ್ಲಿಯೂ, ಕುಂದಾಪುರದ ಸಂತ ಮೇರಿ ಶಾಲೆಯನ್ನು ೧೮೮೧ರಲ್ಲಿಯೂ, ಮೂಡಬಿದ್ರೆಯ ಸಂತ ಸೆಬಾಸ್ಟಿಯನ್ನರ ಶಾಲೆಯನ್ನು ೧೮೮೨ರಲ್ಲಿ ಹಾಗೂ ಕಾಸರಗೋಡು ತಾಲೂಕಿನ ವರ್ಕಾಡಿನಲ್ಲಿ ಸಂತ ಜೋಸೆಫರ ಆಂಗ್ಲ- ದೇಶೀ ಭಾಷಿಕ ಶಾಲೆಯನ್ನು ೧೮೮೫ರಲ್ಲಿ ಸ್ಥಾಪಿಸಲಾಗಿದೆ. ಅಂತೆಯೇ,

ಕರಿಂಗಾಣ, ತಾಕೊಡೆ, ಕೂಳೂರು, ಕಲ್ಯಾಣಪುರ, ಬಜ್ಪೆ, ಸೂರಿಕುಮೇರ್, ಶಿರ್ವಾ, ಬೆಳ್ಮಣ್, ಬೊಂಡಂತಿಲ, ಅಗ್ರಾರ್, ಚೇಳೂರು, ಫಜೀರು, ಶಂಕರಾಪುರ, ಕಿನ್ನಿಗೋಳಿ, ತಾಳಿಪ್ಪಾಡಿ ಹಾಗೂ ಬೋಂದೆಲ್‌ನಲ್ಲಿ ಪ್ರಾಥಮಿಕ ಶಾಲೆಗಳು ಸ್ಥಾಪಿಸಲ್ಪಟ್ಟಿದ್ದವು.[೧೭೩] ಕಥೋಲಿಕ ಶಿಕ್ಷಣ ಮಂಡಳಿ ಈಗಾಗಲೇ ಅಸ್ತಿತ್ವದಲ್ಲಿದ್ದ ಹಾಗೂ ಇತರ ಅನೇಕ ಶಾಲೆಗಳನ್ನು ಸ್ಥಾಪಿಸಿ, ಶಿಕ್ಷಣವನ್ನು ಪ್ರತಿಯೊಬ್ಬರ ಮನೆ ಬಾಗಿಲಿಗೆ ತಲುಪಿಸುವ ಕಾರ್ಯದಲ್ಲಿ ನಿರತರಾಗಿದ್ದಾರೆ. ಡಯಾಸಿಸ್‌ನ ಧರ್ಮಗುರುಗಳು ಸ್ಥಾಪಿಸಿದ ಸಂಸ್ಥೆಗಳ ಸ್ತುತ್ಯಾರ್ಹ ಕಾರ್ಯವೆಂದರೆ ಇನ್ನೂ ಶಿಕ್ಷಣದ ಗಾಳಿ ಬೀಸದಿದ್ದಂತಹ ಹಳ್ಳಿಗಳಲ್ಲಿ ಉನ್ನತ ಶಿಕ್ಷಣದ ಸಂಸ್ಥೆಗಳನ್ನು ಪ್ರಾರಂಭಿಸಿದ್ದು. ಧಾರ್ಮಿಕ ಸಭೆಗಳ ಶಿಕ್ಷಣ ಸಂಸ್ಥೆಗಳು ನಗರಗಳಲ್ಲಿಯೇ ಕೇಂದ್ರೀಕೃತವಾಗಿದ್ದಾಗ ಮೊನ್ಸಿಞೊರ್ ಎಫ್. ಎಂ.ಪಿಂಟೋ, ಫಾ। ಎ.ಜೆ.ಟೆಲ್ಲಿಸ್, ಫಾ। ಫ್ರೆಡ್ರಿಕ್ ಪಾಯ್ಸ್, ಮೊನ್ಸಿಞೊರ್ ಆ್ಯಂಟನಿ ಪತ್ರಾವೊ, ಫಾ। ಲಿಗೋರಿ ಡಿಸೋಜಾ ಹಾಗೂ ಇತರ ಧರ್ಮಗುರುಗಳು ಉನ್ನತ ಶಿಕ್ಷಣದ ಸಂಸ್ಥೆಗಳನ್ನು ಗ್ರಾಮೀಣ ಪ್ರದೇಶಗಳಲ್ಲಿ ಹುಟ್ಟು ಹಾಕಿದರು.[೧೭೪]

### ೨.೧೧.೨. ಮಾಧ್ಯಮಿಕ ಶಾಲೆಗಳು

ಕಥೋಲಿಕ ಧರ್ಮಗುರುಗಳು ಕೇವಲ ಪ್ರಾಥಮಿಕ ಶಿಕ್ಷಣಕ್ಕೆ ಮಾತ್ರ ಪ್ರಾಮುಖ್ಯತೆ ನೀಡದೆ, ಮಾಧ್ಯಮಿಕ ಅಥವಾ ಪ್ರೌಢಶಾಲಾ ಶಿಕ್ಷಣಕ್ಕೂ ಸಾಕಷ್ಟು ಉತ್ತೇಜನ ನೀಡಿದರು. ತತ್ಪರಿಣಾಮವಾಗಿ ಧರ್ಮಪ್ರಾಂತ್ಯದಾದ್ಯಂತ ೮೦ಕ್ಕೂ ಅಧಿಕ ಪ್ರೌಢಶಾಲೆಗಳನ್ನು ಸ್ಥಾಪಿಸಲಾಗಿದೆ. ಏಳನೇ ತರಗತಿಯ ಬಳಿಕ ಶಿಕ್ಷಣವನ್ನು ಮುಂದುವರಿಸುವ ಸಮಸ್ಯೆ ಚರ್ಚ್ ಶಾಲೆಯ ಮಕ್ಕಳಿಗೆ ಎದುರಾಯಿತು. ಹೈಸ್ಕೂಲಿಗಾಗಿ ದೂರದ ಪ್ರಯಾಣ ಅನಿವಾರ್ಯವಾದ್ದರಿಂದ ಬಡ ಮಕ್ಕಳು ಶಿಕ್ಷಣ ಮುಂದುವರಿಸುವುದು ಕಷ್ಟ ಸಾಧ್ಯವಾಗಿತ್ತು. ಶಿಕ್ಷಣದ ಜಾಗೃತಿಯನ್ನು ಸಾರ್ಥಕಗೊಳಿಸಿ ಹೈಸ್ಕೂಲುಗಳನ್ನು ಸ್ಥಾಪಿಸುವ ಅಗತ್ಯವನ್ನು ಮನಗಂಡು ಗುರುಗಳ ನೇತೃತ್ವದಲ್ಲಿ ಸಮುದಾಯವು ಕಾರ್ಯೋನ್ಮುಖವಾಯಿತು. ಕಲ್ಯಾಣಪುರದಲ್ಲಿ ಫಾ। ಜೂಲಿಯನ್ ಡಿ.ಸೋಜಾರವರು, ಪುತ್ತೂರಿನಲ್ಲಿ ಫಾ। ಆ್ಯಂಟನಿ ಪತ್ರಾವೊರವರು ಮತ್ತು ಶಿರ್ವಾದಲ್ಲಿ ಫಾ। ಹಿಲರಿ ಗೊನ್ಸಾಲ್ವಿಸ್‌ರವರು ಪ್ರೌಢಶಾಲೆಗಳನ್ನು ಆರಂಭಿಸಿದರು.[೧೭೫] ತದನಂತರ ಇತರ ಹಳ್ಳಿಗಳಲ್ಲಿಯೂ ಪ್ರೌಢಶಾಲೆಗಳು ಸ್ಥಾಪಿಸಲ್ಪಟ್ಟವು.[೧೭೬] ಮಂಗಳೂರಿನ ಬೋಳಾರಿನಲ್ಲಿ ೧೮೫೮ರಲ್ಲಿ ಪ್ರಾಥಮಿಕ ಶಿಕ್ಷಣ ಪ್ರಾರಂಭಿಸಿದ ಧರ್ಮಗುರುಗಳು, ೧೮೯೮ರ ಸಮಯದಲ್ಲಿ ಶಾಲೆಯನ್ನು ಮಾಧ್ಯಮಿಕ ಹಂತಕ್ಕೆ ಉನ್ನತೀಕರಿಸಿದರು. ಮಂದೆ ರೊಜಾರಿಯೊ ಕೆಥಡ್ರೆಲ್ ಚರ್ಚಿನ ಆಡಳಿತದಲ್ಲಿ ಹೈಸ್ಕೂಲ್ ಆಗಿ ಪರಿವರ್ತಿಸಲಾಯಿತು.[೧೭೭] ಅವಿಭಾಜ್ಯ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತಾಲೂಕು ಕೇಂದ್ರದ ಹೊರಗಡೆ ಪ್ರಾರಂಭವಾದ ಪ್ರಥಮ ಪ್ರೌಢಶಾಲೆ, ಕಲ್ಯಾಣಪುರದ ಮಿಲಾಗ್ರಿಸ್ ಪ್ರೌಢಶಾಲೆ.[೧೭೮] ಸಾವಿರಾರು ಪ್ರತಿಭಾವಂತ ನಾಗರಿಕರನ್ನು

ರೂಪಿಸಿದ ಕೀರ್ತಿ ಈ ಶಾಲೆಗೆ ಸಲ್ಲುತ್ತದೆ. ದೇಶ ವಿದೇಶಗಳಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಈ ಶಾಲೆಯ ಮಕ್ಕಳು ಮಿನುಗುತ್ತಿದ್ದಾರೆ.[೧೭೯]

ಸ್ವಾತಂತ್ರ್ಯಪೂರ್ವದ ಸಂಕಷ್ಟದ ದಿನಗಳಲ್ಲಿ ಹಿಂದುಳಿದ ಪ್ರದೇಶವಾದ ಪುತ್ತೂರು ತಾಲೂಕಿನಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರತ್ಯೇಕವಾದ ಏರ್ಪಾಟಾಗಲಿ ವಿಶೇಷವಾದ ಉತ್ತೇಜನವಾಗಲೀ ಇರಲಿಲ್ಲ. ಸಮಾಜದಲ್ಲಿ ಬಹುತೇಕ ಹಿರಿಯರು ಸಂಪ್ರದಾಯವಾದಿಗಳಾದ್ದರಿಂದ ಸ್ತ್ರೀ ಶಿಕ್ಷಣದ ಕುರಿತು ಒಲವು ತೋರಿಸುತ್ತಿರಲಿಲ್ಲ. ಆದ್ದರಿಂದ ಹುಡುಗಿಯರು ಪ್ರಾಥಮಿಕ ಹಂತ ಮುಗಿದೊಡನೆ ತಮ್ಮ ವಿದ್ಯಾಭ್ಯಾಸಕ್ಕೆ ತಿಲಾಂಜಲಿ ಕೊಡುತ್ತಿದ್ದರು. ದೂರದ ಊರುಗಳಲ್ಲಿದ್ದ ಹುಡುಗಿಯರ ಶಾಲೆಗಳಿಗೆ ಮಕ್ಕಳನ್ನು ಕಳುಹಿಸಿ ಕೊಡುವುದು ಕಷ್ಟಕರವಾಗಿತ್ತು. ಇಂಥ ಕ್ಲಿಷ್ಟಕರ ಪರಿಸ್ಥಿತಿಯಲ್ಲಿ, ಸಂತ ವಿಕ್ಟರನ ಬಾಲಿಕಾ ಪ್ರೌಢಶಾಲೆಯನ್ನು ಫಾ। ಆ್ಯಂಟನಿ ಪತ್ರಾವೊರವರು ಆರಂಭಿಸಿದರು. ಪ್ರಾರಂಭದಲ್ಲಿ ನಾನಾ ಕಾರಣಗಳಿಂದಾಗಿ ಶಾಲೆಯಲ್ಲಿ ವಿದ್ಯಾರ್ಥಿನಿಯರ ಸಂಖ್ಯೆ ಎರಡಂಕೆಯನ್ನು ಮೀರಲಿಲ್ಲ. ವಿರೋಧಿಗಳು ಮತ್ತು ಮತ್ಸರಿಗಳು ಸಂಸ್ಥೆಯ ಕುರಿತು ಟೀಕೆ - ಸಂದೇಹಗಳನ್ನು ವ್ಯಕ್ತಪಡಿಸಿದರು. ಶಾಲೆಯನ್ನು ಸಂಶಯದಿಂದಲೇ ಕಂಡ ಊರವರು ಅದು ಧರ್ಮ ನಿರಪೇಕ್ಷವಾದುದೆಂದು ಮನವರಿಕೆಯಾದೊಡನೆಯೇ ತಮ್ಮ ಹೆಣ್ಣು ಮಕ್ಕಳನ್ನು ಯಾವುದೇ ಹಿಂಜರಿಕೆ ಇಲ್ಲದೆ ಕಳುಹಿಸತೊಡಗಿದರು.[೧೮೦] ೧೯೪೪ರಲ್ಲಿ ಮಂಗಳೂರಿನ ಮಿಲಾಗ್ರಿಸ್ ಪ್ರೌಢಶಾಲೆ ಸ್ಥಾಪನೆಯಾಗಿ, ೧೯೫೪ರಲ್ಲಿ ಶಾಶ್ವತ ಅನುದಾನಕ್ಕೆ ಒಳಪಟ್ಟಿತು.[೧೮೧] ಅಂತೆಯೇ, ಬಜ್ಪೆಯಲ್ಲಿ ಸಂತ ಜೋಸೆಫರ ಪ್ರೌಢಶಾಲೆ ಹಾಗೂ ಮಂಗಳೂರಿನ ಜೆಪ್ಪುವಿನಲ್ಲಿರುವ ಕಾಸ್ಸಿಯಾ ಪ್ರೌಢಶಾಲೆ ಕ್ರಮವಾಗಿ ೧೯೪೫ ಮತ್ತು ೧೯೪೬ರಲ್ಲಿ ಸ್ಥಾಪಿಸಲ್ಪಟ್ಟಿದೆ.[೧೮೨]

ಫಾ। ಅಂತೋನಿ ಪತ್ರಾವೋ ಅವರಿಂದ ೧೯೩೯ರಲ್ಲಿ ಸ್ಥಾಪನೆಗೊಂಡ ಮಾಯ್‌ದೆ ದೇವುಸ್ ಶಾಲೆಯು ಒಂದು ಕಿರಿಯ ಪ್ರಾಥಮಿಕ ಶಾಲೆಯಾಗಿತ್ತು. ೧೯೪೭ರಲ್ಲಿ ಮ್ಯಾದೆ ದೇವುಸ್ ಹಿರಿಯ ಪ್ರಾಥಮಿಕ ಶಾಲೆ ಆರಂಭವಾಯಿತು. ನಂತರ ೧೯೪೯ರಲ್ಲಿ ಮ್ಯಾದೆ ದೇವುಸ್ ಹಿರಿಯ ಪ್ರಾಥಮಿಕ ಶಾಲೆಯನ್ನು ಸಂತ ಫಿಲೋಮಿನಾ ಬಾಲಕರ ಪ್ರೌಢಶಾಲೆಯಾಗಿ ಪರಿವರ್ತಿಸಲಾಯಿತು.[೧೮೩] ಪ್ರಾರಂಭದಲ್ಲಿ ಕೇವಲ ಹನ್ನೆರಡು ವಿದ್ಯಾರ್ಥಿಗಳ ಸೇರ್ಪಡೆಯೊಂದಿಗೆ ಸಣ್ಣ ಪ್ರಮಾಣದಲ್ಲಿ ಪ್ರಾರಂಭಗೊಂಡ ಶಾಲೆಯು ಕ್ರಮೇಣ ಬೆಳೆಯುತ್ತಾ ಬಂದು ೨೦೦೮ರಲ್ಲಿ ೭೩೫ ಬಾಲಕರು ಹಾಗೂ ೩೨೪ ಬಾಲಕಿಯರು ಸೇರಿ ಒಟ್ಟು ೧೦೫೯ ಮಂದಿ ವಿದ್ಯಾರ್ಜನೆ ನಡೆಸುತ್ತಿದ್ದಾರೆ. ಹುಡುಗರ ಶಾಲೆಯಾಗಿದ್ದ ಸಂಸ್ಥೆಯನ್ನು ೨೦೦೩ರಲ್ಲಿ ಸಹಶಿಕ್ಷಣ ವಿದ್ಯಾಲಯವಾಗಿ ಪರಿವರ್ತಿಸಲಾಗಿದೆ.[೧೮೪] ಕಾಲಕ್ರಮೇಣ, ಅತ್ತೂರು (೧೯೬೧), ಕುಳೂರು (೧೯೬೨), ಕುಂದಾಪುರ (೧೯೬೬), ನಾರಾವಿ (೧೬೬೬), ಪೇಜಾವರ

(೧೬೬೬) ತಾಳಿಪ್ಪಾಡಿ ಮುಂತಾದ ಕಡೆಗಳಲ್ಲಿ ಪ್ರೌಢಶಾಲೆಗಳನ್ನು ಆರಂಭಿಸಲಾಗಿದೆ.[೧೮೫] ಹೆಚ್ಚಿನ ಪ್ರೌಢ ಶಾಲೆಗಳನ್ನು ಉನ್ನತೀಕರಿಸಿ ಪದವಿ ಪೂರ್ವ ವಿದ್ಯಾಲಯಗಳಾಗಿ ಪರಿವರ್ತಿಸಲಾಗಿದೆ.

ಪ್ರೌಢಶಾಲೆಗಳ ಸ್ಥಾಪನೆಯಿಂದ ಗ್ರಾಮೀಣ ಬಡ ಮಕ್ಕಳಿಗೆ ಉನ್ನತ ಶಿಕ್ಷಣದ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದು ಮಾತ್ರವಲ್ಲದೆ ತಮ್ಮ ಮುಂದಿನ ಜೀವನಕ್ಕೆ ಒಂದು ದಾರಿಯನ್ನು ಮಾಡಿಕೊಟ್ಟಿತು. ಪ್ರೌಢಶಿಕ್ಷಣ ಮುಗಿಸಿ ಶಿಕ್ಷಕ ತರಬೇತಿಗಾಗಿ ಅಥವಾ ಕೈಗಾರಿಕಾ ತರಬೇತಿಗೆ ದಾಖಲಾಗಲು ಅವಕಾಶವಿದ್ದುದರಿಂದ ವಿದ್ಯಾರ್ಥಿಗಳಿಗೆ ತಮ್ಮ ಭವಿಷ್ಯ ರೂಪಿಸಿಕೊಳ್ಳಲು ಒಳ್ಳೆಯ ಅವಕಾಶ ಲಭಿಸಿದೆ.

ಜಾಗತೀಕರಣದ ಪ್ರಭಾವದಿಂದ ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗಾಗಿ ಬೇಡಿಕೆ ಹೆಚ್ಚಾದಾಗ, ಆಡಳಿತ ಮಂಡಳಿಯವರು ಸೂಕ್ತವಾಗಿ ಸ್ಪಂದಿಸಿದರು. ಸ್ವಾತಂತ್ರ್ಯ ಪೂರ್ವದಿಂದಲೇ ಆಂಗ್ಲ ಮಾಧ್ಯಮದ ಶಿಕ್ಷಣವನ್ನು ರೊಜಾರಿಯೊ, ಕಲ್ಯಾಣಪುರ, ಮಿಲಾಗ್ರಿಸ್- ಮಂಗಳೂರು ಮುಂತಾದ ಕಡೆಗಳಲ್ಲಿ ನೀಡಲಾಗಿದೆ. ಕೆಲವು ಪ್ರೌಢಶಾಲೆಗಳಲ್ಲಿ ಕನ್ನಡದೊಂದಿಗೆ ಆಂಗ್ಲಮಾಧ್ಯಮದ ತರಗತಿಗಳಿದ್ದವು. ಪ್ರಾಥಮಿಕ ಶಾಲೆಗಳಲ್ಲೂ ಆಂಗ್ಲಮಾಧ್ಯಮದ ಬೇಡಿಕೆ ಬಂದಾಗ ೧೯೭೦ರಲ್ಲಿ ಫಾ। ಆ್ಯಂಟನಿ ಪತ್ರಾವೋ ಅವರು ಪುತ್ತೂರಿನಲ್ಲಿ ಬಾಲಕಿಯರಿಗಾಗಿಯೇ ಸೈಂಟ್ ವಿಕ್ಟರ್ಸ್ ಆಂಗ್ಲ ಮಾಧ್ಯಮ ಶಾಲೆಯನ್ನೂ,[೧೮೬] ೧೯೭೨ರಲ್ಲಿ ಕಾಸ್ಸಿಯಾ-ಮಂಗಳೂರಿನಲ್ಲಿ ಫಾ। ಜಾನ್ ಎಂ.ಮಿನೇಜಸ್‌ರವರು ಸೈಂಟ್ ರೀಟಾಸ್ ಆಂಗ್ಲ ಮಾಧ್ಯಮ ಶಾಲೆಯನ್ನೂ ಸ್ಥಾಪಿಸಿದರು. ಬಜ್ಪೆಯಲ್ಲಿ ೧೯೭೫ರಲ್ಲಿ ಗ್ರೇಶನ್ ಆರೋಜಾ ಪೈಯವರು ಬಜ್ಪೆ ಏರ್‌ಪೋರ್ಟ್ ಆಂಗ್ಲ ಮಾಧ್ಯಮ ಶಾಲೆ ಅಥವಾ 'ಮೋರ್ನಿಂಗ್ ಸ್ಟಾರ್ ಆಂಗ್ಲ ಮಾಧ್ಯಮ ಶಾಲೆ'ಯನ್ನು ಆರಂಭಿಸಿದರು. ಕಾಲಕ್ರಮೇಣ ಕಲ್ಯಾಣಪುರದ ಮಿಲಾಗ್ರಿಸ್, ಮೌಂಟ್ ರೋಜರಿ ಶಾಲೆ, ಉಜಿರೆಯ ಅನುಗ್ರಹ, ಉಡುಪಿಯ ಸೈಂಟ್ ಮೇರಿಸ್, ಶಿರ್ವದ ಡೋನ್ ಬೋಸ್ಕೊ, ಮಂಗಳೂರಿನ ರೊಜಾರಿಯೊ, ಮಿಲಾಗ್ರಿಸ್ ಮುಂತಾದ ಶಾಲೆಗಳು ಸ್ಥಾಪನೆಯಾದವು.

### ೨.೧೧.೩. ಕಾಲೇಜುಗಳು

ಕಥೋಲಿಕ ಶಿಕ್ಷಣ ಮಂಡಳಿಯ ಅಧೀನದಲ್ಲಿರುವ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಮೊತ್ತ ಮೊದಲನೆಯದು, ಪುತ್ತೂರಿನ ಸಂತ ಫಿಲೋಮಿನಾ ಕಾಲೇಜು. ಪುತ್ತೂರಿನ ಶೈಕ್ಷಣಿಕ ಕ್ಷೇತ್ರದಲ್ಲಿ ದಿಟ್ಟ ಹೆಜ್ಜೆಗಳನ್ನಿಡುತ್ತಾ ಮುಂದುವರಿದ ಫಾ। ಆ್ಯಂಟನಿಯವರ ಮನದಲ್ಲಿದ್ದ ಬಹು ಮಹತ್ವಾಕಾಂಕ್ಷೆಯ ಯೋಜನೆಯೆಂದರೆ ಮಲೆನಾಡಿನ ಪ್ರದೇಶದ ಯುವಜನರಿಗಾಗಿ ಮಹಾವಿದ್ಯಾಲಯವೊಂದನ್ನು ತೆರೆದು, ಮಾನವಿಕ ಹಾಗೂ ವಾಣಿಜ್ಯಶಾಸ್ತ್ರ ವಿಭಾಗಗಳ ಜೊತೆಗೆ ಪ್ರಾರಂಭದಿಂದಲೇ ವಿಜ್ಞಾನ ವಿಭಾಗವನ್ನೂ ಅಳವಡಿಸಬೇಕೆಂಬುದು. ೧೯೫೮ರಲ್ಲಿ ಮದರಾಸು ಪ್ರಾಂತ್ಯದ ಮುಖ್ಯಮಂತ್ರಿ ಕಾಮರಾಜ ನಾಡಾರ್

ಪುತ್ತೂರಿಗೆ ಬಂದಾಗ ಫಾ। ಪತ್ರಾವೋ ಅವರು ಸಾರ್ವಜನಿಕರ ಪರವಾಗಿ ಮನವಿಯೊಂದನ್ನು ಸಮರ್ಪಿಸಿ ಹಿಂದುಳಿದ ಪ್ರದೇಶವಾದ ಪುತ್ತೂರಿಗೆ ಒಂದು ಪ್ರಥಮ ದರ್ಜೆ ಕಾಲೇಜಿನ ಅಗತ್ಯವಿರುವುದನ್ನು ಮನವರಿಕೆ ಮಾಡಿಕೊಟ್ಟರು. ಪ್ರಸ್ತಾವನೆಯನ್ನು ಸ್ವಾಗತಿಸಿದ ನಾಡಾರ್ "ಸರಕಾರವು ಕಾಲೇಜಿನ ಸ್ಥಾಪನೆಗೆ ಬೆಂಬಲ ನೀಡುವುದು ಆದರೆ ಸರಕಾರಿ ಕಾಲೇಜಿನ ವ್ಯವಸ್ಥೆ ಅಸಾಧ್ಯವಾದುದರಿಂದ ಖಾಸಗಿ ಪ್ರಯತ್ನ ನಡೆಸುವುದು ಸೂಕ್ತ" ಎಂದು ನುಡಿದರು. ಫಾ। ಪತ್ರಾವೊರವರು ಖಾಸಗಿ ಪ್ರಯತ್ನದ ಸವಾಲನ್ನು ಗಂಭೀರವಾಗಿ ಸ್ವೀಕರಿಸಿದರು. ೧ ಜುಲೈ ೧೯೫೮ರಂದು ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿ ಮಹಾಕವಿ ಕೆ.ವಿ.ಪುಟ್ಟಪ್ಪನವರ ಅಧ್ಯಕ್ಷತೆಯಲ್ಲಿ ಶಿಕ್ಷಣ ಸಚಿವ ಗಣಮುಖಿಯವರು ಸಂತ ಫಿಲೋಮಿನಾ ಕಾಲೇಜನ್ನು ಉದ್ಘಾಟಿಸಿದರು.[೧೮೭] ಕವಿ ಕೆ.ವಿ.ಪುಟ್ಟಪ್ಪನವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಫಾ। ಪತ್ರಾವೋರವರನ್ನು ಕುರಿತು ಹೀಗೆಂದರು: "ರೆ।ಫಾ। ಪತ್ರಾವೋರವರ ಚಟುವಟಿಕೆ ಉತ್ಸಾಹ ಆವೇಶಗಳನ್ನು ಕಂಡು ನನಗೆ ಪಾದರಸದ ನೆನಪಾಯಿತು. ಇನ್ನೇನೂ ದಾರಿದ್ರ್ಯವಿದ್ದರೂ ಚಿಂತೆಯಿಲ್ಲ. ಹೃದಯದಲ್ಲಿ ಶ್ರದ್ಧೆ, ತಲೆಯಲ್ಲಿ ಬುದ್ಧಿ ಇದ್ದರೆ ಏನನ್ನೂ ಸಾಧಿಸಬಹುದು ಎಂಬುದಕ್ಕೆ ಈ ಸಂಸ್ಥೆ ಒಂದು ನಿದರ್ಶನ".[೧೮೮] ಪುತ್ತೂರು ಹಾಗೂ ಆಸುಪಾಸಿನ ಹಳ್ಳಿ ಪ್ರದೇಶದ ಕಥೋಲಿಕ ಯುವ ಜನತೆಯ ಶಿಕ್ಷಣವನ್ನು ಪ್ರಧಾನ ಲಕ್ಷ್ಯವಾಗಿರಿಸಿ ಕಾಲೇಜನ್ನು ಸ್ಥಾಪಿಸಲಾಯಿತಾದರೂ ಜಾತಿ, ಮತ, ಧರ್ಮ ಭೇದವಿಲ್ಲದೆ ಎಲ್ಲಾ ಶಿಕ್ಷಣಾಕಾಂಕ್ಷಿಗಳಿಗೆ ಮುಕ್ತ ಅವಕಾಶ ನೀಡುತ್ತಾ ಬಂದಿದೆ. ಹಲವು ದಶಕಗಳಿಂದ ಈ ಶಿಕ್ಷಣ ಸಂಸ್ಥೆಗೆ ಕರ್ನಾಟಕದಲ್ಲಿ ಮಾತ್ರವಲ್ಲದೆ ನೆರೆಯ ರಾಜ್ಯಗಳಲ್ಲಿ ಕೂಡಾ ಅತ್ಯುತ್ತಮ ಶಿಕ್ಷಣ ಸಂಸ್ಥೆಯೆಂಬ ಮನ್ನಣೆ ಇದೆ.[೧೮೯]

ಕಲ್ಯಾಣಪುರದ ಮಿಲಾಗ್ರಿಸ್ ಕಾಲೇಜು ಮೊನ್ಸಿಞೊರ್ ಡಿ. ಜೆ. ಡಿಸೋಜರ ಪ್ರಯತ್ನ ಹಾಗೂ ಮೊನ್ಸಿಞೊರ್ ವಿಲಿಯಂ ಲೂವಿಸ್‌ರವರ ಸಹಕಾರದಿಂದ ೧ ಜುಲೈ ೧೯೬೭ ರಲ್ಲಿ ಸ್ಥಾಪನೆಯಾಯಿತು. ಕಲ್ಯಾಣಪುರ ಹಾಗೂ ಆಸುಪಾಸಿನ ಪರಿಸರದ ಯುವಕ-ಯುವತಿಯರಿಗೆ ಮುಂದಿನ ಜೀವನಕ್ಕೆ ದಾರಿ ತೋರಿಸುವ ಶಿಕ್ಷಣವನ್ನು ತಮ್ಮ ಹಳ್ಳಿಯಲ್ಲಿಯೇ ಒದಗಿಸುವುದು ಕಾಲೇಜಿನ ಮುಖ್ಯ ಉದ್ದೇಶವಾಗಿತ್ತು. ಇಡೀ ಉಡುಪಿ ಜಿಲ್ಲೆಯಲ್ಲಿ ಕ್ರೈಸ್ತರು (ಕಥೋಲಿಕ, ಸಿರಿಯನ್, ಪ್ರೊಟೆಸ್ಟೆಂಟ್, ಧಾರ್ಮಿಕ ಧರ್ಮಭಗಿನಿಯರೂ ಸೇರಿ) ನಡೆಸುವ ಏಕೈಕ ವಿಜ್ಞಾನ ವಿಭಾಗವಿರುವ ಕಾಲೇಜೆಂದರೆ ಅದು ಮಿಲಾಗ್ರಿಸ್ ಕಾಲೇಜು ಕಲ್ಯಾಣಪುರ ಮಾತ್ರ.[೧೯೦] ಮೊನ್ಸಿಞೊರ್ ಹಿಲರಿ ಗೊನ್ಸಾಲ್ವಿಸ್‌ರವರು ೧೯೪೭ರಲ್ಲಿ ಸಂತ ಮೇರಿಸ್ ಪ್ರೌಢಶಾಲೆಯನ್ನು ಆರಂಭಿಸಿದ್ದರು. ನಂತರ ೧೯೭೨ ರಲ್ಲಿ ಅದನ್ನು ಪದವಿಪೂರ್ವ ಕಾಲೇಜಾಗಿ ಉನ್ನತೀಕರಿಸಿದರು. ೧೯೮೦ರಲ್ಲಿ ಫಾ। ಅಲೋಶಿಯಸ್ ರೊಜಾರಿಯೊರವರು ಸೈಂಟ್ ಮೇರಿಸ್ ಪದವಿ ಕಾಲೇಜನ್ನು ಆರಂಭಿಸಿದರು.[೧೯೧] ೧೯೮೧ರಲ್ಲಿ

ಐಕಳದ ಪೊಂಪೈ ಪದವಿ ಕಾಲೇಜನ್ನು ಆರಂಭಿಸಲಾಗಿದೆ.[೯೨] ೧೯೮೧ರಲ್ಲಿ ಸೇಕ್ರೆಡ್ ಹಾರ್ಟ್ ಪ್ರೌಢಶಾಲೆ ಮಡಂತ್ಯಾರಿನಲ್ಲಿ ಉದಯವಾಗಿ ಕೆಲದಿನಗಳಲ್ಲಿಯೇ ಸೇಕ್ರೆಡ್ ಹಾರ್ಟ್ ಪದವಿ ಪೂರ್ವ ವಿದ್ಯಾಲಯವಾಗಿ ನಾಮಕರಣಗೊಂಡಿದೆ. ಪದವಿ ಪೂರ್ವ ಮಹಾವಿದ್ಯಾಲಯದ ಸ್ಥಾಪನೆಗೆ ಕಾರಣರಾಗಿದ್ದ ಫಾ। ಲಿಗೋರಿ ಡಿಸೋಜ ಅವರು ೧೯೮೨ರಲ್ಲಿ ಪದವಿ ಕಾಲೇಜನ್ನು ಸ್ಥಾಪಿಸಿದ್ದಾರೆ. ಬಜ್ಪೆ, ಮೂಡುಬೆಳ್ಳೆ, ಮಿಲಾಗ್ರಿಸ್–ಮಂಗಳೂರು, ಕಿರೆಂ, ಐಕಳ ಮಡಂತ್ಯಾರು, ಶಿರ್ವಾ ಇಲ್ಲಿರುವ ಪ್ರೌಢಶಾಲೆಗಳನ್ನು ಪದವಿ ಪೂರ್ವ ಕಾಲೇಜುಗಳನ್ನಾಗಿ ಉನ್ನತೀಕರಿಸಲಾಗಿದೆ. ಮುಂದೆ ಸರಕಾರದ ಅನುದಾನಕ್ಕೂ ಕಾಯದೆ, ಸಮುದಾಯದ ಒತ್ತಾಸೆಯಿಂದ ಕುಂದಾಪುರ, ನಂತೂರು, ನಾರಾವಿ, ಕಡಬ, ಪಾಂಗಾಳ, ಪೆರ್ಮನ್ನೂರು ಮುಂತಾದ ಕಡೆಗಳಲ್ಲೂ ಪದವಿ ಪೂರ್ವ ಕಾಲೇಜುಗಳನ್ನು ಸ್ಥಾಪಿಸಲಾಗಿದೆ.[೯೩]

ಉನ್ನತ ಶಿಕ್ಷಣದ ಮಹತ್ವವನ್ನು ಚೆನ್ನಾಗಿ ಅರ್ಥೈಸಿಕೊಂಡಿದ್ದ ಕಥೋಲಿಕ ಕ್ರೈಸ್ತರು ಸಾಕಷ್ಟು ಪ್ರಮಾಣದಲ್ಲಿ ಅದನ್ನು ಉಪಯೋಗಿಸಿಕೊಂಡರು. ಕ್ರೈಸ್ತ ಮಕ್ಕಳಿಗೆ ವಿದ್ಯಾಭ್ಯಾಸ ನೀಡುವ ಉದ್ದೇಶದಿಂದ ಶಾಲಾ – ಕಾಲೇಜುಗಳು ಸ್ಥಾಪಿತವಾಗಿದ್ದರೂ ಕ್ರೈಸ್ತೇತರರೂ ಇದರ ಲಾಭವನ್ನು ಗರಿಷ್ಟ ಪ್ರಮಾಣದಲ್ಲಿ ಪಡೆದುಕೊಂಡರು. ಇದನ್ನು ಕುರಿತು ೧೯೨೫ರಲ್ಲಿ ಫಾ। ಹೋಪರ್ಟ್ ಅವರು 'ದಿ ಕಥೋಲಿಕ್ ಡೈರೆಕ್ಟರಿ ಆಫ್ ಇಂಡಿಯಾ' ಗ್ರಂಥದ ತಮ್ಮ ಪ್ರಸ್ತಾವನೆಯಲ್ಲಿ ಭಾರತದ ಕ್ರೈಸ್ತ ಜನರಲ್ಲಿ ಇರುವ ಅಪಾರ ಪ್ರಮಾಣದ ನಿರಕ್ಷರತೆಯ ಕುರಿತು ಗಮನವನ್ನು ಸೆಳೆದಿದ್ದಾರೆ. ಶೇ.೨೦ರಷ್ಟು ಕ್ರೈಸ್ತರು ನಗರವಾಸಿಗಳಾಗಿದ್ದಾರೆ. ನಗರಗಳಲ್ಲಿ ಕಥೋಲಿಕರ ಶಿಕ್ಷಣ ಸಂಸ್ಥೆಗಳು ಸಾಕಷ್ಟು ಪ್ರಬಲವಾಗಿದ್ದರೂ ಶೇ.೮೦ರಷ್ಟು ಕ್ರೈಸ್ತರು ನಿರಕ್ಷರಿಗಳು. ಪ್ರಮುಖ ಕೇಂದ್ರಗಳಲ್ಲಿ ಕ್ರೈಸ್ತ ಮಹಾವಿದ್ಯಾಲಯಗಳು ಮತ್ತು ಕಾನ್ವೆಂಟುಗಳು ಇವೆ. ಆದರೆ ಹಳ್ಳಿಯಲ್ಲಿರುವ ಕ್ರೈಸ್ತರಲ್ಲಿ ಬಹಳ ಮಂದಿ ನಿರ್ಲಕ್ಷ್ಯದಿಂದ ಬಳಲುತ್ತಿದ್ದಾರೆ. ಕ್ರೈಸ್ತ ಧರ್ಮಗುರುಗಳು ಸುವಾರ್ತೆ ಪ್ರಸಾರ ಮಾಡುವ ಕೆಲಸದಲ್ಲಿ ಮತ್ತು ತಮ್ಮದೇ ಗುಂಪಿನವರ ಆಧ್ಯಾತ್ಮಿಕ ಅಗತ್ಯಗಳನ್ನು ಪೂರೈಸಿಕೊಳ್ಳುವುದರಲ್ಲಿ ಸಮಯವನ್ನು ಕಳೆಯುವುದರಿಂದ ಗ್ರಾಮೀಣ ಜನರ ಶಿಕ್ಷಣಕ್ಕಾಗಿ ಅವರಿಗೆ ಸಮಯ ದೊರೆಯುತ್ತಿಲ್ಲ. ಬಹುಪಾಲು ಡಯಾಸಿಸ್ ಗ್ರಾಮ ಶಿಕ್ಷಣವನ್ನು ಸ್ಥಳೀಯ ಬೋರ್ಡ್ ಶಾಲೆಗಳ ವಶಕ್ಕೆ ಒಪ್ಪಿಸಲಾಗಿದೆ. ಪ್ಯಾರಿಶ್ ಶಾಲೆಗಳು ಇರುವ ಕಡೆಗಳಲ್ಲಿ ಅವುಗಳ ಸಮಸ್ಯೆಯ ಅಂಚನ್ನು ತಲುಪುವುದಷ್ಟೇ ಇವುಗಳಿಗೆ ಸಾಧ್ಯವಾಗಿದೆ.[೯೪] ಕಥೋಲಿಕ ಶಿಕ್ಷಣ ಮಂಡಳಿ ಸ್ಥಾಪನೆಯಾದಾಗ ಮಂಗಳೂರಿನ ರೊಜಾರಿಯೊ ಪ್ರೌಢಶಾಲೆ ಹಾಗೂ ಕಲ್ಯಾಣಪುರದ (೧೯೩೧) ಮಿಲಾಗ್ರಿಸ್ ಪ್ರೌಢಶಾಲೆಗಳು ಮಾತ್ರ ಉನ್ನತ ಶಿಕ್ಷಣ ನೀಡುತ್ತಿದ್ದ ಧರ್ಮಗುರುಗಳ ಅಧೀನದಲ್ಲಿದ್ದ ಸಂಸ್ಥೆಗಳಾಗಿದ್ದವು. ಆದರೆ ೧೯೩೨ರಲ್ಲಿ ಕಥೊಲಿಕ ಶಿಕ್ಷಣ ಮಂಡಳಿಯ ಸ್ಥಾಪನೆಯ ಬಳಿಕ ಸಾಕಷ್ಟು ವಿದ್ಯಾ

ಸಂಸ್ಥೆಗಳು ಜನ್ಮ ತಾಳಿದವು. ಮುಖ್ಯವಾಗಿ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ಶಿಕ್ಷಣ ಕ್ಷೇತ್ರದಲ್ಲಿ ಮಹಾನ್ ಕ್ರಾಂತಿಯೇ ಉಂಟಾಯಿತು. ದಕ್ಷಿಣ ಕನ್ನಡ ಜಿಲ್ಲೆ ಮದ್ರಾಸ್ ಪ್ರಾಂತ್ಯದ ಆಡಳಿತಕ್ಕೆ ಒಳಪಟ್ಟಿದ ಸಮಯದಲ್ಲಿ ಯಾವುದೇ ಒಂದು ಶಿಕ್ಷಣ ಸಂಸ್ಥೆ ಪ್ರಾರಂಭಿಸುವುದು ಸುಲಭದ ಕೆಲಸವಾಗಿರಲಿಲ್ಲ. ಶಾಲೆಗಾಗಿ ಅನುಮತಿ ಪಡೆಯಲು ಹಲವಾರು ಬಾರಿ ಸ್ವತಃ ಮದ್ರಾಸಿಗೆ ಹೋಗಿ ಬರಬೇಕಾಗುತ್ತಿತ್ತು, ಆ ಸಮಯದಲ್ಲಿ ಸಾರಿಗೆ ಮತ್ತು ಸಂಪರ್ಕ ಮಾಧ್ಯಮ ಸಾಕಷ್ಟು ಅಭಿವೃದ್ದಿ ಹೊಂದಿರದಿದ್ದರಿಂದ ಪ್ರಯಾಣ ತುಂಬಾ ತ್ರಾಸದಾಯಕವೂ ಹಾಗೂ ದುಬಾರಿಯೂ ಆಗುತ್ತಿತ್ತು. ೧೯೫೦ರ ನಂತರ ಶಿಕ್ಷಣ ನೀತಿಯಲ್ಲಿ ಸಾಕಷ್ಟು ಸುಧಾರಣೆಯಾಗಿ, ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದು ಸ್ವಲ್ಪ ಸುಲಭವಾಯಿತು. ಆದುದರಿಂದ ಸಾಕಷ್ಟು ಉನ್ನತ ಶಿಕ್ಷಣ ಸಂಸ್ಥೆಗಳು ೨೦ನೇ ಶತಮಾನದ ಉತ್ತರಾರ್ಧದಲ್ಲಿ ಸ್ಥಾಪಿಸಲ್ಪಟ್ಟಿವೆ. [೧೯೫] ಜಾಗತೀಕರಣದ ಪ್ರಭಾವದಿಂದ ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗಾಗಿ ಬೇಡಿಕೆ ಹೆಚ್ಚಾದಾಗ, ಆಡಳಿತ ಮಂಡಳಿಯವರು ಸೂಕ್ತವಾಗಿ ಸ್ಪಂದಿಸಿದರು. ಸ್ವಾತಂತ್ರ್ಯ ಪೂರ್ವದಿಂದಲೇ ಆಂಗ್ಲ ಮಾಧ್ಯಮದ ಶಿಕ್ಷಣವನ್ನು ರೊಜಾರಿಯೊ, ಕಲ್ಯಾಣಪುರ, ಮಿಲಾಗ್ರಿಸ್- ಮಂಗಳೂರು ಮುಂತಾದ ಕಡೆಗಳಲ್ಲಿ ನೀಡಲಾಗಿದೆ. ಕೆಲವು ಪ್ರೌಢಶಾಲೆಗಳಲ್ಲಿ ಕನ್ನಡದೊಂದಿಗೆ ಆಂಗ್ಲಮಾಧ್ಯಮದ ತರಗತಿಗಳಿದ್ದವು. ಪ್ರಾಥಮಿಕ ಶಾಲೆಗಳಲ್ಲೂ ಆಂಗ್ಲಮಾಧ್ಯಮದ ಬೇಡಿಕೆ ಬಂದಾಗ ೧೯೭೦ರಲ್ಲಿ ಫಾ। ಆ್ಯಂಟನಿ ಪತ್ರಾವೋ ಅವರು ಪುತ್ತೂರಿನಲ್ಲಿ ಬಾಲಕಿಯರಿಗಾಗಿಯೇ ಸೈಂಟ್ ವಿಕ್ಟರ್ಸ್ ಆಂಗ್ಲ ಮಾಧ್ಯಮ ಶಾಲೆಯನ್ನೂ,[೧೯೬] ೧೯೭೨ರಲ್ಲಿ ಕಾಸ್ಸಿಯಾ-ಮಂಗಳೂರಿನಲ್ಲಿ ಫಾ। ಜಾನ್ ಎಂ.ಮಿನೇಜಸ್‌ರವರು ಸೈಂಟ್ ರೀಟಾಸ್ ಆಂಗ್ಲ ಮಾಧ್ಯಮ ಶಾಲೆಯನ್ನೂ ಸ್ಥಾಪಿಸಿದರು. ಬಜ್ಪೆಯಲ್ಲಿ ೧೯೭೫ರಲ್ಲಿ ಗ್ರೇಶನ್ ಆರೋಜಾ ಪೈಯವರು ಬಜ್ಪೆ ಏರ್‌ಪೋರ್ಟ್ ಆಂಗ್ಲ ಮಾಧ್ಯಮ ಶಾಲೆ ಅಥವಾ 'ಮೊರ್ನಿಂಗ್ ಸ್ಟಾರ್ ಆಂಗ್ಲ ಮಾಧ್ಯಮ ಶಾಲೆ'ಯನ್ನು ಆರಂಭಿಸಿದರು. ಕಾಲಕ್ರಮೇಣ ಕಲ್ಯಾಣಪುರದ ಮಿಲಾಗ್ರಿಸ್, ಮೌಂಟ್ ರೋಜರಿ ಶಾಲೆ, ಉಜಿರೆಯ ಅನುಗ್ರಹ, ಉಡುಪಿಯ ಸೈಂಟ್ ಮೇರಿಸ್, ಶಿರ್ವಾದ ಡೋನ್ ಬೋಸ್ಕೊ, ಮಂಗಳೂರಿನ ರೊಜಾರಿಯೊ, ಮಿಲಾಗ್ರಿಸ್ ಮುಂತಾದ ಶಾಲೆಗಳು ಸ್ಥಾಪನೆಯಾದವು. [ ಹೆಚ್ಚಿನ ವಿವರಗಳಿಗೆ ಅನುಬಂಧ ೬ನ್ನು ಪರಾಮರ್ಶಿಸಿ]

### ೨.೧೧.೪. ಸಂತ ಜೋಸೆಫರ ಇಂಜಿನಿಯರಿಂಗ್ ಕಾಲೇಜು

ಕಥೋಲಿಕ ಶಿಕ್ಷಣ ಮಂಡಳಿ ನಡೆಸುತ್ತಿರುವ ಮಂಗಳೂರಿನ ವಾಮಂಜೂರಿನ ಸೈಂಟ್ ಜೋಸೆಫ್ಸ್ ಇಂಜಿನಿಯರಿಂಗ್ ಕಾಲೇಜು ೨೦೦೨ರಲ್ಲಿ ಪ್ರಾರಂಭಗೊಂಡಿದ್ದು ಇಲ್ಲಿ ಮೆಕ್ಯಾನಿಕಲ್, ಕಮ್ಯುನಿಕೇಶನ್, ಕಂಪ್ಯೂಟರ್ ಸೈಯನ್ಸ್, ಇನ್‌ಫರ್ಮೇಷನ್ ಸೈಯನ್ಸ್, ವಿಭಾಗಗಳಿದ್ದು ಎಂ.ಬಿ.ಎ., ಎಂ.ಸಿ.ಎ. ಎಂ.ಎಸ್.ಸಿ. ಹಾಗೂ ಎಂ.ಟೆಕ್. ಶಿಕ್ಷಣವನ್ನು ನೀಡಲಾಗುತ್ತಿದೆ.[೧೯೭]

## ೨.೧೧.೫. ಸಂದೇಶ ಲಲಿತ ಕಲಾ ಮಹಾವಿದ್ಯಾಲಯ, (ಕಾಲೇಜ್ ಆಫ್ ಫೈನ್ ಆರ್ಟ್ಸ್)

ಮಂಗಳೂರಿನ ಬಜ್ಜೋಡಿಯ ಸಂದೇಶ ಲಲಿತಾ ಕಲಾ ಮಹಾವಿದ್ಯಾಲಯವನ್ನು ೧೯೯೮ರಲ್ಲಿ ಸ್ಥಾಪಿಸಲಾಗಿದೆ. ಸಂದೇಶ ಕಾಲೇಜ್ ಆಫ್ ಫೈನ್ ಆರ್ಟ್ಸ್, ಭಾರತದ ಕಲೆ ಮತ್ತು ವಿನ್ಯಾಸ ಶಾಲೆಗಳಲ್ಲಿ ಮುಂಚೂಣಿಯಲ್ಲಿದ್ದು, ಮಂಗಳೂರು ಪ್ರದೇಶದಲ್ಲಿ ಇರುವ ಏಕೈಕ ಸಾಂಪ್ರದಾಯಿಕ ಶಿಕ್ಷಣ ನೀಡುವ ಸಂಸ್ಥೆಯಾಗಿದೆ. ಇಲ್ಲಿ ಚಿತ್ರಕಲೆ, ರೇಖಾಕೃತಿ (Drawing), ಶಿಲ್ಪಕಲೆ, ಚರಿತ್ರೆ ಹಾಗೂ ಸಮಕಾಲೀನ ಕೋರ್ಸ್‌ಗಳಾದ ನೃತ್ಯ, ಸಂಗೀತ, ಸಾಹಿತ್ಯ, ರಂಗಭೂಮಿ, ನಾಟಕ ಮುಂತಾದ ವಿಷಯಗಳಲ್ಲಿ ವಿದ್ಯಾಭ್ಯಾಸಕ್ಕೆ ಅವಕಾಶಗಳಿವೆ. ಸಂದೇಶ ಲಲಿತಾ ಕಲಾ ಕಾಲೇಜು, ಮಂಗಳೂರು ವಿಶ್ವವಿದ್ಯಾಲಯದ ಸ್ವಾಮ್ಯಕ್ಕೆ ಒಳಪಟ್ಟಿದೆ.[೧೯೮] ಕರ್ನಾಟಕ ಸರಕಾರದಿಂದ ಅಂಗೀಕೃತಗೊಂಡಿರುವ ಮಂಗಳೂರಿನ 'ಸಂದೇಶ ಕಾಲೇಜು', ಭಾರತೀಯ ಹಾಗೂ ಪಾಶ್ಚಾತ್ಯ ಕಲೆಗಳಿಗಾಗಿಯೇ ಆರಂಭಿಸಿ ಆಸಕ್ತ ಯುವ ಜನಾಂಗಕ್ಕೆ ಅವರ ಬದುಕಿನ ದಾರಿ ದೀಪವಾಗಿದೆ. ಈ ಸಂಸ್ಥೆ ವರ್ಷಂಪ್ರತಿ ಜಾತಿ, ಮತ, ಭೇದವಿಲ್ಲದೆ ಸಾಹಿತಿಗಳಿಗೆ, ಕಲಾಕಾರರಿಗೆ, ಸಮಾಜ ಸೇವಕರಿಗೆ ಅವರುಗಳ ಸೇವೆಯನ್ನು ಗುರುತಿಸಿ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.[೧೯೯]

ಮಂಗಳೂರು ಧರ್ಮಪ್ರಾಂತ್ಯ, ಸೆಕ್ಯುಲರ್ ಧರ್ಮಗುರುಗಳ ನೇತೃತ್ವದಲ್ಲಿ ೧೯೨೮ರಿಂದ ಅಸ್ತಿತ್ವದಲ್ಲಿದ್ದು, ಕಥೋಲಿಕರ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಅಗತ್ಯತೆಗಳನ್ನು ಪೂರೈಸುತ್ತಾ ಮುನ್ನಡೆಯುತ್ತಿದೆ. ಪ್ರಸ್ತುತ ಕಥೋಲಿಕ ಶಿಕ್ಷಣ ಮಂಡಳಿಯ ಅಧೀನದಲ್ಲಿರುವ ಸುಮಾರು ೩೬೦ ಸಂಸ್ಥೆಗಳಲ್ಲಿ ೭೨,೫೦೦ ವಿದ್ಯಾರ್ಥಿಗಳೂ ಹಾಗೂ ೨೩೦೦ ಸಿಬ್ಬಂದಿಗಳೂ ತಮ್ಮ ಜೀವನವನ್ನು ರೂಪಿಸುತ್ತಿದ್ದಾರೆ.[೧೯೬] ರಾಜ್ಯದಲ್ಲಿಯೇ ಅತ್ಯಧಿಕ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿರುವ ಸಂಸ್ಥೆಯೆಂದರೆ ಅದು ಮಂಗಳೂರು ಧರ್ಮಪ್ರಾಂತ್ಯದ ಕಥೋಲಿಕ ಶಿಕ್ಷಣ ಮಂಡಳಿ.[೨೦೦] ಬೆಂಗಳೂರು ನಗರ ಹೊರತು ಪಡಿಸಿ ಅತ್ಯಂತ ಹೆಚ್ಚು ಶಿಕ್ಷಣ ಸಂಸ್ಥೆಗಳನ್ನು ಹೊಂದಿರುವ ಗೌರವಕ್ಕೆ ಮಂಗಳೂರು ನಗರ ಭಾಜನವಾಗಲು ಕಥೋಲಿಕ ಶಿಕ್ಷಣ ಮಂಡಳಿ ಮುಖ್ಯ ಕಾರಣವಾಗಿದೆ. ಉಡುಪಿ, ದಕ್ಷಿಣ ಕನ್ನಡ ಹಾಗೂ ಕಾಸರಗೋಡು ಜಿಲ್ಲೆಗಳಲ್ಲಿ ಸಾಧಿಸಿದ ಶಿಕ್ಷಣದ ಯಶಸ್ಸಿನಿಂದ ಪ್ರಭಾವಿತರಾದ ಬಿಶಪ್ ಬಾಜಿಲ್ ಡಿಸೋಜರವರು ಶೈಕ್ಷಣಿಕವಾಗಿ ಹಿಂದುಳಿದ ಬೀದರ್ ಜಿಲ್ಲೆಯಲ್ಲಿ ಶಿಕ್ಷಣ ಕ್ರಾಂತಿಯನ್ನು ವಿಸ್ತರಿಸಿದರು. ಮಂಗಳೂರಿನ ಪ್ರಸ್ತುತ ಧರ್ಮಾಧ್ಯಕ್ಷರಾದ ಅಲೋಶಿಯಸ್ ಪಾವ್ಲ್ ಡಿಸೋಜರವರು ಈ ಶಿಕ್ಷಣ ಅಭಿಯಾನವನ್ನು ಮುಂದುವರಿಸಿ ಈಗ ಗುಲ್ಬರ್ಗದ ಧರ್ಮಾಧ್ಯಕ್ಷರಾದ ರೋಬರ್ಟ್ ಮಿರಾಂದರವರ ಸಾರಥ್ಯದಲ್ಲಿ ಸಾಗುತ್ತಿದೆ.[೨೦೧]

## ೨.೧೨. ಬೆಥನಿ ವಿದ್ಯಾ ಸಂಸ್ಥೆ (ಬಿ.ಇ.ಎಸ್.)

ಬೆಥನಿ ಧರ್ಮಭಗಿನಿಯರ ಸಭೆಯನ್ನು ಸ್ಥಾಪಿಸಿದ ರೇಮಂಡ್ ಫ್ರಾನ್ಸಿಸ್ ಕಾಮಿಲ್ಲಸ್ ಮಸ್ಕರೇನ್ಹಸ್‌ರವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಮಂಗಳೂರಿನ ಮಿಲಾಗ್ರಿಸ್ ಶಾಲೆಯಲ್ಲಿ ಹಾಗೂ ಪ್ರೌಢಶಿಕ್ಷಣವನ್ನು ಸಂತ ಅಲೋಶಿಯಸ್ ಹೈಸ್ಕೂಲಿನಲ್ಲಿ ಮುಗಿಸಿ ತರುವಾಯ ಸಂತ ಜೋಸೆಫರ ಗುರುಮಠದಲ್ಲಿ ತರಬೇತಿ ಪಡೆದು ೧೯೦೦ರಲ್ಲಿ ದೀಕ್ಷೆಯನ್ನು ಸ್ವೀಕರಿಸಿದರು. ಮಂಗಳೂರಿನ ಬೆಂದೂರು ಧರ್ಮಕೇಂದ್ರದ ಧರ್ಮಗುರುಗಳಾಗಿದ್ದ ಅವಧಿಯಲ್ಲಿ ಫಾ।ರೇಮಂಡ್ ಅವರು ಫ್ಲೋರ ಮಥಾಯಸ್, ಆಲೀಸ್ ಮಥಾಯಸ್, ಮಾರ್ಸೆಲಿನ್ ಮಿನೇಜಸ್ ಹಾಗೂ ರೆಜಿನಾ ಗೆಟ್ರೂಡ್ ಗೊನ್ಸಾಲ್ವಿಸ್ ಅವರುಗಳನ್ನೊಳಗೊಂಡ ಬೆಥನಿಯ ಕಿರಿಯ ಪುಷ್ಪ ಸಭೆಯನ್ನು (ಲಿಟ್ಲ್ ಫ್ಲವರ್ ಆಫ್ ಬೆಥನಿ) ೧೬ ಜುಲೈ ೧೯೨೧ರಂದು ಸ್ಥಾಪಿಸಿದರು.[೨೦೨] ಫಾ। ಮಸ್ಕರೇನ್ಹಸ್ ಅವರಿಗೆ ತಮ್ಮ ಕಾಲದ ಪರಿಸ್ಥಿತಿಯಲ್ಲಿ ಗ್ರಾಮೀಣ ಬಡಜನತೆ ಪರಿಪೂರ್ಣ ಮನುಷ್ಯರಾಗಿ ಬೆಳೆದು ಅಭಿವೃದ್ಧಿಯನ್ನು ಸಾಧಿಸದಿರುವುದಕ್ಕೆ ಬಡತನ, ಅನಕ್ಷರತೆ, ಅಜ್ಞಾನ, ಲಿಂಗ ಅಸಮಾನತೆ ಮತ್ತು ಅವಕಾಶಗಳ ಕೊರತೆ ಕಾರಣಗಳೆಂದು ತಿಳಿದಿತ್ತು. ಪ್ರಗತಿ ಮತ್ತು ಅಭಿವೃದ್ಧಿಯ ಸಮಾನ ಅವಕಾಶಗಳಿಂದ ವಂಚಿತರಾಗಿರುವ ಗ್ರಾಮೀಣ ಜನರು, ಹೆಣ್ಣು ಮಕ್ಕಳು ಮತ್ತು ಮಹಿಳೆಯರಲ್ಲಿ ಪರಿವರ್ತನೆಯನ್ನು ತರಲು ಶಿಕ್ಷಣವು ಅತ್ಯಂತ ಪ್ರಬಲ ಸಾಧನವೆಂದು ಅವರು ಅರ್ಥ ಮಾಡಿಕೊಂಡಿದ್ದರು. ಸ್ತ್ರೀ ಶಿಕ್ಷಣದಿಂದ ಸಮಾಜದ ಪ್ರಗತಿ ತ್ವರಿತವಾಗಿ ನಡೆಯುತ್ತದೆ ಎಂಬುದನ್ನು ಮನಗಂಡ ಅವರು ಶಿಕ್ಷಣ ಕ್ಷೇತ್ರದಲ್ಲಿ ಆ ಕಾಲದಲ್ಲೇ ಒಂದು ಕ್ರಾಂತಿಗೆ ನಾಂದಿಯಾದರು. ಫಾ। ಮಸ್ಕರೇನ್ಹಸ್‌ರವರು ಹೆಣ್ಣು ಮಕ್ಕಳಿಗಾಗಿ ಸೈಂಟ್ ಮಾರ್ಗರೇಟ್ ಮೇರಿಸ್ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದಾಗ ಅವರ ಈ ಕಾರ್ಯವನ್ನು ತೀವ್ರವಾಗಿ ಟೀಕಿಸಲಾಯಿತು ಮತ್ತು ಇದು ಅವ್ಯಾವಹಾರಿಕವಾದುದು ಎಂದು ಖಡಾಖಂಡಿತವಾಗಿ ಪರಿಗಣಿಸಲಾಯಿತು. ಆದರೆ ಎಲ್ಲರೂ ಆಶ್ಚರ್ಯಗೊಳ್ಳುವ ಹಾಗೆ ಈ ಸಾಹಸ ಕಾರ್ಯ ಅತ್ಯಂತ ಯಶಸ್ವಿಯಾಯಿತು. ಅವರದೇ ಮಾತಿನಲ್ಲಿ ಹೇಳುವುದಾದರೆ, "......ಶಾಲೆ ಯಶಸ್ಸನ್ನು ಸಾಧಿಸಿರುವುದು ಸಾಬೀತಾಗಿದೆ. ಇದು ಅಗತ್ಯದ ಪೂರೈಕೆಯನ್ನು ತೋರಿಸಿಕೊಟ್ಟಿದೆ ಮತ್ತು ಇತರರು ಅನುಸರಿಸಬೇಕಾದ ಉದಾಹರಣೆಯನ್ನು ದಾಖಲಿಸಿದೆ. ಎಲ್ಲಕ್ಕಿಂತ ಹೆಚ್ಚಾಗಿ ಈ ಶಾಲೆಯು ಬಡ ಹುಡುಗಿಯರ ಶಿಕ್ಷಣಕ್ಕಾಗಿ ಪ್ರತ್ಯಕ್ಷವಾಗಿ ಏನನ್ನು ಮಾಡಿದೆಯೋ, ಅದೇ ರೀತಿ ಪರೋಕ್ಷವಾಗಿ ಧರ್ಮಪ್ರಾಂತ್ಯದ ವಿವಿಧ ಭಾಗಗಳಲ್ಲಿ ಇದೇ ರೀತಿಯ ಶಾಲೆಗಳನ್ನು ಪ್ರಾರಂಭಿಸಲು ಉತ್ತೇಜನವನ್ನು ಕೂಡ ನೀಡಿದೆ". ಈ ಅವಲೋಕನಗಳನ್ನು ಮಂಗಳೂರಿನ ಕಥೋಲಿಕ್ ಅಸೋಶಿಯೇಷನ್‌ನ ಅಧ್ಯಕ್ಷರಾದ ಎಮ್.ಎಸ್. ಶ್ರೇಷ್ಠಾ ಅವರು ೧೯೪೧ರಲ್ಲಿ ದೃಢಪಡಿಸಿದ್ದಾರೆ. ಅವರು ಒಂದು ಸಂದರ್ಭದಲ್ಲಿ ಬೆಥನಿ ಸಂಸ್ಥೆಯನ್ನು ಉದ್ದೇಶಿಸಿ ಹೀಗೆಂದರು, "ಬೆಥನಿ

ಧರ್ಮಭಗಿನಿಯರು ನಡೆಸುತ್ತಿರುವ ಸಂಸ್ಥೆಗಳು ತಮ್ಮ ಮುಖ್ಯ ಧ್ಯೇಯಗಳಂತೆ, ಬಡವರಿಗೆ ನೆರವಾಗಿವೆ. ಇಲ್ಲದಿದ್ದರೆ ಬಡವರ ಪ್ರಾಥಮಿಕ ಶಿಕ್ಷಣ ಮತ್ತು ಆರ್ಥಿಕ ಉನ್ನತೀಕರಣಗಳಿಗೆ ಈ ರೀತಿಯ ಸೌಲಭ್ಯಗಳು ದೊರೆಯುವುದು ಅಸಂಭವವಿತ್ತು."

ಶಿಕ್ಷಣವು ಆರ್ಥಿಕ, ಸಾಮಾಜಿಕ ಅಥವಾ ವೈಯಕ್ತಿಕ ಬೆಳವಣಿಗೆಯೊಂದಿಗೆ ಪ್ರತ್ಯೇಕಿಸಲಾಗದ ಪ್ರಬಲ ಸಾಧನವೆನ್ನುವುದು ಅವರಿಗೆ ತಿಳಿದಿತ್ತು. ಈ ಹಕ್ಕುಗಳ ನಿರಾಕರಣೆ ಅಥವಾ ನಿರ್ಬಂಧ ಜನರನ್ನು, ಅದರಲ್ಲಿಯೂ ವಿಶೇಷವಾಗಿ ಅವಕಾಶ ವಂಚಿತರನ್ನು ಅವರ ಮೂಲಭೂತ ಮಾನವ ಘನತೆಯಿಂದ ವಂಚಿತಗೊಳಿಸಿದಂತೆ ಮಾಡುತ್ತದೆ. ಕ್ರೈಸ್ತರಿಗೆ ಅವರ ಸ್ವಂತ ಶಾಲೆಗಳನ್ನು ಹೊಂದುವ ಹಕ್ಕುಗಳಿಗಾಗಿ ಆಗಿನ ಮುಖ್ಯಮುಂತ್ರಿಯಾಗಿದ್ದ ಡಾ.ಸುಬ್ಬರಾಯನ್ ಮತ್ತು ಸೈಮನ್ ಆಯೋಗವನ್ನು ಭೇಟಿಯಾಗಿದ್ದ ನಿಯೋಗದಲ್ಲಿ ಮಸ್ಕರೇನ್ಹಸ್ ಕೂಡ ಇದ್ದರು. ಅವರು ಧರ್ಮಪ್ರಾಂತ್ಯದ ಕಥೋಲಿಕ ಶಿಕ್ಷಣ ಮಂಡಳಿಯ ಉಪಾಧ್ಯಕ್ಷರಾಗಿ ಜಿಲ್ಲೆಯ ಮತ್ತು ಇತರ ಎಲ್ಲಾ ಕಡೆಗಳ ಶಿಕ್ಷಣ ಉದ್ದೇಶಕ್ಕಾಗಿ ಪ್ರಾಮಾಣಿಕ ಸೇವೆಯನ್ನು ಸಲ್ಲಿಸಿದ್ದಾರೆ. ಅವರು ಮದ್ರಾಸಿನ ಅಂದಿನ ಮುಖ್ಯಮಂತ್ರಿಗಳಿಗೆ ಸಲ್ಲಿಸಿದ ಮನವಿಯ ಫಲವಾಗಿ ಸರಕಾರ ೧೯೨೯ರಲ್ಲಿ ಕ್ರೈಸ್ತ ಸಮುದಾಯದ ವಿಶೇಷ ಹಕ್ಕುಗಳನ್ನು ಮಾನ್ಯ ಮಾಡಿ ಆದೇಶವನ್ನು ಹೊರಡಿಸಿದೆ. ಇದನ್ನು ಕ್ರೈಸ್ತ ಶಾಲೆಗಳ "ಮ್ಯಾಗ್ನಾಕಾರ್ಟ" ಎಂದು ಕರೆಯಲಾಗುತ್ತದೆ. ಪ್ರಸಿದ್ಧ ನಾಟಕಕಾರರಾದ ವಿ.ಜೆ.ಪಿ.ಸಲ್ಡಾನ ಅವರು ಮಸ್ಕರೇನ್ಹಸ್ ಅವರ ಕುರಿತು ಹೇಳುತ್ತಾ, "ಅವರು ತಮ್ಮ ಕಾಲಕ್ಕಿಂತ ಮುಂದಿದ್ದ ದಾರ್ಶನಿಕರಾಗಿದ್ದಾರೆ. ೧೯೮೦ರಲ್ಲಿ ಶಿಕ್ಷಣ ಪ್ರಸಾರದ ಪ್ರಾರಂಭದಲ್ಲಿ ಬಳಸಲಾದ ಕಲಿಕಾ ಸಾಮಾಗ್ರಿಯು, ೧೯೩೦ರಷ್ಟು ಹಿಂದೆ ಮಸ್ಕರೇನ್ಹಸ್ ಅವರು ಬೆಳಕಿಗೆ ತಂದ 'ಪಯ್ಲೊ ಪುಸ್ತಕ್' (ಪ್ರಥಮ ಗ್ರಂಥ) ಕೈಪಿಡಿಯನ್ನು ಅನುಕರಣೆ ಮಾಡಿದೆ. ಮಕ್ಕಳು ಮತ್ತು ವಯಸ್ಕರಿಗೆ ಓದು ಮತ್ತು ಬರಹವನ್ನು ಕಲಿಸಲು ಅವರು ಕೊಂಕಣಿಯಲ್ಲಿ ಕೈಪಿಡಿಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಅವರು ಆರ್ಥಿಕ ತೊಂದರೆಗಳ ಹೊರತಾಗಿಯೂ ದೂರದಲ್ಲಿರುವ ಹಳ್ಳಿಗಳಲ್ಲಿ ಹೆಣ್ಣುಮಕ್ಕಳಿಗಾಗಿ ಮತ್ತು ಮಹಿಳೆಯರಿಗಾಗಿ ಉನ್ನತ ಶಿಕ್ಷಣದ ಬಾಗಿಲು ತೆರೆದಿದ್ದಾರೆ. ಧರ್ಮಭಗಿನಿಯರು ಬಡವರ ನಡುವೆ, ಬಡವರೊಂದಿಗೆ ಮತ್ತು ಬಡವರಿಗಾಗಿ ಕೆಲಸ ಮಾಡುತ್ತಿದ್ದಾರೆ. ಬಡವರನ್ನು ಬದುಕಿನಲ್ಲಿ ಮೇಲೆತ್ತುವುದು ಮತ್ತು ಅವರಿಗೆ ಕೂಡಾ ಅದೇ ದೇವರು ನೀಡಿದ ಮಾನವ ಘನತೆ ಮತ್ತು ಹಕ್ಕುಗಳು ಇವೆ ಎಂಬುದನ್ನು ಅವರು ತಿಳಿದುಕೊಳ್ಳುವಂತೆ ಮಾಡುವುದು ಅವರ ಏಕಮಾತ್ರ ಗುರಿಯಾಗಿದೆ."[೨೦೩]

ಫಾ. ರೇಮುಂಡ್‌ರವರು ಸ್ಥಾಪಿಸಿದ ಬೆಥನಿಯ ಕಿರಿಯ ಪುಷ್ಪ ಸಭೆಯ ಅಧೀನದಲ್ಲಿರುವ ಶಿಕ್ಷಣ ಸಂಸ್ಥೆಗಳ ಸಮನ್ವಯತೆಗಾಗಿ ೧೯೫೮ರಲ್ಲಿ ಬೆಥನಿ ವಿದ್ಯಾ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಆಗ ಬೆಥನಿ

ಸಂಸ್ಥೆಯ ಸದಸ್ಯತ್ವದಲ್ಲಿ ಇದ್ದವರು ೨೧೦ ಧರ್ಮಭಗಿನಿಯರು, ೧೯ ಕಾನ್ವೆಂಟುಗಳು, ೧೪ ಪ್ರಾಥಮಿಕ ಶಾಲೆಗಳು, ೨ ಪ್ರೌಢಶಾಲೆಗಳು, ೨ ಕೈಗಾರಿಕಾ ಶಾಲೆಗಳು, ೪ ಅನಾಥಾಲಯಗಳು, ೩ ವಸತಿಗೃಹಗಳು ಮತ್ತು ೧ ಶಿಕ್ಷಕಿಯರ ತರಬೇತಿ ಶಾಲೆ. ಇದು ಮಂಗಳೂರು ಮತ್ತು ಕಲ್ಲಿಕೋಟೆ ಧರ್ಮಪ್ರಾಂತ್ಯ ಮತ್ತು ಪುಣೆಯ ಆರ್ಚ್ ಡಯಾಸಿಸ್‌ನ ವ್ಯಾಪ್ತಿಯದ್ದಾಗಿದೆ. ಬೆಥನಿ ವಿದ್ಯಾ ಸಂಸ್ಥೆಯ ಮುಖ್ಯ ಉದ್ದೇಶವೇನೆಂದರೆ ಸಾಕ್ಷರತೆಯ ಪ್ರಸಾರ, ಶಾಲೆಗಳ ಸ್ಥಾಪನೆ ಮತ್ತು ಈಗಾಗಲೇ ಇರುವ ಶಾಲೆಗಳನ್ನು ವಶಕ್ಕೆ ತೆಗೆದುಕೊಳ್ಳುವುದು. ೧೯೮೬ರಲ್ಲಿ ನಡೆಸಲಾದ ಬೆಥನಿ ಸಭೆಯ ಹನ್ನೊಂದನೆಯ ಸಾಮಾನ್ಯ ಅಧ್ಯಾಯದಲ್ಲಿ ಅದರ ಎಲ್ಲಾ ಸದಸ್ಯರಿಗೆ "ಭವಿಷ್ಯದ ದಿನಗಳಿಗಾಗಿ ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕತೆಯ ಕಡೆಗೆ ಬೆಥನಿ ಸಂಸ್ಥೆಯ ಒತ್ತು ಇರಬೇಕಾಗಿದೆ. ಅದರಲ್ಲಿಯೂ ವಿಶೇಷವಾಗಿ ಬಡತನದ ರೇಖೆಯ ಕೆಳಗಿರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಮಹಿಳೆಯರನ್ನೊಳಗೊಂಡ ಶೇಕಡ ೬೫ರಷ್ಟು ಜನರನ್ನು ಒಳಗೊಳ್ಳುವುದಾಗಿದೆ. ಪ್ರಾಮಾಣಿಕತೆ ಮತ್ತು ಸಂಘಟನೆಯ ಮೂಲಕ, ಸ್ಥಳೀಯ ಸಮುದಾಯವನ್ನು, ಅವರ ಶಿಕ್ಷಣ ಹಕ್ಕುಗಳಿಗಾಗಿ ದುಡಿಯಲು" ಕರೆ ನೀಡಿತು. ೧೯೯೨ರಲ್ಲಿ ಹನ್ನೆರಡನೇ ಸಾಮಾನ್ಯ ಅಧ್ಯಾಯದಲ್ಲಿ ಶಿಕ್ಷಣದ ಗುರಿಯನ್ನು ಮತ್ತೊಮ್ಮೆ ಒತ್ತಿ ಹೇಳಲಾಗಿದೆ, "ಶಿಕ್ಷಣದಲ್ಲಿ ಬೆಥನಿಯ ಗುರಿಯು ವ್ಯಕ್ತಿಯ ಸಮಗ್ರ ಬೆಳವಣಿಗೆಯದ್ದಾಗಿದೆ. ಅದು ಅವರ ಅಂತಿಮ ಗುರಿಯಾಗಬೇಕಾಗಿದೆ. ಸುವಾರ್ತೆಯು ತಿಳಿಸಿದಂತಹ ಮತ್ತು ವ್ಯಕ್ತಿಯ ಘನತೆಯನ್ನು ಹೊಂದಿರುವ ಬದುಕಿನ ದರ್ಶನವನ್ನು ಆಧರಿಸಿದ ಅಹಿಂಸೆ ಮತ್ತು ಶೋಷಣೆರಹಿತ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಪಂಥವನ್ನು ಸ್ಥಾಪಿಸುವುದು ಬೆಥನಿಯ ಗುರಿಯಾಗಿದೆ." ೨೦೦೮ರ ಬೆಥನಿ ವಿದ್ಯಾ ಸಂಸ್ಥೆಯ ವಜ್ರಮಹೋತ್ಸವ ಆಚರಣೆಯ ಸಂದರ್ಭದಲ್ಲಿ "...... ಅಂಚಿನಲ್ಲಿ ಇರುವವರು, ಗ್ರಾಮೀಣ ಬಡ ಜನತೆ ಮತ್ತು ಹೆಣ್ಣುಮಕ್ಕಳಿಗೆ ಬದುಕಿನ ಪರಿಪೂರ್ಣತೆಗೆ ಪರಿವರ್ತನಾಶೀಲ ಶಿಕ್ಷಣ" ಎಂಬ ಒಡಂಬಡಿಕೆಯನ್ನು ಮಾಡಿಕೊಳ್ಳುವುದರೊಂದಿಗೆ ಸಂಸ್ಥೆಯ ಉದ್ದೇಶವನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ.[೨೦೪] ಬೆಥನಿ ವಿದ್ಯಾ ಸಂಸ್ಥೆಯ ಅಧೀನದಲ್ಲಿ ಈ ಕೆಳಗಿನ ಶಿಕ್ಷಣ ಸಂಸ್ಥೆಗಳನ್ನು ನಡೆಸಲಾಗುತ್ತಿದೆ.

### ೨.೧೨.೧.ಪ್ರಾಥಮಿಕ ಮತ್ತು ಪ್ರೌಢಶಾಲೆಗಳು

ಮಾರ್ಸೆಲ್ ಡಿಸೋಜ ಎಂಬ ಶಿಕ್ಷಕರು ಕದ್ರಿ ಸೈಂಟ್ ಫ್ರಾನ್ಸಿಸ್ ಕ್ಷೇವಿಯರ್ ಶಾಲೆಯನ್ನು ನಿರ್ವಹಿಸಲಾಗದೆ ೧೯೧೨ರಲ್ಲಿ ಬೆಂದೂರಿನ ಸೈಂಟ್ ಸೆಬಾಸ್ಟಿಯನ್ ಶಾಲೆಗೆ ಹಸ್ತಾಂತರಿಸಿದರು. ೧೯೨೧ರಲ್ಲಿ ಸೈಂಟ್ ಸೆಬಾಸ್ಟಿಯನ್ ಶಾಲೆಯಿಂದ ಹೆಣ್ಮಕ್ಕಳನ್ನು ಪ್ರತ್ಯೇಕಿಸಿ ಸೈಂಟ್ ಮಾರ್ಗರೇಟ್ ಮೇರಿಸ್ ಶಾಲೆಯನ್ನು ಸ್ಥಾಪಿಸಲಾಗಿದೆ. ಈ ಶಾಲೆಯ ಉತ್ತಮ ಕಾರ್ಯನಿರ್ವಹಣೆಯನ್ನು ಗುರುತಿಸಿದ ಶಾಲಾ ತಪಾಸಣಾಧಿಕಾರಿಯವರು ತಮ್ಮ ೧೯೨೭ರ ವರದಿಯಲ್ಲಿ ಹೀಗೆ ಹೇಳಿದ್ದಾರೆ, " ಈ ಹೆಣ್ಣು ಮಕ್ಕಳ

ಅನುದಾನಿತ ಪ್ರಾಥಮಿಕ ಶಾಲೆಯು ಉತ್ತಮ ದರ್ಜೆಯದ್ದಾಗಿದೆ ಎಂದು ಹೇಳಲು ನಾನು ಹಿಂಜರಿಯುವುದಿಲ್ಲ." [೨೦೫] ೧೯೮೬ರಲ್ಲಿ ಈ ಶಾಲೆಯನ್ನು ಸೈಂಟ್ ಸೆಬಾಸ್ಟಿಯನ್ ಶಾಲೆಯೊಂದಿಗೆ ವಿಲೀನಗೊಳಿಸಲಾಯಿತು.[೨೦೬] ೧೯೨೫ರಲ್ಲಿ ಜಿಲ್ಲೆಯ ಅತ್ಯಂತ ಹಿಂದುಳಿದ ಪ್ರದೇಶಗಳಲ್ಲಿ ಒಂದಾಗಿರುವ ಪುತ್ತೂರಿನಲ್ಲಿ ಗಂಡು ಮಕ್ಕಳಿಗಾಗಿ ಪ್ರಾಥಮಿಕ ಶಾಲೆಯೊಂದನ್ನು ತೆರೆದು ಸೈಂಟ್ ಫ್ರಾನ್ಸಿಸ್ ಕ್ಷೇವಿಯರ್ ಎಂದು ಹೆಸರಿಸಲಾಯಿತು. ೧೯೨೮ರಲ್ಲಿ ಹೆಣ್ಣು ಮಕ್ಕಳಿಗಾಗಿ ಇನ್ನೊಂದು ಪ್ರಾಥಮಿಕ ಶಾಲೆಯನ್ನು ತೆರೆಯಲಾಯಿತು. ಇದು ಲಿಟ್ಲ್ ಫ್ಲವರ್ ಶಾಲೆ ಎಂಬ ಹೆಸರಿನಿಂದ ಜನಪ್ರಿಯವಾಗಿದೆ. ಹೀಗೆ ಒಂದೇ ವಠಾರದೊಳಗೆ ಎರಡು ಶಾಲೆಗಳು ಅಕ್ಕಪಕ್ಕದಲ್ಲಿ ಕಾರ್ಯವನ್ನು ನಿರ್ವಹಿಸಿದವು. ಈ ಎರಡೂ ಶಾಲೆಗಳನ್ನು ಉತ್ತಮ ಆಡಳಿತಕ್ಕಾಗಿ ೧೯೮೫ರಲ್ಲಿ ವಿಲೀನಗೊಳಿಸಲಾಗಿದೆ.[೨೦೭] ಅಂದು ಕಾಡುಮೇಡುಗಳ ಊರಾಗಿದ್ದ ಕಂಕನಾಡಿಯಲ್ಲಿ ಜೆ.ಟಿ.ಪಾಯ್ಸ್‌ರವರು ೧೯೦೨ರಲ್ಲಿ ಸೈಂಟ್ ಜೋಸೆಫ್ ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಿದರು. ನಂತರ ಇದು ಬೆಂದೂರಿನ ಸೈಂಟ್ ಸೆಬಾಸ್ಟಿನ್ ಚರ್ಚಿನ ಪ್ರಥಮ ಧರ್ಮಗುರುಗಳಾದ ಫಾ। ಮಸ್ಕರೇನ್ಹಸ್ ಅವರ ಪೋಷಣೆಯಲ್ಲಿ ಬಂತು. ಅದು ಆಂಗ್ಲ ಮಾಧ್ಯಮ ಶಾಲೆಯಾಗಿದ್ದು, ಈ ಶಾಲೆಯಲ್ಲಿ ಜನಸಾಮಾನ್ಯರಿಗೆ ಶಿಕ್ಷಣ ಹೊಂದಲು ಸಾಧ್ಯವಾಗುತ್ತಿರಲಿಲ್ಲ. ಗಾಂಧೀಜಿಯವರ ತತ್ವವನ್ನು ಎತ್ತಿ ಹಿಡಿದ ಫಾ। ರೇಮಂಡರು ಕಂಕನಾಡಿ ಮತ್ತು ಸುತ್ತಮುತ್ತಲಿನ ಜನ ಸಾಮಾನ್ಯರಿಗೆ ಶಿಕ್ಷಣ ದೊರೆಯಲು ಅನುಕೂಲವಾಗುವಂತೆ ಶಾಲೆಯನ್ನು ಸಜ್ಜುಗೊಳಿಸಿ, ಬೆಥನಿ ಸಭೆಯ ಆಡಳಿತಕ್ಕೊಳಪಡಿಸಿದರು.[೨೦೮]

೧೯೩೧ರಲ್ಲಿ ಫಾ। ರೇಮಂಡ್‌ರವರು ಲಿಟ್ಲ್ ಫ್ಲವರ್ ಪ್ರಾಥಮಿಕ ಶಾಲೆಯನ್ನು ಕಿನ್ನಿಗೋಳಿಯಲ್ಲಿ ಸ್ಥಾಪಿಸಿದರು. ೧೯೪೧ರ ಹೊತ್ತಿಗೆ ಈ ಶಾಲೆಯು ಪ್ರೌಢಶಾಲಾ ಮಟ್ಟಕ್ಕೇರಿತು ಮತ್ತು ಬೆಥನಿ ಸಂಸ್ಥೆಯ ಮೊದಲ ಪ್ರೌಢಶಾಲೆ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಸಾರ್ವಜನಿಕರ ಒತ್ತಾಯದ ಮೇರೆಗೆ ೧೯೯೯ರಿಂದ ಗಂಡು ಮಕ್ಕಳಿಗೆ ಕೂಡಾ ಈ ಶಾಲೆಯಲ್ಲಿ ಪ್ರವೇಶ ದೊರೆಯಲಾರಂಭಿಸಿತು.[೨೦೯] ೧೯೩೯ರಲ್ಲಿ ಫಾ। ಮಸ್ಕರೇನ್ಹಸ್ ಅವರಿಂದ ಕಿನ್ನಿಕಂಬಳದಲ್ಲಿ ಸೈಂಟ್ ಜೋಸೆಫ್ಸ್ ಪ್ರಾಥಮಿಕ ಶಾಲೆ ಮತ್ತು ಅನಾಥಾಲಯದ ಸ್ಥಾಪನೆಯಾಯಿತು. ೧೯೪೮ರಲ್ಲಿ ಹಿರಿಯ ಪ್ರಾಥಮಿಕ ಶಾಲೆಯಾಗಿ ಉನ್ನತೀಕರಿಸಲ್ಪಟ್ಟಿತು. ೧೯೬೫ರಲ್ಲಿ ಕಥೋಲಿಕ ಶಿಕ್ಷಣ ಮಂಡಳಿಯ ಆಡಳಿತಕ್ಕೆ ಹಸ್ತಾಂತರಿಸಿದ ನಂತರ ಶಾಲೆಗೆ ರೋಸಾ ಮಿಸ್ತಿಕಾ ಹಿರಿಯ ಪ್ರಾಥಮಿಕ ಶಾಲೆ ಎಂದು ಹೆಸರಿಸಲಾಗಿದೆ. ಫಾ. ರೇಮಂಡರು ಮಂಗಳೂರಿನ ಕುಲಶೇಖರದಲ್ಲಿ ಸೇಕ್ರೆಡ್ ಹಾರ್ಟ್ಸ್ ಪ್ರೌಢಶಾಲೆ(೧೯೪೩), [೨೧೦] ಮೂಲ್ಕಿಯಲ್ಲಿ ಮೆಡಲಿನ್ ಪ್ರೌಢಶಾಲೆ(೧೯೪೬) [೨೧೧] ಮತ್ತು ಕಿನ್ನಿಕಂಬಳದಲ್ಲಿ ರೋಸಾ ಮಿಸ್ತಿಕಾ ಪ್ರೌಢಶಾಲೆ(೧೯೫೮)[೨೧೨] ಗಳನ್ನು ಸ್ಥಾಪಿಸಿದರು.

ಅಜೆಕಾರು ಮಲೆನಾಡಿನ ಅಂಚಿನಲ್ಲಿರುವ ದೂರದ ಹಳ್ಳಿಪ್ರದೇಶ. ಆ ಕಾಲದಲ್ಲಿ ಇಲ್ಲಿನ ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳು ನೀರಸವಾಗಿದ್ದವು. ಇಲ್ಲಿ ಬಡತನ, ಅಂಧಶ್ರದ್ಧೆ, ಜೀತ ಪದ್ದತಿ ಮತ್ತು ಕುಡಿತ ವ್ಯಾಪಕವಾಗಿ ಹರಡಿಕೊಂಡಿತ್ತು. ಇದಕ್ಕೆಲ್ಲಾ ಶಿಖರಪ್ರಾಯವಾಗಿ ಅನಕ್ಷರತೆ ದೊಡ್ಡ ಪ್ರಮಾಣದಲ್ಲಿತ್ತು. ಹೀಗಾಗಿ, ೧೯೬೪ರಲ್ಲಿ ಬೆಥನಿ ವಿದ್ಯಾ ಸಂಸ್ಥೆ (ಬಿ.ಇ.ಎಸ್) ಜ್ಯೋತಿ ಪ್ರೌಢಶಾಲೆಯನ್ನು ಅಜೆಕಾರಿನಲ್ಲಿ ಪ್ರಾರಂಭಿಸಿತು.[೨೧೩] ಅದೇ ವರ್ಷ ಬಜ್ಪೆಯಲ್ಲಿ 'ಹೋಲಿ ಫ್ಯಾಮಿಲಿ ಹೆಣ್ಮಕ್ಕಳ ಪ್ರೌಢಶಾಲೆಯನ್ನು ಬಜ್ಪೆಯ ಧರ್ಮಗುರುಗಳಾದ ಫಾ। ಲಿಯೋ ಕರ್ವಾಲೊ ಅವರು ಸ್ಥಾಪಿಸಿದರು.[೨೧೪] ಸೈಂಟ್ ರೇಮಂಡ್ಸ್ ಪ್ರೌಢಶಾಲೆ ಸ್ಥಾಪನೆಯಾಗುವುದಕ್ಕಿಂತ ಮೊದಲು ಈ ಪ್ರದೇಶದ ಸುತ್ತಮುತ್ತ ಬೇರೆ ಯಾವುದೇ ಪ್ರೌಢಶಾಲೆ ಇರಲಿಲ್ಲ. ಆದರೆ ನಾಲ್ಕು ಸರಕಾರಿ ಹಿರಿಯ ಪ್ರಾಥಮಿಕ ಶಾಲೆಗಳಿದ್ದವು. ಆದ್ದರಿಂದ ೧೯೮೪ರಲ್ಲಿ ಬೆಥನಿ ವಿದ್ಯಾ ಸಂಸ್ಥೆಯು ಸೈಂಟ್ ರೇಮಂಡ್ಸ್ ಪ್ರೌಢಶಾಲೆಯನ್ನು ವಾಮಂಜೂರಿನಲ್ಲಿ ಸ್ಥಾಪಿಸಿತು.[೨೧೫] ಸಮಾಜದ ಮಧ್ಯಮ ಮತ್ತು ಉನ್ನತ ವರ್ಗಗಳ ಅಗತ್ಯಗಳನ್ನು ಪೂರೈಸುತ್ತಿದ್ದ ಕೆಲವು ಗಣ್ಯ ಶಾಲೆಗಳಲ್ಲಿ ಇವುಗಳಿಗೆ ಸ್ಥಾನವಿರಲಿಲ್ಲ. ಯಾವುದೇ ಶಾಲೆಗಳಿಲ್ಲದ ಪ್ರದೇಶದ ಆರ್ಥಿಕವಾಗಿ ಹಿಂದುಳಿದ ಮಕ್ಕಳನ್ನು ಈಗಾಗಲೇ ಇರುವ ಅನಾಥಾಲಯಗಳಿಗೆ ಸೇರಿಸಿ, ಅಲ್ಲಿ ಅವರಿಗೆ ಪುಕ್ಕಟೆಯಾಗಿ ವಸತಿ ಮತ್ತು ಆಹಾರವನ್ನು ಒದಗಿಸಲಾಗುತ್ತಿದೆ.

**೨.೧೨.೨.ಶಿಕ್ಷಕಿಯರ ತರಬೇತಿ ಸಂಸ್ಥೆ**

ಪ್ರಾಥಮಿಕ ಶಾಲಾ ಶಿಕ್ಷಣವನ್ನು ಪರಿಣಾಮಕಾರಿಯಾಗಿಸಲು ತರಬೇತಿ ಹೊಂದಿದ ಶಿಕ್ಷಕರ ಅವಶ್ಯಕತೆ ಇತ್ತು. ಹೀಗಾಗಿ ರೋಸಾ ಮಿಸ್ತಿಕಾ ಶಿಕ್ಷಕಿಯರ ತರಬೇತಿ ಸಂಸ್ಥೆಯನ್ನು (ಕೆಳಮಟ್ಟದ) ೧೯೪೫ರಲ್ಲಿ ಪ್ರಾರಂಭಿಸಲಾಯಿತು. ಮಹಾತ್ಮ ಗಾಂಧಿಯವರ ಸ್ವದೇಶಿ ಚಳುವಳಿ ದೇಶದಾದ್ಯಂತ ವೇಗವನ್ನು ಪಡೆಯುತ್ತಿದ್ದ ಸಂದರ್ಭದಲ್ಲಿ ಇದರ ಗುಣ ವಿವೇಚನೆಯಿಂದ ಮೂಲಭೂತ ಶಿಕ್ಷಣದ ವಿನ್ಯಾಸದಲ್ಲಿ ಫಾ।ರೇಮಂಡ್ ಅವರು ತರಬೇತಿ ಸಂಸ್ಥೆಯನ್ನು ರೂಪಿಸಿದರು. ಸಂಸ್ಥೆ ಪ್ರಾರಂಭವಾದ ದಿನದಿಂದಲೇ ತರಬೇತಿದಾರರಿಗಾಗಿ ವಿದ್ಯಾರ್ಥಿ ನಿಲಯದ ವ್ಯವಸ್ಥೆ ಕಲ್ಪಿಸಲಾಗಿದೆ.[೨೧೬] ೧೯೭೭ರಲ್ಲಿ ಕರ್ನಾಟಕ ಸರಕಾರವು ಸಂಸ್ಥೆಯನ್ನು 'ಕೀ ಇನ್‌ಸ್ಟಿಟ್ಯೂಟ್' ಎಂದು ಘೋಷಿಸಿದೆ. ಅಂದರೆ ಸುತ್ತಮುತ್ತಲ ಪ್ರಾಥಮಿಕ ಶಾಲೆಗಳ ಶಿಕ್ಷಕರಿಗೆ ವಿಜ್ಞಾನ ವಿಷಯದಲ್ಲಿ ತರಬೇತುಗೊಳಿಸುವುದರ ಮೂಲಕ ಅವರ ವೃತ್ತಿ ನೈಪುಣ್ಯತೆಯನ್ನು ಹೆಚ್ಚಿಸುವುದು ಸಂಸ್ಥೆಯ ಜವಾಬ್ದಾರಿಯಾಗಿದೆ.

### ೨.೧೨.೩. ವಾಣಿಜ್ಯ ಶಾಲೆ

ಅಜೆಕಾರಿನ ಜ್ಯೋತಿ ಪ್ರೌಢಶಾಲಾ ಆವರಣದೊಳಗೆ ಬೆಥನಿ ವಿದ್ಯಾಸಂಸ್ಥೆಯವರು ೧೯೭೨ರಲ್ಲಿ ಸ್ಥಾಪಿಸಿರುವ ಜ್ಯೋತಿ ವಾಣಿಜ್ಯ ಶಾಲೆ ಕಾರ್ಯನಿರ್ವಹಿಸುತ್ತಿದೆ. ಇಲ್ಲಿ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿದವರಿಗಾಗಿ ಮತ್ತು ಕರಕುಶಲ ಕಲೆಯಲ್ಲಿ ಆಸಕ್ತಿ ಹೊಂದಿದ ಅಶಿಕ್ಷಿತ ಮಹಿಳೆಯರಿಗಾಗಿ ಹೊಲಿಗೆ ಮತ್ತು ಕಸೂತಿ ತರಗತಿಗಳನ್ನು ಕೂಡಾ ನಡೆಸಲಾಗುತ್ತಿದೆ.[೨೧೭]

### ೨.೧೨.೪ ಮುಕ್ತ ಶಾಲೆ

ಮೈಸೂರಿನ ಕರ್ನಾಟಕ ಮುಕ್ತ ಶಾಲೆಯ ಅನುಗ್ರಹದಿಂದ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿ ಶಾಲೆ ಬಿಟ್ಟು ಹೋದವರಿಗೆ ಅವರ ಮಾಧ್ಯಮಿಕ ಶಾಲಾ ಪಠ್ಯಕ್ರಮವನ್ನು ಪೂರೈಸಲು ಅವಕಾಶಗಳನ್ನು ಕಲ್ಪಿಸುವ ಸಲುವಾಗಿ ಬೆಥನಿ ವಿದ್ಯಾಸಂಸ್ಥೆ ೧೯೯೭ರಲ್ಲಿ ಸೈಂಟ್ ರೇಮಂಡ್ಸ್ ಮುಕ್ತ ಶಾಲೆಯನ್ನು ವಾಮಂಜೂರಿನಲ್ಲಿ ಸ್ಥಾಪಿಸಿದೆ. [ಹೆಚ್ಚಿನ ಮಾಹಿತಿಗಾಗಿ ಅನುಬಂಧ ೭ನ್ನು ಪರಾಮರ್ಶಿಸಿ]

### ೨.೧೨.೫. ಕೈಗಾರಿಕಾ ತರಬೇತಿ ಶಾಲೆಗಳು

ಬೆಥನಿ ಧರ್ಮಕೂಟದ ಮೂಲಕ ಗೃಹಿಣಿ ಕೇಂದ್ರಗಳು, ನೇಯ್ಗೆ ಕೇಂದ್ರಗಳು ಮತ್ತು ಹಳ್ಳಿಗಳಲ್ಲಿ ಹೆಣ್ಣು ಮಕ್ಕಳಿಗಾಗಿ ಶಾಲೆಗಳನ್ನು ನಡೆಸಿದರು. ಹೆಣ್ಣು ಮಕ್ಕಳಿಗೆ ಹೊಲಿಗೆ, ಕಸೂತಿ, ಲೇಸ್ ಮತ್ತು ಪ್ರಾರ್ಥನಾ ಮಂದಿರದೊಳಗೆ ಉಪಯೋಗಿಸುವ ಬಲಿಪೂಜೆಗೆ ಸಂಬಂಧಪಟ್ಟ ಗುರುಗಳ ಉಡುಪು ಇತ್ಯಾದಿಗಳ ತಯಾರಿಕೆಯಲ್ಲಿ ತರಬೇತಿ ನೀಡಲು ೧೯೨೨ರಲ್ಲಿ ಮಂಗಳೂರಿನ ಬೆಥನಿ ಮದರ್ ಹೌಸ್ ಬೆಂದೂರಿನಲ್ಲಿ ಸೈಂಟ್ ಮಾರ್ಥಾಸ್ ಕೈಗಾರಿಕಾ ಶಾಲೆ ಹಾಗೂ ಸಂತ ಜೋಸೆಪರ ನೇಯ್ಗೆ ಕೇಂದ್ರವನ್ನು (೧೯೨೪) ಫಾ। ರೇಮಂಡರು ಪ್ರಾರಂಭಿಸಿದರು. ಎಲ್ಲಾ ಮಕ್ಕಳು ಅಮೂರ್ತ ಚಿಂತನೆಯನ್ನು ಹೊಂದಿರುವುದಿಲ್ಲವೆಂದು ತಿಳಿದಿದ್ದ ಅವರು ವೃತಿಪರ ತರಬೇತಿ, ಕೃಷಿ ತರಬೇತಿ ಮತ್ತು ಕೇಟರಿಂಗ್ ತರಬೇತಿಯನ್ನು ಪರಿಚಯಿಸಿದರು. ಶಾಲೆಗಳಿಲ್ಲದ ಗ್ರಾಮಗಳ ಮಕ್ಕಳಿಗೆ ಸಹಾಯವಾಗಲು ಅವರು ವಸತಿಗೃಹಗಳನ್ನು ಪ್ರಾರಂಭಿಸಿದರು. ಅವರಿಗೆ ಭಾರತೀಯ ಮಾನವ ಸಂಪನ್ಮೂಲ ಮತ್ತು ಭೌತಿಕ ಸಂಪನ್ಮೂಲಗಳಲ್ಲಿ ವಿಶ್ವಾಸವಿತ್ತು. ಅವರು ವಯಸ್ಕ ಶಿಕ್ಷಣಕ್ಕಾಗಿ ಬರೆದಂತಹ "ಪ್ರೈಮರ್" ಗ್ರಂಥವನ್ನು ವಯಸ್ಕ ಶಿಕ್ಷಣ ಕೇಂದ್ರಗಳು ವ್ಯಾಪಕವಾಗಿ ಬಳಸುತ್ತಲಿವೆ.[೨೧೮]

ಫಾ। ರೇಮಂಡರು ಕರಾವಳಿ ಕರ್ನಾಟಕ ಹಾಗೂ ಉತ್ತರ ಕೇರಳದಲ್ಲಿ ಎಲ್ಲಾ ಜಾತಿ, ಮತದ ದುರ್ಬಲರನ್ನು ಶಿಕ್ಷಣದ ಮೂಲಕ ಶಕ್ತಿಶಾಲಿಗಳನ್ನಾಗಿಸಲು ಶ್ರಮಿಸಿದರು. ಚರಕದಿಂದ ನೂಲುವಿಕೆಯ ಪಾಠ ಕಲಿಸಿ ಆ ಮೂಲಕ ಬಾಪುವಿನ ಗ್ರಾಮ ಸ್ವರಾಜ್ಯದ ಕಲ್ಪನೆಗಳನ್ನು ಸಕಾರಗೊಳಿಸಲು ಮಡಿದರು.

ಬಡಬಗ್ಗರ ಸಾಮಾಜಿಕ ಆರ್ಥಿಕ ಅಭಿವೃದ್ಧಿಗಾಗಿ ಶ್ರಮಿಸುವಲ್ಲಿ ಧರ್ಮಸಭೆಯ ಪ್ರಮುಖ ಅಸ್ತ್ರವಾಗಿರುವ ಸಂತ ವಿನ್ಸೆಂಟ್ ಡಿ ಪೌಲ್ ಸಭೆಯ ಶಾಖೆಯನ್ನು ೧೯೨೬ರಲ್ಲಿ ಮಂಗಳೂರಿನಲ್ಲಿ ಸ್ಥಾಪಿಸಿದ ಖ್ಯಾತಿ ಫಾ।ರೇಮಂಡರಿಗೆ ಸಲ್ಲುತ್ತದೆ.[೨೧೯] ೧೯೩೧ರಿಂದ ೧೯೪೧ರ ತನಕ ('ಮ್ಯಾಂಗಲೂರ್ ರೋಮನ್ ಕಥೋಲಿಕ್ ಪಯೋನಿಯರ್ ಫಂಡ್') ಇದರ ನಿರ್ದೇಶಕರಾದ ಅವರು ಸಮಾಜದ ಆರ್ಥಿಕ, ಸಾಮಾಜಿಕ ಬೆಳವಣಿಗೆಗಾಗಿ ಶ್ರಮಿಸಿದರು. ಆ ಕಾಲದಲ್ಲಿಯೇ ಸ್ವದೇಶಿ ಉದ್ದಿಮೆಗಳನ್ನು ಇಲ್ಲಿನ ಜನರು ಪ್ರಾರಂಭಿಸಲು ಬೇಕಾದ ಮೂಲ ಸೌಕರ್ಯಗಳ ವ್ಯವಸ್ಥೆಗಾಗಿ ಚಿಂತಿಸಿದರು. ಜನರಲ್ಲಿ ಶ್ರಮಯುತ ದುಡಿಮೆಯ ಮನೋಸ್ಥಿತಿ ಬೆಳೆಸಲು ಅವರು ಆಸಕ್ತಿ ವಹಿಸಿದರು. ಸಮಾಜದ ವಿವಿಧ ಸ್ತರಗಳಲ್ಲಿ ತುಳಿತಕ್ಕೊಳಗಾದವರಿಗೆ ಚೇತರಿಸಿಕೊಳ್ಳಲು ಸಹಾಯ ನೀಡುವುದು ಹಾಗೂ ಅವರು ಜೀವನದಲ್ಲಿ ಕಳೆದುಕೊಂಡ ಉತ್ಸಾಹ ಪುನಃ ತುಂಬುವುದು, ಕುಸಿದು ಕುಳಿತವರಿಗೆ ಬಲ ನೀಡುವುದು, ನೊಂದವರ ಹಾಗೂ ದುಃಖದಲ್ಲಿರುವವರ ಕಷ್ಟಕ್ಕೆ ಹೆಗಲು ಕೊಡುವುದು, ಕೈಚೆಲ್ಲಿ ಕುಳಿತವರಿಗೆ ಕರ್ತವ್ಯವನ್ನು ನೆನಪಿಸುವುದು, ಸಮಾಧಾನ ಹೇಳಿ ಕೈಹಿಡಿದು ಮುನ್ನಡೆಸುವುದು, ಆತ್ಮಸ್ಥೈರ್ಯ ತುಂಬುವುದು ಮುಂತಾದ ಸೇವಾ ಕಾರ್ಯಗಳಿಗೆ ಫಾ। ರೇಮಂಡ್‌ರವರು ಪ್ರೇರಣೆಯಾಗಿದ್ದಾರೆ.[೨೨೦]

ಮಂಗಳೂರಿನಲ್ಲಿ ಸ್ಥಾಪಿಸಲಾದ ಬೆಥನಿ ವಿದ್ಯಾಸಂಸ್ಥೆಯ ಶಾಖೆಗಳು ಕೇರಳ, ಹರಿಯಾಣ, ಪಂಜಾಬ್, ಜಾರ್ಖಂಡ್, ಮಿಜೋರಂ, ನಾಗಲ್ಯಾಂಡ್ ಮೊದಲಾದ ಭಾರತದ ೨೪ ರಾಜ್ಯಗಳಲ್ಲಿ ಮತ್ತು ಇಟಲಿ, ಫ್ರಾನ್ಸ್, ಜರ್ಮನಿ, ವಾಯುವ್ಯ ಆಫ್ರಿಕಾ ಮತ್ತು ಬೆಲ್ಜಿಯಂನಲ್ಲಿ ಹರಡಿಕೊಂಡಿದೆ. ಈಗ ೧೭೦ ಬೆಥನಿ ಸಮುದಾಯಗಳು ಭಾರತದಲ್ಲಿ ಮತ್ತು ವಿದೇಶಗಳಲ್ಲಿ ಪಸರಿಸಿವೆ. ಬೆಥನಿ ವಿದ್ಯಾಸಂಸ್ಥೆಯಲ್ಲಿ ಮಾನ್ಯತೆ ಪಡೆದ ೯೯ ಶಾಲೆಗಳು ಮತ್ತು ೭೦,೦೦೦ಕ್ಕೂ ಅಧಿಕ ವಿದ್ಯಾರ್ಥಿಗಳಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿರುವ ಬಾಲವಾಡಿಗಳು, ನರ್ಸರಿಗಳು, ರಾಷ್ಟ್ರೀಯ ಮುಕ್ತ ಶಾಲಾ ಪದ್ಧತಿ, ಸಮುದಾಯ ಮಹಾವಿದ್ಯಾಲಯಗಳು ಮತ್ತು ಸ್ತ್ರೀ ಗುಂಪುಗಳಂತಹ ಶಿಕ್ಷಣದ ಅನೌಪಚಾರಿಕ ವಿಭಾಗಗಳಿಂದ ೩೧,೦೦೦ಕ್ಕೂ ಅಧಿಕ ಮಂದಿ ಲಾಭ ಪಡೆದಿದ್ದಾರೆ. ಔಪಚಾರಿಕ ಶಾಲೆಗಳಿಂದ ಹೊರಬಂದವರ ಸಂಖ್ಯೆ ಮೂರು ಲಕ್ಷಕ್ಕೂ ಅಧಿಕ. ಬೆಥನಿ ಆಸ್ಪತ್ರೆಗಳು ಮತ್ತು ಆರೋಗ್ಯ ಕೇಂದ್ರಗಳ ಮೂಲಕ ಕಡಿಮೆ ವೆಚ್ಚದ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಬೆಥನಿ ಗೃಹಗಳು ಮತ್ತು ಅಧ್ಯಯನ ಗೃಹಗಳ ಮೂಲಕ ಗ್ರಾಮೀಣ ಹುಡುಗಿಯರಿಗೆ ಮತ್ತು ಹುಡುಗರಿಗೆ ಶಿಕ್ಷಣದ ಅವಕಾಶಗಳನ್ನು ನೀಡಲಾಗುತ್ತದೆ.[೨೨೧] ಮಂಗಳೂರು ಪ್ರಾಂತ್ಯದ ಬೆಥನಿ ಧರ್ಮಭಗಿನಿಯರು ತಮ್ಮ ಸ್ವಂತ ಶಿಕ್ಷಣ ಸಂಸ್ಥೆಗಳಲ್ಲದೆ, ಮಂಗಳೂರು ಧರ್ಮಪ್ರಾಂತ್ಯದ ಕಥೋಲಿಕ ಶಿಕ್ಷಣ ಮಂಡಳಿಯ ಅಧೀನದಲ್ಲಿರುವ ೨೫ಕ್ಕಿಂತಲೂ ಹೆಚ್ಚು ಶಾಲಾ-

ಕಾಲೇಜುಗಳಲ್ಲಿ ಮುಖ್ಯೋಪಾಧ್ಯಾಯನಿಯರಾಗಿ, ಶಿಕ್ಷಕಿಯರಾಗಿ ಮತ್ತು ಆಸ್ಪತ್ರೆಗಳ ನಿರ್ವಹಣೆಯಲ್ಲಿ ನೆರವಾಗುತ್ತಿದ್ದಾರೆ.

ಫಾ। ರೇಮಂಡ್‌ರವರು ಗಾಂಧೀ ತತ್ವದ ಆಳ ಪ್ರಭಾವವನ್ನು ಹೊಂದಿದ ವ್ಯಕ್ತಿ. ಸಮುದಾಯದ ಪ್ರಗತಿ ಗ್ರಾಮಗಳ ಪ್ರಗತಿಯಲ್ಲಿದೆ ಎಂಬುದರಲ್ಲಿ ವಿಶ್ವಾಸವಿದ್ದ ಅವರು ಭಾರತದ ಒಳಭಾಗದಲ್ಲಿರುವ ಹಳ್ಳಿಗಳಲ್ಲಿ ಶಾಲೆಗಳನ್ನು ಮತ್ತು ಸಮುದಾಯ ಕೇಂದ್ರಗಳನ್ನು ಪ್ರಾರಂಭಿಸಿದರು. ಅವರು ರೂಪಿಸಿದ ಕೃಷಿ ಯೋಜನೆಗಳು ಮತ್ತು ಅವರು ಸ್ಥಾಪಿಸಿದ ಕೈಗಾರಿಕಾ ಶಾಲೆಗಳು, ಮನುಷ್ಯನ ದುಡಿಮೆಯಲ್ಲಿರುವ ಘನತೆಯ ಕುರಿತು ಅವರು ಹೊಂದಿರುವ ಆಳವಾದ ಮೆಚ್ಚುಗೆ ಮತ್ತು ಅವರಲ್ಲಿ ಬಡವರ ಕುರಿತಾಗಿದ್ದ ಕಾಳಜಿಯನ್ನು ವ್ಯಕ್ತಪಡಿಸುತ್ತವೆ. ಮೊನ್ಸಿಞೊರ್ ರೇಮಂಡರ ಆಧುನಿಕ ವಿಚಾರಗಳನ್ನು ಸ್ವೀಕರಿಸಲು ಮಂಗಳೂರು ಧರ್ಮಪ್ರಾಂತ್ಯದ ಒಳಗಿದ್ದ ಸಂಪ್ರದಾಯವಾದಿಗಳು ಇನ್ನೂ ಸಿದ್ಧರಿರಲಿಲ್ಲ. ಅವರ ದೂರದೃಷ್ಟಿ ವರ್ತಮಾನವನ್ನು ಉಚ್ಚ ಮಟ್ಟಕ್ಕೇರಿಸಿತು ಮತ್ತು ಭವಿಷ್ಯದಲ್ಲಿ ಆಳವಾಗಿ ಬೇರೂರಿತು. ಅವರ ವಿಚಾರಗಳನ್ನು ಅನುಷ್ಠಾನಕ್ಕೆ ತರುವುದರಲ್ಲಿ ಮಂಗಳೂರು ಧರ್ಮಪ್ರಾಂತ್ಯದ ಮುಖಂಡರಿಂದ ತಡೆಗಳು ಹಿನ್ನಡೆಗಳು ಇದ್ದವು. ಅವರ ಅಸಾಂಪ್ರದಾಯವಾದಿತ್ವವನ್ನು ಟೀಕಿಸಲಾಯಿತು. ಅವರ ಬರಹಗಳನ್ನು ಸಂಗ್ರಹಿಸಿ ಸುಟ್ಟು ಬಿಡಲಾಯಿತು. ಆದರೂ ಅವರು ತಮ್ಮ ಕೆಲಸವನ್ನು ಮುಂದುವರಿಸಿದರು. ಅವರಿಗೆ 'ನೋವಿಸ್ ಮುಖಂಡ' 'ಬೆಥನಿಯ ಸುಪೀರಿಯರ್ ಜನರಲ್' ಎಂಬ ಹೆಸರು ಹಚ್ಚಿ, 'ಜಗಳಗಂಟ', ಮಹತ್ವಾಕಾಂಕ್ಷಿ ಮತ್ತು ಗರ್ವಿಷ್ಟ'ರೆಂದು ಕರೆಯಲಾಗಿದೆ. ಅವರು ಬದುಕಿರುವಾಗಲೇ ಅವರನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳಲಾಯಿತು.[೨೨೨]

## ೧.೧೩. ಇತರ ಶಿಕ್ಷಣ ಸಂಸ್ಥೆಗಳು

### ೨.೧೩.೧. ಸೈಂಟ್ ಮೇರಿಸ್ ಸಿರಿಯನ್ ಸಂಸ್ಥೆಗಳು

ಬ್ರಹ್ಮಾವರದ ಸಿರಿಯನ್ ಕ್ರೈಸ್ತ ಸಮುದಾಯವು ಕೇರಳದ ಮಲಂಕರ ಆರ್ಥೋಡೊಕ್ಸ್ ಚರ್ಚ್‌ಗೆ ಒಳಪಡುತ್ತದೆ. ಅವರು ನಂಬಿಕೆಯಲ್ಲಿ ಕ್ರೈಸ್ತರಾಗಿದ್ದರೂ, ಭಾರತೀಯ ಬದುಕಿನ ವಿಧಾನಕ್ಕೆ ಅಂಟಿಕೊಂಡವರಾಗಿದ್ದಾರೆ. ಅವರನ್ನು, "ಸಂಸ್ಕೃತಿಯಲ್ಲಿ ಭಾರತೀಯರು, ಧರ್ಮದಲ್ಲಿ ಕ್ರೈಸ್ತರು ಮತ್ತು ಆರಾಧನೆಯಲ್ಲಿ ಪೌರ್ವಾತ್ಯರು" ಎಂದು ವರ್ಣಿಸಬಹುದು.[೨೨೩] ಗೋವಾದ ಪದ್ರಾವದೊ ಧರ್ಮಗುರುಗಳ ಅನುಯಾಯಿಗಳು ಕಲ್ಯಾಣಪುರದ ಮಿಲಾಗ್ರಿಸ್ ಚರ್ಚಿನ ಮೇಲಿನ ಹಕ್ಕನ್ನು ಕಳೆದುಕೊಂಡ ಬಳಿಕ ಗೋವಾದ ಫಾ।ಆಲ್ವಾರೀಸ್ ಎಂಬ ಧರ್ಮಗುರುಗಳ ನೇತೃತ್ವದಲ್ಲಿ ಬ್ರಹ್ಮಾವರದಲ್ಲಿ ತಾತ್ಕಾಲಿಕ ಜೋಪಡಿಯೊಂದರಲ್ಲಿ 'ಮಿಲಾಗ್ರಿಸ್ ಚರ್ಚ್' ಎಂಬ ಹೆಸರಿನಲ್ಲಿ ಪ್ರಥಮ ದಿವ್ಯ

ಬಲಿಪೂಜೆಯನ್ನು ಅರ್ಪಿಸಿದರು( ಮಾರ್ಚ್ ೧೮೮೯). ತದನಂತರ, ಚರ್ಚಿನ ಹೆಸರನ್ನು 'ಸೈಂಟ್ ಮೇರಿಸ್ ಆರ್ಥೋಡೊಕ್ಸ್ ಸಿರಿಯನ್ ಚರ್ಚ್' ಎಂದು ಪುನರ್ನಾಮಕರಣ ಮಾಡಲಾಯಿತು.[೨೨೪] ಬ್ರಹ್ಮಾವರದಲ್ಲಿ ಸಿರಿಯನ್ ಪಂಥ ನೆಲೆಗೊಳ್ಳಲು ಪ್ರಮುಖ ಕಾರಣಕರ್ತರಾದ ಫಾ। ಆಲ್ವಾರೀಸರು ಬಿಷಪರಾಗಿ ಅಧಿಕಾರ ವಹಿಸಿಕೊಂಡ ಬಳಿಕ ಬ್ರಹ್ಮಾವರದ ಇಗರ್ಜಿಯನ್ನು ಮುನ್ನಡೆಸುವ ಜವಾಬ್ದಾರಿಯನ್ನು ಗೋವಾದ ಫಾ। ಆರ್.ಝುಡ್. ನೊರೋನ್ಹಾರಿಗೆ ವಹಿಸಿಕೊಟ್ಟರು. ಅವರು ೧೯೧೬ರಲ್ಲಿ ಬ್ರಹ್ಮಾವರದ ಕಾಸ್ಮೋಪಾಲಿಟನ್ ಶಾಲೆಯನ್ನು ಪ್ರಾರಂಭಿಸಿದರು.[೨೨೫] ಅನಂತರ, ಫಾ। ಪಿ.ಜಿ.ಕೋಶಿಯವರು ೧೯೩೬ರಲ್ಲಿ ಬ್ರಹ್ಮಾವರದ ಉಪ್ಪಿನಕೋಟೆಯ ಕಾಸ್ಮೋಪಾಲಿಟನ್ ಶಾಲೆಯನ್ನು ಸ್ಥಾಪಿಸಿದರು.[೨೨೬]

೧೯೫೩ರಲ್ಲಿ ಫಾ। ಪಿ.ಜಿ.ಕೋಶಿಯವರು ಆರ್ಥೋಡೊಕ್ಸ್ ಸಿರಿಯನ್ ಕ್ರೈಸ್ತ ವಿದ್ಯಾ ಮಂಡಲಿ (Orthodox Syrian Christian Educational Society) ಸ್ಥಾಪಿಸಿ, ಅದರ ವತಿಯಿಂದ ಸೈಂಟ್ ಮೇರಿಸ್ ಸಿರಿಯನ್ ಪ್ರೌಢಶಾಲೆಯನ್ನು ಪ್ರಾರಂಭಿಸಿದರು.[೨೨೭] ೧೯೫೩ರ ವರೆಗೆ ಬ್ರಹ್ಮಾವರ, ಪ್ರೌಢಶಿಕ್ಷಣದ ಅವಕಾಶಗಳಿಲ್ಲದ ದ್ವೀಪದಂತಿತ್ತು. ಇಲ್ಲಿನ ವಿದ್ಯಾರ್ಥಿಗಳು ಹೆಚ್ಚಿನ ಶಿಕ್ಷಣಕ್ಕಾಗಿ ಕಲ್ಯಾಣಪುರದ ಮಿಲಾಗ್ರಿಸ್ ಹೈಸ್ಕೂಲಿಗೋ, ಬಾರ್ಕೂರಿನ ನ್ಯಾಶನಲ್ ಹೈಸ್ಕೂಲಿಗೋ ಅಥವಾ ಕೋಟದ ವಿವೇಕ ಹೈಸ್ಕೂಲಿಗೋ ಹೋಗಬೇಕಾಗಿತ್ತು. ಮೂರು ಕಡೆಯಲ್ಲೂ ಹೊಳೆ ದಾಟುವ ಅನಿವಾರ್ಯತೆ. ಮಳೆಗಾಲದಲ್ಲಿ ಗಾಳಿ, ಮಳೆ, ನದಿಯಲ್ಲಿ ನೆರೆ ನೀರಿನ ಉಬ್ಬರ ಇಂತಹ ಕಷ್ಟಕರ ಸ್ಥಿತಿಯನ್ನು ಸಹಿಸಲಾಗದ ಬ್ರಹ್ಮಾವರದ ನಾಗರಿಕರು ಚರ್ಚಿನ ಧರ್ಮಗುರುಗಳಾದ ಫಾ। ಕೋಶಿಯವರ ನೇತೃತ್ವದಲ್ಲಿ ಅಂದಿನ ವಿದ್ಯಾಧಿಕಾರಿಯವರನ್ನು ಸಂಪರ್ಕಿಸಿ ಹೈಸ್ಕೂಲು ಸ್ಥಾಪನೆಗೆ ನೆರವು ಕೋರಿದಾಗ ನೆರವನ್ನು ನಿರಾಕರಿಸಿದರು. ಆದರೆ ಪಟ್ಟುಬಿಡದ ಫಾ।ಕೋಶಿಯವರು ಮದ್ರಾಸಿನವರೆಗೂ ಹೋಗಿ ಅನುಮತಿ ತಂದು ಈ ಭಾಗದ ಜನರಿಗೆ ಉನ್ನತ ಶಿಕ್ಷಣದ ಅವಕಾಶವನ್ನು ಕಲ್ಪಿಸಿಕೊಟ್ಟರು.[೨೨೮] ಫಾ। ಕೆ.ಕೆ. ಕುರಿಯಕೋಸ್ ಅವರಿಂದ ಬ್ರಹ್ಮಾವರದಲ್ಲಿ ಎಸ್. ಎಂ. ಎಸ್. ಪದವಿ ಪೂರ್ವ ವಿದ್ಯಾಲಯ ಮತ್ತು ಎಸ್. ಎಮ್. ಎಸ್. ಪ್ರಥಮ ದರ್ಜೆ ಮಹಾವಿದ್ಯಾಲಯ ಅನುಕ್ರಮವಾಗಿ ೧೯೭೨ ಮತ್ತು ೧೯೮೦ರಲ್ಲಿ ಸ್ಥಾಪನೆಗೊಂಡಿತು. ಸಿ.ಬಿ.ಎಸ್.ಇ. ಪಠ್ಯಕ್ರಮದ ಎಸ್. ಎಮ್. ಎಸ್. ಆಂಗ್ಲ ಮಾಧ್ಯಮ ಶಾಲೆಯನ್ನು (೧೯೯೩) ಮತ್ತು ರಾಜ್ಯ ಪಠ್ಯಕ್ರಮದ ಎಸ್. ಎಮ್. ಎಸ್. ಆಂಗ್ಲ ಪ್ರೌಢಶಾಲೆಯನ್ನು (೨೦೦೬) ಫಾ। ಎಸ್. ಜೆ. ಥಾಮಸ್ ಅವರು ಬ್ರಹ್ಮಾವರದಲ್ಲಿ ಸ್ಥಾಪಿಸಿದರು.[೨೨೯]

### ೨.೧೩.೩. ಸೀರೋ ಮಲಬಾರ್ ಧರ್ಮಸಭೆಯ ಶಿಕ್ಷಣ ಸೇವೆ

ಎರಡನೇ ವಿಶ್ವ ಮಹಾಯುದ್ಧದ ಬಳಿಕ ದೇಶದಾದ್ಯಂತ ಕಾಣಿಸಿಕೊಂಡ ಆರ್ಥಿಕ ಅಸ್ಥಿರತೆಯ ಫಲವಾಗಿ ನಲವತ್ತು -ಐವತ್ತರ ದಶಕಗಳಲ್ಲಿ ಕೇರಳದ ವಿವಿಧ ಭಾಗಗಳಿಂದ ನೂರಾರು ಕುಟುಂಬಗಳು ಕೃಷಿ ಭೂಮಿಯನ್ನರಸಿಕೊಂಡು ಕರ್ನಾಟಕಕ್ಕೆ ವಲಸೆ ಬಂದರು. ಹೀಗೆ ಬಂದ ಕೃಷಿ ಪ್ರೀಯರೂ, ಪರಿಶ್ರಮಶಾಲಿಗಳೂ ಆದ ಜನರು ಕರ್ನಾಟಕದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೊಡಗು ಪ್ರದೇಶದ ವಿವಿಧ ಭಾಗಗಳಲ್ಲಿ ನೆಲೆನಿಂತರು. ಅವರು ಇಂದಿನ ದಕ್ಷಿಣ ಕನ್ನಡ , ಉಡುಪಿ, ಕೊಡಗು ಜಿಲ್ಲೆಗೆ ಸೇರಿದ ಶಿರಾಡಿ, ಗಂಡಿಬಾಗಿಲು, ತೋಟತ್ತಾಡಿ, ಕಳಂಜ, ಧರ್ಮಸ್ಥಳ, ಕಡಬ, ಕುಟ್ರುಪ್ಪಾಡಿ, ಜಟ್ಕಲ್, ಮೂಧೂರು, ಸಿದ್ಧಾಪುರ, ಬೈಂದೂರು ಮೊದಲಾದೆಡೆ ತಳವೂರಿದರು. ಹೀಗೆ ಬಂದಂತಹ ಸಿರಿಯನ್ ಕಥೋಲಿಕರ ಆಧ್ಯಾತ್ಮಿಕ ಅವಶ್ಯಕತೆಗಳನ್ನು ಮಂಗಳೂರು ಮತ್ತು ಮೈಸೂರು ಧರ್ಮಪ್ರಾಂತ್ಯದ ಧರ್ಮಗುರುಗಳು ನೆರವೇರಿಸಿದರು. ಆದರೆ ಸಂವಹನಕ್ಕೆ ಭಾಷೆ ಅಡ್ಡಿಯಾದಾಗ ಸಿ.ಎಂ.ಐ. (ದ ಕಾರ್ಮೆಲೈಟ್ ಆಫ್ ಮೇರಿ ಇಮ್ಮ್ಯಾಕುಲೇಟ್) ಸನ್ಯಾಸ ಸಭೆಯ ಯಾಜಕರು ಸಹಾಯ ಹಸ್ತ ನೀಡಿದರು. ೧೨ ಜೂನ್ ೧೯೫೫ ರಂದು ಪುತ್ತೂರು ತಾಲೂಕಿನ ಉದನೆಯನ್ನು ಕರ್ನಾಟಕದ ಪ್ರಥಮ ಸಿರಿಯನ್ ಧರ್ಮಕೇಂದ್ರವನ್ನಾಗಿ ಘೋಷಿಸಲಾಯಿತು. ಆ ಬಳಿಕ ತೋಟತ್ತಾಡಿ, ಕುಟ್ರುಪ್ಪಾಡಿ, ನೆಲ್ಯಾಡಿ, ಜಡ್ಕಲ್, ಮೂಧೂರು, ಧರ್ಮಸ್ಥಳ, ಗಂಡಿಬಾಗಿಲು, ಕಳೆಂಜ ಮೊದಲಾದೆಡೆ ಧರ್ಮಕೇಂದ್ರಗಳು ಸ್ಥಾಪನೆಗೊಂಡವು.

ಕರ್ನಾಟಕದಲ್ಲಿದ್ದ ಸಿರಿಯನ್ ಕಥೋಲಿಕರ ಭಾಷಿಕ ಮತ್ತು ಸಾಂಸ್ಕೃತಿಕ ಸನ್ನಿವೇಶವನ್ನು ಮನಗಂಡ ತಲಚ್ಚೇರಿ ಧರ್ಮಪ್ರಾಂತ್ಯದ ಬಿಶಪರಾಗಿದ್ದ ಸೆಬಾಸ್ಟಿಯನ್ ವಳ್ಳೋಪಿಳ್ಳಿ ಅವರು ೧೧ ನವೆಂಬರ್ ೧೯೭೮ ರಂದು 'ದಕ್ಷಿಣ ಕನ್ನಡ ಮಿಶನ್' ಎಂಬ ಆಧ್ಯಾತ್ಮಿಕ ವ್ಯವಸ್ಥೆಯನ್ನು ಅಳವಡಿಸಿದರು. ಫಾ। ಪೀಟರ್ ಕೂಟಯಾನಿ ಅವರನ್ನು 'ದಕ್ಷಿಣ ಕನ್ನಡ ಮಿಶನ್ನಿನ ಪ್ರಥಮ ಎಪಿಸ್ಕೋಪಲ್ ವಿಕಾರ್'ಆಗಿ ನೇಮಿಸಲಾಯಿತು.[೨೩೦] ಮುಂದೆ ೨೪ ಏಪ್ರಿಲ್ ೧೯೯೯ ರಂದು ಜಗದ್ಗುರು ಹೊರಡಿಸಿದ 'ಕುಮ್ ಆಂಪ್ಲ' ('Cum Ampla') ಎಂಬ ಪರಿಪತ್ರದ ಮುಖೇನ ಕರ್ನಾಟಕದ ದಕ್ಷಿಣ ಕನ್ನಡ, ಉಡುಪಿ, ಕೊಡಗು ಜಿಲ್ಲೆಗಳನ್ನೊಳಗೊಂಡ ಪ್ರದೇಶಗಳಲ್ಲಿರುವ ಸಿರಿಯನ್ ಕಥೋಲಿಕರಿಗಾಗಿ ಬೆಳ್ತಂಗಡಿ ಧರ್ಮಪ್ರಾಂತ್ಯವನ್ನು ಸ್ಥಾಪಿಸಲಾಗಿದೆ.[೨೩೧] ಕರ್ನಾಟಕ ಕಥೋಲಿಕ್ ಎಜುಕೇಶನಲ್ ಆಂಡ್ ಚಾರಿಟೇಬಲ್ ಸೊಸೈಟಿ (K.C.E.C.S.) ಎಂಬ ವಿದ್ಯಾ ಮಂಡಳಿ ಹಲವಾರು ಪ್ರೌಢಶಾಲೆಗಳನ್ನು, ಪ್ರಾಥಮಿಕ ಹಾಗೂ ಪೂರ್ವ ಪ್ರಾಥಮಿಕ ಶಾಲೆಗಳನ್ನೂ ನಡೆಸುತ್ತಿದ್ದು, ಹಿಂದುಳಿದ ಪ್ರದೇಶಗಳಲ್ಲಿ ಆಧುನಿಕ ಶಿಕ್ಷಣವನ್ನು ನೀಡುವ ಕ್ರಾಂತಿಕಾರಿ ಹೆಜ್ಜೆಯನ್ನಿಟ್ಟಿದೆ.[೨೩೨] ಪುತ್ತೂರಿನಲ್ಲಿ ೬ ಜೂನ್ ೨೦೦೫ರಲ್ಲಿ

ಸ್ಯಾನ್ ತೋಮ್ ಗುರುಮಂದಿರ ಸ್ಥಾಪನೆಯಾಗಿ, ದೇವರ ಕರೆಗೆ ಓಗೊಡುವ ಹತ್ತಾರು ಎಳೆಯರಿಗೆ ಗುರುದೀಕ್ಷಾಪೂರ್ವ ತರಬೇತಿಯನ್ನು ನೀಡುತ್ತಿದೆ.[೨೩೩] [ ಹೆಚ್ಚಿನ ವಿವರಗಳಿಗೆ ಅನುಬಂಧ ೮ನ್ನು ಪರಿಶೀಲಿಸಿ]

**೨.೧೩. ೩. ದಿ ಕ್ಯಾಥೊಲಿಕ್ ಅಸೋಸಿಯೇಶನ್ ಆಫ್ ಸೌತ್ ಕೆನರಾ ಮತ್ತು ಶಿಕ್ಷಣಕ್ಕೆ ಅದರ ಕೊಡುಗೆ**

ಮಂಗಳೂರಿನ ಕ್ರೈಸ್ತರು ವ್ಯಕ್ತಪಡಿಸಿರುವ ಆಸಕ್ತಿ ಅಲ್ಪವೆಂದು ತಿಳಿಯದಂತೆ, ಅವರ ಸಂಘವಾದ ದಕ್ಷಿಣ ಕನ್ನಡದ ಕ್ರೈಸ್ತ ಸಂಘದಲ್ಲಿ (ದಿ ಕ್ಯಾಥೊಲಿಕ್ ಅಸೋಸಿಯೇಶನ್ ಆಫ್ ಸೌತ್ ಕೆನರಾ) ಶೈಕ್ಷಣಿಕ ಸಮಿತಿಯೊಂದು ಇತ್ತು. ಶಿಕ್ಷಣವನ್ನು ಪೋಷಿಸುವುದಕ್ಕಾಗಿ ಅದು ತನ್ನ ಶಕ್ತಿಯನ್ನು ವಿನಿಯೋಗಿಸುತ್ತಿತ್ತು. ಈಗಾಗಲೇ ಅಸ್ತಿತ್ವದಲ್ಲಿರುವ ಶಾಲೆಗಳು ಮತ್ತಷ್ಟು ದಕ್ಷರೀತಿಯಿಂದ ಕಾರ್ಯನಡೆಸುವಂತೆ ನೋಡಿಕೊಳ್ಳುವುದು, ಅಗತ್ಯವಿರುವಲ್ಲಿ ತಾಂತ್ರಿಕ ಮತ್ತು ಕೈಗಾರಿಕಾ ಶಾಲೆಗಳನ್ನು ಒದಗಿಸುವುದು ಇತ್ಯಾದಿ. ಈ ಸಮಿತಿಯಲ್ಲಿ ಆರು ಸದಸ್ಯರಿದ್ದು, ಇವರೆಲ್ಲರೂ ಸುಶಿಕ್ಷಿತರೇ ಆಗಿದ್ದರು. ಉಪಸಮಿತಿಯು ೧೭ ಕ್ರೈಸ್ತ ಪ್ರಾಥಮಿಕ ಶಾಲೆಗಳಿಗೆ ರೂ ೯೮೫ ರಂತೆ ಸಹಾಯಧನವನ್ನು ನೀಡುತ್ತಿತ್ತು. ಮತ್ತು ಹಳ್ಳಿಗಳಿಂದ ಬರುವ ಕ್ರೈಸ್ತ ಶಿಕ್ಷಕರಿಗೆ ಮಂಗಳೂರಿನ 'ನಾರ್ಮಲ್ ಟ್ರೇನಿಂಗ್ ಶಾಲೆ'ಯಲ್ಲಿ ತರಬೇತಿ ಪಡೆಯಲು ಅವರಿಗಾಗಿ ವಸತಿ ಗೃಹವನ್ನು ಒದಗಿಸಿತ್ತು. ಸಮಿತಿಯು ೯ ವಿದ್ಯಾರ್ಥಿಗಳಿಗೆ ತರಬೇತಿ ಪಡೆಯಲು ೯ ಕಿರಿಯ ವಿದ್ಯಾರ್ಥಿವೇತನಗಳನ್ನು ನೀಡಿದೆ. ಅವರು ತರಬೇತಿ ಪಡೆದ ಕ್ಷೇತ್ರಗಳೆಂದರೆ ಇಸ್ತ್ರಿ ಕೆಲಸ(೧), ನೇಯ್ಗೆ(೪), ಬಡಗಿ ಕೆಲಸ(೧), ಬೆರಳಚ್ಚು(೨), ಮತ್ತು ಕಲಾಯಿ ಕೆಲಸ(೧). ಅದು ವೊರ್ಕಾಡಿನ ಪ್ಯಾರಿಶ್‌ನವರಿಗೆ ತರಬೇತಿಯ ನಂತರ ಸ್ವತಂತ್ರವಾಗಿ ವ್ಯಾಪಾರ ಮಾಡಲು ಮತ್ತು ಗಿರಿ ಚರ್ಚಿಗೆ ನೇಯ್ಗೆ ತರಗತಿಯನ್ನು ಪ್ರಾರಂಭಿಸಲು ಮಗ್ಗವನ್ನು ನೀಡಿದೆ[೨೩೪]. ಈ ಕಾರ್ಯಗಳನ್ನು ಶಿಕ್ಷಣ ವರದಿಯಲ್ಲಿ ಉಲ್ಲೇಖಿಸಲಾಗಿದೆ. ನಾಲ್ಕು ಉನ್ನತ ತರಗತಿಗಳ ವಿದ್ಯಾರ್ಥಿಗಳಿಗೆ ಮಿಸ್ಟರ್ ರೆಬೆಲ್ಲೊ ನೇಯ್ಗೆಯನ್ನು ಕಲಿಸುತ್ತಿದ್ದರು. ಇದು ಕೈಗಾರಿಕ ಶಿಕ್ಷಣದ ಪ್ರಾರಂಭವಾಗಿದೆ. ಪ್ಯಾರಿಶ್ ಶಾಲೆಗಳು ಸ್ವತಂತ್ರವಾಗಿ, ಸ್ವಾವಲಂಬಿಗಳಾಗಿ ಇರಬೇಕೆಂಬ ಉದ್ದೇಶದಲ್ಲಿ ಪ್ಯಾರಿಶ್ ಶಾಖಾ ಸಂಸ್ಥೆಯನ್ನು ಸೃಷ್ಟಿಸುವ ಪ್ರಯತ್ನವನ್ನು ಉಪಸಮಿತಿ ನಡೆಸಿತ್ತು. ಆದರೆ ಅದಕ್ಕೆ ಸಮಯಾನುಕೂಲತೆ ಒದಗಿ ಬಾರದೆ ಈ ಕಾರ್ಯಯೋಜನೆಯನ್ನು ಕೈಬಿಡಬೇಕಾಗಿ ಬಂತು. ಉಪಸಮಿತಿಯು ಉನ್ನತ ಶಿಕ್ಷಣದ ಕಾಳಜಿಯನ್ನು ಕೂಡಾ ವಹಿಸಿಕೊಂಡು ಉನ್ನತ ಶಿಕ್ಷಣದ ವಿದ್ಯಾರ್ಥಿವೇತನ ನಿಧಿಯನ್ನು ಸ್ಥಾಪಿಸುವ ಪ್ರಯತ್ನವನ್ನು ನಡೆಸಿತ್ತು. ಅವರು ಎರಡು ವೈವಿದ್ಯಮಯ ಮನರಂಜನಾ ಕಾರ್ಯಕ್ರಮಗಳನ್ನು ನಡೆಸಿ, ರೂ ೧೨೬೨-೮-೪ ನಿವ್ವಳ ಲಾಭ ಪಡೆದಿದ್ದಾರೆ. 'ದಿ ಕ್ಯಾಥೊಲಿಕ್ ಕೊ-ಓಪರೇಟಿವ್ ಕ್ರೆಡಿಟ್ ಸೊಸೈಟಿ'ಯು ನೂರು ರೂ ದೇಣಿಗೆಯನ್ನು ನೀಡಿದರೆ, ಬೇರೆಯವರು ನೀಡಿದ ದೇಣಿಗೆಯ ಒಟ್ಟು ಮೊತ್ತ ರೂ ೯೦. ಎಲ್ಲಾ ಸೇರ್ರಿ ರೂ ೧೪೫೭-೮-೪ ಮೊತ್ತದ ಉನ್ನತ ತಾಂತ್ರಿಕ ಮತ್ತು ವೃತ್ತಿಪರ ಅಧ್ಯಯನಗಳ ಕ್ಷೇವಿಯರ್

ವಿದ್ಯಾರ್ಥಿವೇತನವನ್ನು ೧೯೧೮ರಲ್ಲಿ ಸ್ಥಾಪಿಸಲಾಯಿತು. ಮೊತ್ತಮೊದಲನೆಯದಾಗಿ ವಿದ್ಯಾರ್ಥಿವೇತನ ಪಡೆದ ವ್ಯಕ್ತಿ ವಿಲಿಯಂ ಅರನ್ಹಾ. ಅವರು ಬಾಂಬೆಯಲ್ಲಿ ವೈದ್ಯಕೀಯ ಶಿಕ್ಷಣ ಪಡೆದಿದ್ದಾರೆ, ಅವರಿಗೆ ಮರುಪಾವತಿಯ ಶರತ್ತಿನೊಂದಿಗೆ ಹಣವನ್ನು ಸಾಲದ ರೂಪದಲ್ಲಿ ನೀಡಲಾಗಿದೆ.[೨೩೫] ಅಲ್ಲದೆ, ಝೇವಿಯರ್ ಟೆಕ್ನಿಕಲ್ ಇನ್ಸ್ಟಿಟ್ಯೂಟನ್ನು ಮುಕ್ಕಾದಲ್ಲಿ ಮಂಗಳೂರಿನ ಝೇವಿಯರ್ ಎಡುಕೇಷನಲ್ ಟ್ರಸ್ಟ್‌ನ ಆಶ್ರಯದಲ್ಲಿ ೧೯೮೪ರಲ್ಲಿ ಸ್ಥಾಪಿಸಲಾಗಿದೆ. ಜಿಲ್ಲೆಯ ಆರ್ಥಿಕವಾಗಿ ಹಿಂದುಳಿದ ಮತ್ತು ಬಡ ಯುವಜನತೆಯ ಮಟ್ಟ ಸುಧಾರಿಸುವ ಸಲುವಾಗಿ ತಾಂತ್ರಿಕ ತರಬೇತಿಯನ್ನು ನೀಡುವುದು ಇದರ ಬಯಕೆಯಾಗಿದೆ.[೨೩೬]

### ೨.೧೩.೪. ಲಿಟ್ಲ್ ರಾಕ್ ಇಂಡಿಯನ್ ಸ್ಕೂಲ್

ಲಿಟ್ಲ್ ರಾಕ್ ಇಂಡಿಯನ್ ಸ್ಕೂಲ್, ಡಾ. ಸಿ.ಟಿ.ಅಬ್ರಹಾಂ ಅವರ ದೂರದೃಷ್ಟಿಯ ಫಲವಾಗಿ ೧೯೮೨ರಲ್ಲಿ ಬ್ರಹ್ಮಾವರದ ಚಾಂತಾರ್ ಎಂಬಲ್ಲಿ ಜನ್ಮ ತಾಳಿತು. ಸಾಂಪ್ರದಾಯಿಕ ಶಾಲೆ ಅಳವಡಿಸಿಕೊಂಡಿರುವ ಪ್ರಶ್ನಾರ್ಹ ಕ್ರಮಗಳನ್ನು ಅನುಸರಿಸದ ಶಾಲೆಯನ್ನು ಸೃಷ್ಟಿಸಬೇಕೆಂದು ಆಡಳಿತ ಮಂಡಳಿಯ ಅಪೇಕ್ಷೆಯಾಗಿತ್ತು. ಶಾಲೆಯ ಎಲ್ಲಾ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳ ಬೌದ್ಧಿಕ ಮತ್ತು ಭಾವನಾತ್ಮಕ ಪೋಷಣೆಯ ಮೇಲೆ ಗಮನವನ್ನು ಕೇಂದ್ರಿಕರಿಸಲಾಗಿದೆ. ಕಳೆದ ಹದಿನೈದು ವರ್ಷಗಳಲ್ಲಿ ಅನೇಕ ಶಾಲೆಗಳು ಹೊರಪ್ರದೇಶಗಳಲ್ಲಿ ಹುಟ್ಟಿಕೊಳ್ಳುತ್ತಿದ್ದರೂ, ಈ ಶಾಲೆಯಲ್ಲಿ ವಿದ್ಯಾರ್ಥಿಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ನಿರೀಕ್ಷಿತ ಮಟ್ಟದಲ್ಲಿ ಏರುತ್ತಾ ಹೋಗಿದೆ. ೧೯೯೩ರಲ್ಲಿ ಶಾಲೆಯಲ್ಲಿ ೧೮೦೦ ವಿದ್ಯಾರ್ಥಿಗಳು ಇದ್ದರು. ೨೦೦೬ರಲ್ಲಿ ಇದ್ದ ಒಟ್ಟು ವಿದ್ಯಾರ್ಥಿಗಳು ೩೧೮೮, ಇವರಲ್ಲಿ ೧೪೯೬ ಮಂದಿ ಬಾಲಕಿಯರು ಮತ್ತು ೧೬೯೨ ಮಂದಿ ಬಾಲಕರು. ೨೦೦೨ರಲ್ಲಿ ನವದೆಹಲಿಯ ವಿಜ್ಞಾನ ಮಂದಿರದಲ್ಲಿ ನಡೆದ ಪ್ರಶಸ್ತಿ ಸಮಾರಂಭದಲ್ಲಿ ಶಾಲೆಗೆ ರಾಷ್ಟ್ರಾಧ್ಯಕ್ಷರಿಂದ 'ಕಂಪ್ಯೂಟರ್ ಲಿಟರೆಸಿ ಎಕ್ಸಲೆನ್ಸ್ ಪ್ರಶಸ್ತಿ', ಕೇಂದ್ರ ಸರ್ಕಾರದ ಮಾಹಿತಿ ಮತ್ತು ತಂತ್ರಜ್ಞಾನ ಮಂತ್ರಾಲಯದಿಂದ ದೊರೆತಿದೆ. ಅಂತೆಯೇ, ೧೯೮೪ರಲ್ಲಿ ಕ್ರಾಸ್‌ಲ್ಯಾಂಡ್ ಮಹಾವಿದ್ಯಾಲಯವನ್ನು ಹಾಗೂ ಕ್ರಾಸ್‌ಲ್ಯಾಂಡ್ ಪದವಿ ಪೂರ್ವ ಕಾಲೇಜನ್ನು ೧೯೮೭ರಲ್ಲಿ ಬ್ರಹ್ಮಾವರದಲ್ಲಿ ಲಿಟ್ಲ್ ರಾಕ್ ಇಂಡಿಯನ್ ಸ್ಕೂಲ್ ನಡೆಸುವ ಆಡಳಿತ ಮಂಡಳಿಯವರಿಂದ ಸ್ಥಾಪಿಸಲ್ಪಟ್ಟಿದೆ. ಅಲ್ಲದೆ ಅನಾಥ ಮತ್ತು ಬಡ ಮಕ್ಕಳಿಗಾಗಿ 'ಇಂಡಿಯಾ ಥಿಯೋಲಾಜಿಕಲ್ ಸೆಮಿನರಿ ಹೈಡಿ' ಮನೆಯನ್ನೂ ಸ್ಥಾಪಿಸಿದ್ದಾರೆ.[೨೩೭]

ಹೀಗೆ, ಬೇರೆ ಬೇರೆ ಧರ್ಮಪ್ರಾಂತ್ಯದ ಸನ್ಯಾಸಿ ಸಭೆಗಳ ಧರ್ಮಗುರುಗಳು, ಧರ್ಮಭಗಿನಿಯರು, ಸಂಘ ಸಂಸ್ಥೆಗಳು ಮತ್ತು ಕ್ರೈಸ್ತ ಜನಸಾಮಾನ್ಯರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಎಲ್ಲಾ ವರ್ಗದ ಜನರಿಗೆ ಅಕ್ಷರಜ್ಞಾನ ನೀಡುವ ಮೂಲಕ ಶಿಕ್ಷಣಾಭಿವೃದ್ಧಿಯಲ್ಲಿ ತೊಡಗಿಸಿಕೊಂಡಿದ್ದಾರೆ.

ಹತ್ತೊಂಬತ್ತನೆ ಶತಮಾನದ ಮೊದಲ ಭಾಗದಲ್ಲಿ, ಬ್ರಿಟೀಷರು ಭಾರತದಲ್ಲಿ ಜಾರಿಗೆ ತಂದ ಶಿಕ್ಷಣ ನೀತಿ, ವಸಾಹತುಶಾಹಿ ಆಳ್ವಿಕೆಯ ಸ್ವರೂಪವನ್ನು ಸಮರ್ಥಿಸುವಂತ್ತಿತ್ತು ಮತ್ತು ವಸಾಹತುಶಾಹಿ ಆಳ್ವಿಕೆಯ ಅಗತ್ಯಗಳನ್ನು ಪೂರೈಸುವ ಉದ್ದೇಶವನ್ನು ಹೊಂದಿತ್ತು. ಸಾಮಾನ್ಯವಾಗಿ ಎಲ್ಲಾ ವಸಾಹತುಶಾಹಿ ದೇಶಗಳ ಶಿಕ್ಷಣ ನೀತಿ, ಆಳುವ ವರ್ಗಗಳ ಹಿತಾಸಕ್ತಿಯನ್ನು ರಕ್ಷಿಸುವ ಉದ್ದೇಶವನ್ನು ಒಳಗೊಂಡಿರುತ್ತದೆ. ಭಾರತಕ್ಕೆ ಬಂದ ಮಿಶನರಿಗಳು ಸಾಮ್ರಾಜ್ಯಶಾಹಿ ಅಥವಾ ಇತರ ರಾಷ್ಟ್ರಗಳಿಗೆ ಸೇರಿದವರಾಗಿದ್ದು ಅವರ ಮುಖ್ಯ ಉದ್ದೇಶ ಕ್ರೈಸ್ತಮತ ಪ್ರಸಾರಣೆಯಾಗಿದ್ದರೂ ಇಲ್ಲಿನ ಕೆಳವರ್ಗದ ಶಿಕ್ಷಣಕ್ಕೆ ಕಟಿಬದ್ದರಾಗಿದ್ದರು. ಪಾಶ್ಚಾತ್ಯ ದೇಶದಿಂದ ಬಂದಂತಹ ಮಿಶನರಿಗಳು ಭಾರತೀಯ ಸಮಾಜದ ಪಿಡುಗುಗಳಾದ ಜಾತಿ ಪದ್ಧತಿ, ಅನಕ್ಷರತೆ ಹಾಗೂ ವಿವಿಧ ಸ್ತರಗಳಲ್ಲಿನ ಅಸಮಾನತೆಗಳನ್ನು ತೊಲಗಿಸಲು ಶಿಕ್ಷಣ ಹಾಗೂ ಕ್ರೈಸ್ತ ಮತ ಪ್ರಚಾರದಿಂದ ಮಾತ್ರ ಸಾಧ್ಯವೆಂದು ತಿಳಿದಿದ್ದರು. ಆದರೆ ಪ್ರತಿಯೊಬ್ಬ ಸ್ಥಳೀಯನನ್ನು ಉಪದೇಶಿಯಾಗಿ ಅಥವಾ ಪಾಸ್ಟರ್ ಆಗಿ ಮಿಶನ್ ಕಾರ್ಯದಲ್ಲಿ ತೊಡಗಿಸಿಕೊಳ್ಳುತ್ತಿರಲಿಲ್ಲ. ಮಿಶನರಿಗಳು ಮೇಲ್ವರ್ಗದವರಿಗೆ ಮಿಶನ್ ಸೇವೆಯಲ್ಲಿ ಆದ್ಯತೆಯನ್ನು ನೀಡುತ್ತಿದ್ದರು. ಸ್ಥಳೀಯರಿಗೆ ಜವಾಬ್ದಾರಿ ವಹಿಸಿ ಮಿಶನ್ನಿನ ಹೊರೆಯನ್ನು ಹಗುರುಗೊಳಿಸಿಕೊಳ್ಳಬೇಕೆಂಬ ಸಲಹೆಗಳು ಆಗಾಗ ಕೇಳಿಬರುತ್ತಿತ್ತು. ಆದರೆ ಸ್ಥಳೀಯ ಸಹಾಯಕರ ಸೇವೆಯನ್ನು ಮಿಶನರಿಗಳ ಮೇಲುಸ್ತುವಾರಿಯಲ್ಲಿಯೇ ಪಡೆಯುತ್ತಿದ್ದರು. ಮಿಶನರಿ ಸಹಾಯಕರನ್ನು ನಿರಂತರವಾಗಿ ತರಬೇತಿಗೊಳಿಸಿ ಅವರ ನೈತಿಕ ಹಾಗೂ ಆಧ್ಯಾತ್ಮಿಕ ವಿಚಾರಗಳ ಬಗ್ಗೆ ಕಣ್ಗಾವಲು ಇರಿಸುತ್ತಿದರು. ದೈವಶಾಸ್ತ್ರ ಹಾಗೂ ಸತ್ಯವೇದದಲ್ಲಿ ಆಳವಾದ ಅರಿವು ಮತ್ತು ಸ್ವ-ಪ್ರಗತಿಗಾಗಿ ನಿರಂತರವಾದ ತರಬೇತಿಗಳನ್ನು ಏರ್ಪಾಡಿಸುತ್ತಿದ್ದರು.[೨೩೮]

ಹತ್ತೊಂಬತ್ತನೆ ಶತಮಾನದ ಆದಿಯಲ್ಲಿ ಆಗಿನ ಸಾಮಾಜಿಕ ಕಟ್ಟುಪಾಡುಗಳನ್ನು ಗಮನಿಸಿದರೆ ಎಲ್ಲಾ ಜಾತಿಯ ಮಕ್ಕಳನ್ನು ಒಂದೇ ಕಡೆ ಕೂಡಿಸಿ ಪಾಠ ಹೇಳುವುದು ಊಹಿಸಲು ಕೂಡ ಅಸಾಧ್ಯವಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ರೆವೆ. ಹೆಬಿಕ್‌ರವರು ಮೊಟ್ಟ ಮೊದಲ ಬಾಸೆಲ್ ಮಿಶನ್ ಕನ್ನಡ ಮಾಧ್ಯಮ ಶಾಲೆಯನ್ನು ತೆರೆದು ಶೂದ್ರ ಜಾತಿಯ ತಿಮ್ಮಪ್ಪ ಎಂಬುವವರನ್ನು ಶಿಕ್ಷಕರನ್ನಾಗಿ ನೇಮಿಸಿದರು. ಮಿಶನ್ ಶಾಲೆಗಳ ವೈಶಿಷ್ಟವೆಂದರೆ ಆಗಿನ ಸಾಮಾಜಿಕ ಅವಶ್ಯಕತೆಗಳಿಗೆ ಅನುಗುಣವಾಗಿ ಕಾಳಜಿಯನ್ನು ದೃಢಪಡಿಸುವುದಕ್ಕೆ ೧೮೫೫ರಲ್ಲಿ ಮೊತ್ತ ಮೊದಲ ಬಾರಿಗೆ ಬ್ರಾಹ್ಮಣ ಹೆಣ್ಮಕ್ಕಳಿಗೆ ಪ್ರತ್ಯೇಕ ಶಾಲೆಯನ್ನು ತೆರೆದುದು ಉತ್ತಮ ನಿದರ್ಶನವಾಗಿದೆ.[೨೩೯] ಹೆಣ್ಮಕ್ಕಳ ಶಿಕ್ಷಣದ ಪರಿಕಲ್ಪನೆ ಸಾಕಾರವಾದುದು ಬಾಸೆಲ್ ಮಿಶನರಿಗಳ ಪ್ರಯತ್ನದಿಂದ. ಈ ಪ್ರಯತ್ನಗಳೇ ಮುಂದೆ ಸೈಂಟ್ ಆ್ಯನ್ಸ್, ಸೈಂಟ್ ಆ್ಯಗ್ನೆಸ್, ಬೆಸೆಂಟ್, ಕೆನರಾ ಮಹಿಳಾ ಶಾಲಾ/ಕಾಲೇಜುಗಳನ್ನು ಪ್ರಾರಂಭಿಸಲು ಉತ್ತೇಜನ ನೀಡಿದವು. ಜಿಲ್ಲೆಯಲ್ಲಿ ಬಾಸೆಲ್ ಮಿಶನರಿಗಳಿಂದ ನಡೆದ ಶೈಕ್ಷಣಿಕ ಹಾಗೂ ಕೈಗಾರಿಕಾ ಕ್ರಾಂತಿಯಿಂದ ಆದ ಹಲವಾರು

ಸಾಮಾಜಿಕ ಬದಲಾವಣೆಗಳಲ್ಲಿ ಸೆಕ್ಯೂಲರ್ (ಧರ್ಮನಿರಾಪೇಕ್ಷ) ಭಾವನೆಯೂ ಒಂದು. ಈಗಿನ ರಾಜಕೀಯ, ಸಾಮಾಜಿಕ ಪರಿಸ್ಥಿತಿಯಲ್ಲಿ 'ಸೆಕ್ಯೂಲರ್' ಪದ ತನ್ನ ಅರ್ಥವನ್ನು ಕಳೆದುಕೊಂಡಿದ್ದರೂ, ೧೯ನೇ ಶತಮಾನದಲ್ಲಿ ಎಲ್ಲ ಜಾತಿ ಮತದವರನ್ನು ಶಿಕ್ಷಣ ಹಾಗೂ ಉದ್ಯೋಗದ ನೆಪದಿಂದ ಒಂದೇ ಚಾವಣಿಯಡಿಯಲ್ಲಿ ಒಟ್ಟಿಗೆ ಕಲಿಯುವಂತೆ ಪ್ರೇರೇಪಿಸಿದರು.

ಒಂದು ಕಾಲದಲ್ಲಿ ಕ್ರೈಸ್ತ ಸಮಾಜದಲ್ಲಿ ಮಹಿಳೆಯರು ಸ್ವಾತಂತ್ರ್ಯಕ್ಕೆ ಮಾತ್ರ ಅಲ್ಲ, ಶಿಕ್ಷಣಕ್ಕೆ ಕೂಡ ಯೋಗ್ಯರಲ್ಲ, ಅವಳು ಅಡುಗೆ ಮನೆಗೇ ಮೀಸಲು ಎಂಬ ಭಾವನೆ ಪ್ರಚಲಿತ ಇದ್ದ ಸಂದರ್ಭದಲ್ಲಿ, ಬಾಲಕಿಯರಿಗೆ ಶಿಕ್ಷಣದ ಅವಕಾಶ ನೀಡಿ, ಉನ್ನತ ಶಿಕ್ಷಣ ಪ್ರಾರಂಭಿಸಿ, ಈ ಜಿಲ್ಲೆಯಲ್ಲಿ ಮಹಿಳೆಯರು, ಪುರುಷರೊಂದಿಗೆ ಶಿಕ್ಷಣ ಹಾಗೂ ಉದ್ಯೋಗ ಕ್ಷೇತ್ರದಲ್ಲಿ ಸರಿಸಮವಾಗಿ ನಿಲ್ಲಲು ಸಾಧ್ಯವಾಯಿತು.[೨೪೦] ಕಥೋಲಿಕ ಕ್ರೈಸ್ತರು ಮಹಿಳೆಯರಿಗೆ, ಇತರ ಸಮುದಾಯಗಳಿಗಿಂತಲೂ ಸ್ವಲ್ಪ ಹೆಚ್ಚಿನ ಸ್ವಾತಂತ್ರ್ಯ ನೀಡಿದ್ದರು. ಆ ಕಾರಣದಿಂದಲೇ ದಕ್ಷಿಣ ಕನ್ನಡದ ಮಹಿಳೆಯರು ಸ್ವತಂತ್ರ ಧಾರ್ಮಿಕ ಸಭೆಗಳನ್ನು, ಕನ್ಯಾ ಮಠಗಳನ್ನು, ಶಾಲಾ-ಕಾಲೇಜುಗಳನ್ನು ಸ್ಥಾಪಿಸಿ ಮುನ್ನಡೆಸಲು ಸಾಧ್ಯವಾಗಿದೆ. ಧರ್ಮಭಗಿನಿಯರೇ ಯಾರ ಹಂಗಿಲ್ಲದೆ ಶಾಲೆ ಮತ್ತು ಕಾಲೇಜುಗಳನ್ನು ಆರಂಭಿಸಿ ಪುರುಷರಿಗೆ ಸರಿಸಮಾನವಾಗಿ, ಕೆಲವೊಮ್ಮೆ ಪುರುಷರಿಗಿಂತಲೂ ಉತ್ತಮವಾಗಿ ನಡೆಸುತ್ತಿರುವುದು ಸ್ತ್ರೀ ಸಬಲೀಕರಣಕ್ಕೆ ಉತ್ತಮ ನಿದರ್ಶನವಾಗಿದೆ. ಮಹಿಳೆಯರಿಗೆ ಉನ್ನತ ಶಿಕ್ಷಣದ ಭಾಗ್ಯವನ್ನು ಕಲ್ಪಿಸಿ, ದಕ್ಷಿಣ ಕನ್ನಡದ ಮಹಿಳೆಯರು ಆಧುನಿಕ ಹಾಗೂ ವಿದ್ಯಾವಂತರು ಎಂಬ ಹೆಸರು ಗಳಿಸಲು ಹಾಗೂ ದೇಶದ ಇತರ ನಗರಗಳಲ್ಲಿ ಅವರಿಗೆ ಉದ್ಯೋಗದ ಅವಕಾಶವನ್ನು ಕಲ್ಪಿಸಿ ಕೊಟ್ಟದ್ದು ಸೈಂಟ್ ಆಗ್ನೇಸ್ ಕಾಲೇಜು ಹಾಗೂ ಸೈಂಟ್ ಆ್ಯನ್ಸ್ ಶಿಕ್ಷಕ ತರಬೇತಿ ಸಂಸ್ಥೆಗಳು. ಅಪೋಸ್ತಲಿಕ್ ಕಾರ್ಮೆಲ್, ಬೆಥನಿ, ಅರ್ಸುಲಾಯ್ನ್ ಮುಂತಾದ ಧಾರ್ಮಿಕ ಸಭೆಗಳು ದಕ್ಷಿಣ ಕನ್ನಡದಲ್ಲಿ ಹುಟ್ಟಿ ವಿಶ್ವದಾದ್ಯಂತ ಹರಡಿ ಸಮಾಜಸೇವೆ ಮಾಡುತ್ತಿರುವುದು ಗಮನಾರ್ಹವಾಗಿದೆ.[೨೪೧]

ದಕ್ಷಿಣ ಕನ್ನಡ ಜಿಲ್ಲೆಯ ಜನತೆಗೆ ಕಾಲೇಜು ವಿದ್ಯಾಭ್ಯಾಸದ ಅವಕಾಶವನ್ನು ತಂದು ಕೊಟ್ಟವರು ಯೇಸು ಸಭೆಯ ಧರ್ಮಗುರುಗಳು. ಮಂಗಳೂರಿಗೆ ಆಗಮಿಸಿ ಉನ್ನತ ಶಿಕ್ಷಣದ ಜವಾಬ್ದಾರಿಯನ್ನು ವಹಿಸಿಕೊಂಡ ಯೇಸು ಸಭೆಯವರಿಗೆ ಕಥೋಲಿಕ ಜನತೆಯಿಂದ ನಿರೀಕ್ಷೆಗೂ ಮೀರಿದ ಸಹಕಾರ ಲಭಿಸಿದೆ. ಭಾರತದ ಭೂಪಟದಲ್ಲಿ ದಕ್ಷಿಣ ಕನ್ನಡಕ್ಕೆ ಗೌರವದ ಸ್ಥಾನ ಇದ್ದರೆ ಅದು ಇಲ್ಲಿ ಆಗಿರುವ ಶೈಕ್ಷಣಿಕ ಪ್ರಗತಿಯಿಂದ. ಜಿಲ್ಲೆಯಲ್ಲಾಗಿರುವ ಪ್ರಗತಿಯ ಬಹುಪಾಲು ಖ್ಯಾತಿ ಸೈಂಟ್ ಅಲೋಶಿಯಸ್ ಕಾಲೇಜಿಗೆ ಸಲ್ಲುತ್ತದೆ. ಏಕೆಂದರೆ ಸುಮಾರು ೪೦ ವರ್ಷಗಳವರೆಗೆ ಜಿಲ್ಲೆಯಲ್ಲಿದ್ದ ಏಕೈಕ ಪ್ರಥಮ ದರ್ಜೆ ಕಾಲೇಜೆಂದರೆ ಅದು ಸೈಂಟ್ ಅಲೋಶಿಯಸ್ ಕಾಲೇಜು. ಮುಂದೆ ಜಿಲ್ಲೆಯಲ್ಲಿ ಹಲವಾರು ಶಾಲಾ ಕಾಲೇಜುಗಳು ಸ್ಥಾಪನೆಯಾದಾಗ ಅದರ ಚುಕ್ಕಾಣಿ ಹಿಡಿದವರೂ ಸೈಂಟ್ ಅಲೋಶಿಯಸ್ ಕಾಲೇಜಿನ

ಹಳೆ ವಿದ್ಯಾರ್ಥಿಗಳೇ ಆಗಿದ್ದರು. ಸೈಂಟ್ ಅಲೋಶಿಯಸ್ ಕಾಲೇಜಿನ ಹಳೆ ವಿದ್ಯಾರ್ಥಿಯಾಗಿದ್ದ ಡಾ.ಟಿ.ಎಂ.ಎ. ಪೈಯವರು ಧರ್ಮಗುರುಗಳ ಪ್ರಭಾವದಿಂದ ಮಣಿಪಾಲದಲ್ಲಿ ನಾನಾ ರೀತಿಯ ಕಾಲೇಜುಗಳನ್ನು ಸ್ಥಾಪಿಸಿದ್ದಲ್ಲದೆ ತಮ್ಮ ಮಾತೃಸಂಸ್ಥೆಯನ್ನು ವಿದ್ಯೆ ಮತ್ತು ಶಿಸ್ತಿನಲ್ಲಿ ಒಂದು ಮಾದರಿ ಸಂಸ್ಥೆ ಎಂಬುದಾಗಿ ಪರಿಗಣಿಸಿ ಅದನ್ನು ಅನುಸರಿಸುತ್ತಿದ್ದರು.[೨೪೨] ಯೇಸುಸಭೆಯ ಗುರುಗಳಾದ ಫಾ। ಮಾಫೈ ಅವರು ಒಬ್ಬ ಭಾಷಾ ತಜ್ಞರಾಗಿದ್ದರು. ಅವರು ಕೊಂಕಣಿ ಶಬ್ಧಕೋಶ ಹಾಗೂ ಕೊಂಕಣಿಯಲ್ಲಿ ವ್ಯಾಕರಣವನ್ನು ರಚಿಸಿ ಸಾಹಿತ್ಯಕ್ಕೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಮಾತ್ರವಲ್ಲದೆ, ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ರಚನೆಗೆ ಅವಶ್ಯವಿರುವ ಅಪಾರ ಮಾಹಿತಿಯನ್ನು ಸಹ ಸಂಗ್ರಹಿಸಿದ್ದರು.

ಕಥೋಲಿಕ ಧಾರ್ಮಿಕರು ನಡೆಸುವ ಶಿಕ್ಷಣ ಸಂಸ್ಥೆಗಳನ್ನು ಅವಲೋಕಿಸಿದಾಗ ಋಣಾತ್ಮಕ ಹಾಗೂ ಧನಾತ್ಮಕ ಎರಡೂ ಅಂಶಗಳು ಕಂಡು ಬರುತ್ತವೆ. ಈ ಶಾಲೆಗಳಲ್ಲಿ ಜ್ಞಾನದ ಪ್ರಸಾರ ಧಾರ್ಮಿಕ ಉದ್ದೇಶದಿಂದ ಕೂಡಿದ್ದರೂ, ಈ ಸಭೆಗಳು ಲೌಕಿಕ ಪ್ರಭಾವಕ್ಕೆ ಹಾಗೂ ಲಾಭಕ್ಕಾಗಿ ಶಾಲೆಗಳನ್ನು ಪ್ರಾರಂಭಿಸಿದ್ದೇ ಆಗಿದ್ದರೆ ಗ್ರಾಮೀಣ ಪ್ರದೇಶಗಳಿಗೆ ಹೋಗುವ ಅಗತ್ಯವಿರುತ್ತಿರಲಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಹೆತ್ತವರು ತಮ್ಮ ಮಕ್ಕಳ ಶಿಕ್ಷಣವನ್ನು ಪ್ರಾಥಮಿಕ ಶಾಲೆಯ ನಂತರ ನಿಲ್ಲಿಸಿ ಬಿಡುತ್ತಾರೆ. ಶಿಕ್ಷಣದ ಕೊರತೆ ಗ್ರಾಮೀಣ ಜನರಿಗೆ ವಸಾಹತು ಆಡಳಿತ ನೀಡಿದ ಅವಕಾಶಗಳ ಬಳಕೆಯಿಂದ ವಂಚಿತಗೊಳಿಸಿದೆ.[೨೪೩] ಪಾಶ್ಚಾತ್ಯ ಶಿಕ್ಷಣ ಗ್ರಾಮೀಣ ಕ್ರೈಸ್ತರಲ್ಲಿ ಹೆಚ್ಚು ಜನಪ್ರಿಯವಾಗಲಿಲ್ಲ. ಇದಕ್ಕೆ ಕಾರಣ ಬಡತನ, ಕಡಿಮೆ ಸಂಖ್ಯೆಯ ಶಾಲೆಗಳು, ಅಜ್ಞಾನ, ಅಂಜಿಕೆ ಮತ್ತು ಮನೆಗೆಲಸಕ್ಕೆ ಮಕ್ಕಳ ಆವಶ್ಯಕತೆ ಇರುವುದು. ಹಾಗಿದ್ದರೂ, ಕ್ರೈಸ್ತರಲ್ಲಿ, ಅದರಲ್ಲಿಯೂ ವಿಶೇಷವಾಗಿ ಗ್ರಾಮೀಣ ಜನರಲ್ಲಿ ಶಿಕ್ಷಣ ನಿಧಾನವಾಗಿ ಮತ್ತು ಏಕಪ್ರಕಾರವಾಗಿ ಹರಡಿದೆ. ೧೯೩೯ರಲ್ಲಿ ಮಂಗಳೂರಿನ ಡಯಾಸಿಸ್ ಶಿಕ್ಷಣ ನಿಧಿಯನ್ನು ತೆರೆಯಿತು ಮತ್ತು ಸಾರ್ವಜನಿಕರಿಂದ(ಕ್ರೈಸ್ತರಲ್ಲಿ) ಮತ್ತು ವಲಸಿಗರಿಂದ ದೇಣಿಗೆಯನ್ನು ಸಂಗ್ರಹಿಸಿತು ಮತ್ತು ಜಿಲ್ಲೆಯ ವಿವಿಧ ಭಾಗಗಳಲ್ಲಿ ಸುಮಾರು ಆರು ಪ್ರೌಢಶಾಲೆಗಳನ್ನು ಸ್ಥಾಪಿಸಿದೆ. ೧೯೩೮ ಮತ್ತು ೧೯೪೧ರ ನಡುವೆ ಚರ್ಚಿನಿಂದ ಜಿಲ್ಲೆಯಲ್ಲಿ ಸ್ಥಾಪಿಸಲಾದ ಹೊಸ ಶಾಲೆಗಳಿಂದ ಕ್ರೈಸ ಮಹಿಳೆಯರ ಶಿಕ್ಷಣವು ಸಾಕಷ್ಟು ಪ್ರಗತಿಯನ್ನು ಸಾಧಿಸಿದೆ. ಮಂಗಳೂರಿನಲ್ಲಿ ೧೯೪೪ರಲ್ಲಿ ಸ್ಥಾಪಿಸಲಾದ ಕೆನರಾ ಕ್ಯಾಥೊಲಿಕ್ ಕೊ-ಓಪರೇಟಿವ್ ಎಜ್ಯುಕೇಶನಲ್ ಸೊಸೈಟಿ ಲಿಮಿಟೆಡ್(ಕೆನರಾ ಕ್ರೈಸ್ತ ಸಹಕಾರಿ ಶೈಕ್ಷಣಿಕ ಸಂಘ, ನಿಯಮಿತ) ಕ್ರೈಸ್ತರಲ್ಲಿ ಬಡವರಿಗೆ ಸಾಲವನ್ನು ನೀಡುತ್ತಿತ್ತು. ೧೯೪೬ರಲ್ಲಿ ಆ ವರ್ಷದ ಭಾನುವಾರದ ಹಣಸಂಗ್ರಹವನ್ನು ಗ್ರಾಮೀಣ ಪ್ರದೇಶಗಳಲ್ಲಿ ಕ್ರೈಸ್ತ ಪ್ರಾಥಮಿಕ ಶಾಲೆಗಳ ಸ್ಥಾಪನೆಗೆ ಬಳಸಲಾಗುವುದೆಂದು ಬಿಶಪರು ಘೋಷಿಸಿದರು. ಇದರಿಂದ ಗ್ರಾಮೀಣ ಪ್ರದೇಶದ ಕ್ರೈಸ್ತರಿಗೆ ಹೆಚ್ಚು ಶಾಲೆಗಳನ್ನು ಒದಗಿಸಿದಂತಾಗುತ್ತದೆ. ಸ್ವಾತಂತ್ರ್ಯ ಸಿಗುವುದಕ್ಕಿಂತ ಮೊದಲು ಗ್ರಾಮೀಣ ಪ್ರದೇಶಗಳ

ಕ್ರೈಸ್ತರಿಗೆ ದೊರೆತ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲಾ ಶಿಕ್ಷಣವು ಸಾಕಷ್ಟು ಪ್ರಗತಿಯನ್ನು ಸಾಧಿಸಿದೆ.[೨೪೪] ಈ ಸಂಸ್ಥೆಗಳು ಅಲ್ಪಸಂಖ್ಯಾತರು ನಡೆಸುವ ಸಂಸ್ಥೆಗಳಾಗಿದ್ದು ಬಹುಸಂಖ್ಯಾತರು ಕಲಿಯುತ್ತಿರುವ ಸಂದರ್ಭದಲ್ಲಿ ಸಮುದಾಯಗಳ ನಡುವಿನ ಹೊಂದಾಣಿಕೆ ಪ್ರಮುಖ ಹಾಗೂ ಸೂಕ್ಷ್ಮ ವಿಷಯವಾಗಿರುತ್ತದೆ. ಹೊಸತನ್ನು ಅನ್ವೇಶಿಸುವ ಹಾಗೂ ನಿತ್ಯ ಬದಲಾವಣೆಯನ್ನು ಅಳವಡಿಸಿಕೊಳ್ಳುವ ದಾವಂತದಲ್ಲಿ ಮೂಲ ಉದ್ದೇಶವೇ ಮರೆತು ಮುಖ್ಯವಾಹಿನಿಯಿಂದ ಹೊರಬೀಳುವ ಪ್ರಮುಖ ವ್ಯಾಧಿ ಕೆಲವು ವಿದ್ಯಾಸಂಸ್ಥೆಗಳನ್ನು ಕಾಡುತ್ತಿದೆ. ಕಥೋಲಿಕ ಕ್ರೈಸ್ತರ ವಿದ್ಯಾಸಂಸ್ಥೆಗಳು ಕ್ರೈಸ್ತರಿಗೆ ಹಾಗೂ ಸಮಾಜದ ಬಡವರಿಗೆ ವಿದ್ಯಾದಾನ ಮಾಡುವ ಉದ್ದೇಶದಿಂದ ಪ್ರಾರಂಭಗೊಂಡರೂ, ಕೀರ್ತಿ ಹಾಗೂ ಅಂತಸ್ತಿಗಾಗಿ ಮೂಲ ಉದ್ದೇಶ ಮಣ್ಣು ಪಾಲಾಗಿ ಸಾರ್ವಜನಿಕರಿಂದ ಹಾಗೂ ಸ್ವ-ಸಮಾಜದಿಂದಲೂ ಟೀಕೆ ಹಾಗೂ ವಿರೋಧಗಳು ಉಂಟಾಗಿರುವ ಹಲವಾರು ಉದಾಹರಣೆಗಳು ಕಂಡು ಬರುತ್ತವೆ. ಆಧುನಿಕ ಜೀವನ ಶೈಲಿಯಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಅತೀ ಅನುಕರಣೆ ನಮ್ಮ ದೇಶೀಯ ಸಂಸ್ಕೃತಿ ಹಾಗೂ ವಿಚಾರಗಳನ್ನೂ ಕೀಳಾಗಿ ಅಂದಾಜಿಸಲೂ ಈ ಧೋರಣೆಗಳು ಕಾರಣವಾಗಿರುತ್ತವೆ.[೨೪೫]

ಕೆನರಾ ಜಿಲ್ಲೆಯಲ್ಲಿ ಪಾಶ್ಚಿಮಾತ್ಯ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿ ಮೊತ್ತ ಮೊದಲ ಬಾರಿಗೆ ಪರಿಚಯಿಸಿದ ಹೆಗ್ಗಳಿಕೆ ಬಾಸೆಲ್ ಮಿಶನರಿಗಳಿಗೆ ಸಲ್ಲುತ್ತದೆ. ಕ್ರಮೇಣ ಇಂಗ್ಲೀಷ್ ಮಾಧ್ಯಮದ ಶಾಲೆಗಳೂ ಆರಂಭಗೊಂಡು ಜಿಲ್ಲೆಯ ಜನರು ಸುಶಿಕ್ಷಿತರಾಗಲು ಅವಕಾಶ ಸಿಕ್ಕಿತು. ಮಿಶನರಿಗಳೂ, ದಾನಶೀಲ ವ್ಯಕ್ತಿಗಳೂ ಮತ್ತು ಸರ್ಕಾರ ನಡೆಸುತ್ತಿದ್ದ ಪ್ರಾಥಮಿಕ ಮತ್ತು ಉನ್ನತ ಶಿಕ್ಷಣ ಸಂಸ್ಥೆಗಳಿಂದಾಗಿ ಹೆಚ್ಚು ಹೆಚ್ಚು ಜನರು ವಿದ್ಯಾವಂತರಾದರು. ಹೀಗೆ ಇಂಗ್ಲಿಷ್ ಶಿಕ್ಷಣ ಪಡೆದ ವಿದ್ಯಾವಂತ ವರ್ಗ ಸರ್ಕಾರಿ ಕಛೇರಿಗಳಲ್ಲಿ, ಕೈಗಾರಿಕೆಗಳಲ್ಲಿ ಮತ್ತು ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಈ ವಿದ್ಯಾವಂತ ವರ್ಗದ ಗುಂಪೊಂದು ಮದ್ರಾಸ್ ಮತ್ತು ಬಾಂಬೆ ಪ್ರಾಂತ್ಯಗಳ ಮತ್ತು ರಾಜಾಡಳಿತವಿದ್ದ ನೆರೆಯ ಮೈಸೂರು ರಾಜ್ಯದ ಸರಕಾರಿ ಸೇವೆಗಳಲ್ಲಿಯೂ ಪ್ರವೇಶಿಸಿತು. ತಾವು ಪಡೆದ ಶಿಕ್ಷಣದಿಂದಾಗಿ ಉದ್ಯೋಗ ಅವಕಾಶವನ್ನು ಪಡೆದುಕೊಂಡ ಇವರುಗಳಲ್ಲಿ ಕೆಲವರು ಸರ್ಕಾರದ ಆಡಳಿತದಲ್ಲಿ ಬಹಳ ಪ್ರಭಾವಶಾಲಿಗಳಾಗಿ ಬೆಳೆದು ಸರ್ಕಾರ ಮತ್ತು ಜನರ ನಡುವೆ ಸಂಪರ್ಕ ಸೇತುವೆಯಾದರು. ತಮಗಿರುವ ಹುದ್ದೆ ಮತ್ತು ಪ್ರಭಾವದಿಂದ ಆರ್ಥಿಕ ಪರಿಸ್ಥಿತಿ ಸುಧಾರಿಸಿತು. ಜೊತೆಗೆ ಜೀವನ ಮಟ್ಟ ಉತ್ತಮಗೊಂಡಿತು. ಕೈತುಂಬಾ ಸಂಬಳ ಹಾಗೂ ಸ್ಥಾನಮಾನ ಅವರನ್ನು ಇನ್ನೂ ಬಲಿಷ್ಟರನ್ನಾಗಿಸಿತು. ದುಡಿಮೆಗೆ ತಕ್ಕ ಮನೆ, ಮಕ್ಕಳ ಶಿಕ್ಷಣಕ್ಕೆ ಉತ್ತಮ ಗುಣಮಟ್ಟದ ಶಾಲಾ-ಕಾಲೇಜುಗಳು ಹಾಗೂ ತಿರುಗಾಡಲು ವಾಹನಗಳು ಅವರನ್ನು ಸಮಾಜದಲ್ಲಿ ಇತರರಿಂದ ಸ್ವಲ್ಪ ಭಿನ್ನವಾಗಿಸಿತು. ಹೀಗೆ ವಸಾಹತುಪೂರ್ವದಲ್ಲಿದ್ದ ನಾಲ್ಕು ವರ್ಗಗಳಿಗಿಂತ ಸ್ವಲ್ಪ ವಿಭಿನ್ನವಾದ ವರ್ಗವೊಂದರ ಉದಯಕ್ಕೆ ಮಿಶನರಿಗಳು ಜಿಲ್ಲೆಯಲ್ಲಿ ಪ್ರಾರಂಭಿಸಿದ ಶಿಕ್ಷಣ ಕಾರಣವಾಯಿತು. ಹೊಸದಾಗಿ ಉದಯಿಸಿದ ಈ

ಮಧ್ಯಮವರ್ಗ, ಸಮಾಜದಲ್ಲಿ ರೂಢಿಯಲ್ಲಿದ್ದ ಸಾಮಾಜಿಕ ಪಿಡುಗುಗಳಾದ, ಜಾತಿ ಪದ್ಧತಿ, ಲಿಂಗ ಭೇದ ನೀತಿ, ಮೂಢನಂಬಿಕೆಗಳನ್ನು ಸುಲಭವಾಗಿ ಒಪ್ಪಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಮುದ್ರಣಾಲಯಗಳು ಸ್ಥಾಪನೆಗೊಂಡ ಬಳಿಕ ಈ ಸುಶಿಕ್ಷಿತ ಮಧ್ಯಮವರ್ಗ, ಪುಸ್ತಕಗಳು, ಲೇಖನಗಳು ಮುಂತಾದ ವಾಹಿನಿಗಳ ಮೂಲಕ ಜನರಲ್ಲಿ ಅರಿವನ್ನು ಮೂಡಿಸುವ ಪ್ರಯತ್ನವನ್ನೂ ಮಾಡಿತು. ಕೆಲವೊಂದು ಸಂದರ್ಭಗಳಲ್ಲಿ ಸಮಾಜದಲ್ಲಿ ನಡೆಯುತ್ತಿರುವ ಶೋಷಣೆ, ದೌರ್ಜನ್ಯದ ವಿರುದ್ಧ ಧ್ವನಿ ಎತ್ತಿ ಸಮಾಜ ಸುಧಾರಣೆಯಲ್ಲಿಯೂ ನೇತೃತ್ವವನ್ನು ವಹಿಸಿತು. ಭಾರತದಲ್ಲಿ ೧೯ನೇ ಶತಮಾನದಲ್ಲಿ ಉಂಟಾದ ಸಾಮಾಜಿಕ- ಧಾರ್ಮಿಕ ಚಳುವಳಿಗಳು (Indian Rennaissance) ಹಾಗೂ ಭಾರತದ ಸ್ವಾತಂತ್ರ್ಯ ಸಂಗ್ರಾಮ (Indian National Movement) ಇವೆರಡೂ ಘಟನೆಗಳು ಮುಖ್ಯವಾಗಿ ಮಧ್ಯಮ ವರ್ಗದ(Bourgeoisie) ಜನರು ನಡೆಸಿದ ಹೋರಾಟಗಳಾಗಿವೆ. ಹೀಗೆ ಮಿಶನರಿಗಳು ಆರಂಭಿಸಿದ ಪಾಶ್ಚಿಮಾತ್ಯ ಶಿಕ್ಷಣ ಸಂಸ್ಥೆಗಳು ಮೇಲ್ವರ್ಗದವರಿಗೆ ಮಾತ್ರ ಸೀಮಿತವಾಗಿರದೆ ಮಹಿಳೆಯರಿಗೆ, ಅಂಚಿನಲ್ಲಿರುವವರಿಗೆ, ಮಧ್ಯಮ ವರ್ಗದವರಿಗೆ, ದಲಿತರಿಗೆ ಮತ್ತು ಸಮಾಜದ ಎಲ್ಲಾ ವರ್ಗಗಳಿಗೆ ಶಿಕ್ಷಣ ನೀಡಿ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಕಾರಣೀಭೂತವಾಗಿದೆ.

# ಕೊನೆ ಟಿಪ್ಪಣಿ

೧. ಎಂ.ಎಂ.ಸಂಪುಟ -೪, ೧೯೦೭, ಪುಟ ೧೧

೨. ಕೊಂಕಣಿ ದಿರ್ವೆಂ, ೧೬ ಅಕ್ಟೋಬರ್ , ೧೯೧೪ ಪುಟಗಳು ೧೯೩,೧೯೪

೩. ಎಫ್.ಇ. ಕೀ, *ಎ ಹಿಸ್ಟರಿ ಆಫ್ ಎಜುಕೇಷನ್ ಇನ್ ಇಂಡಿಯಾ ಆಂಡ್ ಪಾಕಿಸ್ತಾನ್*, ೪ನೇ ಆವೃತ್ತಿ, ಕಲ್ಕತ್ತ: ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೬೪, ಪುಟ ೧೭೮

೪. ವಿಜಯ ಕುಮಾರ್,"ವೆಸ್ಲಿಯನ್ ಮೆಥೊಡಿಸ್ಟ್ ಮಿಶನರಿ ಸೊಸೈಟಿಯವರು ಮೈಸೂರು ಪ್ರಾಂತ್ಯದಲ್ಲಿ ಮಾಡಿದ ಶಿಕ್ಷಣ ಸೇವೆ", *ಕಾಸ್ಡೆಸ್ ಬೆಳ್ಳಿಹಬ್ಬದ ಸ್ಮರಣ ಸಂಚಿಕೆ,* ಕರ್ನಾಟಕ ಸದರ್ನ್ ಡಯಾಸಿಸ್ ಎಜುಕೇಷನಲ್ ಸೊಸೈಟಿ ( ೧೯೭೪-೨೦೦೧)ಪುಟ ನಂಬ್ರ ಇಲ್ಲ

೫. ಫ್ರಾನಿಸ್ಸ್ ಡಿ' ಕುನ್ಹಾ , ಕಥೋಲಿಕ್ ಶಿಕ್ಷಣ ಮಂಡಳಿಯ ಶಿಕ್ಷಣ ಅಭಿಯಾನ ಯಶೋಗಾಥೆ", ಎಡಿಟೋರಿಯಂ ಬೋರ್ಡ್ ಕಥೋಲಿಕ ಶಿಕ್ಷಣ ಮಂಡಳಿ ( ಇನ್ನು ಮುಂದೆ ಕ.ಶಿ. ಮಂ) ಅಮೃತೋತ್ಸವ ಸ್ಮರಣ ಸಂಚಿಕೆ, ೨೦೦೭ ಪುಟಗಳು ೨೧-೨೨

೬. ಹೆಚ್ ಡಿಒಎಂ, *ಪೂರ್ವೋಕ್ತ* ಪುಟ ೫೭; ಸೆವ್ರಿನ್ ಸಿಲ್ವಾ ,ಸಂಪುಟ ೨, *ಪೂರ್ವೋಕ್ತ*, ಪುಟ ೫೨

೭. ಸಾಮ್ಯುವೆಲ್ ಮಿಲಿ ಪೂರ್ವೋಕ್ತ, ಪುಟಗಳು ೨೭,೨೯

೮. ದಿ ಎಲೋಶಿಯಸ್ ಸಪ್ಲಿಮೆಂಟ್ ಟು ದ ಮ್ಯಾಂಗಲೂರ್ ಮ್ಯಾಗಝಿನ್, ೧೯೩೫, ಮ್ಯಾಂಗಲೂರ್ ೧೯೩೫, ಪುಟ ೧೧

೯. ಸೆವ್ರಿನ್ ಸಿಲ್ವಾ ,ಸಂಪುಟ ೧, *ಪೂರ್ವೋಕ್ತ*, ಪುಟಗಳು ೧೭೮,೧೭೯

೧೦. ಫಾ। ಸಿಲ್ವೆಸ್ಟರ್ ಮಿನೇಜಸ್ " ಮಂಗ್ಳುರ್‌ಚಾ ಕ್ರಿಸ್ತಾಂವ್ಪಣಾಚಿ ಸಂಕ್ಷಿಪ್ತ್ ಚರಿತ್ರಾ ಭಾಗ್ – ೨ '' ಎ. ಎಫ್.ಡಿ'ಸೋಜಾ. 'ರಾಕಣೊ' (ಕೊಂಕಣಿ) ಬೆಳ್ಳಿಹಬ್ಬದ ಸಂಚಿಕೆ, *ಪೂರ್ವೋಕ್ತ,* ಪುಟ ೮೨

೧೧. ಎಂ.ಎಂ., ಸಂ.೨, ೧೯೦೨, ಪುಟಗಳು ೨೪೧, ೨೪೨; ಕ್ರಾಂತಿ ಕೆ. ಫರಾಯಸ್ ಪೂರ್ವೋಕ್ತ , ಪುಟ ೧೦೫; ಫಾ। ಸಿಲ್ವೆಸ್ಟರ್ ಮಿನೇಜಸ್, "ಮಂಗ್ಳುರ್‌ಚಾ ಕ್ರಿಸ್ತಾಂವ್ಪಣಾಚಿ ಸಂಕ್ಷಿಪ್ತ್ ಚರಿತ್ರಾ(ಕೊಂಕಣಿ)", (ಸಂಪಾದಿಸಿದ) ಎ.ಎಫ್. ಡಿಸೋಜಾ, ರಾಕಣೊ ಸಿಲ್ವರ್ ಜ್ಯೂಬಿಲಿ ನಂಬರ್ ೧೯೬೩ ಪುಟಗಳು ೮೧-೮೫

೧೨. ಎಂ.ಎಂ., ಪೂರ್ವೋಕ್ತ, ಪುಟಗಳು ೨೪೧, ೨೪೨

೧೩. ಬಾಂಬೆ ಮಿಶನ್‌ಗೆ ಸೇರಿದ ಕಾರ್ಮೆಲೈಟ್. ಮಂಗಳೂರಿನಲ್ಲಿ ಆಧುನಿಕ ಕಥೋಲಿಕ್ ಶಿಕ್ಷಣದ ಆದ್ಯಪ್ರವರ್ತಕರಾಗಿ ಗುರುತಿಸಿಕೊಂಡವರು

೧೪. ಹೋಲಿ ಫ್ಯಾಮಿಲಿಯ ಜಾನ್ ಲೂವಿಸ್ ಮತ್ತು ಜೀಸಸ್‌ನ ಅಥೆನೇಶಿಯಸ್

೧೫. ಬ್ರ. ಜಾನ್ ನೆಪೊಮುಸಿನ್, ಬ್ರ. ರೆಫೆರೆ, ಬ್ರ. ಪಾಸ್ಟೋರಿಸ್ ಮತ್ತು ಬ್ರ. ಬರ್ಕ್‌ಮನ್ಸ್

೧೬. ಮೆಮೋರಿಯಲ್ ಆಫ್ ಕ್ರಿಶ್ಚಿಯನ್ಸ್ ಟು ರೈಟ್ ರೆವೆ ಡಾ. ಕ್ಲೆಮೆಂಟ್ ಬೊನ್ನಾಡ್, ಮಂಗಳೂರು: ದಿನಾಂಕ ೧೫ ಮೇ, ೧೮೬೦, ಪುಟ ೯; ಹೆಚ್.ಡಿ.ಒ.ಎಂ., ಪುಟಗಳು ೧೨೨, ೧೨೩; ಹೆಚ್.ಡಿ.ಒ.ಎಂ., ಪುಟ ೧೨೩; ಸೆವ್ರಿನ್ ಸಿಲ್ವಾ, ಸಂಪುಟ ೧. ಪುಟ ೧೯೩ ಎಂ.ಎಂ.ಸಂಪುಟ -೨ ಪುಟಗಳು ೨೪೨, ೨೪೩

೧೭. ಎಂ.ಎಂ. ಸಂಪುಟ ೨, ೧೯೦೨, ಪುಟ ೨೭೩; ಹೆಚ್.ಡಿ.ಒ.ಎಂ. ಪುಟ ೯೬

೧೮. ಅದೇ, ಪುಟ ೨೭೪; ಹೆಚ್.ಡಿ.ಒ.ಎಂ., ಪುಟಗಳು ೧೩೮- ೧೪೦; ಕ್ರಾಂತಿ ಕೆ. ಫರಾಯಸ್, ಪುಟಗಳು ೧೦೮,೧೯

೧೯. ಬಿಷಪ್ ಮೈಕಲ್‌ರವರಿಗೆ ಯೂರೋಪಿನಿಂದ ನಿಯಮಿತವಾಗಿ ಸಿಸ್ಟರ್‌ಗಳನ್ನು ಕರೆತರುವುದು ಸಾಧ್ಯವಾಗದಿದ್ದಾಗ, ಅವರು ಸ್ಥಳೀಯರಲ್ಲಿ ಒಪ್ಪಿಗೆ ಇರುವವರನ್ನು ಕನ್ಯಾಮಠಕ್ಕೆ ಸೇರಿಸಿಕೊಳ್ಳಲಾರಂಭಿಸಿದರು. ಬಿಷಪ್‌ರವರು ತನ್ನನ್ನು ಹಿರಿಯ ಸ್ಥಾನದಲ್ಲಿ ಕಲ್ಪಿಸಿ ತನ್ನ ಮೇಲೆ ಅವಲಂಬಿತರಾಗಿರುವ ಸ್ಥಳೀಯ ಕಾರ್ಮೆಲೈಟ್ ಫ್ರೈಯರ್ಸ್ ಮತ್ತು ನನ್‌ಗಳ ಸಭೆಯನ್ನು ಸ್ಥಾಪಿಸಲು ಹಂಚಿಕೆ ಹೂಡಿದರು. ಬಿಷಪ್ ಮೈಕಲ್ ಅವರು ಸ್ಥಾಪಿಸಿದ ಹೊಸ ಕನ್ಯಾಮಠದ ಮೊದಲ ಅಭ್ಯರ್ಥಿಗಳನ್ನು ಸೈಂಟ್ ಜೋಸೆಪ್ ಆಫ್ ದ ಅಪರೀಶನ್ಸ್ ಸಭೆಯವರ ಜವಾಬ್ದಾರಿಯಲ್ಲಿದ್ದ ಅನಾಥರು ಮತ್ತು ವಸತಿನಿಲಯದ ನಿವಾಸಿಗಳಿಂದ ಆಯ್ಕೆ ಮಾಡಿಕೊಳ್ಳಲಾಯಿತು. ಅವರು ಫಸ್ಟ್ ಆರ್ಡರ್ ಕಾರ್ಮೆಲೈಟ್‌ಗಳಾಗಿರಬೇಕಿತ್ತು. ಆದರೆ ಅವರು ಅಧ್ಯಾಪನಾ ಶಾಲೆಯಲ್ಲಿರಲು ನಿಯಮದಲ್ಲಿ ತಿದ್ದುಪಡಿ ತರಲಾಯಿತು. ಬೇರೆ ವಿಚಾರಗಳಲ್ಲಿ ಅವರು ನಿಯಮಿತ ಕಾರ್ಮೆಲೈಟ್‌ಗಳ ಹಾಗೆ ಮನೆಯೊಳಗಿದ್ದು ಉಳಿದ ನಿಯಮಗಳನ್ನು ಅನುಸರಿಸುತ್ತಿದ್ದರು. ಬಿಷಪ್ ಮೈಕಲ್ ಅವರು ಸ್ಥಳೀಯ ಕಾರ್ಮೆಲೈಟ್ ಫ್ರೈಯರ್ಸ್ ಅವರ ಸನ್ಯಾಸಿ ಮಠವನ್ನು ಜೆಪ್ಪುವಿನಲ್ಲಿ

ಸ್ಥಾಪಿಸಿದರು. ಅವರ ಹಂಚಿಕೆಯಲ್ಲಿ ಇಡೀ ವಿಕಾರಿಯೇಟ್‌ನಲ್ಲಿ ಕಾರ್ಮೆಲೈಟ್ ಅವರನ್ನು ಹೊರತು ಪಡಿಸಿ ಬೇರೆ ಧರ್ಮಗುರುಗಳು ಇರುವ ಹಾಗಿಲ್ಲ. ಬಿಷಪ್ ಮೈಕಲ್ ಅವರ ಉತ್ತರಾಧಿಕಾರಿ ಬಿಷಪ್ ಮಾರಿ ಎಫ್ರೆಮ್ ಈ ನಿಯಮವನ್ನು ರದ್ದುಪಡಿಸಿದರು.

೨೦. ಹೆಚ್.ಡಿ.ಒ.ಎಂ., ಪುಟ ೧೨೩; ಸೆವ್ರಿನ್ ಸಿಲ್ವಾ, ಸಂಪುಟ ೧. ಪುಟ ೧೯೩ ಎಂ.ಎಂ.ಪೂರ್ವೋಕ್ತ, ಪುಟಗಳು ೨೪೨, ೨೪೩

೨೧. ಹೆಚ್. ಎ. ಸ್ಟುವರ್ಟ್ ಪೂರ್ವೋಕ್ತ ೧೧೧-೧೧೩.

೨೨. ಅಭಿಶಂಕರ್ ಕೆ., (ಸಂಪಾದಿಸಿದ) ಸೌತ್ ಕೆನರಾ ಗಜೆಟಿಯರ್, ಬೆಂಗಳೂರು, ೧೯೭೩. ಪುಟಗಳು ೫೪೬-೫೪೭

೨೩. ಕೊಂಕಣಿ ದಿರ್ವೆಂ. ೨ಜೂನ್ ೧೯೨೩ ಪುಟ ೩ ; ಹೆಚ್. ಎ. ಸ್ಟುವರ್ಟ್ ಪುಟಗಳು ೧೧೩,೧೧೬,೧೧೭

೨೪. ಪ್ರಶಾಂತ್ ಮಾಡ್ತ, "ಶಿಕ್ಷಣ್ ಕ್ಷೇತ್ರಾಂತ್ ಮಂಗ್ಳುರಿ ಕೊಂಕಣಿ ಲೊಕಾನ್ ರಾಷ್ಟ್ರಾಕ್ ದಿಲ್ಲಿ ಕಾಣಿಕ್, 'ರಾಕ್ಣೊ'ಸಂಪಾದಕೀಯ ಮಂಡಳಿ , ರಾಕ್ಣೊ ಗೋಲ್ಡನ್ ಜುಬಿಲಿ ಸೌವೆನೀಯರ್: ಮಂಗಳೂರು, ೧೯೮೮ ಪುಟ ೨೬

೨೫. ಎಂ.ಎಂ ಸಂಪುಟ ೫ ೧೯೧೩ ಪುಟಗಳು ೩೯೪,೩೯೫

೨೬. .ಪ್ರಶಾಂತ್ ಮಾಡ್ತ, "ಶಿಕ್ಷಣ್ ಕ್ಷೇತ್ರಾಂತ್ ಮಂಗ್ಳುರಿ ಕೊಂಕಣಿ ಲೊಕಾನ್ ರಾಷ್ಟ್ರಾಕ್ ದಿಲ್ಲಿ ಕಾಣಿಕ್, 'ರಾಕ್ಣೊ'ಸಂಪಾದಕೀಯ ಮಂಡಳಿ , ರಾಕ್ಣೊ ಗೋಲ್ಡನ್ ಜುಬಿಲಿ ಸಾವೆನಿಯರ್: ಮಂಗಳೂರು, ೧೯೮೮ ಪುಟ ೨೬

೨೭. ಫ್ರಾನ್ಸಿಸ್ ಡಿ'ಕುನ್ಹಾ ಪೂರ್ವೋಕ್ತ ಪುಟ ೨೨

೨೮. ಅದೇ ಪುಟಗಳು ೨೬,೨೭

೨೯. ಜೆನ್. ಥಾಮ್ಸನ್, *ಸಾಮುವೇಲ್ ಹೆಬಿಕ್ ಆಫ್ ಇಂಡಿಯಾ, ಮಾಸ್ಟರ್ ಫಿಶರ್ ಆಫ್ ಮೆನ್*, ಕಟಕ್: ೧೯೦೫, ಪುಟ ೨೭; ಸುಶಾಂತಿ ಚರ್ಚ್ ಮರ್ಕರಾ ಹಿಲ್ ಮ್ಯಾಂಗಲೂರ್, ಸಿಲ್ವರ್ ಜುಬಿಲಿ ಸಾವೆನೀಯರ್ ಮ್ಯಾಂಗಲೂರ್, ೧೯೮೨, ಪುಟ ೨

೩೦. ಕ್ರೈಸ್ತಹಿತವಾದಿ, ಸಂಪುಟ ೧, ಜೂನ್ ೧೯೨೪, ಮಂಗಳೂರು

೩೧. ಫೆರೊಸ್ ಜೆಪ್ಪು, " ಬಾಸೆಲ್ ಮಿಶನ್ : ಬದಲಾವಣೆಯ ೧೭೫ ವರ್ಷಗಳು" , ರಾಕ್ಣೋ (ಕೊಂಕಣಿ) ೨೬ ಮಾರ್ಚ್ ೨೦೦೯ ಪುಟಗಳು ೧೫-೧೬; ರಮಾನಾಥ ಕೋಟೆಕಾರ್ " ಬಿಲ್ಲವರು ಮತ್ತು ಬಾಸೆಲ್ ಮಿಶನ್ ಒಂದು ಅಧ್ಯಯನ " ಮಂಗಳೂರು: ಜೆ.ಜೆ.ಪ್ರಿಂಟರ್ಸ್ ೨೦೧೧ ಪುಟ ೨೧

೩೨. ಕ್ರಾಂತಿ ಕೆ. ಫರಾಯಸ್, *ದ ಕ್ರಿಶ್ಚಿಯನ್ ಇಂಪ್ಯಾಕ್ಟ್ ಇನ್ ಸೌತ್ ಕೆನರಾ*, ಮುಂಬೈ, : ಚರ್ಚ್ ಹಿಸ್ಟರಿ ಎಸೋಸಿಯೇಷನ್ ಆಫ್ ಇಂಡಿಯಾ, ವೆಸ್ಟ್ ಇಂಡಿಯಾ ಬ್ರಾಂಚ್ ೧೯೯೯, ಪುಟಗಳು ೯೯,೧೦೦

೩೩. *ಆನ್ವಲ್ ರಿಪೋರ್ಟ್ ಆಫ್‌ದ ಬಾಸೆಲ್ ಜರ್ಮನ್ ಇವಾಂಜಲಿಕಲ್ ಮಿಶನ್ – ಇನ್ ಸೌತ್ ವೆಸ್ಟರ್ನ್ ಇಂಡಿಯಾ* - ೧೮೭೩ (ಇನ್ನು ಮುಂದೆ ಬಿ.ಎಂ.ಆರ್.) ಮಂಗಳೂರು :, ಬಾಸೆಲ್ ಮಿಶನ್ ಪ್ರೆಸ್, ಪುಟಗಳು ೩೩, ೩೪.

೩೪. ಬಿ.ಎಂ ಆರ್- ೧೮೯೬, ಪುಟಗಳು ೭೫, ೭೬.

೩೫. ಸೂರ್ಯನಾಥ್ ಕಾಮತ್, "ಕರ್ನಾಟಕದಲ್ಲಿ ಬಾಸೆಲ್ ಮಿಶನ್ನಿನ ಸಾಧನೆ, ಬೆಳ್ಳಿಹಬ್ಬ ಸ್ಮರಣಾ ಸಂಚಿಕೆ, ಕರ್ನಾಟಕ ಸದರ್ನ್ ಡಯಾಸಿಸ್ ಎಜುಕೇಷನಲ್ ಸೊಸೈಟಿ (೧೯೭೪-೨೦೦೧) ಪುಟ ಸಂಖ್ಯೆ ಇರುವುದಿಲ್ಲ.

೩೬. ಎಸ್.ಆರ್. ಫುರ್ತಾಡೊ, ಬಾಸೆಲ್ ಮಿಶನ್: ೧೫೦ ವರ್ಷ, ಪೂರ್ವೋಕ್ತ.

೩೭. *ಬಿ.ಎಂ.ಆರ್*- ೧೮೯೫, ಪುಟಗಳು ೮೮, ೮೯.

೩೮. ಸಿ.ಎಲ್. ಫುರ್ತಾಡೊ, "ಕಾಂಟ್ರಿಬ್ಯೂಷನ್ ಆಫ್‌ದ ಬಾಸೆಲ್ ಮಿಶನ್ ಟುದ ಕಾಸ್ ಆಫ್ ಥಿಯೋಲಾಜಿಕಲ್ ಎಜುಕೇಷನ್" ಗಾಡ್ವಿನ್ ಶಿರಿ (ಸಂ). *ಹೋಲ್ಡೆಸ್ ಇನ್ ಕ್ರೈಸ್ಟ್*, ಕಥ್ರಿ ಪಬ್ಲಿಕೇಷನ್ಸ್ , ಮಂಗಳೂರು: ೨೦೦೯ (ಮೊದಲ ಮುದ್ರಣ ೧೯೮೫) ಪುಟ ೯೭

೩೯. ಸಂಯುಕ್ತ ಬಾಸೆಲ್ ಮಿಶನ್ ಬಲ್ಮಠ ಶಾಂತಿ ದೇವಾಲಯ ಶತಮಾನೋತ್ಸವ ಸ್ಮಾರಕ ಸಂಚಿಕೆ ( ೧೮೬೨-೧೯೬೨),ಮಂಗಳೂರು ೧೯೬೨ ಪುಟ ೩೮

೪೦. *ಬಿ.ಎಂ.ಆರ್* - ೧೮೭೦, ಪುಟಗಳು ೧೭,೧೮; ಕ್ರಾಂತಿ ಕೆ. ಫರಾಯಸ್ *ಪೂರ್ವೋಕ್ತ* ಪುಟ ೧೦೩

೪೧. ಸಿ.ಎಲ್. ಫುರ್ತಾಡೊ, *ಪೂರ್ವೋಕ್ತ*,ಪುಟಗಳು ೯೮, ೯೯; ಕ್ರಾಂತಿ ಕೆ. ಫರಾಯಸ್, *ಪೂರ್ವೋಕ್ತ* ಪುಟ ೧೦೨

೪೨. ಸಿ.ಎಲ್. ಫುರ್ತಾಡೊ, *ಪೂರ್ವೋಕ್ತ*,ಪುಟ ೧೦೦.

೪೩. ಗೀತಾ ಎಸ್. ನಂದಿಹಾಳ, *ಕನ್ನಡಕ್ಕೆ ಬಾಸೆಲ್ ಮಿಷನರಿಗಳ ಕೊಡುಗೆ* ಧಾರವಾಡ: ಪ್ರಾಂಶುಪಾಲರು ಕಿಟ್ಟೆಲ್ ಆರ್ಟ್ಸ್ ಕಾಲೇಜು. ೨೦೦೩. ಪುಟ ೨೫೪.

೪೪. ಪೀಟರ್ ವಿಲ್ಸನ್ ಪ್ರಭಾಕರ್, "ಬಾಸೆಲ್ ಮಿಷನ್ ಇನ್ ಸೌತ್ ಕೆನರಾ (೧೮೩೪-೧೯೪೭)", ಅಪ್ರಕಟಿತ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ೧೯೮೮, ಪುಟಗಳು ೧೦೨,೧೦೩(ಇನ್ನು ಮುಂದೆ ಪಿಡಬ್ಲ್ಯುಪಿ).

೪೫. ಆದೇ, ಪುಟ ೧೦೩

೪೬. ಹಾರ್ವೆಸ್ಟ್ ಫೀಲ್ಡ್, ಮಾಸಿಕ ಪತ್ರಿಕೆ, ಮೈಸೂರು, ೧೮೯೫ ,ಪುಟ ೩೧೮

೪೭. ಬಿ.ಎಂ.ಆರ್ - ೧೮೯೮, ಪುಟ ೮೭.

೪೮. ಬಿ.ಎಂ.ಆರ್ - ೧೮೯೩, ಪುಟ ೩೫.

೪೯. ಬಿ.ಎಂ.ಆರ್ - ೧೮೪೫, ಪುಟ ೫೩ ; ಪಿ.ಡಬ್ಲ್ಯುಪಿ., ಪುಟಗಳು ೧೦೪, ೧೦೫

೫೦. ಸತ್ಯವೃತ ,ಮಾರ್ಚ್ ೧೯೨೮, ಪುಟ ೩

೫೧. ಬಿ.ಎಂ.ಆರ್ - ೧೯೧೩, ಪುಟ ೬೧.

೫೨. ಪಿ. ಡಬ್ಲ್ಯು.ಪಿ., ಪೂರ್ವೋಕ್ತ, ೧೦೫-೧೦೬

೫೩. ಬಿ.ಎಂ.ಆರ್ - ೧೮೭೧, ಪುಟ ೨೭

೫೪. ಬಿ.ಎಂ.ಆರ್ - ೧೮೯೬, ಪುಟ ೩೪.

೫೫. ಅದೇ , ಪುಟಗಳು ೭೫, ೭೬

೫೬. ಬಿ.ಎಂ.ಆರ್- ೧೮೫೨, ಪುಟಗಳು ೧೪- ೧೭

೫೭. ರುಡೊಲ್ಫ್ ಹೆಚ್.ಪಿಶರ್, "ಮಿಶನ್ ಅಂಡ್ ಮಾಡರ್ನೈಜೇಷನ್; ದ ಬಾಸೆಲ್ ಮಿಶನ್ ಪ್ಯಾಕ್ಟರಿಸ್ ಆ್ಯಸ್ ಏಜನ್ಸಿಸ್ ಆಫ್ ಸೋಶಿಯಲ್ ಚೇಂಜ್ (೧೮೫೦-೧೯೧೪)" ಗಾಡ್ವಿನ್ ಶಿರಿ (ಸಂಪಾದಿಸಿದ) ಪೂರ್ವೋಕ್ತ , ಪುಟ ೨೦೩

೫೮. ಬಿ.ಎಂ.ಆರ್ - ೧೮೭೩, ಪುಟಗಳು ೩೯, ೪೦

೫೯. ಬಿ.ಎಂ.ಆರ್- ೧೯೧೩, ಪುಟ ೬೦

೬೦. ಪಿ. ಡಬ್ಲ್ಯು ಪಿ., ಪೂರ್ವೋಕ್ತ ,ಪುಟ ೧೦೭

೬೧. ಬಿ.ಎಂ.ಆರ್ - ೧೯೧೩, ಪುಟ ೬೦

೬೨. ಬಿ.ಎಂ.ಆರ್ - ೧೮೮೭, ಪುಟ ೩೬

೬೩. ಬಿ.ಎಂ.ಆರ್ - ೧೮೯೩ , ಪುಟಗಳು ೩೯,೪೦

೬೪. ಸಿಡ್ನಿ ಎಸ್. ಸಾಲಿನ್ಸ್ "ದ ಇನ್ ಸ್ಟಿಟ್ಯೂಷನ್ಸ್ ಆನ್ ಬಲ್ಮಠ, ಮ್ಯಾಂಗಲೂರ್: ಅಲ್ಬರ್ಟ್ ೯ ಫ್ರೆನ್ಸ್ ಅಂಡ್ ಸ್ಟೀಪನ್ ಫ್ರೆನ್ಸ್ (ಸಂಪಾದಿಸಿದಂ ಪ್ಯೂಚರ್ ಇನ್ ರಿಮೆಂಬ್ರೆನ್ಸ್ , ೨೦೦೭ ಪುಟ ೧೨೩.

೬೫. ಪಿ.ಡಬ್ಲ್ಯು.ಪಿ., ಪೂರ್ವೋಕ್ತ, ಪುಟ ೧೦೭

೬೬. ಅದೇ, ಪುಟ ೧೨೪

೬೭. ಅದೇ , ಪುಟ ೧೨೪.

೬೮. ಅದೇ , ಪುಟ ೧೦೮

೬೯. ಸಂಪಾದಕೀಯ ಮಂಡಳಿ, ಬೆಳ್ಳಿ ಹಬ್ಬದ ಸ್ಮರಣಾ ಸಂಚಿಕೆ ಕರ್ನಾಟಕ ಸದರ್ನ್ ಡಯಾಸಿಸ್ ಎಜುಕೇಷನ್ ಸೊಸೈಟಿ, (೧೯೭೪-೨೦೦೧) ಪುಟ ಸಂಖ್ಯೆ ಇಲ್ಲ; ಸಿಡ್ನಿ ಎಸ್. ಸಾಲಿನ್ಸ್ , ಪೂರ್ವೋಕ್ತ, ಪುಟ ೧೨೪.

೭೦. ದ ಫಸ್ಟ್ ರಿಪೋರ್ಟ್ ಆಫ್ ದಿ ಜರ್ಮನ್ ಮಿಶನ್ ಇನ್ ದ ಸದರ್ನ್ ಮರಾಠ, ಕೆನರಾ ಎಂಡ್ ಮಲಬಾರ್ ಪ್ರಾವಿನ್ಸಸ್, ಮಿಶನ್ ಪ್ರೆಸ್, ಬೊಂಬೈ, ೧೮೪೧ ಪುಟ ೧೪

೭೧. ಸಂಪಾದಕೀಯ ಮಂಡಳಿ, ಸಂಯುಕ್ತ ಬಾಸೆಲ್ ಮಿಶನ್ ಬಲ್ಮಠ ಶಾಂತಿ ದೇವಾಲಯ ಶತಮಾನೋತ್ಸವ ಸ್ಮಾರಕ ಸಂಚಿಕೆ (೧೮೬೨-೧೯೬೨), ಪುಟ ೨೧

೭೨. 'ರಾಕ್ನೊ' (ಕೊಂಕಣಿ), ವಾರ ಪತ್ರಿಕೆ, ಕೊಡಿಯಾಲ್ ಬೈಲ್ ಪ್ರೆಸ್, ಮಂಗಳೂರು, ಮಾರ್ಚ್ ೨೬, ೨೦೦೯, ಪುಟಗಳು ೧೫,೧೬

೭೩. ಬಿ.ಎಂ.ಆರ್ - ೧೮೭೩, ಪುಟಗಳು ೩೩, ೩೪

೭೪. ಸಂಪಾದಕೀಯ ಮಂಡಳಿ, ಸಂಯುಕ್ತ ಬಾಸೆಲ್ ಮಿಶನ್ ಬಲ್ಮಠ ಶಾಂತಿ ದೇವಾಲಯ ಪೂರ್ವೋಕ್ತ ಪುಟಗಳು ೨೧,೨೨

೭೫. ಬಿ.ಎಂ.ಆರ್ - ೧೮೪೪, ಪುಟಗಳು ೨೪, ೨೫

೭೬. ಬಿ.ಎಂ.ಆರ್ - ೧೮೬೭ , ಪುಟಗಳು ೧೪, ೧೫

೭೭. ಪಿ.ಡಬ್ಲ್ಯು.ಪಿ., ಪೂರ್ವೋಕ್ತ , ಪುಟ ೮

೭೮. ಅದೇ , ಪುಟ ೧೧೪

೭೯. ಸತ್ಯ ದೀಪಿಕೆ, ಮೇ ೨೦೦೧ ಪುಟ ೧೬೩

೮೦. ಪಿ.ಡಬ್ಲ್ಯು.ಪಿ., ಪೂರ್ವೋಕ್ತ ಪುಟಗಳು ೧೧೫,೧೧೬

೮೧. ಬಿ.ಎಂ.ಆರ್ - ೧೮೬೨, ಪುಟ ೧೫

೮೨. ಬಿ.ಎಂ.ಆರ್. – ೧೮೭೩ ಪುಟ ೩೩

೮೩. ರಿಚರ್ಡ್ ಪ್ಯಾಸ್, "ಸೆಡ್ಯೂಲ್ಡ್ ಕಾಸ್ಟ್ಸ್ ಇನ್ ಮ್ಯಾಂಗಲೂರ್" ಎಡಿಟೋರಿಯಲ್ ಬೋರ್ಡ್ ಸೈಂಟ್ ಎಲೋಶಿಯಸ್ ಕಾಲೇಜ್, ಮ್ಯಾಂಗಲೂರ್ ಆ್ಯನ್ವಲ್ ( ೨೦೦೪-೨೦೦೫) ೧೨೫ ಪುಟ ೭೯; ಕುಸುಮ್ "ಬಾಸೆಲ್ ಮಿಶನ್ ಮತ್ತು ಶಿಕ್ಷಣ ರಂಗ ಒಂದು ಪರಿಚಯ" ಸಂಪಾದಕೀಯ ಮಂಡಳಿ, ಕಾಸ್ಡೆಸ್ ಬೆಳ್ಳಿಹಬ್ಬದ ಸ್ಮರಣ ಸಂಚಿಕೆ ಕರ್ನಾಟಕ ಸದರ್ನ್ ಡಯಾಸಿಸ್ ಎಜುಕೇಷನ್ ಸೊಸೈಟಿ ( ೧೯೭೪-೨೦೦೧) ಪುಟ ಸಂಖ್ಯೆ ಇಲ್ಲ

೮೪. ಕೃತಿಕಾ, "ಮರ್ಕೆರಾಹಿಲ್", *ವಿಜಯ ಕರ್ನಾಟಕ*, ೨೦೦೮, ಮಂಗಳೂರು

೮೫. ರಮಾನಾಥ್ ಕೋಟೆಕಾರ್, "ಬಿಲ್ಲವರು ಮತ್ತು ಬಾಸೆಲ್ ಮಿಶನ್", *ಗುರುತು*, ಜನವರಿ ೨೦೦೩, ಪುಟ ಸಂಖ್ಯೆ ಇಲ್ಲ

೮೬. *ಕ್ರೈಸ್ತ ಹಿತವಾದಿ*, ೧೯೨೪-೨೫ ಪುಟ ೧೪೦

೮೭. ಫ್ರಾನಿಸ್ಸ್ ದಾಂತಿ, " ಬ್ಯಾಂಕಿಂಗ್ ಕ್ಷೇತ್ರಾಂತ್ ಕೊಂಕಣಿ ಲೊಕಾಚೊ ವಾವ್ರ್ "'ರಾಕ್ಣೊ' ಸಂಪಾದಿಕೀಯ ಮಂಡಳಿ, ಗೋಲ್ಡನ್ ಜುಬಿಲಿ ಸಾವೆನಿಯರ, ಕೊಡಿಯಾಲ್‌ಬೈಲ್ ಪ್ರೆಸ್, ೧೯೮೮, ಮಂಗಳೂರು: ಪುಟಗಳು ೧೦೭, ೧೦೮

೮೮. ಅದೇ , ಪುಟಗಳು ೧೧೦, ೧೧೧

೮೯. ಪಿ.ಡಬ್ಲ್ಯು.ಪಿ., ಪೂರ್ವೋಕ್ತ , ಪುಟ ೧೧೯

೯೦. ಪಿ.ಡಬ್ಲ್ಯು.ಪಿ., ಪೂರ್ವೋಕ್ತ , ಪುಟ ೧೨೫

೯೧. ಕುಸುಮ್ ಪೂರ್ವೋಕ್ತ

೯೨. ಪದ್ಮಶ್ರೀ, "ಬಾಸೆಲ್ ಮಿಷನ್ ಅಂಡ್ ಎಂಡ್ ಎಜುಕೇಷನ್ ಇನ್ ಸೌತ್ ಕೆನರಾ (೧೮೩೪- ೧೯೪೭)"ಅಪ್ರಕಟಿತ ಎಂ.ಫಿಲ್, ಸಂಪ್ರಬಂಧ ಮಧುರೈ ಕಾಮರಾಜ್ ವಿಶ್ವ ವಿದ್ಯಾಲಯ, ೨೦೦೪, ಪುಟ ೯

೯೩. ಅದೇ ,ಪುಟ ೧೮

೯೪. ಎಂ.ಎಂ. ಪುಟಗಳು ೯೯,೧೦೦

೯೫. ಎಂ.ಎಂ.ಪೂರ್ವೋಕ್ತ ಪುಟ ೨೪೩

೯೬. ವಿಶಾಂಜ್ ಪಿಂಟೋ ೬೯,೭೦

೯೭. ಭ| ಮರಿಯ ಜ್ಯೋತಿ ಎ.ಸಿಯವರು, ೧೮ ಜುಲೈ ೨೦೧೨ರಂದು ಸಂದರ್ಶನದ ವೇಳೆಯಲ್ಲಿ ನೀಡಿದ ಮಾಹಿತಿ; ಎ.ಸಿ. ಸಿಂಫೋನಿ, ಸಂಪುಟ v ಪುಟ ೧೩

೯೮. ಅಲೋಶಿಯಾ, ಬರ್ನಡ್ ಮತ್ತು ಬೇಟ್ರೆಸ್

೯೯. ಕ್ರಾಂತಿ ಕೆ. ಫರಾಯಸ್, ಪೂರ್ವೋಕ್ತ ಪುಟ ೧೧೦

೧೦೦. ಭ| ಮರಿಯ ಜ್ಯೋತಿ , ಎ.ಸಿ. ಪೂರ್ವೋಕ್ತ ; ದ. ಎ.ಸಿ. ಸಿಂಫೋನಿ, ಸಂಪುಟ v ಪುಟಗಳು ೫೨೭,೫೨೮, ೧೪, ೧೫

೧೦೧. ಮಾರ್ಕ್ ವಾಲ್ಡಾರ್, "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಸಭೆಯ ಪಾತ್ರ "ಅಡ್ಯನಡ್ಕ ಕೃಷ್ಣ ಭಟ್ (ಸಂಪಾದಿಸಿದ) ಸುವರ್ಣ, ಡಾ| ತೋನ್ಸೆ ಮಾಧವ ಅನಂತ ಪೈ ಅಭಿನಂದನಾ ಗ್ರಂಥ,ವಿಜಯಾ ಕಾಲೇಜು, ಮೂಲ್ಕಿ, ೧೯೭೭, ಪುಟ ೩೮೭ , ಎಂ.ಎಂ. ಸಂಪುಟ-೪ ಪುಟಗಳು ೯೯,೧೦೦

೧೦೨. ಭ| ಮರಿಯ ರೀತಿಕಾ ಎ.ಸಿ. ಅವರನ್ನು ೧೮.೭..೨೦೧೨ರಂದು ಸಂದರ್ಶನ ನಡೆಸಿ ಸಂಗ್ರಹಿಸಿದ ಮಾಹಿತಿ

೧೦೩. ಎಂ.ಎಂ. ಸಂಪುಟ ೪ ಪುಟಗಳು ೧೦೦.೧೦೧

೧೦೪. ಭ। ಫ್ಲೋರಿನ್ ಪಿಂಟೋ ಎ.ಸಿ.ಯವರು ೧೨.೭.೨೦೧೨ ನೀಡಿದ ಮಾಹಿತಿ; ದ ಎ.ಸಿ.ಸಿಂಫೋನಿ, ಪೂರ್ವೋಕ್ತ, ಪುಟ ೧೦೧.

೧೦೫. ಒಕ್ಟೋವಿಯಾ ಅಲ್ಬುಕರ್ಕ್ , 'ಸೋಶಿಯಲ್ ವರ್ಕ್ ಇನ್ ಮ್ಯಾಂಗಲೂರ್', ಸೆಂಟಿನರಿ ಸೆಲೆಬ್ರೇಷನ್ ಸಾವೆನಿಯರ್, ಮ್ಯಾಂಗಲೂರ್ ಮುನ್ಸಿಪಾಲಿಟಿ (೧೮೬೬-೧೯೬೬) ಪುಟಗಳು ೮೫,೧೦೪, ೫೩೪,೫೩೫

೧೦೬. ಹೆಚ್.ಡಿ.ಒ.ಎಂ, ಪುಟಗಳು ೧೫೫,೧೫೬; ಕ್ರಾಂತಿ ಕೆ. ಫರಾಯಸ್, ಪುಟಗಳು ೧೧೫, ೧೧೬

೧೦೭. ದ ಎ.ಸಿ. ಸಿಂಪೋನಿ, ಎ ಹಿಸ್ಟರಿ ಆಫ್ ದ ಅಪೋಸ್ತಲಿಕ್ ಕಾರ್ಮೆಲ್ ಮಿಶನ್ ಸಂಪುಟ v , ಹಾರ್ಟ್ಸ್ ಆನ್ ಫೈಯರ್ (೧೮೬೮-೨೦೦೮) ಪುಟಗಳು ೩೦,೩೧, ೯೮ ೯೯ ೪೮೪, ೪೮೫; ಭ। ಎಂ.ಶೈಲಾ ಎ.ಸಿ.ಯವರು ೧೦ ನವೆಂಬರ್ ೨೦೧೧ ರಂದು ಸಂದರ್ಶನದ ವೇಳೆ ಸಂಗ್ರಹಿಸಿದ ಮಾಹಿತಿ

೧೦೮. ಅದೇ, ಪುಟಗಳು ೨೭, ೨೮ ಭ। ಮರಿಯ ವಿಭಾ ಎ.ಸಿಯವರಿಂದ ೧೦.೭.೨೦೧೧ರಂದು ಸಂದರ್ಶನ ನಡೆಸಿ ಸಂಗ್ರಹಿಸಿದ ಮಾಹಿತಿ

೧೦೯. ಭ। ಮರಿಯ ಗ್ಲೋರಿಯ ಎ.ಸಿ.ರವರಿಂದ ೨೫.೬.೨೦೧೧ರಂದು ಸಂಗ್ರಹಿಸಿದ ಮಾಹಿತಿ; ದ ಎ.ಸಿ. ಸಿಂಫೋನಿ ಪುಟಗಳು ೧೦೩, ೪೮೫

೧೧೦. ಒಕ್ಟೋವಿಯಾ ಅಲ್ಬುಕರ್ಕ್ , 'ಸೋಶಿಯಲ್ ವರ್ಕ್ ಇನ್ ಮ್ಯಾಂಗಲೂರ್', ಸೆಂಟಿನರಿ ಸೆಲೆಬ್ರೇಷನ್ ಸಾವೆನಿಯರ್ ಮ್ಯಾಂಗಲೂರ್ ಮುನ್ಸಿಪಾಲಿಟಿ (೧೮೬೬-೧೯೬೬) ಪುಟಗಳು ೮೫,೧೦೪, ೫೩೪,೫೩೫

೧೧೧. ಭ। ಮರಿಯಾ ಶುಭಾ ಎ.ಸಿ.ಯವರನ್ನು ೮.೬.೨೦೧೧ರಂದು ಸಂದರ್ಶಿಸಿ ಸಂಗ್ರಹಿಸಿದ ಮಾಹಿತಿ ; ದ ಎ.ಸಿ. ಸಿಂಫೋನಿ ಪುಟಗಳು ೧೦೮,೪೮೭

೧೧೨. ಭ। ಅರ್ಚನಾ ಎ.ಸಿ. ಯವರನ್ನು ೧೫.೬.೨೦೧೧ರಂದು ಸಂದರ್ಶಿಸಿ ಸಂಗ್ರಹಿಸಿದ ಮಾಹಿತಿ; ದ.ಎ.ಸಿ. ಸಿಂಫೋನಿ ಪುಟಗಳು ೧೦೫, ೧೦೬, ೪೮೬

೧೧೩. ಭ। ಮೋನಿಕಾ ಡಿ.ಸೋಜ ಎ.ಸಿ.ಯವರನ್ನು ೨೫.೬.೨೦೧೧ರಂದು ಸಂದರ್ಶಿಸಿ ಸಂಗ್ರಹಿಸಿದ ಮಾಹಿತಿ, ದ.ಎ.ಸಿ.ಸಿಂಫೋನಿ, ಪುಟ ೧೩೨

೧೧೪. ಕ್ರಾಂತಿ, ಕೆ.ಫರಾಯಸ್ ಪೂರ್ವೋಕ್ತ, ಪುಟ ೧೦೩

೧೧೫. ಫಾ। ಸಿಲ್ವೆಸ್ಟರ್ ಮಿನೇಜಸ್, "ಮಂಗ್ಳುರ್‌ಚಾ ಕ್ರಿಸ್ತಾಂವ್ಪಣಾಚಿ ಸಂಕ್ಷಿಪ್ತ್ ಚರಿತ್ರಾ(ಕೊಂಕಣಿ)", (ಸಂಪಾದಿಸಿದ) ಎ.ಎಫ್. ಡಿಸೋಜಾ, ರಾಕಣೊ ಸಿಲ್ವರ್ ಜ್ಯೂಬಿಲಿ ನಂಬರ್ ೧೯೬೩ ಪುಟಗಳು ೮೩,೮೪

೧೧೬. ಹೆಚ್. ಡಿ.ಒ.ಎಂ ಪುಟ ೧೬೩; ಸೆವರಿನ್ ಸಿಲ್ವಾ ಸಂಪುಟ ೧ ಪುಟ ೨೦೦

೧೧೭. ಮೇಮೋರಿಯಲ್ ಟು ಹಿಸ್ ಹೋಲಿನೆಸ್, ಪೋಪ್ ಪಿಯುಸ್ IX, ದಿನಾಂಕ ೨೯ ಜೂನ್ ೧೮೭೩, ಪುಟ ೨

೧೧೮. ಕ್ರಾಂತಿ ಕೆ. ಪರಾಯಸ್, ಪೂರ್ವೋಕ್ತ ಪುಟ ೧೧೧

೧೧೯. ಮೆಮೋರಿಯಲ್ ಆಫ್ ೧೫ ಮೇ ೧೮೬೦ ಪುಟ ೧೬; ಮೆಮೋರಿಯಲ್ ಆಫ್ ಜೂನ್ ೧೮೬೮, ಪುಟ ೪೩; ಮಮೋರಿಯಲ್ ಆಫ್ ೨೯ ಜೂನ್ ೧೮೭೩ ,ಪುಟ ೩; ಮೆಮೋರಿಯಲ್ ಆಫ್ ೧೮೭೪, ಪುಟಗಳು ೪೩, ೪೪

೧೨೦. ಕ್ರಾಂತಿ ಕೆ. ಫರಾಯಸ್ ಪೂರ್ವೋಕ್ತ ಪುಟ ೧೧೩

೧೨೧. ಎಡಿಟೋರಿಯಲ್ ಬೋರ್ಡ್ ಸೈಂಟ್ ಎಲೋಶಿಯಸ್ ಕಾಲೇಜ್ ಆ್ಯನ್ವಲ್, ಮಂಗಳೂರು: ೧೯೫೫ , ಪುಟ ೧

೧೨೨. ಡೆನಿಸ್ ಫರ್ನಾಂಡಿಸ್ ಎಸ್.ಜೆ ೧೯೩೭, ಮ್ಯಂಗಳೂರು ಪುಟಗಳು ೧೧-೧೩; ಕರ್ನಾಟಕ ಜೆಜ್ವಿತ್ ಸೆಂಟಿನರಿ ಸಾವೆನಿಯರ್ (೧೮೭೮-೧೯೭೮), ಬೆಂಗಳೂರು, ೧೯೭೮ ಪುಟ ೩

೧೨೩. ಸೈಂಟ್ ಎಲೋಶಿಯಸ್ ಕಾಲೇಜ್ ಮ್ಯಾಂಗಲೂರ್, ಸೆಂಟೆನರಿ ಸಾವೆನಿಯರ್, ೧೯೭೯-೧೯೮೦ ಪುಟ ೧

೧೨೪. ಡೆನಿಸ್ ಫರ್ನಾಂಡಿಸ್ ಎಸ್.ಜೆ.ಮಂಗಳೂರು, ೧೯೩೭, ಪುಟಗಳು ೧೧-೧೩; ಎಡಿಟೋರಿಯಲ್ ಬೋರ್ಡ್ ಕರ್ನಾಟಕ ಜೆಸ್ವಿಟ್ ಸೆಂಟಿನರಿ ಸಾವೆನಿಯರ್ ಪುಟ ೧೪೮

೧೨೫. ಎಡಿಟೋರಿಯಲ್ ಬೋರ್ಡ್ ಸೈಂಟ್ ಅಲೋಶಿಯಸ್ ಕಾಲೇಜ್ ಸೆಂಟಿನರಿ ಸಾವೆನಿಯರ್ (೧೯೭೯-೧೯೮೦)ಪುಟ ೪

೧೨೬. ಎಂ. ಗಣಪತಿ ರಾವ್ ಐಗಳ್ ಪೂರ್ವೋಕ್ತ, ಪುಟ ೧೪೪

೧೨೭. ಎಂ. ಎಂ., ಸಂಪುಟ ೭, ಸೈಂಟ್ ಎಲೋಶಿಯಸ್ ಕಾಲೇಜ್, ಮ್ಯಾಂಗಲೂರ್, ದ ಗೋಲ್ಡನ್ ಜುಬಿಲಿ ಸಾವೆನಿಯರ್ (೧೮೮೦-೧೯೩೦) ಪುಟಗಳು ೧೦,೧೧

೧೨೮. ಎಡಿಟೋರಿಯಲ್ ಬೋರ್ಡ್ ಸೈಂಟ್ ಅಲೋಶಿಯಸ್ ಕಾಲೇಜು ಆ್ಯನ್ವಲ್, ಮ್ಯಾಂಗಲೂರ್, ೧೯೫೫ ಪುಟಗಳು ೧, ೨

೧೨೯. ದ ಪೋಸ್ಟ್ ಸೆಂಟಿನರಿ ಸಿಲ್ವರ್ ಜ್ಯುಬಿಲಿ ಸಾವೆನಿಯರ್, ಸೈಂಟ್ ಅಲೋಶಿಯಸ್ ಕಾಲೇಜ್ ಇನ್‌ಸ್ಟಿಟ್ಯೂಷನ್ಸ್, ಮಂಗಳೂರು: ೨೦೦೫, ಪುಟಗಳು ೯೭-೧೦೦

೧೩೦. ಎಡಿಟೋರಿಯಲ್ ಬೋರ್ಡ್ ಸೈಂಟ್ ಅಲೋಶಿಯಸ್ ಕಾಲೇಜ್, ಮ್ಯಾಂಗಲೂರ್ ಆ್ಯನ್ವಲ್ -೧೨೫ (೨೦೦೪-೨೦೦೫) ಪುಟ

೧೩೧. ಸೈಂಟ್ ಎಲೋಶಿಯಸ್ ಕಾಲೇಜ್ ಮ್ಯಾಂಗಲೂರ್, ಸೆಂಟಿನರಿ ಸಾವೆನಿಯರ್, ೧೯೭೯- ೧೯೮೦ ಪುಟಗಳು ೧, ೨

೧೩೨. ಎಡಿಟೋರಿಯಲ್ ಬೋರ್ಡ್ ಸೈಂಟ್ ಅಲೋಶಿಯಸ್ ಕಾಲೇಜ್ ಸೆಂಟಿನರಿ ಸಾವೆನಿಯರ್ (೧೯೭೯-೧೯೮೦) ಪುಟ ೩

೧೩೩. ಅದೇ, ಪುಟ ೩

೧೩೪. ವಿಶಾಂಜ್ ಪಿಂಟೋ ಪುಟಗಳು ೭೧.೭೨

೧೩೫. ಮಂಗಳೂರಿನ ಪೊವಿನ್ಸಿಯಲ್ ಶಾಲೆಯನ್ನು ಸೆಪ್ಟೆಂಬರ್ ೧೮೬೫ರಲ್ಲಿ ಆರಂಭಿಸಲಾಗಿದೆ. ಶಾಲೆಯಲ್ಲಿ ಒಂದರಿಂದ ಮೆಟ್ರಿಕ್ಯೂಲೇಷನ್‌ವರೆಗೆ ಶಿಕ್ಷಣಕ್ಕೆ ಅವಕಾಶವಿತ್ತು. ೧೮೬೭ರಲ್ಲಿ ಮೆಟ್ರಿಕ್ಯೂಲೇಷನ್ ಪರೀಕ್ಷೆಗೆ ಶಾಲೆಯ ಮೊದಲ ತಂಡ ಹಾಜರಾಗಿದೆ.೧೮೬೮ರಲ್ಲಿ ಎಫ್ .ಎ.ತರಗತಿಗಳು ಆರಂಭವಾದವು. ೧೮೭೯ರಲ್ಲಿ ಪ್ರೊವಿನ್ಸಿಯಲ್ ಶಾಲೆಯನ್ನು ಗವರ್ನಮೆಂಟ್ ಕಾಲೇಜು ಎಂದು ಪುನರ್ನಾಮಕರಣ ಮಾಡಲಾಗಿದೆ. ಹಾಲ್ ಜೆ.ಎಫ್., ಮದ್ರಾಸ್ ಡಿಸ್ಟ್ರಿಕ್ಟ್ *ಗಜೆಟಿಯರ್, ಸಪ್ಲಿಮೆಂಟ್ ಟು ದ ಟೂ ಡಿಸ್ಟ್ರಿಕ್ಟ್ ಮಾನ್ಯುವಲ್ಸ್ ಫಾರ್ ಸೌತ್ ಕೆನರಾ ಡಿಸ್ಟ್ರಿಕ್ಟ್*, ಮದ್ರಾಸ್: ೧೯೩೮. ಪುಟಗಳು ೨೪೮,೨೪೯; ಅಭಿಶಂಕರ್ ಕೆ., (ಸಂಪಾದಿಸಿದ) ಸೌತ್ ಕೆನರಾ ಗಜೆಟಿಯರ್, ಬೆಂಗಳೂರು, ೧೯೭೩.ಪುಟಗಳು ೫೪೬,೫೪೭.

೧೩೬. ಎಂ.ಎಂ.ಸಂ.೨, ೧೯೦೨, ಪುಟಗಳು ೨೪೧, ೨೪೨

೧೩೭. ವಿಶಾಂಜ್ ಪಿಂಟೋ ಪುಟಗಳು ೫೮,೫೯

೧೩೮. ಯುಎನ್‌ಟಿಎಸ್ (UNITAS) ೧೯೮೦, ಸಾವೆನಿಯರ್ ಆಫ್ ದ ಸೆಂಟಿನರಿ ಸೆಲೆಬ್ರೇಷನ್ಸ್ (೧೮೭೯-೧೯೭೯), ಸೈಂಟ್ ಜೋಸೆಫ್ಸ್ ಇಂಟರ್ ಡಯಾಸಿಸನ್ ಸೆಮಿನರಿ, ಮ್ಯಾಂಗಲೋರ್ ಪುಟಗಳು ೨೨,೨೩

೧೩೯. ಎಂ.ಎಂ.,ಸಂಪುಟ ೨, ೧೯೦೩ , ಪುಟ ೩೭೯; ಎಡಿಟೋರಿಯಂ ಬೋರ್ಡ್ ಸೈಂಟ್ ಅಲೋಶಿಯಸ್ ಕಾಲೇಜ್ ಸೆಂಟಿನರಿ ಸಾವೆನಿಯರ್ (೧೯೭೯-೧೯೮೦) ಪುಟ ೪

೧೪೦. ಡೈರೆಕ್ಟರಿ ೨೦೧೧, ಡಯಾಸಿಸ್ ಆಫ್ ಮ್ಯಾಂಗಲೂರ್, ಮಂಗಳೂರು: ೨೦೧೧ ಪುಟ ೨೧೨

೧೪೧. ಅನುದಾನಿತ ಶಾಲಾ ದರ್ಪಣ-ಶಾಲೆಗಳ ಮಾಹಿತಿ ಕೃತಿ, ದಕ್ಷಿಣ ಕನ್ನಡ ಜಿಲ್ಲಾ ಅನುದಾನಿತ ಶಾಲೆಗಳ ಆಡಳಿತದವರ ಸಂಘ (ರಿ) ಮಂಗಳೂರು, ೨೦೦೬, ಪುಟ ೩೪೭

೧೪೨. ಭ। ಮೇರಿಯನ್ ಡಿ'ಸಿಲ್ವಾ," ದ ಸಿಸ್ಟರ್ಸ್ ಆಫ್ ಚಾರಿಟಿ ಸೈಂಟ್ ಬಾರ್ಥೋಲೋಮಿಯೋ ಕಪಿತಾನಿಯೊ ಆಂಡ್ ವಿನ್ಸೆಂಜಾ ಜೆರೋಸಾ"; ಮ್ಯಾಂಗಲೂರ್: ಸೆಂಟಿನರಿ ಸಾವೆನಿಯರ್ (೧೮೯೮-೧೯೯೮), ಸಿಸ್ಟರ್ಸ್ ಆಫ್ ಚಾರಿಟಿ. ಪುಟಗಳು ೪೭.೪೮,೪೯

೧೪೩. ಭ। ಬರ್ನಾಡೆತ್ ಡಿ.ಸೋಜ, "ಜೆನೆಸಿಸ್ ಆಫ್ ಮ್ಯಾಂಗಲೂರ್ ಪ್ರೊವಿನ್ಸ್" , ಪೂರ್ವೋಕ್ತ, ಪುಟ ೮೩

೧೪೪. ಭ। ವಿಸೀತಾ ರೊಡ್ರಿಗಸ್, "ಎ ಬರ್ಡ್ಸ್ ಐ ವ್ಯೂ ಆಫ್ ಅವರ್ ಎಜುಕೇಷನಲ್ ಕಾಂಟ್ರಿಬ್ಯೂಷನ್" ಪೂರ್ವೋಕ್ತ , ಪುಟ ೧೧೫

೧೪೫. ಎಡಿಟೋರಿಯಲ್ ಬೋರ್ಡ್ ಸಿಸ್ಟರ್ಸ್ ಆಫ್ ಚ್ಯಾರಿಟಿ, ಪ್ಲಾಟಿನಂ ಜುಬಿಲಿ ಆಫ್ ಮ್ಯಾಂಗಲೂರ್ ಪ್ರೋವಿನ್ಸ್ (೧೯೩೬-೨೦೧೧), ಪುಟ ೧೭

೧೪೬. ಅದೇ, ಪುಟಗಳು ೨೭- ೩೧

೧೪೭. ಎಡಿಟೋರಿಯಲ್ ಬೋರ್ಡ್ ಸಿಸ್ಟರ್ಸ್ ಆಫ್ ಚ್ಯಾರಿಟಿ, ಪ್ಲಾಟಿನಂ ಜುಬಿಲಿ ಆಫ್ ಮ್ಯಾಂಗಲೂರ್ ಪ್ರೋವಿನ್ಸ್ (೧೯೩೬-೨೦೧೧), ಪುಟ ೫೦

೧೪೮. ಅದೇ, ಪುಟ ೪೮

೧೪೯. ಎಡಿಟೋರಿಯಲ್ ಬೋರ್ಡ್, ಫಿಫ್ಟಿ ಇಯರ್ಸ್ ಆಫ್ ಮ್ಯಾಂಗಲೂರ್ ಪ್ರೋವಿನ್ಸ್ (೧೯೩೬-೧೯೮೬), ಸಿಸ್ಟರ್ ಆಫ್ ಚಾರಿಟಿ ಪುಟಗಳು ೩೨- ೩೫

೧೫೦. ಅದೇ, ಪುಟಗಳು ೩೭- ೩೯

೧೫೧. ಫಿಫ್ಟಿ ಇಯರ್ಸ್ ಆಫ್ ಮ್ಯಾಂಗಲೂರ್ ಪ್ರೋವಿನ್ಸ್ ( ೧೯೩೬-೧೯೮೬),ಪೂರ್ವೋಕ್ತ ಪುಟಗಳು ೪೨- ೪೫

೧೫೨. ಅದೇ, ಪುಟಗಳು ೬೫- ೬೭

೧೫೩. ಎಡಿಟೋರಿಯಲ್ ಬೋರ್ಡ್ ಸಿಸ್ಟರ್ಸ್ ಆಫ್ ಚ್ಯಾರಿಟಿ, ಪ್ಲಾಟಿನಂ ಜುಬಿಲಿ ಆಫ್ ಮ್ಯಾಂಗಲೂರ್ ಪ್ರೋವಿನ್ಸ್ (೧೯೩೬-೨೦೧೧), ಪುಟ ೭೮

೧೫೪. ಅದೇ, ಪುಟ ೭೯

೧೫೫. ಫಿಫ್ಟಿ ಇಯರ್ಸ್ ಆಫ್ ಮ್ಯಾಂಗಲೂರ್ ಪ್ರೋವಿನ್ಸ್ (೧೯೩೬-೧೯೮೬), ಪೂರ್ವೋಕ್ತ ಪುಟಗಳು ೭೧- ೭೩

೧೫೬. ಅದೇ, ಪುಟಗಳು ೧೦೮, ೧೧೧

೧೫೭. ಅದೇ, ಪುಟಗಳು ೧೨೩, ೧೨೪, ೧೨೬

೧೫೮. ಅದೇ, ಪುಟಗಳು ೧೪೦, ೧೪೧, ೧೪೩

೧೫೯. ಅದೇ, ಪುಟಗಳು ೧೪೫- ೧೪೮

೧೬೦. ಎಡಿಟೋರಿಯಲ್ ಬೋರ್ಡ್ ಸಿಸ್ಟರ್ಸ್ ಆಫ್ ಚ್ಯಾರಿಟಿ, ಪ್ಲಾಟಿನಂ ಜುಬಿಲಿ ಆಫ್ ಮ್ಯಾಂಗಲೂರ್ ಪ್ರೋವಿನ್ಸ್ (೧೯೩೬-೨೦೧೧), ಮಂಗಳೂರು, ಪುಟ ೧೦೦

೧೬೧. ಭ। ವಿನೀತಾ ರೋಡ್ರಿಗಸ್, ಪೂರ್ವೋಕ್ತ,, ಪುಟ ೧೨೦

೧೬೨. ಅದೇ, ಪುಟ ೧೨೧

೧೬೩. ಅದೇ ,ಪುಟಗಳು ೧೨೪, ೧೨೫

೧೬೪. ಎಡಿಟೋರಿಯಲ್ ಬೋರ್ಡ್ ಸಿಸ್ಟರ್ಸ್ ಆಫ್ ಚ್ಯಾರಿಟಿ, ಪ್ಲಾಟಿನಂ ಜುಬಿಲಿ ಆಫ್ ಮ್ಯಾಂಗಲೂರ್ ಪ್ರೋವಿನ್ಸ್ (೧೯೩೬-೨೦೧೧), ಪುಟ ೪೩

೧೬೫. ಅದೇ, ಪುಟ ೭೮

೧೬೬. ಎಡಿಟೋರಿಯಲ್ ಬೋರ್ಡ್ ಸಿಸ್ಟರ್ಸ್ ಆಫ್ ಚ್ಯಾರಿಟಿ, ಪ್ಲಾಟಿನಂ ಜುಬಿಲಿ ಆಫ್ ಮ್ಯಾಂಗಲೂರ್ ಪ್ರೋವಿನ್ಸ್ (೧೯೩೬-೨೦೧೧), ಪುಟ ೬೩

೧೬೭. ಸೆಂಟಿನರಿ ಸಾವೆನಿಯರ್ (೧೮೯೮-೧೯೯೮) ,ಸಿಸ್ಟರ್ಸ್ ಆಫ್ ಚ್ಯಾರಿಟಿ, ಮ್ಯಾಂಗಲೂರ್ ಪುಟ ೬೫

೧೬೮. ವಲೇರಿಯನ್ ಮೊರಾಸ್, 'ಶೈಕ್ಷಣಿಕ ಕ್ರಾಂತಿಯಲ್ಲಿ ಕಥೋಲಿಕ ಶಿಕ್ಷಣ ಮಂಡಳಿಯ ಪಾತ್ರ ,ಕ.ಶಿ.ಮಂ, ಪೂರ್ವೋಕ್ತ, ಪುಟ ೩೪

೧೬೯. ಪ್ರಶಾಂತ್ ಮಾಡ್ತಾ, "ಶಿಕ್ಷಣ್ ಕ್ಷೇತ್ರಾಂತ್ ಮಂಗ್ಳುರಿ ಕೊಂಕಣಿ ಲೊಕಾನ್ ರಾಷ್ಟ್ರಾಕ್ ದಿಲ್ಲಿ ಕಾಣಿಕ್" (ಕೊಂಕಣಿ) ಮಂಗಳೂರು: ವಿನ್ಸೆಂಟ್ ವಿಕ್ಟರ್ ಮಿನೇಜಸ್ (ಸಂಪಾದಿಸಿದ) ರಾಕ್ಣೊ ಗೋಲ್ಡನ್ ಜ್ಯೂಬಿಲಿ ಸಾವೆನಿಯರ್, ಕೊಡಿಯಲ್‌ಬೈಲ್ ಪ್ರೆಸ್, ೧೯೮೮ ಪುಟ ೨೨

೧೭೦. ಮೊನ್ಸಿಞೊರ್ ಡೆನಿಸ್ ಮೋರಾಸ್ ಪ್ರಭು ಮತ್ತು ಫ್ರಾನ್ಸಿಸ್ ಡಿ ಕುನ್ಹಾ, "ಎಪ್ಪತ್ತೈದರ ಹಿರಿಮೆಯಲ್ಲಿ ಕಥೋಲಿಕ ಶಿಕ್ಷಣ ಮಂಡಳಿ, ಪೂರ್ವೋಕ್ತ, ಪುಟ ೧೯

೧೭೧. ಎಲೋಶಿಯಸ್ ಡಿ.ಸೋಜಾ , " ಶತಮಾನ ದಾಟಿದ ಶಾಲೆಗಳು ", ಎಡಿಟೋರಿಯಲ್ ಬೋರ್ಡ್ ಕ.ಶಿ.ಮಂ, ಪೂರ್ವೋಕ್ತ, ಪುಟಗಳು ೨೬ - ೩೦

೧೭೨. ಪ್ರಶಾಂತ್ ಮಾಡ್ತಾ, ಪೂರ್ವೋಕ್ತ ಪುಟ ೨೨

೧೭೩. ಮಾರ್ಸೆಲಿನ್ ಶೆರಾ , " ೭೫ ವರ್ಸಾಂಚಾ ಜುಬ್ಲೆವಾಚಾ ವಾಟೆರ್ ಮಿಲಾಗ್ರಿಸ್ ಹೈಸ್ಕೂಲ್," ( ಕೊಂಕಣಿ), ಜೆರಾಲ್ಡ್ ಪಿಂಟೋ (ಸಂಪಾದಿಸಿದ) ಮಿಲಾಗ್ರಿಸ್ ೩೨೫ ಸಾವೆನಿಯರ್, ಪ್ಯಾರಿಷ್ ಆಫ್ ಅವರ್ ಲೇಡಿ ಆಫ್ ಮಿರಾಕಲ್ಸ್, ಕಲ್ಯಾಣಪುರ, ಪುಟ ೩೨

೧೭೪. ಫ್ರಾನ್ಸಿಸ್ ಡಿ'ಕುನ್ಹಾ, "ಕಥೋಲಿಕ್ ಶಿಕ್ಷಣ ಮಂಡಳಿಯ ಶಿಕ್ಷಣ ಅಭಿಯಾನ" ಮತ್ತು ಎಲೋಶಿಯಸ್ ಡಿ'ಸೋಜಾ, "ಶತಮಾನ ದಾಟಿದ ಶಾಲೆಗಳು", ಎಡಿಟೋರಿಯಲ್ ಬೋರ್ಡ್(ಸಂಪಾದಿಸಿದ) ಕಥೋಲಿಕ ಶಿಕ್ಷಣ ಮಂಡಳಿ ಅಮೃತೋತ್ಸವ ಸ್ಮರಣ ಸಂಚಿಕೆ(೧೯೩೨-೨೦೦೭), ಮಂಗಳೂರು: ೨೦೦೭ ಪುಟಗಳು ೨೧, ೨೬) ಫ್ರಾನ್ಸಿಸ್ , " ಕಥೋಲಿಕ್ ಶಿಕ್ಷಣ ಮಂಡಳಿಯ ಶಿಕ್ಷಣ ಅಭಿಯಾನ ಯಶೋಗಾಥೆ ",ಎಡಿಟೋರಿಯಲ್ ಬೋರ್ಡ್ ಕ.ಶಿ.ಮಂ., ಪೂರ್ವೋಕ್ತ , ಪುಟ ೨೨

೧೭೫. ಎಲೋಶಿಯಸ್ ಡಿ.ಸೋಜಾ, ಪೂರ್ವೋಕ್ತ ಪುಟ ೮೧

೧೭೬. ಜೆರಾಲ್ಡ್ ಪಿಂಟೊ, 'ಗ್ರಾಮಾಂತರ ಪ್ರದೇಶದ ಉನ್ನತ ಶಿಕ್ಷಣದ ಶಿಲ್ಪಿಗಳು', ಕ.ಶಿ.ಮಂ, ಪೂರ್ವೋಕ್ತ, ಪುಟ ೨೪

೧೭೭. ಮರ್ಸೆಲಿನ್ ಶೆರಾ, ೭೫ ವರ್ಷಾಚರಣೆ ಹಾದಿಯಲ್ಲಿ ಮಿಲಾಗ್ರಿಸ್ ಹೈಸ್ಕೂಲ್, ಮಿಲಾಗ್ರಿಸ್ ೩೨೫, ಪೂರ್ವೋಕ್ತ , ಪುಟ ೩೨

೧೭೮. ವಿ.ಬಿ.ಅರ್ತಿಕಜೆ, ಪೂರ್ವೋಕ್ತ , ಪುಟಗಳು ೧೨,೧೩; ಕ.ಶಿ.ಮಂ. ಪುಟ ೧೨೫

೧೭೯. ಕ.ಶಿ.ಮಂ, ಪುಟ ೧೦೩

೧೮೦. ಅದೇ, ಪುಟ ೭೦

೧೮೧. ವಿ.ಬಿ.ಅರ್ತಿಕಜೆ, ಪುಟಗಳು ೧೩- ೧೫; ಕ.ಶಿ.ಮಂ, ಪುಟ ೧೨೫

೧೮೨. ಸಂಪಾದಕೀಯ ಮಂಡಳಿ, 'ವಜ್ರಯಾನ' ವಜ್ರ ಮಹೋತ್ಸವ ಸ್ಮರಣ ಸಂಚಿಕೆ ೨೦೦೮-೨೦೦೯ ಸಂತ ಫಿಲೋಮಿನಾ ಪ್ರೌಢಶಾಲೆ, ಪುತ್ತೂರು, ಪುಟ ೨

೧೮೩. ಕ.ಶಿ.ಮಂ, ಪುಟಗಳು ೮೫, ೯೪- ೯೬, ೧೦೮, ೧೨೪, ೧೪೫

೧೮೪. ವಿ.ಬಿ.ಅರ್ತಿಕಜೆ, ಪೂರ್ವೋಕ್ತ , ಪುಟ ೨೧

೧೮೫. ವಿ.ಬಿ.ಅರ್ತಿಕಜೆ, ಪುಟಗಳು, ೧೭- ೧೮

೧೮೬. ಮಂಜುಶ್ರೀ ಶೆಟ್ಟಿ, "ಸಂತ ಫಿಲೋಮಿನಾ ಕಾಲೇಜು– ಸಾಧನೆಯ ಚಿತ್ರಗಳು", ಎಡಿಟೋರಿಯಲ್ ಕಮಿಟಿ 'ಫಿಲೋ ಪ್ರಭ', ಸಂತ ಫಿಲೋಮಿನಾ ಕಾಲೇಜು ಮ್ಯಾಗಝಿನ್ ೨೦೦೨-೨೦೦೩, ಪುಟ ೧೧೨

೧೮೭. ಅದೇ ,ಪುಟ ೧೧೨

೧೮೮. ಗ್ರೇಸಿ ಮಾರ್ಟಿಸ್, " ಮಿಲಾಗ್ರಿಸ್ ಕಾಲೇಜು" , ಜೆರಾಲ್ಡ್ ಪಿಂಟೋ ,(ಸಂಪಾದಿಸಿದ) ಮಿಲಾಗ್ರಿಸ್ ೩೨೫, ಪುಟಗಳು ೩೬, ೩೭

೧೮೯. ಕ.ಶಿ.ಮಂ, ಪುಟ ೧೩೨

೧೯೦. ಅದೇ, ಪುಟ ೯೨

೧೯೧. ಕ.ಶಿ.ಮಂ. ಪೂರ್ವೋಕ್ತ , ಪುಟ ೨೨

೧೯೨. ಎಫ್.ಎ.ಸಿ.ರೆಬೆಲ್ಲೊ, "ರೂರಲ್ ಎಜುಕೇಷನ್" , ಎಂ.ಎಂ. ಸಂಪುಟ ೬, ೧೯೨೫, ಪುಟಗಳು ೧- ೩

೧೯೩. ಡೈರೆಕ್ಟರಿ ೨೦೧೧, ಡಯಾಸಿಸ್ ಆಫ್ ಮ್ಯಾಂಗಲೂರ್, ಪುಟ ೧೯೭

೧೯೪. ಬೆನೆಟ್‌ಜಿ. ಅಮ್ಮನ್ನ, ವಾಮಂಜೂರು ಪರಿಸರ ಮತ್ತು ಪ್ರೊಟೆಸ್ಟೆಂಟ್ ಕ್ರೈಸ್ತರ ಸಿ.ಎಸ್.ಐ.ಪೀಟರ್ ಸ್ಮಾರಕ ಸಭೆ, ಸಂಕ್ಷಿಪ್ತ ಪರಿಚಯ, ಪೀಟರ್ ಸ್ಮಾರಕ ದೇವಾಲಯ ಸ್ಮರಣ ಸಂಚಿಕೆ, ೨೦೧೧, ಪುಟ ೩೬

೧೯೫. www.sandesha college.com.

೧೯೬. ರಮಾನಾಥ ಕೋಟೆಕಾರ್, ಗುರುತು ವಿಶೇಷಾಂಕ, ಡಿಸೆಂಬರ್ ೨೦೦೯, ಪುಟ ೮೯

೧೯೭. ಪದ್ಮಶ್ರೀ, "ಬಾಸೆಲ್ ಮಿಷನ್ ಅಂಡ್ ಎಂಡ್ ಎಜುಕೇಷನ್ ಇನ್ ಸೌತ್ ಕೆನರಾ (೧೮೩೪- ೧೯೪೭)"ಅಪ್ರಕಟಿತ ಎಂ.ಫಿಲ್, ಸಂಪ್ರಬಂಧ ಮಧುರೈ ಕಾಮರಾಜ್ ವಿಶ್ವ ವಿದ್ಯಾಲಯ, ೨೦೦೪, ಪುಟ ೨೮

೧೯೮.ಪ್ರಶಾಂತ್ ಮಾಡ್ತಾ, ಪೂರ್ವೋಕ್ತ, ಪುಟ ೨೨
೧೯೯. ಓಡ್ರಿನ್ ಡಿ.ಸೋಜಾ , ಸಂಪಾದಿಕೀಯ ಮಂಡಳಿ ಕ.ಶಿ.ಮಂ, ಪೂರ್ವೋಕ್ತ, ಪುಟ ೧೫೮
೨೦೦. ಭ। ಗ್ರೇಸ್ ಮರಿಯಾ, ಬಿ.ಎಸ್, "ಎ ಗ್ರೇಟ್ ಲುಮಿನರಿ ಮೊ। ರೇಮಂಡ್ ಎಫ್.ಸಿ ಮಸ್ಕರೇನ್ಹಸ್", ಇಂಟೆಕ್ ಪ್ರಿಂಟರ್ ಆಂಡ್ ಪಬ್ಲಿಷರ್, ಕರ್ನಾಲ್, ಹರಿಯಾಣ, ೨೦೧೦, ಪುಟಗಳು ೫- ೨೪
೨೦೧.ಭ। ಬರ್ಥ ಬಿ. ಎಸ್., "ಅವರ್ ಫೌಂಡರ್ ಎ ಗ್ರೇಟ್ ಎಜುಕೇಷನಿಸ್ಟ್", ಪೂರ್ವೋಕ್ತ, ಪುಟಗಳು ೨೮, ೨೯
೨೦೨. ಭ।ಎಂ. ಜ್ಯೋತಿ ಬಿ.ಎಸ್., "ಟ್ರಾನ್ಸ್‌ಫೊರ್ಮೆಟಿವ್ ಎಜುಕೇಷನ್ ಫಾರ್ ಫುಲ್‌ನೆಸ್ಸ್ ಆಫ್ ಲೈಫ್", ಬೆಥನಿ ಎಜುಕೇಷನ್ ಸೊಸೈಟಿ ಡೈಮಂಡ್ ಜುಬಿಲಿ ಸಾವೆನಿಯರ್ (೧೯೪೮-೨೦೦೮), ಪುಟಗಳು IV, V
೨೦೩.ಎಂ.ಎಂ. ಸಂಪುಟ .೫, ೧೯೧೩, ಪುಟಗಳು ೩೯೪, ೩೯೫
೨೦೪.ಭ। ಕಾರ್ಮಿನ್ ಬಿ.ಎಸ್., "ದಿ ಪಯೋನಿಯರಿಂಗ್ ವೆಂಚರ್ ಆಫ್ ಬೆಥನಿ", ಪೂರ್ವೋಕ್ತ,ಪುಟಗಳು ೬೨, ೬೩
೨೦೫.ಭ। ಅರುಣ ಸಾವಿಯೋ ಬಿ.ಎಸ್.,"ಟ್ವಿನ್ ಸ್ಕೂಲ್ಸ್ ಆಫ್ ಪುತ್ತೂರು", ಪೂರ್ವೋಕ್ತ, ಪುಟ ೬೫
೨೦೬.ಭ। ಲೀರಾ ಮರಿಯಾ ಬಿ.ಎಸ್., ಅನುದಾನಿತ ಶಾಲಾ ದರ್ಪಣ, ಪೂರ್ವೋಕ್ತ, ಪುಟ ೩೧೫
೨೦೭.ಅದೇ, ಪುಟ ೩೧೮; ಭ। ರೊಸ್ಲಿಟಾ ಬಿ.ಎಸ್., "ದಿ ಫಸ್ಟ್ ಹೈಸ್ಕೂಲ್ ಆಫ್ ಬೆಥನಿ"; ಬಿ.ಇ.ಎಸ್.ಜಿ.ಜೆ.ಎಸ್, ಪುಟಗಳು ೬೬, ೬೭
೨೦೮.ಭ। ತೆರೆಸಿನ್ ಬಿ.ಎಸ್.,"ರೋಸಾ ಮಿಸ್ಟಿಕಾ ಎ ಕ್ರೆಡಲ್ ಆಫ್ ಎಜುಕೇಷನ್", ಬಿಇಎಸ್ ಜಿಜೆಎಸ್, ಪುಟ ೮೦; ಅನುದಾನಿತ ಶಾಲಾ ದರ್ಪಣ, ಪೂರ್ವೋಕ್ತ, ಪುಟ ೩೨೦
೨೦೯. ಅನುದಾನಿತ ಶಾಲಾ ದರ್ಪಣ ಪೂರ್ವೋಕ್ತ, ಪುಟ ೩೨೪
೨೧೦.ಅನುದಾನಿತ ಶಾಲಾ ದರ್ಪಣ, ಪೂರ್ವೋಕ್ತ, ಪುಟ ೩೨೧
೨೧೧. ಭ। ಮೇರಿ ಆಂಜ್ ಬಿ. ಎಸ್., "ಎ ಜ್ಯೋತಿ ಎಟ್ ದಿ ಫ್ರಿಂಜಸ್ ಆಫ್ ಮಲ್ನಾಡ್", ಪೂರ್ವೋಕ್ತ ಪುಟ ೯೨
೨೧೨. ಭ। ಗ್ಲಾಡಿಸ್ ಬಿ.ಎಸ್., "ಎ ಸ್ವೀಟ್ ಹೋಮ್ ಫಾರ್ ದಿ ಗರ್ಲ್ ಚೈಲ್ಡ್", ಪೂರ್ವೋಕ್ತ, ಪುಟ ೯೨
೨೧೩. ಭ। ಕ್ರಿಸ್ಟೆಲ್ಲಾ ಬಿ.ಎಸ್., "ಎ ಟ್ರಿಬ್ಯೂಟ್ ಟು ದಿ ಫೌಂಡರ್", ಪೂರ್ವೋಕ್ತ, ಪುಟ ೧೦೭; ಅನುದಾನಿತಾ ಶಾಲಾ ದರ್ಪಣ, ಪೂರ್ವೋಕ್ತ, ಪುಟ ೩೨೭
೨೧೪. ಭ। ತೆರೆಸಿನ್ ಬಿ.ಎಸ್., ಪೂರ್ವೋಕ್ತ, ಪುಟ ೮೧
೨೧೫. ಭ। ಮೇರಿ ಆಂಜ್ ಬಿ.ಎಸ್., ಪೂರ್ವೋಕ್ತ, ಪುಟ ೯೨
೨೧೬. ಭ। ಗ್ರೇಸ್ ಮರಿಯಾ, ಬಿ.ಎಸ್., ಪೂರ್ವೋಕ್ತ, ಪುಟಗಳು ೨೫- ೨೭
೨೧೭. ಭ। ಕ್ವಾಡ್ರಸ್ ಸ್ಟೀವನ್, 'ಹೊಂಬೆಳಕು', ಬೆಥನಿ ಶಿಕ್ಷಣ ಸಂಸ್ಥೆ (ರಿ) ಮಂಗಳೂರು, ೨೦೧೨, ಪುಟಗಳು ೧೩, ೧೪
೨೧೮. ಅದೇ, ಪುಟಗಳು ೭,೮
೨೧೯. ಭ। ಗ್ರೇಸ್ ಮರಿಯಾ, ಬಿ.ಎಸ್., ಪೂರ್ವೋಕ್ತ, ಪುಟಗಳು ೧ - ೨೯
೨೨೦.ಅದೇ, ಪುಟಗಳು ೩೦, ೩೧
೨೨೧. ಭ। ಫ್ಲೋರಿನ್ ಡಿ'ಸಿಲ್ವಾ, "ದ ಓರಿಜಿನ್ ಆಫ್‌ದ ಸಿರಿಯನ್ ಕ್ರಿಶ್ಚಿಯನ್ಸ್ ಎಟ್ ಬ್ರಹ್ಮಾವರ್ ಆಂಡ್ ಇಟ್ಸ್ ಕಲ್ಚರಲ್ ಸ್ಟಡಿ" ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ, ಅಳಗಪ್ಪ ವಿಶ್ವವಿದ್ಯಾಲಯ, ೨೦೦೮, ಪುಟಗಳು ೪೦೫
೨೨೨. ಅದೇ, ಪುಟಗಳು ೨೨- ೨೯
೨೨೩. ಥೋಮಸ್ ಡಿ.ಸೋಜಾ, " ಸೈಂಟ್ ಮೇರಿಸ್ ಸೀರಿಯನ್ ಕ್ಯಾಥೆಡ್ರಲ್‌ನ ಇತಿಹಾಸ- ಒಂದು ಸಿಂಹಾಲೋಕನ", ಗೋಲ್ಡನ್ ಜುಬಿಲಿ ಕಮಿಟಿ 'ಸ್ವರ್ಣ ಸಂಪದ', ಎಸ್.ಎಂ. ಎಸ್ ಪದವಿ ಪೂರ್ವ ಕಾಲೇಜಿನ ಸ್ವರ್ಣೋತ್ಸವ ಸ್ಮರಣ ಸಂಚಿಕೆ (೨೦೦೩-೨೦೦೪), ಬ್ರಹ್ಮಾವರ ಶ್ರೇಯಾ ಪ್ರಿಂಟರ್ಸ್, ಉಡುಪಿ, ಪುಟಗಳು ೧೭, ೧೮
೨೨೪. ಫ್ಲೋರಿನ್ ಡಿ.ಸಿಲ್ವಾ, ಪೂರ್ವೋಕ್ತ, ಪುಟ ೧೮
೨೨೫. 'ಸ್ವರ್ಣ ಸಂಪದ', ಪೂರ್ವೋಕ್ತ, ಪುಟ ೧೮

೨೨೬. ಹೆಚ್. ಸದಾಶಿವ ಹೆಗ್ಡೆ, ‘ಮುಗಿಯದ ಅನುಬಂಧ’, ಸ್ವರ್ಣ ಸಂಪದ, ಪೂರ್ವೋಕ್ತ ಪುಟ ೪೩

೨೨೭. ಫ್ಲೋರಿನ್ ಡಿ’ಸಿಲ್ವಾ, ಪೂರ್ವೋಕ್ತ ,ಪುಟಗಳು ೬೬, ೬೭

೨೨೮. ಜೋಸೆಪ್ ಟಿ.ಜೆ., “ಬೆಳ್ತಂಗಡಿ ಧರ್ಮ ಪ್ರಾಂತ್ಯ”, ಸಂಪಾದಕೀಯ ಮಂಡಳಿ ‘ಸೌಹಾರ್ದ ಸಂಪದ’, ಸಾವೆನಿಯರ್ ಡಯಾಸಿಸ್ ಆಫ್ ಬೆಳ್ತಂಗಡಿ, ಉದಯ ಕಮ್ಯೂನಿಕೇಷನ್ಸ್ ಮೀಡಿಯಾ ಸೆಂಟರ್ ಬೆಳ್ತಂಗಡಿ, ೨೦೦೭, ಪುಟಗಳು ೫, ೬

೨೨೯. ರೊನಾಲ್ಡ್ ಕುಟಿನ್ಹೊ, (ಸಂಪಾದಿಸಿದ) “ಏಕತಾ” ದ ಡೈರೆಕ್ಟರಿ ಅಫ್ ದ ಕ್ರಿಶ್ಚಿಯನ್ ಚರ್ಚ್‌ಸ್ ಇನ್ ದಕ್ಷಿಣ ಕನ್ನಡ ಆಂಡ್ ಉಡುಪಿ ಡಿಸ್ಟ್ರಿಕ್ಟ್ಸ್, ಕೊಡಿಯಾಲ್ ಬೈಲ್ ಪ್ರೆಸ್ ೨೦೦೩, ಪುಟ ೨೦೦: ಡೈರೆಕ್ಟರಿ ೨೦೧೧ ಡಯಾಸಿಸ್ ಆಫ್ ಬೆಳ್ತಂಗಡಿ, ಪುಟಗಳು ೨೫, ೨೬

೨೩೦.ಡೈರೆಕ್ಟರಿ ೨೦೧೧, ಪೂರ್ವೋಕ್ತ, ಪುಟಗಳು ೬೫- ೬೮

೨೩೧. ಜೋಸೆಪ್ ಟಿ.ಜೆ, ಪೂರ್ವೋಕ್ತ, ಪುಟಗಳು ೬- ೭

೨೩೨. ಕ್ರಾಂತಿ ಪೂರ್ವೋಕ್ತ ಪುಟ ೧೧೭

೨೩೩. ಕ್ರಾಂತಿ ಪೂರ್ವೋಕ್ತ ಪುಟ ೧೧೮

೨೩೪. ಝೇವಿಯರ್ ಟೆಕ್ನಿಕಲ್ ಇನ್ಸ್ಟಿಟ್ಯೂಟ್, ಮುಕ್ಕಾ “ಮ್ಯಾಂಗಲೂರ್”, ಪ್ಲಾಟಿನಂ ಜೂಬಿಲಿ ಸೌವನೀಯರ್, ಮೇ ೧೯೯೦ ಪುಟ ೫೧

೨೩೫. ಎಡಿಟೋರಿಯಲ್ ಬೋರ್ಡ್, ಲಿಟ್ಲ್‌ರಾಕ್ ಸಿಲ್ವರ್ ಜುಬಿಲಿ ಸಾವೆನಿಯರ್ ( ೨೦೦೬-೨೦೦೭), ಪುಟಗಳು ೯- ೧೨

೨೩೬. ಬಿ.ಎಂ.ಆರ್ – ೧೮೫೨, ಪುಟಗಳು ೧೪, ೧೭

೨೩೭. ಕ್ರಾಂತಿ, ಕೆ. ಫರಾಯಸ್ ಪುಟ ೧೦೫

೨೩೮. ಎಲೋಶಿಯಸ್ ಡಿಸೋಜ, ‘ಶತಮಾನದ ದಾಟಿದ ಶಾಲೆಗಳು’,ಕ.ಶಿ.ಮಂ. ಅಮೃತೋತ್ಸವ ಸ್ಮರಣ ಸಂಚಿಕೆ (೧೯೩೨-೨೦೦೭), ಮಂಗಳೂರು, ಪುಟ ೨೬

೨೩೯. ಕ್ರಾಂತಿ, ಪುಟ ೧೧೫

೨೪೦.ಪ್ರಶಾಂತ್ ಮಾಡ್ತಾ, ಪೂರ್ವೋಕ್ತ, ಪುಟ ೨೪

೨೪೧. ಎಂ.ಎ.ಸಲ್ಡಾನ, ‘ದಿ ಅಪೋಸ್ತಲಿಕ್ ಆಂಡ್ ಐ’, ದಿ ಹಂಡ್ರೇಡ್ ಇಯರ್ಸ್ ಆಫ್ ದಿ ಅಪೋಸ್ತಲಿಕ್ ಕಾರ್ಮೆಲ್ ಇನ್ ಇಂಡಿಯಾ, ಪುಟಗಳು ೩೮- ೪೦

೨೪೨. ಎಡಿಟೋರಿಯಲ್ ಬೋರ್ಡ್ ಸೈಂಟ್ ಎಲೋಶಿಯಸ್ ಕಾಲೇಜ್ ಆ್ಯನ್ವಲ್ ೧೯೫೫, ಪುಟಗಳು ೧, ೨

೨೪೩. ವಿಶಾಂಜ್ ಪಿಂಟೋ ಪೂರ್ವೋಕ್ತ ಪುಟ ೯೨

೨೪೪. ವಿಶಾಂಜ್ ಪಿಂಟೋ ಪೂರ್ವೋಕ್ತ ಪುಟಗಳು ೧೦೪-೧೦೫

೨೪೫. ಮಾರ್ಕ್ ವಾಲ್ಡಾರ್ , ಪೂರ್ವೋಕ್ತ , ಪುಟ ೩೮೮

## ಅಧ್ಯಾಯ -೩

# ಆರೋಗ್ಯ

ಸ್ಥಳೀಯರ ಮನಸ್ಸಿನ ಹಾಗೂ ಹೃದಯದ ಬಾಗಿಲನ್ನು ತೆರೆಯಲೆಂದು ಮಿಶನರಿಗಳು ವೈದ್ಯಕೀಯ ಸೇವೆಯನ್ನು ಪ್ರಾರಂಭಿಸಿದರು. ಕಾಯಿಲೆಗಳನ್ನು ಗುಣಪಡಿಸುವುದರೊಂದಿಗೆ ಯೇಸು ಸ್ವಾಮಿಯ ಮೇಲಿನ ಭಕ್ತಿಯನ್ನು ಹರಡುವುದಕ್ಕಾಗಿಯೂ ವೈದ್ಯಕೀಯ ಕ್ಷೇತ್ರದ ಬಳಕೆಯಾಯಿತು. ಮಿಶನರಿಗಳ ಧಾರ್ಮಿಕ ಚಟುವಟಿಕೆಯಲ್ಲಿ ಪ್ರಧಾನವಾಗಿದ್ದ ಧರ್ಮ ಪರಿವರ್ತನೆ ಮತ್ತು ಕ್ರೈಸ್ತ ವಲಯವನ್ನು ಒಮ್ಮೆ ಹೊಕ್ಕವರು ಮತ್ತೆ ಮೂಲ ಧರ್ಮದತ್ತ ಮರಳದಂತೆ ತಡೆಯುವ ಎರಡೂ ಉದ್ದೇಶಗಳು ವೈದ್ಯಕೀಯ ಸೇವೆಯಿಂದಾಗಿ ಈಡೇರಿದುವು. ರೋಗಿಗಳನ್ನು ಗುಣಪಡಿಸಲು ಹಾಗೂ ಕ್ರೈಸ್ತ ಧರ್ಮ ಪ್ರಸಾರಕ್ಕೆ ಆಸ್ಪತ್ರೆಗಳು ಅನುಕೂಲಕರವಾದ ಸ್ಥಳಗಳೆಂದು ಪರಿಗಣಿಸಲಾಗಿತ್ತು. ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದವರನ್ನು ಉಳಿಸಿ ಬಳಿಕ ಅವರಿಗೆ ಜ್ಞಾನಸ್ನಾನ ಕೊಡಿಸಿದ ಉದಾಹರಣೆಗಳು ಎಷ್ಟೋ ಇವೆ. ಇಂತಹ ಘಟನೆಗಳು ಮಿಶನರಿಗಳಿಗೆ ವೈದ್ಯಕೀಯ ಸೇವೆಯನ್ನು ಕೇವಲ ಮಾನವೀಯತೆಯ ದೃಷ್ಟಿಯಿಂದಲೂ, ಧರ್ಮ ಪರಿವರ್ತನೆಗೆ ಮುಕ್ತ ಅವಕಾಶ ಕಲ್ಪಿಸುವ ಕಾರಣಕ್ಕಾಗಿಯೂ ಕೈಗೆತ್ತಿಕೊಳ್ಳಲು ಪ್ರೇರಕವಾದುವು. ಕಾಯಿಲೆಯಿಂದ ಸಂಪೂರ್ಣವಾಗಿ ಸೊರಗಿ ಹಾಸಿಗೆ ಹಿಡಿದಿರುವವರಿಗೆ ಶುಭಸಂದೇಶದ ಮಾತುಗಳು ಗುಣಪಡಿಸುವ ಮುಲಾಮಿನಂತೆ ಭಾಸವಾದುವು.[೧] ನಾಗರಿಕತೆಯ ಆರಂಭದಿಂದಲೂ ಮಾನವನು ರೋಗ ರುಜಿನಗಳೊಂದಿಗೆ ನಿರಂತರ ಸಂಘರ್ಷವನ್ನು ಮಾಡುತ್ತಾ ಬಂದಿರುತ್ತಾನೆ. ಕ್ರೈಸ್ತ ಮಿಶನರಿಗಳು ಭಾರತಕ್ಕೆ ಬಂದಾಗ ಅವರು, ಅಂದಿನ ವೈದ್ಯಕೀಯ ಸೌಲಭ್ಯಗಳ ಅಭಾವದ ಭಯಂಕರವಾದ ಪರಿಸ್ಥಿತಿಯನ್ನು ಮನಗಂಡು, ಭಾರತದಲ್ಲಿ ವೈದ್ಯಕೀಯ ಸೇವೆಯನ್ನು ಆರಂಭಿಸಿದರು[೨].

### ೩.೧. ಉದ್ದೇಶ

ಮಿಶನ್‌ಗಳು ಭಾರತದಲ್ಲಿ ವೈದ್ಯಕೀಯ ಸೇವೆಯನ್ನು ಆರಂಭಿಸಲು ಕಾರಣವಾದ ಅಂಶಗಳು ಹೀಗಿವೆ:

೧. ಯೋಗ್ಯವಾದ ಔಷಧೋಪಚಾರಗಳ ಮತ್ತು ವೈದ್ಯರ ಕೊರತೆಯಿಂದಾಗಿ ಸಾವಿರಾರು ಜನರು ಮಾರಕ ರೋಗಗಳಿಗೆ ಬಲಿಯಾಗುತ್ತಾರೆ. ಅಂಥವರ ಪ್ರಾಣವನ್ನು ರಕ್ಷಿಸುವ ಉದ್ದೇಶದಿಂದ ಕ್ರೈಸ್ತ ಮಿಶನರಿಗಳು ಆಸ್ಪತ್ರೆಗಳನ್ನು ತೆರೆಯಬೇಕಾಯಿತು.

೨. ಭಾರತದಲ್ಲಿ ಧಾರ್ಮಿಕ ನಂಬಿಕೆಗೂ ರೋಗಕ್ಕೂ ನಿಕಟವಾದ ಸಂಬಂಧವಿದೆ. ಸಾಂಕ್ರಾಮಿಕ ರೋಗಗಳು ಬಂದಾಗ ಅದು ದೇವರ ಕೋಪದ ಫಲವೆಂದು ಜನರು ನಂಬುತ್ತಿದ್ದರು. ರೋಗ ಪರಿಹಾರಕ್ಕಾಗಿ ದೇವರನ್ನು ಶಾಂತ ಮಾಡಬೇಕು, ದೇವರಿಗೆ ಬಲಿ ಅರ್ಪಿಸಬೇಕು ಎಂಬಿತ್ಯಾದಿ ಅಂಧ ಭಕ್ತಿ ಹಾಗೂ ಮೂಢನಂಬಿಕೆಗಳಿಂದ ಜನರನ್ನು ಪಾರು ಮಾಡಲು ಮಿಶನರಿಗಳು ವೈದ್ಯಕೀಯ ಸೇವೆಯನ್ನು ಹಮ್ಮಿಕೊಳ್ಳಬೇಕಾಯಿತು.

### ೩. ೨. ವೈದ್ಯಕೀಯ ಸೇವೆಯಲ್ಲಿ ಮಿಶನರಿ ಸಂಸ್ಥೆಗಳು

ಸೈಂಟ್ ಫ್ರಾನ್ಸಿಸ್ ಕ್ಷೇವಿಯರ್ ಅವರ ಮರಣಾನಂತರ, ಜಗದ್ಗುರುಗಳು ಪೋರ್ಚುಗೀಸರ ಆಳ್ವಿಕೆಗೊಳಪಟ್ಟಿದ ಪ್ರದೇಶಗಳನ್ನು ಧರ್ಮಪ್ರಸಾರಣೆಗಾಗಿ ಬೇರೆ ಬೇರೆ ಧಾರ್ಮಿಕ ಸಭೆಗಳಿಗೆ ಒಪ್ಪಿಸಿದರು. ಹೀಗಿರುವಾಗ, ಗೋವಾದ ಮಹಾ ಧರ್ಮಾಧ್ಯಕ್ಷರಾದ ಗಾಸ್ಪರ್ ಡಿ ಲಿಯೋ ಪಿರೇರಾ ಅವರ (೧೫೫೮-೧೫೭೬) ಕಾಲಾವಧಿಯಲ್ಲಿ ಗೋವಾದ ಯೇಸುಸಭೆಯ ಮುಖ್ಯಸ್ಥರಾದ ಫಾ। ವಿನ್ಸೆಂಟ್‌ರವರು ಕೆಲವು ಮಿಶನರಿಗಳನ್ನು ಮಂಗಳೂರು, ಹೊನೊರ್ (ಹೊನ್ನಾವರ) ಮತ್ತು ಬಾರ್ಸೆಲೋರ್‌ಗೆ (ಬಸ್ರೂರು) ಕಳುಹಿಸಿದರು. ಹೀಗೆ, ಬಾರ್ಸೆಲೋರಿಗೆ ಕಳುಹಿಸಲ್ಪಟ್ಟಿದ್ದ ಯೇಸುಸಭೆಯ ಫಾ। ತೆಮುದೊರವರು (Temudo) ಮಂಗಳೂರು, ಹೊನೊರ್ ಹಾಗೂ ಬಾರ್ಸೆಲೋರ್‌ಗಳಲ್ಲಿ ಆಸ್ಪತ್ರೆಗಳನ್ನು ಸ್ಥಾಪಿಸಿದರು ಎಂದು ಹೇಳುತ್ತಾರೆ.[೩] ಪೋರ್ಚುಗೀಸ್‌ರ ವೈಸ್‌ರಾಯ್ ಡಾಮ್ ಆಂಟಾವೊ ಡಿ ನೊರೋನ್ಹಾ ಅವರು ನೇತ್ರಾವತಿ ನದಿಯ ದಡದಲ್ಲಿ ಎತ್ತರವಾದ ಸಮತಟ್ಟು ಪ್ರದೇಶದ ಬೋಳಾರದಲ್ಲಿ ಕೋಟೆಯೊಂದನ್ನು ಕಟ್ಟಿಸಿ, ಅದನ್ನು ಸೈಂಟ್ ಸೆಬಾಸ್ಟಿಯನ್ ಎಂದು ಹೆಸರಿಸಿದರು. ಏಕೆಂದರೆ ಇದರ ಮೊದಲ ಅಡಿಗಲ್ಲನ್ನು ಆ ಸಂತನ ದಿನದಂದು (೨೦ ಜೂನ್ ೧೫೬೮) ಹಾಕಲಾಗಿತ್ತು. ಆ ಕೋಟೆಯು ನಿರ್ಮಾಣ ಹಂತದಲ್ಲಿದ್ದಾಗ ಫ್ರಾನ್ಸಿಸ್ಕನ್ ಕಾರ್ಮೆಲೈಟ್ ಧರ್ಮಗುರುಗಳ ಔದಾರ್ಯದ ಫಲವಾಗಿ ಆಸ್ಪತ್ರೆಯೊಂದನ್ನು ತೆರೆದು, ಅನಾರೋಗ್ಯ ಪೀಡಿತರ ದೈಹಿಕ ಹಾಗೂ ಆಧ್ಯಾತ್ಮಿಕ ಅಗತ್ಯಗಳನ್ನು ಪೂರೈಸಲಾಗುತ್ತಿತ್ತು ಎನ್ನಲಾಗುತ್ತದೆ.[೪]

ಆದರೆ, ಭಾರತಕ್ಕೆ ಮೊದಲ ಮಿಶನರಿ ವೈದ್ಯನನ್ನು ಕಳುಹಿಸಿದ ಕೀರ್ತಿ ಟ್ರಾಂಕ್ವೆಬಾರ್ ಡ್ಯಾನಿಷ್ ಮಿಶನ್ನಿಗೆ ಸಲ್ಲುತ್ತದೆ. ಕ್ಯಾಸ್ಪರ್ ಸ್ಲೆಗೆಲ್ ಮಿಲ್ಸ್ ಎಂಬವರು ೧೨ ಜುಲೈ ೧೭೩೦ರಂದು ಮೊದಲ ವೈದ್ಯ ಮಿಶನರಿಯಾಗಿ ಮದ್ರಾಸಿಗೆ ಬಂದರು.[೫] ಆದರೆ ವ್ಯವಸ್ಥಿತ ರೀತಿಯಲ್ಲಿ ಕೆಲಸ ಮಾಡುವ ದೃಷ್ಟಿಯಿಂದ

ತರಬೇತಿ ಪಡೆದ ತಜ್ಞ ವೈದ್ಯ ಮಿಶನರಿಗಳನ್ನು ಭಾರತಕ್ಕೆ ಕಳುಹಿಸಿದ್ದು ಅಮೇರಿಕನ್ ಬೋರ್ಡಿನವರು. ೧೮೩೬ರಲ್ಲಿ ಜಾನ್ ಸ್ಕಡ್ಡರ್ ಎಂಬವರು ವೈದ್ಯ ಮಿಶನರಿಯಾಗಿ ಮದ್ರಾಸಿಗೆ ಬಂದರು. ವೈದ್ಯರಾದ ಸ್ಟೀಲ್ (೧೮೩೭-೧೮೪೨) ಹಾಗೂ ಚಾರ್ಲ್ಸ್ ಸೆಲ್ಡಾಸ್ (೧೮೪೯-೧೮೫೦) ಎಂಬ ಈರ್ವರು ಅಮೇರಿಕನ್ ಬೋರ್ಡಿನ ಆಶ್ರಯದಲ್ಲಿ ವೈದ್ಯ ಮಿಶನರಿಗಳಾಗಿ ಮಧುರೈನಲ್ಲಿ ಸೇವೆ ಸಲ್ಲಿಸಿದರು. ಲಂಡನ್ ಮಿಶನ್‌ನವರು ದಕ್ಷಿಣ ಟ್ರಾವಂಕೂರಿನಲ್ಲಿರುವ ನಯ್ಯುರ ಎಂಬಲ್ಲಿ ೧೮೩೮ರಲ್ಲಿ ವೈದ್ಯರುಗಳಾದ ರಾಮಸೆ (೧೮೩೮-೧೮೪೨) ಹಾಗೂ ಲೈಥ್‌ರವರ (೧೮೫೨-೧೮೫೪) ಮೂಲಕ ವೈದ್ಯಕೀಯ ಸೇವೆಯನ್ನು ಆರಂಭಿಸಿದರು.

'ಸುವಾರ್ತೆ ಸಾರು ಮತ್ತು ವಾಸಿ ಮಾಡು' ಎಂಬ ಧ್ಯೇಯ ವಾಕ್ಯದೊಂದಿಗೆ ಸ್ಕಾಟಿಷ್ ಯುನೈಟೆಡ್ ಪ್ರೇಸ್ಬಿಟೇರಿಯನ್ ಮಿಶನ್‌ನವರು ರಾಜಸ್ಥಾನದಲ್ಲಿ ತಮ್ಮ ವೈದ್ಯಕೀಯ ಸೇವೆಯನ್ನು ಆರಂಭಿಸಿದರು. ವೈದ್ಯ ಸೌವಾರ್ತಿಕರಾದ ಸ್ಕೂಲ್ ಬ್ರೆಡ್ ಮತ್ತು ಕಾಲಿನ್ ವೆಲೆಂಟಾಯ್ನ್ ಎಂಬವರು ರಾಜಸ್ಥಾನದ ಹಳ್ಳಿ ಹಳ್ಳಿಗಳಿಗೆ ಔಷಧಿ ಪೆಟ್ಟಿಗೆಗಳನ್ನು ಹಿಡಿದುಕೊಂಡು ಹೋಗಿ ರೋಗಿಗಳನ್ನು ಗುಣಪಡಿಸುತ್ತಾ ಸುವಾರ್ತೆ ಸಾರಲಾರಂಭಿಸಿದರು. ವೈದ್ಯಕೀಯ ಸೇವೆಯು ಜೀವಾರ್ (೧೮೬೨), ಅಜ್ಮೀರ್ ಮತ್ತು ಸಜೀರಾಬಾದ್ (೧೮೭೩), ಉದಯಪುರ (೧೮೭೭) ಹಾಗೂ ಜೋಧಪುರಗಳಲ್ಲಿ ಆಸ್ಪತ್ರೆಗಳನ್ನು ಸ್ಥಾಪಿಸುವುದರೊಂದಿಗೆ ಪ್ರಾರಂಭವಾಯಿತು. ಫ್ರೀ ಚರ್ಚ್ ಆಫ್ ಸ್ಕಾಟ್‌ಲ್ಯಾಂಡ್ ಮಿಶನ್ ಆಸ್ಪತ್ರೆಗಳನ್ನು ಮದರಾಸು (೧೮೫೭),ಪಂಜಾಬ್ (೧೮೫೧), ಟುಂಡಿ (೧೮೪೯), ಚಕೈ (೧೮೯೦), ಠಾಣೆ (೧೮೭೭), ನಾಗಪುರ (೧೮೮೬), ಭಾಂದ್ರಾ (೧೮೮೮), ವಾರ್ದಾ (೧೮೯೫), ಜಾಲ್ನಾ (೧೮೯೦), ಕುಲ್ನಾ (೧೮೯೪), ವಲಜಾಬಾದ್ (೧೮೪೯) ಹಾಗೂ ಕಾಂಚೀಪುರಂನಲ್ಲಿ (೧೯೦೩) ಸ್ಥಾಪಿಸಿ ಜನರಿಗೆ ವೈದ್ಯಕೀಯ ಸೇವೆಯನ್ನು ನೀಡಿದೆ.[೬]

ಅಮೇರಿಕನ್ ಪ್ರೆಸ್ಬಿಟೇರಿಯನ್ ಮಿಶನ್ ೧೮೪೯ರಲ್ಲಿ ಮಹಾರಾಷ್ಟ್ರದ ಮಿರಜ್ ಎಂಬಲ್ಲಿ ವೈದ್ಯಕೀಯ ಸೇವೆಯನ್ನು ಕೈಗೊಂಡಿತು. ಕ್ಲಾರಾ ಸ್ವೈನ್ ಭಾರತಕ್ಕೆ ಬಂದ ಮೊಟ್ಟ ಮೊದಲ ಸ್ತ್ರೀ ವೈದ್ಯೆ. ಅವರು ೧೮೬೦ರಲ್ಲಿ ಬರೇಲಿಗೆ (ಉತ್ತರ ಭಾರತ) ಬಂದು ೧೮೭೪ರಲ್ಲಿ ಒಂದು ಆಸ್ಪತ್ರೆಯನ್ನು ಸ್ಥಾಪಿಸಿದರು. ೧೮೬೭ರಲ್ಲಿ ಆಂಗ್ಲಿಕನ್ ಎಸ್. ಪಿ. ಜಿ. ಮಿಶನ್ನಿಗೆ ಸೇರಿದ ವಿಂಟರ್ ಎಂಬ ಸ್ತ್ರೀ ವೈದ್ಯೆ ದಿಲ್ಲಿಯಲ್ಲಿ ಸೇವೆ ಸಲ್ಲಿಸಿದರು. ೧೮೭೧ರಲ್ಲಿ ಸಾರಾ ಸೇವರ್ಡ್ ಎಂಬ ವೈದ್ಯೆಯನ್ನು ಅಮೇರಿಕನ್ ಪ್ರೇಸ್ಬಿಟೇರಿಯನ್ ಮಿಶನ್ನಿನಡಿಯಲ್ಲಿ ಅಲಹಾಬಾದಿಗೆ ಕಳುಹಿಲಾಗಿದೆ. ಭಾರತದಲ್ಲಿ ವೈದ್ಯಕೀಯ ಸೇವೆ ಮತ್ತು ದಾದಿಯರ ತರಬೇತಿಯನ್ನು ಸ್ಥಾಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ ಮಿಶನ್‌ಗಳು ಎರಡು- ಜನಾನಾ ಬೈಬಲ್ ಮತ್ತು ಮೆಡಿಕಲ್ ಮಿಶನ್ ಹಾಗೂ ಆಂಗ್ಲಿಕನ್ ಸಭೆಯ ಜನಾನಾ ಮಿಶನ್. ಬನಾರಸ್,

ಅಯೋಧ್ಯೆ, ಪಾಟ್ನಾ, ಅಮೃತಸರ, ಜಂಡಿಯಾಲಾ, ಕೃಷ್ಣಾಗರ ಮತ್ತು ಬೆಂಗಳೂರಿನಲ್ಲಿ ಮಹಿಳೆಯರಿಗಾಗಿ ಇವು ಆಸ್ಪತ್ರೆಗಳನ್ನು ಸ್ಥಾಪಿಸಿವೆ. ಮಾನಸಿಕ ವ್ಯಾಧಿಯ,ಬುದ್ಧಿಮಾಂದ್ಯ ಮತ್ತು ಅಂಗವಿಕಲ ಮಕ್ಕಳಿಗಾಗಿ ಲಖನೌ, ಮೀರಜ್ ಮತ್ತು ವೆಲ್ಲೂರುಗಳಲ್ಲಿ ಆಸ್ಪತ್ರೆಗಳನ್ನು ತೆರೆಯಲಾಗಿದೆ. ೧೮೫೮ರಲ್ಲಿ ,ಭಾರತದಲ್ಲಿ (ಈಗಿನ ಪಾಕಿಸ್ಥಾನ ಸೇರಿ) ಕೇವಲ ೭ ಆಸ್ಪತ್ರೆಗಳಿದ್ದವು. ೧೮೮೨ರಲ್ಲಿ ೨೮, ೧೮೯೫ರಲ್ಲಿ ೧೪೦ ಹಾಗೂ ೧೯೧೫ರಲ್ಲಿ ೨೮೦ ಆಸ್ಪತ್ರೆಗಳು ಸ್ಥಾಪನೆಯಾದವು. ೧೯೬೦ರಲ್ಲಿ ಭಾರತದಲ್ಲಿ ೮೦೦ ಕ್ಕಿಂತಲೂ ಹೆಚ್ಚು ಕ್ರೈಸ್ತ ಆಸ್ಪತ್ರೆಗಳು ಇದ್ದವು. ಆದರೆ ೧೯೯೩ರಲ್ಲಿ ಈ ಸಂಖ್ಯೆ ೩೦೦ಕ್ಕೆ ಇಳಿಯಿತು.[೭] ಭಾರತದ ಚರ್ಚ್ ಇತಿಹಾಸದಲ್ಲಿ ಹೆಸರುವಾಸಿಯಾದ ಕೆಲವು ಆಸ್ಪತ್ರೆಗಳನ್ನು ವೈದ್ಯೆಯರು ಸ್ಥಾಪಿಸಿದರು. ಅವುಗಳೆಂದರೆ ಡಾ. ಕ್ಲಾರ ಸ್ವೈನ್ ಅವರು ಬರೇಲಿಯಲ್ಲಿ ಸ್ಥಾಪಿಸಿದ ಆಸ್ಪತ್ರೆ, ಡಾ. ಎಡಿತ್ ಬ್ರೌನ್‌ರವರು ಸ್ಥಾಪಿಸಿದ ಲೂಧಿಯಾನದ ಆಸ್ಪತ್ರೆ, ಡಾ. ಐಡಾ ಸ್ಕೂಡರ್‌ರವರ ವೆಲ್ಲೂರ್ ಆಸ್ಪತ್ರೆ, ಹಾಗೂ ಡಾ. ಲೊಂಬಾರ್ಡ್ ಸ್ಥಾಪಿಸಿದ ಉಡುಪಿಯ ಮಿಶನ್ ಆಸ್ಪತ್ರೆ.[೮]

## ೩.೩. ಫಾ। ಮುಲ್ಲರ್ ಚಾರಿಟೇಬಲ್ ಸಂಸ್ಥೆಗಳು

ಅಗಸ್ಟಸ್ ಮುಲ್ಲರ್ ಅವರು ೧೩ ಮಾರ್ಚ್ ೧೮೪೧ರಲ್ಲಿ ಜರ್ಮನಿಯ ವೆಸ್ಟ್ ಫಾಲಿಯದಲ್ಲಿ ಹುಟ್ಟಿದರು. ೧೮೬೧ರಲ್ಲಿ ಅವರು ನ್ಯೂಯಾರ್ಕ್‌ಗೆ ತೆರಳಿ ಯೇಸು ಸಭೆಗೆ ದಾಖಲಾದರು. ಪ್ರಾರಂಭದ ೨ ವರ್ಷಗಳ ನೊವಿಶಿಯೇಟ್ ಮುಗಿಸಿದ ಬಳಿಕ ಸಂತ ಜೋನರ ಕಾಲೇಜು, ಪೋರ್ಡ್ಡಂನಲ್ಲಿ ಆರು ವರ್ಷಗಳು ಮತ್ತು ಮೊಂಟ್ರಿಯಲ್‌ನ ಮೇರಿ ಕಾಲೇಜಿನಲ್ಲಿ ಒಂದು ವರ್ಷ ಕಳೆದರು. ಬಳಿಕ ದೈವಶಾಸ್ತ್ರ ಅಧ್ಯಯನಕ್ಕಾಗಿ ಮೇರಿಲ್ಯಾಂಡಿಗೆ ಹೋದರು. ಈ ಸಮಯದಲ್ಲಿ ಅನಾರೋಗ್ಯಕ್ಕೊಳಗಾದ ಅವರು ವೈದ್ಯರ ಸಲಹೆಯಂತೆ ಫ್ರಾನ್ಸ್‌ಗೆ ಕಳುಹಿಸಲ್ಪಟ್ಟರು. ಇಲ್ಲಿಗೆ ಆಗಮಿಸಿದ ಬಳಿಕ ಆರು ತಿಂಗಳ ಅಲೋಪತಿ ಔಷಧವನ್ನು ತೆಗೆದುಕೊಂಡರೂ ಆರೋಗ್ಯದಲ್ಲಿ ಯಾವುದೇ ರೀತಿಯ ಸುಧಾರಣೆಯನ್ನು ಕಾಣಲಿಲ್ಲ. ತರುವಾಯ ಸ್ನೇಹಿತನೊಬ್ಬನ ಸಲಹೆಯಂತೆ ಹೋಮಿಯೋಪತಿ ಔಷಧವನ್ನು ಪಡೆದು ಆರು ತಿಂಗಳಿನಲ್ಲಿ ಸಂಪೂರ್ಣ ಗುಣಮುಖರಾದರು. ಇದರಿಂದ ಪ್ರಭಾವಿತರಾದ ಫಾ।ಮುಲ್ಲರ್, ಮುಖ್ಯಸ್ಥರ ಒಪ್ಪಿಗೆಯನ್ನು ಪಡೆದು ಡಾ. ಎಸ್ಪಾನೇಟ್‌ರವರ ಮಾರ್ಗದರ್ಶನದಲ್ಲಿ ಹೋಮಿಯೋಪಥಿ ಅಧ್ಯಯನದಲ್ಲಿ ನಿರತರಾದರು. ಮುಂದೆ ಡಾ. ಬಚೆಟ್‌ರವರ (Bachet) ಮಾರ್ಗದರ್ಶನದಲ್ಲಿ ಅಧ್ಯಯನವನ್ನು ಮುಂದುವರಿಸಿ ಫ್ರೆಂಚ್ ಭಾಷೆಯಲ್ಲಿ ಅವರ ಮೊದಲ ಹೋಮಿಯೋಪಥಿ ಗ್ರಂಥವನ್ನು ರಚಿಸಿ ಪ್ರಕಟಿಸಿದರು. ಫಾ। ಮುಲ್ಲರ್ ಅವರು ಈಗಾಗಲೇ ಧರ್ಮ ಪ್ರಚಾರಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಡಲು ನಿರ್ಧರಿಸಿದ್ದರು ಮತ್ತು ಮಧುರಾ ಮಿಶನ್ ಅವರ ಆಯ್ಕೆಯಾಗಿತ್ತು. ಆದರೆ, ದೈವೇಚ್ಛೆ

ಬೇರೆಯದೇ ಆಗಿತ್ತು. ಫಾ। ಅಂಜಲೋ ಮುಟ್ಟಿಯವರು ಮಂಗಳೂರಿಗೆ ಹೊರಟ ಆದ್ಯ ಮಿಶನರಿಗಳ ನಾಯಕರಾಗಿದ್ದರು. ಇವರು ಫಾ। ಮುಲ್ಲರ್ ಅವರನ್ನು ತಮ್ಮ ತಂಡಕ್ಕೆ ಆಯ್ದುಕೊಂಡರು.

ಸೈಂಟ್ ಎಲೋಶಿಯಸ್ ಕಾಲೇಜಿನಲ್ಲಿ ಬೋಧಕರಾಗಿ ಕೆಲಸ ನಿರ್ವಹಿಸುತ್ತಿರುವಾಗ ಫಾ।ಮುಲ್ಲರ್‌ರವರು ಮಿಲಾಗ್ರಿಸ್ ಧರ್ಮಕೇಂದ್ರದ ಬಾಲಕ ಮತ್ತು ಬಾಲಕಿಯರ ಶಾಲೆಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ಆ ಸಮಯದಲ್ಲಿ ಗುರುಗಳ ಬಳಿ ಇದ್ದ ಅತ್ಯಮೂಲ್ಯ ಆಸ್ತಿಯೆಂದರೆ ಅವರಿಗೆ ಪ್ಯಾರಿಸಿನ ಕ್ಯಾಥೆಲಾನ್‌ರವರು ನೀಡಿದ ಚಿಕ್ಕ ಹೋಮಿಯೋಪಥಿ ಔಷಧಗಳ ಪೆಟ್ಟಿಗೆ. ಆ ಚಿಕ್ಕ ಪೆಟ್ಟಿಗೆಯಲ್ಲಿದ್ದ ಹೊಮಿಯೋಪಥಿ ಔಷಧದಿಂದ ಕಾಲೇಜಿನ ಬಡ ವಿದ್ಯಾರ್ಥಿಗಳ ಕಾಯಿಲೆಗಳನ್ನು ಗುಣಪಡಿಸಿದ್ದು ಮಾತ್ರವಲ್ಲದೆ ಗುರುಗಳನ್ನು ಔಷಧಿಗಾಗಿ ಹುಡುಕಿಕೊಂಡು ಬರುತ್ತಿದ್ದ ಇತರರ ಕಾಯಿಲೆಗಳನ್ನು ಉಚಿತವಾಗಿ ಅಥವಾ ಕಡಿಮೆ ಖರ್ಚಿನಲ್ಲಿ ಗುಣಪಡಿಸುತ್ತಿದ್ದರು. ೧೮೮೦ರಿಂದಲೇ ಎರಡು ಕಡೆಗಳಲ್ಲಿ ಅಂದರೆ ಕೊಡಿಯಲ್‌ಬೈಲಿನ ಕಾಲೇಜು ವಠಾರದಲ್ಲಿ ಮತ್ತು ಕಂಕನಾಡಿಯಲ್ಲಿ ಔಷಧ ಮಾರಾಟ ಮಾಡುತ್ತಿದ್ದರು. ಸೈಂಟ್ ಎಲೋಶಿಯಸ್ ಕಾಲೇಜನ್ನು ಇಡ್ಯಾ ಗುಡ್ಡಕ್ಕೆ ವರ್ಗಾಯಿಸಿದ ನಂತರ ಕಾಲೇಜು ಕಟ್ಟಡದ ಮುಖ್ಯ ಮೆಟ್ಟಿಲುಗಳ ಕೆಳಭಾಗದಲ್ಲಿ ಒಂದು ಸಣ್ಣ ಕೊಠಡಿ ನಿರ್ಮಿಸಿ ಔಷಧಾಲಯವನ್ನು ಸ್ಥಾಪಿಸಿದರು. ನಂತರ ಔಷಧಗಳಿಗೆ ಬೇಡಿಕೆ ಹೆಚ್ಚಾದಂತೆ ಸ್ಥಳದ ಅಭಾವದಿಂದ ೧೮೯೧ರಲ್ಲಿ ಚಿಕಿತ್ಸಾಲಯವನ್ನು ಕಂಕನಾಡಿಗೆ ವರ್ಗಾಯಿಸಿ ಅದನ್ನು 'ಹೋಮಿಯೋಪಥಿ ಪುವರ್ ಡಿಸ್ಪೆನ್ಸರಿ' ಎಂದು ಹೆಸರಿಸಲಾಯಿತು.[೯] ಈ ಔಷಧಾಲಯದಿಂದ ಬಡವರಿಗೆ ಉಚಿತವಾಗಿ ಮತ್ತು ಇತರರಿಗೆ ಕಡಿಮೆ ಬೆಲೆಯಲ್ಲಿ ಔಷಧಗಳನ್ನು ಮಾರಿ ಬಂದಂತಹ ಲಾಭದಲ್ಲಿ ಚಿಕಿತ್ಸಾಲಯದ ನಿರ್ವಹಣೆಯನ್ನು ಮಾಡಲಾಗುತ್ತಿತ್ತು. ೧೮೮೧ರಲ್ಲಿ ಮಂಗಳೂರಿನಲ್ಲಿ ಕುಷ್ಠರೋಗಿಗಳ ಆಶ್ರಮವನ್ನು ಸ್ಥಾಪಿಸಿದಾಗ ಅತ್ಯಧಿಕ ಸಂಖ್ಯೆಯಲ್ಲಿ ದಕ್ಷಿಣ ಕನ್ನಡ ಮತ್ತು ರಾಜ್ಯದ ಇತರ ಜಿಲ್ಲೆಗಳಿಂದ ಮಾತ್ರವಲ್ಲದೆ, ದೂರದ ಬೊಂಬಾಯಿಯಿಂದಲೂ ರೋಗಿಗಳು ಬರುತ್ತಿದ್ದರು. ಯೇಸುಸಭೆಯವರು ನಡೆಸುತ್ತಿದ್ದ ಆ ಸಂಸ್ಥೆಯಲ್ಲಿ ೫೦ಕ್ಕಿಂತಲೂ ಹೆಚ್ಚು ನಾನಾ ಹಂತದ ಕುಷ್ಠರೋಗಿಗಳು ಮಕ್ಕಳಿಂದ ಹಿಡಿದು ವಯಸ್ಸಾದವರವರೆಗೆ ಚಿಕಿತ್ಸೆ ಪಡೆಯುತ್ತಿದ್ದರು.[೧೦] ೧೮೯೦ರ ವರೆಗೆ ಕುಷ್ಠರೋಗಿಗಳನ್ನು ಜೆಪ್ಪುವಿನಲ್ಲಿರುವ ಸಂತ ಜೋಸೆಫರ ಆಶ್ರಮದಲ್ಲಿ ರಸ್ತೆ ಬದಿಯಲ್ಲಿ ಎರಡು ಸ್ಮಶಾನಗಳ ನಡುವೆ ಅಹಿತಕರ ವಾತಾವರಣದಲ್ಲಿ ಬಿಡಲಾಗಿತ್ತು. ಫಾ। ಮುಲ್ಲರ್ ಅವರು ಕಂಕನಾಡಿ ಗುಡ್ಡದಲ್ಲಿ ಕುಷ್ಠರೋಗಿಗಳ ಆಸ್ಪತ್ರೆಯನ್ನು ಕಟ್ಟಿಸಿದ ಬಳಿಕ, ೧೮೯೨ರಲ್ಲಿ ಅವರನ್ನು ಅಲ್ಲಿಗೆ ಸ್ಥಳಾಂತರಿಸಲಾಯಿತು.

ಕುಷ್ಠರೋಗಿಗಳ ಆಸ್ಪತ್ರೆ ಫಾ। ಮುಲ್ಲರ್ ಮತ್ತು ಅವರ ಸಹಾಯಕರ ನೇರ ಮೇಲುಸ್ತುವಾರಿಯಲ್ಲಿ ಕಾರ್ಯ ನಿರ್ವಹಿಸುತ್ತಿತ್ತು.[೧೧] ಫಾ। ಮುಲ್ಲರ್‌ರವರು ೫೫ ವರ್ಷಗಳ ಹೋಮಿಯೋಪಥಿ ಚಿಕಿತ್ಸೆಯ

ನಂತರವೂ ಕುಷ್ಠ ರೋಗಿಗಳಲ್ಲಿ ಹೆಚ್ಚು ಪರಿಣಾಮ ಕಾಣದಿದ್ದುದರಿಂದ ಅಲೋಪತಿ ಆಸ್ಪತ್ರೆ ಸ್ಥಾಪಿಸುವ ನಿರ್ಧಾರಕ್ಕೆ ಬಂದರು. ಅದಕ್ಕಾಗಿ, ಎರಡು ವಿಶಾಲವಾದ ವಾರ್ಡ್‌ಗಳನ್ನು, ಮಂಗಳೂರಿನ ನಾಗರಿಕರು ಹಾಗೂ ಕೌಂಟ್ ಸಿಜರ್ ಮಾಥ್ಯೆ ಆಫ್ ಬೊಲೋಗ್ನ ಅವರು ನೀಡಿದ ಉದಾರ ದೇಣಿಗೆಗಳಿಂದ ಕಟ್ಟಿಸಿದರು. ಆ ಆಸ್ಪತ್ರೆಯಲ್ಲಿ ಮತ್ತು ಹಳೆಯ ಆಸ್ಪತ್ರೆಯಲ್ಲಿ ಒಂದು ಬಡವರ ನಿವಾಸವನ್ನು ನಿರ್ಗತಿಕರ ಆಶ್ರಯಕ್ಕಾಗಿ ಕಾಯ್ದಿರಿಸಲಾಯಿತು.

೧೯೦೨ರಲ್ಲಿ ಮಂಗಳೂರಿನಲ್ಲಿ ಕಾಣಿಸಿಕೊಂಡ ಸಾಂಕ್ರಾಮಿಕ ಮಾರಕ ಪ್ಲೇಗ್ ರೋಗ ಜನರಲ್ಲಿ ಭಯಭೀತಿಯನ್ನು ಹುಟ್ಟಿಸಿತು. ಫಾ। ಮುಲ್ಲರ್‌ರವರು ಧರ್ಮಾಧ್ಯಕ್ಷ ಕ್ಯಾವಾದಿಸಿ, ನ್ಯಾಯಾಧೀಶ ಡಿ.ಡಿ. ಮೂರ್ಥೋಕ್ ಮತ್ತು ಕಲೆಕ್ಟರ್‌ರವರ ನೆರವಿನೊಂದಿಗೆ ಕಾರ್ಯಪ್ರವೃತ್ತರಾಗಿ ಕೇವಲ ೨೭ ದಿನಗಳಲ್ಲಿ ಪ್ಲೇಗ್ ಆಸ್ಪತ್ರೆಯನ್ನು ಸ್ಥಾಪಿಸಿದರು. ಆ ರೀತಿಯಲ್ಲಿ ಸ್ಥಾಪನೆಯಾದ ಆ ಆಸ್ಪತ್ರೆಯಲ್ಲಿ ೨೪ ರೋಗಿಗಳನ್ನು ದಾಖಲು ಮಾಡಿಕೊಂಡ ಬಳಿಕ, ೬ ತಾತ್ಕಾಲಿಕ ಬಿಡಾರಗಳನ್ನು ನಿರ್ಮಿಸಿ ಇನ್ನೂ ಅನೇಕ ರೋಗಿಗಳನ್ನು ದಾಖಲಿಸಿಕೊಳ್ಳಲಾಯಿತು. ಹೀಗೆ ಒಟ್ಟು ೧೨೮ ರೋಗಿಗಳನ್ನು ಉಪಚರಿಸಲಾಗಿದೆ. ೧೯೦೭ರಲ್ಲಿ ಕಾಣಿಸಿಕೊಂಡ ಕಾಲರಾ ರೋಗದ ಶುಶ್ರೂಷೆಗೆ, ಖಾಲಿಯಾಗಿದ್ದ ಇದೇ ಕಟ್ಟಡವನ್ನು ಬಳಸಿದರು. ಹೀಗೆ, ೨೧೦ ರೋಗಿಗಳ ಉಪಚಾರ ನಡೆಸಿ ೧೫೬ ಜೀವಗಳನ್ನು, ಖಚಿತವಾಗಿದ್ದ ಸಾವಿನಿಂದ ಪಾರು ಮಾಡಲಾಯಿತು. ೨೨ ಅಕ್ಟೋಬರ್ ೧೮೯೩ರಂದು ಲಾರ್ಡ್ ಮತ್ತು ಲೇಡಿ ವೆನ್‌ಲಾಕ್, ೪ ಅಕ್ಟೋಬರ್ ೧೮೯೭ರಂದು ಸರ್. ಆರ್ಥರ್ ಹ್ಯಾವೆಲಾಕ್ ಮತ್ತು ೨೩ ಅಕ್ಟೋಬರ್ ೧೯೦೧ರಲ್ಲಿ ಲಾರ್ಡ್ ಮತ್ತು ಲೇಡಿ ಆ್ಯಂಥಿಲ್ ಅವರು ಆಸ್ಪತ್ರೆಗೆ ಭೇಟಿ ನೀಡಿ ಫಾ। ಮುಲ್ಲರ್‌ರವರ ಪರಿಶ್ರಮ ಮತ್ತು ತ್ಯಾಗದ ಗುಣಗಾನ ಮಾಡಿದರು. ಅಲ್ಲದೆ, ೪ ನವಂಬರ್೧೯೦೭ ರಂದು ಸರ್ ಆರ್ಥರ್ ಲಾಲಿಯವರು ಫಾ। ಮುಲ್ಲರ್ ಅವರಿಗೆ ಕೈಸರ್ - ಐ- ಹಿಂದ್ ಪದಕ ನೀಡಿ ಸನ್ಮಾನಿಸಿದರು.[೨೨] ಫಾ। ಮುಲ್ಲರ್‌ರವರು ಆಸ್ಪತ್ರೆಯ ಹಿತದೃಷ್ಟಿಯಿಂದ ಮುಂದಾಲೋಚನೆ ಮಾಡಿ 'ಸಹೋದರರ ಸಭೆ' ( ಆರ್ಡರ್ ಆಫ್ ಬ್ರದರ್ಸ್) ಸ್ಥಾಪಿಸಿದ್ದರು. ಅವರು ಅರೆ ಧಾರ್ಮಿಕ ಸಭೆಗೆ ಸೇರಿದವರಾಗಿದ್ದರು ಹಾಗೂ ಸಾಮಾನ್ಯವಾಗಿ ಬಿಳಿ ಪ್ಯಾಂಟ್ ಮತ್ತು ಶಟ್ ಕೋಟ್ (Shut Coat) ಧರಿಸುತ್ತಿದ್ದರು. ಇವರ ಬಳಗಕ್ಕೆ ಲಾರೆನ್ಸ್ ಪಾಸ್ಕಲ್‌ರವರು ೧೯೦೩ರಲ್ಲಿ ಆಸ್ಪತ್ರೆಯ ಮುಖ್ಯ ವೈದ್ಯಾಧಿಕಾರಿಯಾಗಿ ಸೇರಿದರು ಮತ್ತು ೫೪ ವರ್ಷಗಳ ದೀರ್ಘ ಸೇವೆಯನ್ನು ಸಲ್ಲಿಸಿದರು.

## ೩.೪. ಫಾ। ಮುಲ್ಲರ್ಸ್ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸಿದ ಕ್ರೈಸ್ತ ವೈದ್ಯರುಗಳು

ಕಂಕನಾಡಿ ಫಾ। ಮುಲ್ಲರ್ಸ್ ಆಸ್ಪತ್ರೆಯಲ್ಲಿ ಅದೆಷ್ಟೋ ವೈದ್ಯರುಗಳು ನಿಸ್ವಾರ್ಥ ಮನೋಭಾವದಿಂದ ದುಡಿದಿದ್ದಾರೆ. ಕೆಲವರು ಜೀವನಪರ್ಯಂತ ಸೇವೆ ಸಲ್ಲಿಸಿದರೆ ಇನ್ನು ಕೆಲವರು ಹಲವು ವರ್ಷಗಳ ಸಮರ್ಪಣೆಯ ಸೇವೆ ಸಲ್ಲಿಸಿದ್ದಾರೆ. ಅವರೆಲ್ಲರೂ ಸಮಾನ ಗೌರವಕ್ಕೆ ಭಾಜನರಾಗುತ್ತಾರಾದರೂ ಕೆಲವು ಹೆಸರಾಂತ ವೈದ್ಯರನ್ನು ವಿಶೇಷವಾಗಿ ಸ್ಮರಿಸಿಕೊಳ್ಳಬೇಕಾಗಿದೆ.

### ೩.೪.೧. ಡಾ. ಲಾರೆನ್ಸ್ ಪಾಸ್ಕಲ್ ಫೆರ್ನಾಂಡಿಸ್

ಫಾ। ಮುಲ್ಲರ್ ಅವರೊಂದಿಗೆ ಕೈ ಜೋಡಿಸಿ ರೋಗಿಗಳ ಸೇವೆಯಲ್ಲಿ ತನ್ನ ಬಾಳನ್ನು ಅರ್ಪಿಸಿದ ಮಹಾಚೇತನ ಡಾ. ಎಲ್.ಪಿ. ಫೆರ್ನಾಂಡಿಸ್(ಎಲ್. ಪಿ.). ಫಾ। ಮುಲ್ಲರ್ ಜೊತೆಯಲ್ಲಿ ಸೇವೆ ಮಾಡಲು ಆಸ್ಪತ್ರೆಗೆ ಸೇರುವಾಗ ಲಾರೆನ್ಸ್ ಪಾಸ್ಕಲ್ ಬಿ.ಎ. ಪದವೀಧರರು. ಅವರ ಹುಮ್ಮಸ್ಸು, ಕ್ರೀಯಾಶೀಲತೆ ಹಾಗೂ ಅದಮ್ಯ ಚೇತನವನ್ನು ಗಮನಿಸಿದ ಫಾ।ಮುಲ್ಲರ್‌ರವರು ಡಾ. ಎಲ್.ಪಿ.ಯವರನ್ನು ವೈದ್ಯಕೀಯ ಶಿಕ್ಷಣಕ್ಕಾಗಿ ೧೮೯೭ರಲ್ಲಿ ಬೊಂಬಾಯಿಗೆ ಕಳುಹಿಸಿದರು. ಮುಂದೆ ಶಸ್ತ್ರ ಚಿಕಿತ್ಸೆಯಲ್ಲಿ ಉನ್ನತ ಶಿಕ್ಷಣಕ್ಕಾಗಿ ಅವರು ಯೂರೋಪಿಗೆ ತೆರಳಿದರು. ತಮ್ಮ ಇಡೀ ಜೀವನವನ್ನು ಫಾ। ಮುಲ್ಲರ್ ಆಸ್ಪತ್ರೆಗೆ ಅರ್ಪಿಸಿ, ಬ್ರಹ್ಮಚಾರಿಯಾಗಿಯೇ ಕಳೆದರು. ಡಾ. ಲಾರೆನ್ಸ್ ರವರು ಪ್ರಸಿದ್ಧ ಶಸ್ತ್ರ ಚಿಕಿತ್ಸಾ ವೈದ್ಯರಾಗಿದ್ದರು. ಆ ಕಾಲದಲ್ಲಿ ತಜ್ಞ ವಿಭಾಗ ಎಂಬುದಿರಲಿಲ್ಲ. ಡಾ. ಎಲ್.ಪಿ.ಯವರು ಸಾಮಾನ್ಯ ಶಸ್ತ್ರಚಿಕಿತ್ಸೆ ಒಂದೇ ಅಲ್ಲದೆ ನೇತ್ರ ಶಸ್ತ್ರಚಿಕಿತ್ಸೆ ಸಹ ಮಾಡುತ್ತಿದ್ದರು.ಅವರ ಅನುಪಮ ಸೇವೆಗಾಗಿ ಅವರಿಗೆ ಡೆಲ್ಲಿ ದರ್ಬಾರ್ ಪದಕ(೧೯೧೧), ಪೋಪ್ ಜಗದ್ಗುರುಗಳ ಪ್ರೊ ಎಕ್ಲೆಸಿಯಾ ಎಟ್ ಪೊಂತಿಫಿಸ್ ಪದಕ (೧೯೧೭), ಕೈಸರ್- ಐ- ಹಿಂದ್ ಪದಕ (೧೯೨೭), ಕಿಂಗ್ಸ್ ಜುಬಿಲಿ ಪದಕ (೧೯೩೫), ಮತ್ತು ಬಾರ್ ಟು ದಿ ಕೈಸರ್ - ಐ - ಹಿಂದ್ ಪದಕ (೧೯೩೭) ಪುರಸ್ಕಾರಗಳು ಪ್ರಾಪ್ತವಾಗಿವೆ.

ಫಾ। ಮುಲ್ಲರ್ ಅವರ ತರುವಾಯ ಆಸ್ಪತ್ರೆಯ ಮುಖ್ಯ ವೈದ್ಯಾಧಿಕಾರಿಯಾಗಿದ್ದ ಅವಧಿಯಲ್ಲಿ ಕಂಕನಾಡಿ ಆಸ್ಪತ್ರೆಯ ಶಸ್ತ್ರ ಚಿಕಿತ್ಸಾ ವಾರ್ಡ್ ಮತ್ತು ಫಾ। ಫೆರ್ಕೆಟ್ಟಿ ವಾರ್ಡನ ನಿರ್ಮಾಣದ ಮೇಲ್ವಿಚಾರಣೆಯನ್ನು ನೋಡಿಕೊಂಡಿದ್ದರು. ಡಾ. ಫೆರ್ನಾಂಡಿಸರ ಸೇವೆಯ ಬಗ್ಗೆ ಬೊಂಬಾಯಿಯ ಹೆಸರಾಂತ ಶಸ್ತ್ರಚಿಕಿತ್ಸಾ ತಜ್ಞ ಡಾ. ಎಸ್. ಪತ್ರಾವೊ ಹೀಗೆನ್ನುತ್ತಾರೆ, "ಫಾ। ಮುಲ್ಲರ್ ಆಸ್ಪತ್ರೆಯಲ್ಲಿ ಡಾ. ಲಾರೆನ್ಸರ ಪಾತ್ರವನ್ನು ಪವಿತ್ರ ಸಭೆಯ ಆರಂಭದ ವರ್ಷಗಳಲ್ಲಿ ಸಂತ ಪೌಲರ ಪಾತ್ರಕ್ಕೆ ಹೋಲಿಸಬಹುದು. ಸಂತ ಪೌಲರು ಪವಿತ್ರಸಭೆಗೆ ಏನಾಗಿದ್ದರೋ, ಡಾ. ಫೆರ್ನಾಂಡಿಸರು ಫಾ।ಮುಲ್ಲರ್ ಆಸ್ಪತ್ರೆಗೆ........ ". ಆಧುನಿಕ ಸವಲತ್ತುಗಳಿಲ್ಲದ ಆ ಕಾಲದಲ್ಲಿ ಸಹಾಯಕರಿಲ್ಲದೆ ತಾವೊಬ್ಬರೇ

ಯಶಸ್ವಿಯಾಗಿ ಶಸ್ತ್ರಚಿಕಿತ್ಸೆ ನಡೆಸುತ್ತಿದ್ದರು. ಈ ಸಂಸ್ಥೆಗಾಗಿ ಹಾಗೂ ರೋಗಿಗಳ ಸೇವೆಗಾಗಿ, ಬ್ರಹ್ಮಚಾರಿಯಾಗಿ ಉಳಿದು ತಮ್ಮ ಜೀವನ ಸವೆಸಿದ ಡಾ. ಲಾರೆನ್ಸರು ೨೯ ಜೂನ್ ೧೯೪೬ರಲ್ಲಿ ತಮ್ಮ ಕೊನೆ ಉಸಿರೆಳೆದರು[೧೩].

### ೩.೪.೨. ಡಾ. ಸೈಮನ್ ಮಸ್ಕರೇನ್ಹಸ್

ಫಾ। ಮುಲ್ಲರ್ಸ್ ಆಸ್ಪತ್ರೆಯಲ್ಲಿ ನಿರಂತರ ೩೪ ವರ್ಷಗಳ ಸೇವೆ ಸಲ್ಲಿಸಿದ ಡಾ. ಸೈಮನ್ ಅವರು ಒಬ್ಬ ಪ್ರಸಿದ್ಧ ಪ್ರಸೂತಿತಜ್ಞರಾಗಿದ್ದರು. ೨೮ ಅಕ್ಟೋಬರ್ ೧೮೭೦ರಲ್ಲಿ ಮಂಗಳೂರಿನಲ್ಲಿ ಜನಿಸಿದ ಇವರು ಮದ್ರಾಸಿನಲ್ಲಿ ಎಲ್. ಎಂ. ಪಿ. ಪದವಿಯನ್ನು ಗಳಿಸಿದರು. ದಕ್ಷಿಣ ಕನ್ನಡ ಜಿಲ್ಲೆಯ ಲೋಕಲ್ ಫಂಡ್ ಮೆಡಿಕಲ್ ಸೇವಾ ವಿಭಾಗದಲ್ಲಿ ೧೪ ವರ್ಷಗಳ ಸೇವೆ ಸಲ್ಲಿಸಿದ್ದರು. ಇವರ ಸೇವೆ ಆಸ್ಪತ್ರೆಯ ಒಳಗಷ್ಟೇ ಸೀಮಿತವಾಗಿರದೆ ಅಗತ್ಯದ ಸಂದರ್ಭದಲ್ಲಿ ಹೆರಿಗೆ ಮಾಡಿಸಲೆಂದು ಮನೆ ಮನೆಗಳಿಗೂ ತೆರಳುತ್ತಿದ್ದರು. ೩೧ ಜನವರಿ ೧೯೩೮ರಂದು ಸೇವೆಯಿಂದ ನಿವೃತ್ತರಾದ ಡಾ. ಸೈಮನ್‌ರವರು ೧ ಜನವರಿ ೧೯೪೫ರಲ್ಲಿ ವಿಧಿವಶರಾದರು.[೧೪]

### ೩.೪.೩. ಡಾ. ಅಲೆಕ್ಸ್ ಫೆಲಿಕ್ಸ್ ಕೊಯಿಲೊ

ಫಾ। ಮುಲ್ಲರ್ ಪ್ರಾರಂಭಿಸಿದ ಕುಷ್ಠರೋಗಿಗಳ ಸೇವೆಯನ್ನು ಮುಂದುವರಿಸಿದ ಕೀರ್ತಿ ಡಾ. ಎ.ಎಫ್. ಕೊಯಿಲೊ ಅವರಿಗೆ ಸಲ್ಲುತ್ತದೆ. ೩ ಮಾರ್ಚ್ ೧೮೯೯ ರಂದು ಮಂಗಳೂರಿನಲ್ಲಿ ಜನಿಸಿದ ಅವರು ತಮ್ಮ ಆರಂಭದ ಶಿಕ್ಷಣವನ್ನು ಸೈಂಟ್ ಎಲೋಶಿಯಸ್ ಕಾಲೇಜಿನಲ್ಲಿ ಮುಗಿಸಿದರು. ಬೊಂಬಾಯಿಯಲ್ಲಿ ಎಂ.ಬಿ.ಬಿ.ಎಸ್. ಪದವಿ ಗಳಿಸಿದ ಬಳಿಕ ಫಾ। ಮುಲ್ಲರ್ಸ್ ಆಸ್ಪತ್ರೆಗೆ ಸೇರಿದರು.ಫಾ. ಮುಲ್ಲರ್‌ರವರು, ಅವರನ್ನು ಕಲ್ಕತ್ತಾದ ಸ್ಕೂಲ್ ಆಫ್ ಟ್ರೋಪಿಕಲ್ ಮೆಡಿಸಿನ್‌ಗೆ ಚರ್ಮ ಮತ್ತು ಕುಷ್ಠರೋಗದ ಬಗ್ಗೆ ಹೆಚ್ಚಿನ ಶಿಕ್ಷಣಕ್ಕಾಗಿ ಆಸ್ಪತ್ರೆಯಿಂದ ಕಳುಹಿಸಿ ಕೊಡಲಾಯಿತು. ೧೯೨೬ರಲ್ಲಿ ಸಂತ ಜೋಸೆಫರ ಕುಷ್ಠರೋಗ ಆಸ್ಪತ್ರೆಯಲ್ಲಿ ವೈದ್ಯರಾಗಿ ನೇಮಕಗೊಂಡರು. ಅಲ್ಲಿ ಅವರು ೩೫ ವರ್ಷಗಳ ದೀರ್ಘ ಸೇವೆಯನ್ನು ನೀಡಿದರು. ಶಿಸ್ತಿಗೆ ಹೆಸರಾಗಿದ್ದ ಅವರು ಕುಷ್ಠರೋಗಿಗಳಿಗೆ ಚಿಕಿತ್ಸೆಯೊಂದಿಗೆ ಪ್ರೀತಿ, ದಯೆ ಮತ್ತು ಧೈರ್ಯವನ್ನು ತುಂಬುತ್ತಿದ್ದರು.

ಕಂಕನಾಡಿ ಫಾ। ಮುಲ್ಲರ್ಸ್ ಆಸ್ಪತ್ರೆಯಿಂದ ನಿವೃತ್ತರಾದ ಬಳಿಕ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಕುಷ್ಠರೋಗ ಗೌರವ ವೈದ್ಯಾಧಿಕಾರಿಯಾಗಿ ಹಾಗೂ ಹಿಂದ್ ಕುಷ್ಠ ನಿವಾರಣಾ ಸಂಘದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು. ಕುಷ್ಠ ರೋಗದ ಬಗ್ಗೆ ವ್ಯಾಪಕವಾದ ತಾತ್ಸಾರ ಮತ್ತು ಅದೊಂದು ಅಂಟುರೋಗವೆಂಬ ಭಯ, ಡಾ। ಕೊಯಿಲೊರವರು ಸೇವೆ ಮಾಡುವ ಆರಂಭದಲ್ಲಿ,

ಇಂದಿಗಿಂತಲೂ ಅಧಿಕವಾಗಿತ್ತು. ಅಂತಹ ದಿನಗಳಲ್ಲಿ ಕುಷ್ಠ ರೋಗಿಗಳಿಗೆ ಚಿಕಿತ್ಸೆ ನೀಡಿದ ಡಾ। ಕೊಯಿಲೊ ಅವರಿಗೆ ಸಮಾಜ ಸೇವೆಯ ಬಿರುದು (೧೯೩೭) ಮತ್ತು ಜಗದ್ಗುರುಗಳ ಬಿರುದೂ ಪ್ರಾಪ್ತವಾಯಿತು. ಬಲ್ಮಠ- ಪಳ್ನೀರ್ ರಸ್ತೆಗೆ ಹಾಗೂ ಮುದರಂಗಡಿಯ ಕುಷ್ಠರೋಗಿಗಳ ಚಿಕಿತ್ಸಾ ಕೇಂದ್ರಕ್ಕೆ ಡಾ. ಎ.ಎಫ್. ಕೊಯಿಲೊ ಅವರ ಹೆಸರು ನೀಡಿ ಗೌರವಿಸಲಾಗಿದೆ.[೧೫]

## ೩.೫. ಸಿಸ್ಟರ್ಸ್ ಆಫ್ ಚಾರಿಟಿ

ಭಾರತದ ಮಾಜಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರು ಸುಮಾರು ಹನ್ನೊಂದು ವರ್ಷಗಳ ಹಿಂದೆ ಮುಂಬೈಯ ಹೆಸರಾಂತ ಆಸ್ಪತ್ರೆ ಬ್ರೀಚ್ ಕ್ಯಾಂಡಿಯಲ್ಲಿ ಶಸ್ತ್ರಚಿಕಿತ್ಸೆಗೆ ಒಳಗಾಗಿದ್ದರು. ಅವರನ್ನು ನೋಡಿಕೊಳ್ಳಲು ಆಯ್ಕೆಗೊಂಡ ೮ ಮಂದಿ ದಾದಿಯರಲ್ಲಿ ೬ ಮಂದಿ ದಾದಿಯರು ಫಾ। ಮುಲ್ಲರ್ಸ್ ಆಸ್ಪತ್ರೆಯಲ್ಲಿ ತರಬೇತಿ ಪಡೆದವರಾಗಿದ್ದರು. ಬ್ರೀಚ್‌ಕ್ಯಾಂಡಿ ಮಾತ್ರವಲ್ಲದೆ ಬೊಂಬಾಯಿಯ ಇತರ ಆಸ್ಪತ್ರೆಗಳಲ್ಲಿಯೂ ಸೇವೆ ಮಾಡುತ್ತಿರುವ, ಫಾ। ಮುಲ್ಲರ್ ಆಸ್ಪತ್ರೆಯಲ್ಲಿ ತರಬೇತಿ ಪಡೆದ, ಅದೆಷ್ಟೋ ದಾದಿಯರಿದ್ದಾರೆ ಮತ್ತು ಅವರಿಗೆ ಇತರ ದಾದಿಯರಿಗಿಂತಲೂ ಹೆಚ್ಚಿನ ಬೇಡಿಕೆಯಿದೆ. ದಾದಿಯರ ಸೇವೆಯಲ್ಲಿ ಫಾ। ಮುಲ್ಲರ್ ಸಂಸ್ಥೆಗೆ ಹಾಗೂ ಅಲ್ಲಿ ತರಬೇತಿ ಪಡೆದ, ದಾದಿಯರಿಗೆ ಹೆಸರು ಬರಲು ಪ್ರಮುಖವಾಗಿ ಕಾರಣಕರ್ತರು ಸಿಸ್ಟರ್ಸ್ ಆಫ್ ಚಾರಿಟಿ ಸಭೆಯ ಧರ್ಮಭಗಿನಿಯರು. ರೋಗಿಗಳಿಗೆ ಕೇವಲ ಗುಳಿಗೆ ಹಾಗೂ ಚುಚ್ಚು ಮದ್ದು ನೀಡುವುದು ಮಾತ್ರವಲ್ಲದೆ ಅವರ ಅವಶ್ಯಕತೆ ಮತ್ತು ಕಷ್ಟಗಳಲ್ಲಿ ಪ್ರೀತಿಯಿಂದ ಸ್ಪಂದಿಸಿ, ಅವರ ಕುಟುಂಬದವರ ಹತ್ತಿರ ಕುಟುಂಬದವರಂತೆ ಒಂದಾಗಿ, ಚಿಕಿತ್ಸೆ ನೀಡುವ ವೈದ್ಯರು ಮತ್ತು ರೋಗಿಗಳ ನಡುವೆ ಒಂದು ಸಂಪರ್ಕ ಸೇತುವೆಯಾಗಿ, ರೋಗಿಗಳಿಗೆ ಯಾವುದೂ ಕಡಿಮೆಯಾಗದಂತೆ ನೋಡಿಕೊಳ್ಳುವ ಜವಾಬ್ದಾರಿಯೂ ದಾದಿಯರು ಮಾಡುತ್ತಿದ್ದಾರೆ. ನರ್ಸಿಂಗ್ ಕಲಿಯುವ ವಿದ್ಯಾರ್ಥಿಗಳಲ್ಲಿ ಸೇವೆಯ ಮತ್ತು ಅರ್ಪಣೆಯ ಗುಣವನ್ನು ಆಳವಾಗಿ ಬೇರೂರುವಂತೆ ಮಾಡುವ ಗುರುತರವಾದ ಜವಾಬ್ದಾರಿಯನ್ನು ಅವರಿಗೆ ತರಬೇತಿ ಕೊಡುತ್ತಿರುವ ಧರ್ಮಭಗಿನಿಯರು ವಹಿಸಿಕೊಂಡಿರುವುದರಿಂದಲೇ ಫಾ। ಮುಲ್ಲರ್ಸ್ ದಾದಿಯರ ಸಂಸ್ಥೆಗೆ ಇರುವ ಬೇಡಿಕೆ ಅಪಾರ.

ಸಿಸ್ಟರ್ಸ್ ಆಫ್ ಚಾರಿಟಿ ಸಭೆಯ ಪ್ರಮುಖ ಉದ್ದೇಶ ರೋಗಿಗಳ ಸೇವೆ. ಕಂಕನಾಡಿಯಲ್ಲಿ ಫಾ। ಮುಲ್ಲರ್ ಅವರು ಆರಂಭಿಸಿದ್ದ ಕುಷ್ಠರೋಗಿಗಳ ಆಸ್ಪತ್ರೆಯಲ್ಲಿ ಸೇವೆ ಮಾಡಲು ಮಂಗಳೂರಿನ ಬಿಷಪರಿಂದ ಆಹ್ವಾನಿಸಲ್ಪಟ್ಟು, ಈ ಧರ್ಮಭಗಿನಿಯರು ಮಂಗಳೂರು ತಲುಪಿದರು. "ಬನ್ನಿ, ಕ್ರಿಸ್ತನ ಪ್ರೀತಿಗಾಗಿ ಕಷ್ಟ ಸಹಿಸಲು ಸನ್ನದ್ಧರಾಗಿರಿ" ಎಂಬ ಕರೆಯೋಲೆಗೆ ಸ್ಪಂದಿಸಿ ಇಟಲಿಯಿಂದ ಬಂದ ನಾಲ್ಕು

ಧರ್ಮಭಗಿನಿಯರು ೨೪ ಜನವರಿ ೧೮೯೮ರಂದು ಮಂಗಳೂರಿನಲ್ಲಿ ಕಾಲೂರಿದರು. ಆದರೆ ಈ ಧರ್ಮಭಗಿನಿಯರಿಗೆ ರೋಗಿಗಳೊಂದಿಗೆ ವ್ಯವಹರಿಸಲು ಭಾಷೆಯ ತೊಡಕಾಯಿತು. ಆದುದರಿಂದ ಕೆಲವೇ ತಿಂಗಳಲ್ಲಿ ಆಸ್ಪತ್ರೆಯನ್ನು ತೊರೆದು ಜೆಪ್ಪುವಿನಲ್ಲಿ ಆರಂಭಿಸಿದ್ದ ಅನಾಥಾಶ್ರಮದಲ್ಲಿ ನಿರ್ಗತಿಕರಿಗಾಗಿ ದುಡಿಯಲು ತೆರಳಿದರು. ೧೯೧೨ರಲ್ಲಿ ಪುನಃ ಕಂಕನಾಡಿ ಆಸ್ಪತ್ರೆಗೆ ಮರಳಿದ ಆ ಧರ್ಮಭಗಿನಿಯರು ರೋಗಿಗಳ ಆರೈಕೆಗಾಗಿ ಅಹರ್ನಿಶಿ ದುಡಿದರು.

ಆ ಕಾಲದಲ್ಲಿ ಪರಿಣಾಮಕಾರಿ ಔಷಧಿ ಮತ್ತು ರೋಗ ತಡೆಗಟ್ಟುವ ಸೌಲಭ್ಯಗಳು ಇರಲಿಲ್ಲ. ರೋಗಿಗಳ ಸೇವೆ ಮಾಡುವುದೆಂದರೆ ಸ್ವಂತ ಜೀವವನ್ನು ಪಣಕ್ಕಿಟ್ಟಂತೆ. ಇಟಲಿಯಿಂದ ರೋಗಿಗಳ ಸೇವೆಗೆಂದು ಕಂಕನಾಡಿಗೆ ಬಂದಿದ್ದ ಭ। ಫೆಲ್ಸಿ ಸಾಲ್ವಿ ೧೯೧೭ರಲ್ಲಿ ಪ್ಲೇಗ್ ರೋಗದಿಂದ ಹಾಗೂ ಭ। ಕ್ಯಾಥರೀನಾ ಸೊರ್ರೊಟ್ಟರೆಲ್ಲಿರವರು ೧೯೩೫ರಲ್ಲಿ ಕುಷ್ಠರೋಗದಿಂದಾಗಿ ಮರಣ ಹೊಂದಿದರು. ಭ। ಮೆಟಿಲ್ಡಾರವರು ಸ್ವತಃ ತಾವೇ ಕ್ಯಾನ್ಸರ್ ರೋಗಕ್ಕೆ ಒಳಗಾಗಿದ್ದರೂ ಅದನ್ನೂ ಲೆಕ್ಕಿಸದೇ ಸುಮಾರು ೧೭ ವರ್ಷ ಕುಷ್ಠರೋಗಿಗಳ ಸೇವೆ ಮಾಡಿ ಕಡೆಗೆ ದೈವಾಧೀನರಾದರು. ಮಂಗಳೂರಿನ ಕೊಯಿಲೊ ಮನೆತನದ ಕ್ಯಾಥರೀನ್ ತಮ್ಮ ೧೭ನೇ ವಯಸ್ಸಿನಲ್ಲಿ ಆಸ್ಪತ್ರೆಯಲ್ಲಿ ರೋಗಿಗಳ ಸೇವೆಗೆಂದು ಸೇರಿ ತರುವಾಯ ಚಾರಿಟಿ ಧರ್ಮಭಗಿನಿಯರ ಸಭೆಯ ಧರ್ಮಭಗಿನಿಯಾಗಿ ೪೦ ವರ್ಷಗಳ ಕಾಲ ಆಸ್ಪತ್ರೆಯ ಅಡುಗೆ ಮನೆಯಲ್ಲಿ ಮತ್ತು ರೋಗಿಗಳ ಆರೈಕೆಯಲ್ಲಿ ಕಳೆದು ಮರಣಹೊಂದಿದರು. ೧೯೩೭ರವರೆಗೆ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸಿದ ಹೆಚ್ಚಿನವರು ಇಟಲಿಯಿಂದ ಬಂದ ಧರ್ಮಭಗಿನಿಯರಾಗಿದ್ದರು. ೧೯೩೭ರಲ್ಲಿ ಮೂಲ್ಕಿಯ ಅರಾನ್ಹಾ ಮನೆತನದ ಭ। ಮೆಟಿಲ್ಡಾ ಅವರು ಸಿಕಂದರಾಬಾದ್‌ನಲ್ಲಿ ದಾದಿಯರ ತರಬೇತಿ ಪಡೆದು ಫಾ। ಮುಲ್ಲರ್ಸ್ ಆಸ್ಪತ್ರೆಗೆ ಬಂದ ಪ್ರಥಮ ದೇಶೀಯ ಭಗಿನಿ ದಾದಿ (ಸಿಸ್ಟರ್ ನರ್ಸ್). ತರುವಾಯ ಮಂಗಳೂರಿನ ಹಾಗೂ ಕೇರಳದ, ಈ ಸಭೆಗೆ ಸೇರಿದ, ಧರ್ಮಭಗಿನಿಯರು ದಾದಿಯರ ಸೇವೆಯಲ್ಲಿ ತರಬೇತಿ ಪಡೆದು ಆಸ್ಪತ್ರೆಯಲ್ಲಿ ೨೦-೩೦ ವರ್ಷಗಳ ನಿಸ್ವಾರ್ಥ ಸೇವೆಯನ್ನು ಸಲ್ಲಿಸಿದ್ದಾರೆ.

೧೯೫೫ರಲ್ಲಿ ಆರಂಭವಾದ ನರ್ಸಿಂಗ್ ಶಾಲೆಯಲ್ಲಿ ಭ। ಮರಿಯ ಥೆರೆಸಾ, ಭ। ಎಡ್ಮಂಡ್ ಡಿ'ಸೋಜ, ಭ। ಗೊನ್ಸಾಗಾ ಮುಂತಾದವರು ನಿಸ್ವಾರ್ಥ ಸೇವೆ ಸಲ್ಲಿಸಿ ಆಸ್ಪತ್ರೆಗೆ ಹಾಗೂ ದಾದಿಯರ ಸಂಸ್ಥೆಗೆ ಮತ್ತು ಮುಖ್ಯವಾಗಿ ಚಾರಿಟಿಯ ಧರ್ಮಭಗಿನಿಯರ ಸಭೆಗೆ ಕೀರ್ತಿ ತಂದುಕೊಟ್ಟಿದ್ದಾರೆ. ಜೆ. ಎಮ್. ರೆಬೆಲ್ಲೊ ಅವರು ಚಾರಿಟಿ ಧರ್ಮಭಗಿನಿಯರ ಕುರಿತು ತಮ್ಮ ಅಭಿಪ್ರಾಯವನ್ನು ಫಾ। ಮುಲ್ಲರ್ ಚಾರಿಟೇಬಲ್ ಸಂಸ್ಥೆಗಳ ಶತಮಾನೋತ್ಸವ ಸ್ಮರಣ ಸಂಚಿಕೆಯಲ್ಲಿ ಈ ರೀತಿಯಲ್ಲಿ ವ್ಯಕ್ತಪಡಿಸುತ್ತಾರೆ: "ಇಂದು ಸಂಸ್ಥೆಯಲ್ಲಿ ಧರ್ಮಭಗಿನಿಯರ ಸಹಕಾರ ಇಲ್ಲದ ಯಾವೊಂದು ವಿಭಾಗವೂ ಇಲ್ಲ. ಆಸ್ಪತ್ರೆಯ

ಪ್ರತೀ ಸೇವೆಯಲ್ಲಿ ಅವರ ಪ್ರಕಾಶ ಇದೆ." ೧೯೮೭ರಲ್ಲಿ ಫಾ। ಮುಲ್ಲರ್ ಆಸ್ಪತ್ರೆಯಲ್ಲಿ ದಾದಿಯರ ಮಹಾವಿದ್ಯಾಲಯ ಆರಂಭವಾಗಿದೆ. ಪ್ರಾರಂಭದಿಂದ ಇಂದಿನವರೆಗೂ ಫಾ। ಮುಲ್ಲರ್ಸ್ ದಾದಿಯರ ಶಾಲೆ ಮತ್ತು ಫಾ। ಮುಲ್ಲರ್ಸ್ ದಾದಿಯರ ಮಹಾವಿದ್ಯಾಲಯ, ಚಾರಿಟಿ ಧರ್ಮಭಗಿನಿಯರ ನೇತೃತ್ವದಲ್ಲಿ ನಡೆಯುತ್ತಿದೆ. ಸಂಸ್ಥೆಯ ಪ್ರವೇಶ ಮತ್ತು ಶಿಕ್ಷಣ ಸರ್ಕಾರದ ಹಾಗೂ ವಿಶ್ವವಿದ್ಯಾಲಯದ ನಿಯಮ ಪ್ರಕಾರ ನಡೆಯುತ್ತಿದೆಯಾದರೂ ದಾದಿಯರ ಮೂಲ ತರಬೇತಿಯಲ್ಲಿ ಶಿಸ್ತು, ಮಮತೆ ಮತ್ತು ಮಾನವೀಯತೆಯನ್ನು ಕಲಿಸಿಕೊಡುವ ಪ್ರಯತ್ನ ನಿರಂತರವಾಗಿ ನಡೆಯುತ್ತಿದೆ. ಇಲ್ಲಿ ಲಭಿಸುವ ತರಬೇತಿಗೆ ಘನತೆ ಹಾಗೂ ದಾದಿಯರ ಸೇವಾ ಗೌರವ ಉಳಿದು ಬಂದಿರುವುದರಿಂದಲೇ ತರಬೇತಿಗಾಗಿ ಮಕ್ಕಳನ್ನು ಕಳುಹಿಸಿಕೊಡಲು ಸಾರ್ವಜನಿಕರಲ್ಲಿ ಬಹಳಷ್ಟು ಪೈಪೋಟಿಯಿದೆ.[೧೬]

## ೩.೬. ಫಾ। ಮುಲ್ಲರ್‌ರವರ ನಂತರ

ಫಾ। ಮುಲ್ಲರ್ ಅವರು ಅಸ್ವಸ್ಥರಾಗಿದ್ದಾಗ ಆಸ್ಪತ್ರೆಯ ಜವಾಬ್ದಾರಿಯನ್ನು ಯೇಸುಸಭೆಯ ಫಾ। ದಿಯೊಮಿಡಿಸ್ (Diomedes) ಜಿಯೊನಿನಿರವರು ನಿರ್ವಹಿಸಿದರು. ಮುಂದೆ ಫಾ। ಅಗಸ್ಟಸ್ ಕೆವೆಲಿಯರ್, ಫಾ। ಆಂಡ್ರಿಯಸ್ ರೊಂದನೊ ಹಾಗೂ ಫಾ। ಮರಿಯನಾಸ್ ಲುನಝಿ ಅವರು ಆಸ್ಪತ್ರೆಯ ನಿರ್ದೇಶಕರುಗಳಾಗಿ ಸೇವೆ ಸಲ್ಲಿಸಿದ್ದರು. ಯೇಸು ಸಭೆಯವರು ಮಂಗಳೂರು ಧರ್ಮ ಪ್ರಾಂತ್ಯದ ಆಡಳಿತಾಧಿಕಾರವನ್ನು ಹಾಗೂ ಆಸ್ಪತ್ರೆಯ ನಿರ್ವಹಣೆಯನ್ನು ದೇಶೀಯ ಧರ್ಮಗುರುಗಳ ಕೈಗೆ ಕ್ರಮವಾಗಿ ೧೯೫೮ ಮತ್ತು ೧೯೩೩ರಲ್ಲಿ ಹಸ್ತಾಂತರಿಸಿದರು.

## ೩.೭. ದೇಶೀ ಆಡಳಿತದಲ್ಲಿ ಫಾ। ಮುಲ್ಲರ್ಸ್ ಆಸ್ಪತ್ರೆ

ಫಾ। ಲುನಾಝಿರವರ ಉತ್ತರಾಧಿಕಾರಿಯಾಗಿ ನೇಮಕಗೊಂಡ ಪ್ರಥಮ ದೇಶೀ ಧರ್ಮಗುರು ಫಾ। ರೆಜಿನಾಲ್ಡ್ ಪಿಂಟೋರವರ ನಿರ್ದೇಶಕತ್ವದಲ್ಲಿ ಆಸ್ಪತ್ರೆಯಲ್ಲಿ ಕ್ಷ-ಕಿರಣ ಘಟಕ, ಜೆರಿ ಲೋಬೊ ಮತ್ತು ಮಾನ್ಯುವೆಲ್ ನೊರೋನ್ಹಾರವರ ಉದಾರ ಆರ್ಥಿಕ ನೆರವಿನಿಂದ ಸ್ಥಾಪಿತವಾದ ಸಬಿನಾ ಲೋಬೊ ಪ್ರಸೂತಿ ವಿಭಾಗ, ದಂತ ಮತ್ತು ನೇತ್ರ ಚಿಕಿತ್ಸಾಲಯಗಳು, ಹೊರ ರೋಗಿಗಳ ವಿಭಾಗ ಹಾಗೂ ಶಸ್ತ್ರ ಚಿಕಿತ್ಸಾ ವಿಭಾಗವನ್ನು ನಿರ್ಮಿಸಲಾಗಿದೆ. ಅಲ್ಲದೆ, 'ಶತಮಾನದ ವೈದ್ಯ' ಎಂಬ ಬಿರುದಾಂಕಿತ ಡಾ. ವೆಂಕಟ ರಾವ್‌ರವರನ್ನು ನೇಮಕ ಮಾಡಿದ ಕೀರ್ತಿಯೂ ಫಾ। ರೆಜಿನಾಲ್ಡ್ ಪಿಂಟೋರವರಿಗೆ ಸಲ್ಲುತ್ತದೆ. ೧೯೫೫ರಲ್ಲಿ ಫಾ। ರೆಜಿನಾಲ್ಡ್ ತೀರಿಕೊಂಡಾಗ ಅವರ ಉತ್ತರಾಧಿಕಾರಿಯಾಗಿ ನೇಮಕಗೊಂಡ ಫಾ। ಮರಿಯನ್ ಫೆರ್ನಾಂಡಿಸ್‌ರವರು ಹತ್ತು ವರ್ಷ

ಆಸ್ಪತ್ರೆಯ ನಿರ್ದೇಶಕರಾಗಿ ಸೇವೆ ಸಲ್ಲಿಸಿದರು. ಫಾ। ಮರಿಯನ್ ಅವರು ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ಹೆಸರಾಂತ ವೈದ್ಯ ಡಾ. ವಿ. ವಿ. ಮೋದಿಯವರ ನೇಮಕವಾಯಿತು.[೧೭]

ಫಾ। ಮರಿಯನ್ ಅವರು ಕ್ಲಿನಿಕಲ್ ಲ್ಯಾಬೋರೇಟರಿ ಹಾಗೂ ಬ್ಲಡ್ ಬ್ಯಾಂಕ್, ಹೊಸ ಕ್ಷ-ಕಿರಣ ಘಟಕ, ಕ್ಷಯ ರೋಗ ಆಸ್ಪತ್ರೆ, ಕುಷ್ಠ ರೋಗದಿಂದ ಗುಣಮುಖರಾದವರಿಗೆ 'ಡೇಮಿಯನ್ ನಿವಾಸ' ದಾದಿಯರ ತರಬೇತಿ ಶಾಲೆ, ದಾದಿಯರ ವಸತಿ ನಿಲಯ ಮುಂತಾದ ಸೌಲಭ್ಯಗಳನ್ನು ಒದಗಿಸಿಕೊಟ್ಟರು. ಜರ್ಮನ್ ಪ್ರತಿಷ್ಠಾನ 'ಮಿಸರಿಯೊರ್' (MISEREOR) ಅವರು ತಪಸ್ಸುಕಾಲದ(Lent Season) ದೇಣಿಗೆಯಾಗಿ ನೀಡಿದ ಹಣದಿಂದ ೧೫ ಹಾಸಿಗೆಯುಳ್ಳ ಮಕ್ಕಳ ಆಸ್ಪತ್ರೆಯ ಉದ್ಘಾಟನೆ ಮತ್ತು ಪ್ರಸೂತಿ ವಿಭಾಗದ ಅಭಿವೃದ್ಧಿಯನ್ನು ಮಾಡಲಾಗಿದೆ. ಮ। ಎ.ಜೆ.ರೆಬೆಲ್ಲೊ ಮತ್ತು ಮಕ್ಕಳು ನೀಡಿದ ಉದಾರ ದೇಣಿಗೆಯಿಂದ ಅಂಗವಿಕಲರಿಗಾಗಿ ಇನಾಜ್ ರೆಬೆಲ್ಲೊ ವಾರ್ಡ್ ಮತ್ತು ಶಸ್ತ್ರಚಿಕಿತ್ಸಾ ವಿಭಾಗವನ್ನು ನವೀಕರಿಸಲಾಗಿದೆ. ಡಾ. ಹೆಯ್ನ್ಜ್ (Dr. Heinz) ಹಾಗೂ ಡಾ. ವಿನ್ಸ್ (Dr. Wintsch) ರವರ ನೆರವಿನಿಂದ ಸ್ವಿಸ್ ಎಮ್ಮಾಸ್ ಸಹಯೋಗದೊಂದಿಗೆ ಕುಷ್ಠರೋಗ ಆಸ್ಪತ್ರೆಯನ್ನು ಮೇಲ್ದರ್ಜೆಗೇರಿಸಲಾಗಿದೆ. ೧೯೬೪ರಲ್ಲಿ ಕಲಿಕಾ ದಾದಿಯರ ವಸತಿ ನಿಲಯವನ್ನೂ, ನೋಯಲ್ ಮಥಾಯಸ್ ಅವರು ನೀಡಿದ ದೇಣಿಗೆಯಿಂದ ಫಾತಿಮಾ ವಾರ್ಡ್‌ನ್ನೂ ನಿರ್ಮಿಸಲಾಗಿದೆ. ಅಲ್ಲದೇ ರಾಜ್ಯದಲ್ಲಿ ಬೆಂಗಳೂರು ಹೊರತುಪಡಿಸಿ ಬೇರೆಲ್ಲೂ ಮನೋರೋಗಿಗಳ ಆಸ್ಪತ್ರೆ ಇಲ್ಲದಿರುವುದನ್ನು ಮನಗಂಡು ೧೯೬೭ರಲ್ಲಿ ಮನೋರೋಗ ಘಟಕವನ್ನೂ ಸ್ಥಾಪಿಸಲಾಗಿದೆ.

೧೯೬೭ರಲ್ಲಿ ಕುಷ್ಠರೋಗದಿಂದ ಗುಣಮುಖರಾದವರಿಗಾಗಿ ಔದ್ಯೋಗಿಕ ಚಿಕಿತ್ಸೆ(Occupational Therapy) ಹಾಗೂ ೧೯೬೮ರಲ್ಲಿ ಅಮೇರಿಕಾದ ಸಹಾಯದೊಂದಿಗೆ ವೃತ್ತಿಪರ ಪುನರ್ವಸತಿ ಯೋಜನೆಯನ್ನು (Vocational Rehabilitation Project) ಆರಂಭಿಸಲಾಗಿದೆ. ಅಂಗಾಂಗಗಳಲ್ಲಿ ಕಳೆದುಕೊಂಡ ಸಾಮರ್ಥ್ಯವನ್ನು ಮರಳಿ ಪಡೆಯುವ ಉದ್ದೇಶದಿಂದ ಫಿಸಿಯೋಥೆರಪಿ ವಿಭಾಗವನ್ನು ಕುಷ್ಠ ರೋಗಿಗಳ ಪುನರ್ವಸತಿ ಕೇಂದ್ರಕ್ಕೆ ಸೇರ್ಪಡೆಗೊಳಿಸಲಾಗಿದೆ. ಮುದ್ರಣ, ಬುಕ್ ಕೀಪಿಂಗ್, ಕಮ್ಮಾರಿಕೆ, ಪೀಠೋಪಕರಣ ತಯಾರಿ, ನಾನಾ ರೀತಿಯ ಕೆತ್ತನೆಗಳು ಕಾರ್ಮಿಕರ ಆದಾಯವನ್ನು ಹೆಚ್ಚಿಸಿವೆ.[೧೮] ಫಾ। ಮರಿಯನ್ ಅವರು ಆಸ್ಪತ್ರೆಯನ್ನು ಸ್ವಾವಲಂಬಿಯನ್ನಾಗಿ ಮಾಡಿ ಎಲ್ಲರಿಗೂ ಉಚಿತ ಆರೋಗ್ಯ ಸೇವೆ ನೀಡಬೇಕೆಂಬ ಉದ್ದೇಶವನ್ನು ಹೊಂದಿದ್ದರು. ಹಲವಾರು ಸಮಸ್ಯೆಗಳ ಹೊರತಾಗಿಯೂ, ಬಡವರಿಗೆ ಮತ್ತು ಅಸಹಾಯಕರಿಗೆ ಔದಾರ್ಯವನ್ನು ತೋರುವ ಸಂಪ್ರದಾಯವನ್ನು ಈಗಲೂ ಈ ಸಂಸ್ಥೆ ಮುಂದುವರಿಸಿಕೊಂಡು ಬರುತ್ತಿದೆ. ೧೯೬೮ರ ಹೊತ್ತಿಗೆ

ಆಸ್ಪತ್ರೆಯ ೬೦೦ ಹಾಸಿಗೆಗಳಲ್ಲಿ ೪೦೦ ಹಾಸಿಗೆಗಳನ್ನು ಉಚಿತ ಅಥವಾ ರಿಯಾಯತಿ ಸೇವೆಗಾಗಿ ಮೀಸಲಿರಿಸಲಾಗಿದೆ. ಈಗ ವರ್ಷದಲ್ಲಿ ಸುಮಾರು ೧೦,೦೦೦ದಷ್ಟು ಒಳರೋಗಿಗಳೂ ೭೫,೦೦೦ದಷ್ಟು ಹೊರರೋಗಿಗಳೂ ಇಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ.

ಫಾ। ಜೇಕಬ್ ಲೋಬೊರವರು ನಿರ್ದೇಶಕರರಾಗಿದ್ದ ಅವಧಿಯಲ್ಲಿ ಪ್ರತ್ಯೇಕ ವಾರ್ಡ್ (Isolation Ward), ಹೋಮಿಯೋಪಥಿ ಔಷಧ ಉತ್ಪಾದನೆ, ಆಸ್ಪತ್ರೆಯ ಗೋದಾಮು ಮುಂತಾದ ಸೌಲಭ್ಯಗಳನ್ನು ಕಲ್ಪಿಸಲಾಗಿದೆ. ಆಸ್ಪತ್ರೆಯ ಹಾಸಿಗೆ ಸೌಲಭ್ಯವನ್ನು ೬೦೦ ರಿಂದ ೭೦೦ ಕ್ಕೆ ಏರಿಸಲಾಗಿದೆ. ಅದರಲ್ಲಿ ಕುಷ್ಠ ರೋಗಿಗಳಿಗೆ ೧೪೦ ಹಾಸಿಗೆಗಳು ಮತ್ತು ೨೬೦ ಹಾಸಿಗೆಗಳು ಇತರರಿಗೆ ಉಚಿತವಾಗಿ ಅಥವಾ ರಿಯಾಯಿತಿ ದರದಲ್ಲಿ ಲಭ್ಯವಿರುತ್ತಿತ್ತು.

೧೯೭೬ರಲ್ಲಿ ಕ್ಷಯ ರೋಗ ವಿಭಾಗದ ಬದಲಿಗೆ ವಾರಕ್ಕೊಮ್ಮೆ ಕ್ಷಯ ತಪಾಸಣಾ ಚಿಕಿತ್ಸಾಲಯ, ಉಚಿತ ಹೋಮಿಯೊ ಚಿಕಿತ್ಸಾಲಯಗಳು, ಔಷಧಾಲಯದ ೨ನೇ ಘಟಕ, ರೋಗ ನಿರೋಧಕ ಚಿಕಿತ್ಸಾಲಯ (Immunisation) ಹಾಗೂ ಆರ್ಥೋಪಿಡಿಕ್ ವಿಭಾಗಗಳನ್ನು ತೆರೆಯಲಾಗಿದೆ. ೧೯೭೭ರಲ್ಲಿ ಮಕ್ಕಳ ವಿಭಾಗ, ಇ. ಎನ್. ಟಿ. ವಿಭಾಗ, ಮಕ್ಕಳ ಶಸ್ತ್ರ ಚಿಕಿತ್ಸಾ ವಿಭಾಗಗಳನ್ನು ಪ್ರಾರಂಭಿಸಲಾಗಿದೆ. ೧೯೭೮ರಲ್ಲಿ ಹೃದ್ರೋಗ ಘಟಕ, ಅವಧಿ ಪೂರ್ವ ಜನಿಸಿದ ಶಿಶುವಿನ ಆರೈಕೆ ಘಟಕ, ಹೊಸ ಕ್ಷ-ಕಿರಣ ಘಟಕ ಸ್ಥಾಪನೆಯಾಗಿವೆ. ೧೯೭೮ರಲ್ಲಿ ಫಾ। ಪೀಟರ್ ಎನ್. ನೊರೊನ್ಹಾರವರು ನಿರ್ದೇಶಕರಾಗಿ ನೇಮಕಗೊಂಡು, ಆಸ್ಪತ್ರೆಯ ಜವಾಬ್ದಾರಿಯನ್ನು ವಹಿಸಿಕೊಂಡರು.[೧೯]

## ೩.೮. ಫಾ। ಮುಲ್ಲರ್ಸ್ ದಾದಿಯರ ಶಾಲೆ (Nursing School)

೧೮೮೦ರಲ್ಲಿ ಸ್ಥಾಪನೆಯಾದ ಫಾ। ಮುಲ್ಲರ್ಸ್ ಚಾರಿಟೇಬಲ್ ಸಂಸ್ಥೆಗಳು ಅದ್ಭುತ ಪ್ರಗತಿಯನ್ನು ಸಾಧಿಸಿವೆ. ೧೯೫೦ರ ದಶಕದಲ್ಲಿ ಆಸ್ಪತ್ರೆಯು ಬೆಳೆಯುವ ಹಂತದಲ್ಲಿದ್ದಾಗ ಮಾನವೀಯ ಸೇವೆಗಾಗಿ ಬದ್ಧತೆ ಇರುವ ದಾದಿಯರನ್ನು ರೂಪಿಸುವುದಕ್ಕಾಗಿ ದಾದಿಯರ ಶಾಲೆಯ ಸ್ಥಾಪನೆಯಾಗಿದೆ. ಪ್ರಾರಂಭದಲ್ಲಿ ಆಸ್ಪತ್ರೆಯ ಆ ಯೋಜನೆಗೆ ಸರ್ಕಾರದಿಂದ ಯಾವುದೇ ಪ್ರೋತ್ಸಾಹ ದೊರೆಯಲಿಲ್ಲ. ಆದರೆ ನಿರಂತರ ಪ್ರಯತ್ನದ ಫಲವಾಗಿ ಕಡೆಗೆ ೧೯೫೯ರಲ್ಲಿ ಪರವಾನಿಗೆ ದೊರೆತಿದೆ. ಫಾ। ಮುಲ್ಲರ್ಸ್ ಆಸ್ಪತ್ರೆಯ ಸಿಬ್ಬಂದಿಗಳ ನಿರಂತರ ಪ್ರೋತ್ಸಾಹ ಮತ್ತು ಸಹಕಾರದಿಂದ ೧೨ ವಿದ್ಯಾರ್ಥಿಗಳಿಂದ ೧೬ ಜುಲೈ ೧೯೫೯ರಂದು ದಾದಿಯರ ಶಾಲೆ ಆರಂಭಗೊಂಡಿತು. ನರ್ಸಿಂಗ್ ಶಾಲೆ ಈಗಾಗಲೇ ೧೫೦೦ ಕ್ಕಿಂತಲೂ ಹೆಚ್ಚು ದಾದಿಯರನ್ನು ಮತ್ತು ಸೂಲಗಿತ್ತಿಯರನ್ನು, ಸಮಾಜಕ್ಕೆ ನೀಡಿದೆ. ಅಂತೆಯೇ ಪದವಿ ಪಡೆದ ದಾದಿಯರಿಗಾಗಿ ಬೇಡಿಕೆ ಅಧಿಕವಾದಾಗ ೧೯೮೭ರಲ್ಲಿ ದಾದಿಯರ ಮಹಾವಿದ್ಯಾಲಯದ

ಸ್ಥಾಪನೆಯಾಯಿತು. ಆರಂಭದಲ್ಲಿ ೨೬ ವಿದ್ಯಾರ್ಥಿಗಳಿದ್ದರು. ೪ ವರ್ಷದ ಬಿ. ಎಸ್ಸಿ. ನರ್ಸಿಂಗ್ ಮುಗಿಸಿದವರಿಗೆ ಎರಡು ವರ್ಷದ ಸರ್ಟಿಫಿಕೇಟ್ ಕೋರ್ಸನ್ನು ೧೦ ವಿದ್ಯಾರ್ಥಿಗಳೊಂದಿಗೆ ಆರಂಭಿಸಲಾಯಿತು.[೨೦] ೧೯೯೨ರಲ್ಲಿ ಸ್ನಾತಕೋತ್ತರ ಪದವಿ ಅಥವಾ ಎಂ.ಎಸ್ಸಿ. ನರ್ಸಿಂಗನ್ನು ೬ ವಿದ್ಯಾರ್ಥಿಗಳೊಂದಿಗೆ ಆರಂಭಿಸಲಾಗಿದೆ. ೧೯೯೯ರಲ್ಲಿ ಸಾಮಾನ್ಯ ನರ್ಸಿಂಗ್ ಹಾಗೂ ಸೂಲಗಿತ್ತಿಯರ ಶಿಕ್ಷಣವನ್ನು ನರ್ಸಿಂಗ್ ಕಾಲೇಜಿನ ಅಧೀನಕ್ಕೊಳಪಡಿಸಲಾಯಿತು. 'ಶೋಧಿಸು, ಅನ್ಯರೊಂದಿಗೆ ಸಹಭಾಗಿತ್ವ ಹೊಂದಿ ಅವರ ಬಗ್ಗೆ ಲಕ್ಷ್ಯವಿಡು' ಎಂಬ ಧ್ಯೇಯ ವಾಕ್ಯ ಹೊಂದಿರುವ ಫಾ। ಮುಲ್ಲರ್ಸ್ ದಾದಿಯರ ಮಹಾವಿದ್ಯಾಲಯವು ದಕ್ಷಿಣ ಭಾರತದ ಪ್ರಥಮ ದಾದಿಯರ ತರಬೇತಿ ಸಂಸ್ಥೆ ಎಂದು ಪರಿಗಣಿಸಲ್ಪಟ್ಟಿರುವುದು ಮಾತ್ರವಲ್ಲದೆ, ಇಲ್ಲಿ ತರಬೇತಿ ಹೊಂದಿದ ದಾದಿಯರಿಗೆ ಭಾರತದಲ್ಲಿ ಮತ್ತು ಹೊರದೇಶಗಳಲ್ಲಿಯೂ ಉತ್ತಮ ಬೇಡಿಕೆ ಇದೆ.[೨೧]

## ೩.೯. ಹೋಮಿಯೋಪಥಿ ಚಿಕಿತ್ಸೆ

ಹೋಮಿಯೋಪಥಿ ಚಿಕಿತ್ಸಾ ಕ್ರಮವನ್ನು ಜರ್ಮನಿಯ ಅಲೋಪಥಿ ವೈದ್ಯರಾದ ಡಾ. ಸಾಮುವೆಲ್ ಹಾನ್ನೆಮನ್‌ರವರು ೧೮೦೦ ರಲ್ಲಿ ಕಂಡುಹಿಡಿದರು. ರಷ್ಯಾ, ಬ್ರೆಜಿಲ್, ಮೆಕ್ಸಿಕೊ, ಫ್ರಾನ್ಸ್, ಪಶ್ಚಿಮ ಜರ್ಮನಿ ಮತ್ತು ಇಂಗ್ಲೆಡ್‌ಗಳಲ್ಲಿ ಈ ಚಿಕಿತ್ಸಾ ವಿಧಾನವನ್ನು ರಾಷ್ಟ್ರೀಯ ಮಟ್ಟದಲ್ಲಿ ಪ್ರಯೋಗಿಸುತ್ತಾರೆ. ಭಾರತಕ್ಕೆ ಈ ಪದ್ಧತಿಯು ಹತ್ತೊಂಬತ್ತನೆಯ ಶತಮಾನದ ಮಧ್ಯ ಭಾಗದಲ್ಲಿ ಬಂದಿದೆ. ದಕ್ಷಿಣ ಭಾರತದಲ್ಲಿ ಮತ್ತು ಪ್ರತ್ಯೇಕವಾಗಿ ಮಂಗಳೂರಿನಲ್ಲಿ ಹೋಮಿಯೋಪಥಿ ಚಿಕಿತ್ಸಾ ಕ್ರಮವನ್ನು ಫಾ। ಆಗಸ್ಟಸ್ ಮುಲ್ಲರ್ ಅವರು ಪ್ರಚಾರಕ್ಕೆ ತಂದರು. ಈ ಚಿಕಿತ್ಸಾ ಕ್ರಮದಲ್ಲಿ ಅವರು ಎಷ್ಟು ಪ್ರವೀಣರಾಗಿದ್ದರೆಂದರೆ ಇಡೀ ಭಾರತದಿಂದ ಮಾತ್ರವಲ್ಲದೆ ವಿದೇಶಗಳಿಂದ ಕೂಡ ರೋಗಿಗಳು ಔಷಧವನ್ನು ಪಡೆಯಲು ಬರುತ್ತಿದ್ದರು ಅಥವಾ ಇಲ್ಲಿಂದ ಔಷಧಿಯನ್ನು ತರಿಸಿಕೊಳ್ಳುತ್ತಿದ್ದರು. ಅಲೋಪಥಿ ಚಿಕಿತ್ಸಾ ಕ್ರಮದಲ್ಲಿ ವಿವಿಧ ಔಷಧಿಗಳು ಬೆರೆತು ಒಂದು ಔಷಧಿ ತಯಾರಾದರೆ ಹೋಮಿಯೋಪಥಿಯ ಪ್ರತಿಯೊಂದು ಔಷಧಿಯಲ್ಲಿ ಒಂದೊಂದೇ ಮೂಲ ಔಷಧ ಅಥವಾ ಅದರದ್ದೇ ಕಡಿಮೆ ಶಕ್ತಿಯ ರೂಪ ಇರುತ್ತದೆ. ಈ ಔಷಧಿಗಳನ್ನು ಆಲ್ಕೋಹಾಲ್ ಅಥವಾ ಹಾಲು ಸಕ್ಕರೆಯ (Sugar Of Milk) ಗುಳಿಗೆಗಳಲ್ಲಿ ಹಾಗೂ ಪುಡಿಯಲ್ಲಿ ಬೆರೆಸಿ ರೋಗಿಗಳಿಗೆ ನೀಡಲಾಗುವುದು.[೨೨] ಹೋಮಿಯೋಪಥಿ ಚಿಕಿತ್ಸಾ ಕ್ರಮದ ತತ್ತ್ವ ಡಾ. ಹಾನ್ನೆಮನರು ಬರೆದ "ಒರ್ಗಾನೊನ್" ಎಂಬ ಗ್ರಂಥದ ಅನುಸಾರ ಇದೆ. ಆ ಪುಸ್ತಕದಲ್ಲಿ ವೈದ್ಯರ ಕಾರ್ಯ್ದಗಳು, ಔಷಧಿ ಕೊಡುವ ರೀತಿ, ಔಷಧಿ ತಯಾರಿಸುವ ರೀತಿ, ಮನುಷ್ಯನ ದೇಹದ ಶಕ್ತಿಗಳು, ರೋಗಗಳಿಗೆ ಕಾರಣಗಳು ಇತ್ಯಾದಿ ವಿವರಗಳಿವೆ. ಅದಲ್ಲದೆ ಸರ್ವ

ಔಷಧಗಳ ಮೂಲ ರೂಪ, ಆ ಔಷಧಿಗಳಿಂದ ಮನಸ್ಸಿನ ಮೇಲೆ, ಶರೀರದ ಮೇಲೆ ಹಾಗೂ ಶರೀರದ ಅವಯವಗಳ ಮೇಲೆ ಆಗುವ ಪರಿಣಾಮಗಳನ್ನು ಆ ಪುಸ್ತಕದಲ್ಲಿ ವಿವರಿಸಲಾಗಿದೆ.[೨೨]

### ೩.೧೦. ಫಾ। ಮುಲ್ಲರ್ಸ್ ಹೋಮಿಯೋಪಥಿಕ್ ವೈದ್ಯಕೀಯ ಕಾಲೇಜು

ಫಾ। ಮುಲ್ಲರ್ಸ್ ಹೊಮಿಯೋಪಥಿಕ್ ವೈದ್ಯಕೀಯ ಕಾಲೇಜನ್ನು ೫೦ ವಿದ್ಯಾರ್ಥಿಗಳೊಂದಿಗೆ ೧೯೮೫ರಲ್ಲಿ ಸ್ಥಾಪಿಸಲಾಯಿತು. ಅಲ್ಲಿ ವಿದ್ಯಾಭ್ಯಾಸ ಮಾಡಿದ ವಿದ್ಯಾರ್ಥಿಗಳು ಭಾರತ ಮಾತ್ರವಲ್ಲದೆ ಹೊರದೇಶಗಳಲ್ಲಿಯೂ ಯಶಸ್ವಿಯಾಗಿ ಅಭ್ಯಾಸಿಸುತ್ತಿದ್ದಾರೆ. ಫಾ। ಮುಲ್ಲರ್ಸ್ ಹೋಮಿಯೋಪಥಿಕ್ ಕಾಲೇಜು ವಿದ್ಯಾರ್ಥಿಗಳಲ್ಲಿ ದಕ್ಷತೆ ಮತ್ತು ಬದ್ಧತೆಯನ್ನು ಮೂಡಿಸಿರುವುದೇ ಅಲ್ಲದೆ, ಶೈಕ್ಷಣಿಕವಾಗಿ ಮತ್ತು ಚಿಕಿತ್ಸಕರಾಗಿ ಅವರು ಸಮಾಜದ ಒಳಿತಿಗಾಗಿ ದುಡಿಯುವಂತೆ ಅವರನ್ನು ರೂಪುಗೊಳಿಸುತ್ತದೆ. ಈಗಾಗಲೇ ಈ ಕಾಲೇಜಿನಿಂದ ತೇರ್ಗಡೆಯಾಗಿ ಹೊರಹೋಗಿರುವವರಲ್ಲಿ ಅನೇಕರು ವಿವಿಧ ಸಂಸ್ಥೆಗಳಲ್ಲಿ ಬೋಧಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇನ್ನು ಹಲವರು ತಮ್ಮದೇ ಚಿಕಿತ್ಸಾಲಯಗಳನ್ನು ಸ್ಥಾಪಿಸಿ ಯಶಸ್ವಿಯಾಗಿ ಮುನ್ನಡೆಯುತ್ತಿದ್ದಾರೆ. ಹದಿಮೂರು ವರ್ಷಗಳ ನಿಸ್ವಾರ್ಥ ಸೇವೆಯ ಬಳಿಕ ೧೯೯೮ರಲ್ಲಿ ಬೆಂಗಳೂರಿನ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನ ವಿಶ್ವವಿದ್ಯಾಲಯ ಹಾಗೂ ನವದೆಹಲಿಯ ಹೋಮಿಯೋಪಥಿಯ ಕೇಂದ್ರೀಯ ಸಮಿತಿಯವರು ಫಾ। ಮುಲ್ಲರ್ ಹೋಮಿಯೋಪಥಿ ವೈದ್ಯಕೀಯ ಕಾಲೇಜನ್ನು ಸ್ನಾತಕೋತ್ತರ ಅಧ್ಯಯನ ಕೇಂದ್ರವೆಂದು ಮಾನ್ಯತೆ ಮಾಡಿವೆ. ಅಲ್ಲದೆ, ಹೋಮಿಯೋಪಥಿಯಲ್ಲಿ ಎಂ. ಡಿ. ಕೋರ್ಸ್ ಆರಂಭಿಸಲು ಈಗಾಗಲೇ ಅಗತ್ಯದ ಮಾನ್ಯತೆ ದೊರಕಿರುತ್ತದೆ.[೨೪] ಫಾ। ಮುಲ್ಲರ್ಸ್ ಹೋಮಿಯೋಪಥಿಕ್ ವೈದ್ಯಕೀಯ ಕಾಲೇಜು, ಫಾ. ಮುಲ್ಲರ್ಸ್ ಚಾರಿಟೇಬಲ್ ಸಂಸ್ಥೆಗಳ ಶಾಖೆಯಾಗಿದೆ. ಅದು ಮಂಗಳೂರು ಧರ್ಮಪ್ರಾಂತ್ಯದ ಆಡಳಿತಕ್ಕೊಳಪಟ್ಟ ಧಾರ್ಮಿಕ ಅಲ್ಪ ಸಂಖ್ಯಾತ ಶಿಕ್ಷಣ ಸಂಸ್ಥೆಯಾಗಿದ್ದು ಮುಖ್ಯವಾಗಿ ಕ್ರೈಸ್ತ ಸಮುದಾಯದವರಿಗಾಗಿ ಸ್ಥಾಪಿಸಲ್ಪಟ್ಟಿದೆ. ಹೀಗಿದ್ದರೂ ಅಲ್ಲಿ ಎಲ್ಲಾ ಜಾತಿ, ಧರ್ಮ ಮತ್ತು ಸಮುದಾಯದ ರೋಗಿಗಳ ಶುಶ್ರೂಷೆಗೆ ಮುಕ್ತ ಅವಕಾಶವಿದೆ. ಪ್ರಾರಂಭದಲ್ಲಿ ಅದು ಮಂಗಳೂರು ವಿಶ್ವವಿದ್ಯಾಲಯದ ಅದೀನದಲ್ಲಿದ್ದಿತು. ಆದರೆ ೧೯೯೬ರಲ್ಲಿ ಅದನ್ನು ಬೆಂಗಳೂರಿನ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನ ವಿಶ್ವ ವಿದ್ಯಾಲಯದ ಸ್ವಾಮ್ಯಕ್ಕೆ ಒಳಪಡಿಸಲಾಗಿದೆ.[೨೫]

### ೩.೧೧. ಫಾ। ಮುಲ್ಲರ್ಸ್ ವೈದ್ಯಕೀಯ ಕಾಲೇಜು

ಅಲೋಪತಿ ಕಾಲೇಜು ಸ್ಥಾಪಿಸಬೇಕೆಂಬ ಆಲೋಚನೆ ೧೯೬೫-೬೬ರ ಸಮಯದಲ್ಲಿಯೇ ಫಾ। ಮುಲರ್ಸ್ ಚಾರಿಟೇಬಲ್ ಸಂಸ್ಥೆಗಳಿಗೆ ಇತ್ತು. ಅಂದಿನ ನಿರ್ದೇಶಕರಾಗಿದ್ದ

ಫಾ। ಮರಿಯನ್ ಫರ್ನಾಂಡಿಸ್‌ರವರು ಆ ಯೋಜನೆಯನ್ನು ಕೈಗೆತ್ತಿಕೊಳ್ಳಲು ತುಂಬಾ ಆಸಕ್ತರಾಗಿದ್ದರು. ಆದರೆ ಬೆಂಗಳೂರಿನ ಸೈಂಟ್ ಜಾನ್ಸ್ ವೈದ್ಯಕೀಯ ಕಾಲೇಜನ್ನು ಸ್ಥಾಪಿಸುವ ಯೋಜನೆ ಜಾರಿಗೆ ಬರುವುದರಲ್ಲಿದ್ದುದರಿಂದ ಫಾ। ಮುಲ್ಲರ್ಸ್ ಯೋಜನೆಯನ್ನು ಕೈ ಬಿಡಬೇಕಾಯಿತು. ಕಡೆಗೆ ಹೋಮಿಯೋಪಥಿಕ್ ಕಾಲೇಜನ್ನು ೧೯೮೫ರಲ್ಲಿ ಆರಂಭಿಸಲಾಯಿತು. ೧೯೮೮ರಲ್ಲಿ ಮೊನ್ಸಿಞೋರ್. ಎ. ಎಫ್ ಡಿ'ಸೋಜರವರು ಸಂಸ್ಥೆಯ ನಿರ್ದೇಶಕರ ಜವಾಬ್ದಾರಿಯನ್ನು ವಹಿಸಿಕೊಂಡರು. ಸಂಸ್ಥೆಯಲ್ಲಿ ನಿಸ್ವಾರ್ಥ ಸೇವೆಯಿಂದ ದುಡಿಯುವ ಪ್ರಸಿದ್ಧ ವೈದ್ಯರುಗಳು ವೈದ್ಯಕೀಯ ಕಾಲೇಜುಗಳಿರುವ ಆಸ್ಪತ್ರೆಗಳೆಡೆಗೆ ಆಕರ್ಷಿತರಾಗುತ್ತಿದ್ದರು. ತಾವು ತಪಾಸಣೆ ಮಾಡಿ ನೀಡಿದ ಸಲಹೆಗಳು ಮತ್ತು ಔಷಧಗಳ ದಾಖಲೆಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸಿಡಲು ಹಿರಿಯ ವಸತಿ ಅಧಿಕಾರಿಯ ಕೊರತೆ ಇತ್ತು. ಆದುದರಿಂದ, ಕ್ರಮಬದ್ಧವಾದ ವೈದ್ಯಕೀಯ ಸೇವೆ ನೀಡುವುದು ಕಷ್ಟ ಸಾಧ್ಯವಾಗಿತ್ತು. ಅಲ್ಲದೆ ಹೊರರೋಗಿಗಳ ಮತ್ತು ವಾರ್ಡ್‌ಗಳಲ್ಲಿನ ರೋಗಿಗಳ ಸಂಖ್ಯೆ ದಿನದಿಂದ ದಿನಕ್ಕೆ ಇಳಿಮುಖವಾಗುತ್ತಿತ್ತು. ಇಂತಹ ಪರಿಸ್ಥಿತಿಯಲ್ಲಿ ಆಡಳಿತ ಮಂಡಳಿಯವರು ಆಧುನಿಕ ಔಷಧದಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ಆರಂಭಿಸುವ ಯೋಚನೆ ಮಾಡಿತು. ಆಡಳಿತ ಮಂಡಳಿಯವರ ಮುಖ್ಯ ಉದ್ದೇಶ ಒಳ್ಳೆಯ ಸೇವೆಯನ್ನು ಜನರಿಗೆ ನೀಡುವುದು ಮತ್ತು ವೈದ್ಯರುಗಳನ್ನು ಬದ್ಧತೆಯಿಂದ ಸೇವೆ ಮಾಡುವ ಹಾಗೆ ಪ್ರೋತ್ಸಾಹಿಸುವುದು ಆಗಿತ್ತು.

೧೯೮೯ರಲ್ಲಿ ಫಾ। ಮುಲ್ಲರ್ಸ್ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಎಜುಕೇಶನ್ ಆ್ಯಂಡ್ ರಿಸರ್ಚ್ ಅನ್ನು ಸ್ಥಾಪಿಸಿ ಸ್ನಾತಕೋತ್ತರ ಕೋರ್ಸ್‌ಗಾಗಿ ಅರ್ಜಿ ಸಲ್ಲಿಸಲಾಯಿತು. ರಾಷ್ಟ್ರೀಯ ಪರೀಕ್ಷಾ ಮಂಡಳಿಯಿಂದ ಒಪ್ಪಿಗೆಯನ್ನು ಪಡೆದು ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಇದ್ದರೂ ಒಳರೋಗಿಗಳ ದಾಖಲೆಗಳನ್ನು ವ್ಯವಸ್ಥಿತವಾಗಿ ಜೋಡಿಸಲು ಈ ವಿದ್ಯಾರ್ಥಿಗಳು ನೆರವಾದರು. ಇಂಥ ಕಠಿಣ ಪರಿಸ್ಥಿತಿಯಲ್ಲಿ ಆಡಳಿತ ಮಂಡಳಿಗೆ ಜಿಲ್ಲೆಯ ಸಂಸ್ಥೆಯೊಂದು ಪ್ರಸ್ತಾವನೆಯೊಂದನ್ನು ಸಲ್ಲಿಸಿತು. ಅದರ ಪ್ರಕಾರ ವೈದ್ಯಕೀಯ ಕಾಲೇಜು ಸ್ಥಾಪನೆಗೆ ಅವರಿಗೆ ೧೦೦ ಹಾಸಿಗೆಗಳ ಆಸ್ಪತ್ರೆಯೊಂದರ ಅಗತ್ಯವಿತ್ತು. ಇದಕ್ಕಾಗಿ ಫಾ। ಮುಲ್ಲರ್ಸ್‌ಗೆ ಅವರು ಮನವಿ ಸಲ್ಲಿಸಿ ಅವರಿಗೆ ೧೦೦ ಹಾಸಿಗೆಗಳನ್ನು ನೀಡಬೇಕಾಗಿ ಕೇಳಿಕೊಂಡಿದ್ದರು. ಆದರೆ ಆ ಮನವಿಗೆ ಪುರಸ್ಕಾರ ಲಭಿಸಲಿಲ್ಲ. ಬದಲಾಗಿ ತಾವೇ ವೈದ್ಯಕೀಯ ಕಾಲೇಜು ಸ್ಥಾಪನೆ ಮಾಡುವ ಬಗ್ಗೆ ನಿರ್ಣಯವೊಂದನ್ನು ತೆಗೆದುಕೊಳ್ಳಲಾಯಿತು. ಆ ಪ್ರಕಾರ ೧೯೮೯ರಲ್ಲಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಎಂ. ಬಿ.ಬಿ. ಎಸ್. ಹಾಗೂ ಸ್ನಾತಕೋತ್ತರ ಕೋರ್ಸ್‌ಗಳಿಗೆ ಫಾ। ಮುಲ್ಲರ್ಸ್‌ನಲ್ಲಿ ಪರವಾನಿಗೆಯನ್ನು ಕೇಳಲಾಯಿತು. ಸ್ಥಳೀಯ ತನಿಖಾ ಸಮಿತಿಯನ್ನು ವಿಶ್ವವಿದ್ಯಾಲಯದವರು ರಚಿಸಿ ಅದರ ಶಿಫಾರಸಿನಂತೆ

೧೦೦ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳಬಹುದಾದ ಎಂ.ಬಿ.ಬಿ.ಎಸ್. ಕೋರ್ಸ್‌ಗೆ ಒಪ್ಪಿಗೆ ನೀಡಲಾಯಿತು. ಅಲ್ಲದೇ ಕುಷ್ಠರೋಗಿಗಳ ಶುಶ್ರೂಷೆಯಲ್ಲಿ ಈ ಸಂಸ್ಥೆ ಶತಮಾನಕ್ಕಿಂತಲೂ ಹೆಚ್ಚಿನ ಕಾಲ ಸೇವೆ ಸಲ್ಲಿಸಿದ್ದುದ್ದರಿಂದ ಚರ್ಮರೋಗದಲ್ಲಿ ಸ್ನಾತಕೋತ್ತರ ಕೋರ್ಸ್ ಆರಂಭಿಸಲು ಕೂಡ ಅನುಮತಿ ನೀಡಲಾಯಿತು. ವಿಶ್ವ ವಿದ್ಯಾಲಯದ ಒಪ್ಪಿಗೆ ಪಡೆದು ಚರ್ಮರೋಗ ಸ್ನಾತಕೋತ್ತರ ವಿಭಾಗವನ್ನು ಜೂನ್ ೧೯೯೧ರಲ್ಲಿ ಆರಂಭಿಸಲಾಗಿದೆ. ಮುಂದೆ ಸ್ನಾತಕೋತ್ತರ ಕೋರ್ಸ್‌ಗಳನ್ನು ಬೇರೆ ಬೇರೆ ವಿಷಯಗಳಲ್ಲಿ ಪ್ರಾರಂಭಿಸಲಾಗಿದೆ.[೨೬] ವಿಶ್ವವಿದ್ಯಾಲಯದವರು ಎಂ. ಬಿ. ಬಿ. ಎಸ್. ಕೋರ್ಸ್ ಪ್ರಾರಂಭಿಸಲು ಒಪ್ಪಿಗೆ ನೀಡಿದ್ದರೂ ಹಲವಾರು ವರ್ಷಗಳ ತನಕ ಆಡಳಿತ ಮಂಡಳಿಯವರು ಅದಕ್ಕಾಗಿ ಕಾಯಬೇಕಾಯಿತು. ಕಡೆಗೆ ೧೯೯೯ರಲ್ಲಿ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯದ ಸುತ್ತೋಲೆಯಂತೆ ವೈದ್ಯಕೀಯ ಕಾಲೇಜು ಸ್ಥಾಪನೆಗೆ ಹಾಗೂ ಎಂ. ಬಿ. ಬಿ. ಎಸ್. ಕೋರ್ಸ್‌ಗೆ ಒಪ್ಪಿಗೆ ದೊರಕಿತು.

### ೩.೧೨. ಫಿಸಿಯೋಥೆರಪಿ

ಫಾ। ಮುಲ್ಲರ್ಸ್ ಆಸ್ಪತ್ರೆಯ ಫಿಸಿಯೋಥೆರಪಿ ಘಟಕವನ್ನು ೫ ಜುಲೈ ೧೯೬೭ರಂದು ಅಂದಿನ ನಿರ್ದೇಶಕರಾಗಿದ್ದ ಫಾ। ಮರಿಯನ್ ಫೆರ್ನಾಂಡಿಸ್ ಮತ್ತು ಫ್ರಾನ್ಸಿಸ್ ಫೆರ್ನಾಂಡಿಸ್ ಅವರ ನಿರಂತರ ಪ್ರಯತ್ನದ ಫಲವಾಗಿ ಸ್ಥಾಪಿಸಲಾಗಿದೆ. ವೆಲ್ಲೂರಿನ ಕ್ರಿಶ್ಚಿಯನ್ ಮೆಡಿಕಲ್ ಕಾಲೇಜಿನಲ್ಲಿ ತರಬೇತಿ ಪಡೆದ ಫ್ರಾನ್ಸಿಸ್ ಫೆರ್ನಾಂಡಿಸ್ ಮತ್ತು ಭ। ಒಡಿಲಿಯ ಎಂ. ಜೇಕಬ್ ಅವರು ಫಿಸಿಯೋಥೆರಪಿ ಘಟಕದ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ಭ। ಒಡಿಲಿಯ ಅವರು ಮುಂಬಯಿಯಲ್ಲಿ ಪುನರ್ವಸತಿ ದಾದಿಯ ತರಬೇತಿ ಪಡೆದಿದ್ದರು. ಕ್ರಮೇಣ ಪ್ಯಾರಾ ಮೆಡಿಕಲ್‌ನಲ್ಲಿ ಡಿಪ್ಲೋಮ ಹೊಂದಿದ್ದ ಭ। ಲೆತಿಷಿಯ ಸಿ. ಕುರಿಯಕೋಸ್ ಅವರೂ ಫಿಸಿಯೋಥೆರಪಿ ವಿಭಾಗವನ್ನು ಸೇರಿಕೊಂಡರು. ಫಿಸಿಯೋಥೆರಪಿಯ ನಿಜವಾದ ಮೌಲ್ಯ ಸಂಸ್ಥೆಗೆ ಮನದಟ್ಟಾದಾಗ ಭ। ಲೀನಸ್ ರೋಡ್ರಿಗಸ್ ಅವರನ್ನು ಬ್ಯಾಚುಲರ್ ಪದವಿಗಾಗಿ ೧೯೯೧ರಲ್ಲಿ ಕಳುಹಿಸಿ, ಅವರು ಪದವಿ ಪಡೆದು ಸಂಸ್ಥೆಗೆ ಮರಳಿದಾಗ, ಆಗಾಗಲೇ ಮಂಗಳೂರು ವಿಶ್ವವಿದ್ಯಾಲಯದಿಂದ ಅನುಮತಿ ದೊರೆತಿದ್ದ ಫಿಸಿಯೋಥೆರಪಿ ಕೋರ್ಸನ್ನು ಪ್ರಾರಂಭಿಸಿದರು.ಫಾ। ಮುಲ್ಲರ್ಸ್ ಆಸ್ಪತ್ರೆಯ ಫಿಸಿಯೋಥೆರಪಿ ವಿಭಾಗ ಪ್ರಪಂಚದಾದ್ಯಂತ ಪ್ರಸಿದ್ಧವಾಗಿದೆ ಮತ್ತು ಅಲ್ಲಿ ತರಬೇತಿ ಪಡೆದ ವಿದ್ಯಾರ್ಥಿಗಳು ಭಾರತದಾದ್ಯಂತ ಹಾಗೂ ಹೊರದೇಶಗಳಲ್ಲಿಯೂ ಹರಡಿಕೊಂಡಿದ್ದಾರೆ.[೨೭]

## ೩.೧೩. ಫಾ। ಮುಲ್ಲರ್ಸ್ ಕುಷ್ಠರೋಗಿಗಳ ಆಸ್ಪತ್ರೆ

೧೮೯೦ರಲ್ಲಿ ಕುಷ್ಠವು ಒಂದು ವಾಸಿಯಾಗದ ಭಯಾನಕ ಮಾರಕ ರೋಗ ಎಂಬ ನಂಬಿಕೆ ಇದ್ದ ಕಾಲದಲ್ಲಿ , ಫಾ। ಆಗಸ್ಟಸ್ ಮುಲ್ಲರ್ ಅವರು ಕುಷ್ಠ ರೋಗಿಗಳ ಆಶ್ರಮವನ್ನು ಆರಂಭಿಸಿದರು. ಕುಷ್ಠರೋಗ ಒಂದು ಅಂಟು ರೋಗ ಎಂಬ ಕಾರಣಕ್ಕಾಗಿ ಕುಷ್ಠ ರೋಗಿಯನ್ನು ಸಮಾಜದಿಂದ ದೂರ ಇಡಲಾಗುತ್ತಿತ್ತು. ಅಂತಹ ಪರಿಸ್ಥಿತಿಯಲ್ಲಿ ಜೆಪ್ಪುವಿನಲ್ಲಿ ಒಂದು ಕುಷ್ಠ ರೋಗಿಗಳ ಆಶ್ರಮ ತೆರೆದು ಅಲ್ಲಿ ಅವರಿಗೆ ಗೌರವಯುತವಾದ ಜೀವನ ನಡೆಸಲು ಅವಕಾಶ ಕಲ್ಪಿಸಿಕೊಡಲಾಗಿದೆ. ಆ ಕಾಲದಲ್ಲಿ ಆಧುನಿಕ ವೈದ್ಯಕೀಯ ಚಿಕಿತ್ಸಾ ಕ್ರಮವಾಗಲೀ, ಆ ರೋಗವನ್ನು ನಿಯಂತ್ರಿಸುವ ಬಗೆಯಾಗಲೀ ತಿಳಿದಿರಲಿಲ್ಲ. ಕಂಕನಾಡಿಯಲ್ಲಿ ಕುಷ್ಠರೋಗಿಗಳ ಆಸ್ಪತ್ರೆ ನಿರ್ಮಾಣಗೊಂಡ ಬಳಿಕ ಅವರನ್ನು ಜೆಪ್ಪುವಿನಿಂದ ಸ್ಥಳಾಂತರಿಸಲಾಗಿದೆ. ೧೮೯೨ರಲ್ಲಿ ಆಸ್ಪತ್ರೆಗೆ "ಸಂತ ಜೋಸೆಫರ ಕುಷ್ಠ ರೋಗಿಗಳ ಆಸ್ಪತ್ರೆ ಮತ್ತು ಆಶ್ರಯ" ಎಂದು ಹೆಸರಿಡಲಾಗಿದೆ. ಆಸ್ಪತ್ರೆಯ ಖ್ಯಾತಿ ಹರಡುತ್ತಿದ್ದಂತೆ ಜಿಲ್ಲೆಯಿಂದ ಹಾಗೂ ಹೊರಗಿನಿಂದ ನತದೃಷ್ಟ ರೋಗಿಗಳು ಧಾವಿಸಿ ಬರಲಾರಂಭಿಸಿದರು. ಹೆಚ್ಚಿನ ರೋಗಿಗಳನ್ನು ಒಳ ರೋಗಿಗಳಾಗಿ ದಾಖಲಿಸಿಕೊಳ್ಳಲು ಅಸಾಧ್ಯವಾದುದರಿಂದ ಕಟ್ಟಡದ ವಿಸ್ತರಣೆಯನ್ನು ಮಾಡಿ ೫೦ ರೋಗಿಗಳಿಗೆ ಆಶ್ರಯ ನೀಡಲಾಯಿತು. ಆಸ್ಪತ್ರೆಯ ಆರಂಭದಿಂದಲೂ ಫಾ। ಮುಲ್ಲರ್ ಅವರೇ ರೋಗಿಗಳ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದರು ಮತ್ತು ಅವರ ಮರಣದ ನಂತರ ಸಿಸ್ಟರ್ಸ್ ಆಫ್ ಚಾರಿಟಿ ಸಭೆಯವರು ಅವರ ಜವಾಬ್ದಾರಿಯನ್ನು ವಹಿಸಿಕೊಂಡರು.

ಆದರೆ ಕುಷ್ಠರೋಗ ಆಸ್ಪತ್ರೆಗೆ ಹೊಸ ಹುರುಪು ಬಂದದ್ದು ಜಗತ್ಪ್ರಸಿದ್ಧ ಕುಷ್ಠ ರೋಗ ನಿರ್ಮೂಲನಾ ಸಂಸ್ಥೆಯಾದ ಸ್ವಿಸ್ ಎಮ್ಮಾಸ್‌ಗೆ ಸೇರಿದ ಸ್ವಿಸ್ ವೈದ್ಯರು ಜವಾಬ್ದಾರಿ ವಹಿಸಿಕೊಂಡ ನಂತರ. ಫಾ। ಮರಿಯನ್ ಅವರು ಸ್ವಿಸ್ ಎಮ್ಮಾಸ್ ಸಹಯೋಗದೊಂದಿಗೆ ಕುಷ್ಠರೋಗ ಆಸ್ಪತ್ರೆಯನ್ನು ನಡೆಸಲು ನಿರ್ಧರಿಸಿದ್ದರು. ವೆಲ್ಲೂರಿನ ಕುಷ್ಠ ರೋಗ ಆಸ್ಪತ್ರೆಯಲ್ಲಿ ತರಬೇತಿ ಪಡೆದ ಸ್ವಿಸ್ ಎಮ್ಮಾಸ್ ಸಂಸ್ಥೆಯ ಡಾ। ಹೆಯ್ಸ್ಲರವರು ಕಂಕನಾಡಿಯ ಫಾ। ಮುಲ್ಲರ್ಸ್ ಕುಷ್ಠರೋಗಿಗಳ ಆಸ್ಪತ್ರೆಯ ಮೇಲ್ವಿಚಾರಣೆ ವಹಿಸಿಕೊಂಡ ನಂತರ ಅವರು ಮೊದಲ ಆದ್ಯತೆಯನ್ನು 'ಶೂ ಕಾರ್ಯಗಾರ' (Shoe workshop) ಸ್ಥಾಪನೆಗೆ ನೀಡಿದರು. ಅಂತೆಯೇ, ಆಧುನಿಕ ಔಷಧಗಳು, ಪುನಾರಚನೆಯ ಶಸ್ತ್ರ ಚಿಕಿತ್ಸೆ (re constructive Surgery) ಹಾಗೂ ಪುನರ್ವಸತಿ ಕಾರ್ಯಗಳ ಮೂಲಕ ನೊಂದ ಜೀವಗಳಿಗೆ ಭರವಸೆ ತುಂಬಿದರು.

ಹೆಯ್ಡಿ ದತ್ ಅವರ ಸಾರಥ್ಯದಲ್ಲಿ ೧೯೬೫ರಲ್ಲಿ ಸ್ಥಾಪನೆಗೊಂಡ ಕುಷ್ಠರೋಗಿಗಳ ಪುನರ್ವಸತಿ ಘಟಕದ ರೂವಾರಿ ಡಾ. ಹೆಯ್ಸ್ಲ. ಇಂದಿಗೂ ಆ ಘಟಕ ಅವಿರತವಾಗಿ ಕಾರ್ಯನಿರತವಾಗಿ

ಗುಣಮುಖರಾದ ಕುಷ್ಠರೋಗಿಗಳ ಪಾಲಿಗೆ ಆಶಾಕಿರಣವಾಗಿದೆ. ಕುಷ್ಠರೋಗವನ್ನು ಪತ್ತೆ ಹಚ್ಚುವ ಸಲುವಾಗಿ SET (Survey, Education and Treatment) ಅಥವಾ ಸಮೀಕ್ಷೆ, ಶಿಕ್ಷಣ ಮತ್ತು ಚಿಕಿತ್ಸೆ ಕಾರ್ಯಕ್ರಮವನ್ನು ರೂಪಿಸಲಾಗಿದೆ. ಕುಷ್ಠ ರೋಗಕ್ಕೆ ಆಧುನಿಕ ಚಿಕಿತ್ಸೆ ನೀಡಲು ಫಾ। ಮುಲ್ಲರ್ ಆಸ್ಪತ್ರೆಗೆ ಸಾಧ್ಯವಾಗಿದ್ದರೆ ಅದರ ಕೀರ್ತಿ ನಿಸ್ಸಂಶಯವಾಗಿ ಸ್ವಿಸ್ ಎಮ್ಮಸ್ ಸಂಘಕ್ಕೆ ಸಲ್ಲಬೇಕು.[೨೮] ಡಾ. ಹೇಯ್ಸ್ಟರ ನಂತರ ಡಾ. ವಿನ್ಸ್ಟ್, ಡಾ. ವಿ. ಪಿ. ಮೆಕಡೆನ್ ಹಾಗೂ ಡಾ. ಎಸ್. ಇ. ಮೆಕಡೆನ್ ಅವರು ಸೇವೆ ಸಲ್ಲಿಸಿದರು. ೧೯೭೦ರಲ್ಲಿ ಡಾ. ಭ। ಇಮ್ಯಾಕುಲೇಟ್ ರೊಡ್ರಿಗಸ್‌ರವರು ಆಸ್ಪತ್ರೆಯ ಜವಾಬ್ದಾರಿಯನ್ನು ವಹಿಸಿಕೊಂಡು ರೋಗದ ಪತ್ತೆ ಹಚ್ಚುವಿಕೆ, ಚಿಕಿತ್ಸೆ, ಶಿಕ್ಷಣ ಹಾಗೂ ಪುನರ್‌ರಚನಾ ಶಸ್ತ್ರಚಿಕಿತ್ಸೆ ನಡೆಸಿಕೊಂಡು ಬರುತ್ತಿದ್ದಾರೆ. ಇವರಿಗೆ ಸಹಾಯಕರಾಗಿ ಡಾ. ಡೆರಿಕ್ ಲೋಬೊ ಹಾಗೂ ಡಾ. ಜೆರೊಮ್ ಪಿಂಟೋ ಅವರು ನೆರವಾಗುತ್ತಿದ್ದಾರೆ. ಭ। ಇಮ್ಯಾಕುಲೇಟ್ ಅವರ ಅವಧಿಯಲ್ಲಿ ಮಂಗಳೂರಿನ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ರೋಗದ ಲಕ್ಷಣಗಳನ್ನು ಪತ್ತೆ ಹಚ್ಚುವ ಕಾರ್ಯವನ್ನು ಕೈಗೊಳ್ಳಲಾಗಿದೆ. ವಿಸ್ತೃತ ಕಾರ್ಯಕ್ರಮದಡಿ ಚರ್ಮ ತಪಾಸಣೆಯನ್ನು ಮೂಡಬಿದ್ರೆ, ಬಂಟ್ವಾಳ, ಗಂಜಿಮಠ ಹಾಗೂ ಕಲ್ಲಮುಂಡ್ಕೂರುಗಳಲ್ಲಿ ವಾರಕ್ಕೊಮ್ಮೆ ಸಂಘಟಿಸಲಾಗಿದೆ.[೨೯]

### ೩.೧೪. ಕುಷ್ಠರೋಗದಿಂದ ಗುಣಮುಖರಾದವರ ಪುನರ್ವಸತಿ

ಫಾ। ಮುಲ್ಲರ್ಸ್‌ನ ಕುಷ್ಠರೋಗಿಗಳ ಪುನರ್ವಸತಿ ಘಟಕ ಆರಂಭವಾದ ಬಳಿಕ ಪ್ರಾರಂಭದಲ್ಲಿ ಪ್ರಾಯೋಗಿಕ ನೆಲೆಯಲ್ಲಿ ಒಂದು ಸಣ್ಣ ಜೀವನೋಪಾಯ ಥೆರಪಿ ಘಟಕವನ್ನು ಸ್ಥಾಪಿಸಲಾಯಿತು. ಆದರೆ ಫಾ। ಮರಿಯನ್ ಫೆರ್ನಾಂಡಿಸ್ ಅವರು ಅದನ್ನೊಂದು ಕುಷ್ಠರೋಗಿಗಳ ಪುನಾರಚನಾ ಶಸ್ತ್ರಚಿಕಿತ್ಸಾ ಕಾರ್ಯಕ್ರಮವಾಗಿಸಲು ಆಲೋಚಿಸಿದರು. ಅವರು ಫಿಸಿಯೋಥೆರಪಿ, ಜೀವನೋಪಾಯ ಥೆರಪಿ ಹಾಗೂ ಪುನರ್ವಸತಿ ಸೌಲಭ್ಯಗಳನ್ನು ಜಾರಿಗೆ ತಂದರು. ೧೯೬೫ರಲ್ಲಿ ಹೆಯ್ಡಿ ದತ್ತ್ (Zehnder) ಮಂಗಳೂರಿಗೆ ಆಗಮಿಸಿ ಸ್ವಿಸ್ ಎಮ್ಮಸ್ ಪಂಗಡದ ಜೀವನೋಪಾಯ ಥೆರಪಿ ಘಟಕವನ್ನು ಸೇರಿದರು. ಒಬ್ಬ ಕುಷ್ಠರೋಗಿಗೆ ಒಂದು ಉದ್ಯೋಗ ಕಲ್ಪಿಸಿದ ಬಳಿಕ ಅವನನ್ನು ಅವನ ಕುಟುಂಬದವರೂ ಸಮಾಜವೂ ಒಪ್ಪಿಕೊಂಡರೆ ಆಗ ಅವನ ಸಾಮಾಜಿಕ ಪುನರ್ವಸತಿಯಾಯಿತೆಂದು ಎಣಿಸಬಹುದು. ಕುಷ್ಠ ರೋಗಿಗಳಿಗೆ ವೈದ್ಯಕೀಯ ಪರಿಹಾರ ದೊರೆತರೆ ಮಾತ್ರ ಸಾಲದು,ಅವರು ಈಗಾಗಲೇ ಸಾಕಷ್ಟು ಕಾಯಿಲೆಯಿಂದಲೂ ಸಮಾಜದಿಂದ ದೂರವಾಗಿಯೂ ನೊಂದಿರುತ್ತಾರೆ. ಇಂಥವರ ನೋವು ನಿವಾರಣೆಗೆ ಪುನರ್ವಸತಿ ಘಟಕವು ವಿಶೇಷವಾದ ಕಾಳಜಿಯನ್ನು ತೋರಿಸುತ್ತಿದೆ.

ಜೀವನೋಪಾಯ ಥೆರಪಿ ಮತ್ತು ಪುನರ್ವಸತಿ ಕಾರ್ಯಕ್ರಮದಡಿ ಮೃದು ಮತ್ತು ನಿಷ್ಪೀಡಕ ವಸ್ತುಗಳನ್ನು ರೋಗಿಗಳ ಸಂವೇದನೆ ಇಲ್ಲದ ಕೈಗಳಲ್ಲಿ ನೀಡುವುದು ಅಗತ್ಯ. ಕುಷ್ಠರೋಗದಿಂದ ಗುಣಮುಖವಾಗಿರುವವರಿಗೆ ಎಷ್ಟು ಗಡಸಾಗಿರುವ ವಸ್ತುವನ್ನು ನೀಡಬಹುದು ಎಂದು ತಿಳಿದುಕೊಳ್ಳಬೇಕು. ಅಂದರೆ ಅವರ ಸಾಮರ್ಥ್ಯಕ್ಕೆ ತಕ್ಕುದಾದ ಜವಾಬ್ದಾರಿಯನ್ನು ವಹಿಸಿಕೊಡಬೇಕು. ಅವರಿಗೆ ಒದಗಿಸುವ ವಸ್ತುಗಳು ಆಕರ್ಷಕವಾಗಿಯೂ ಮತ್ತು ಉತ್ತಮ ಗುಣಮಟ್ಟವುಳ್ಳವಾಗಿಯೂ ಗಿರಾಕಿಗಳನ್ನು ಸೆಳೆಯುವಂತಿರಬೇಕು. ಮುಂದಿನ ಹೆಜ್ಜೆ ಗಿರಾಕಿಗಳನ್ನು ಸಂಧಿಸಿ ಅವರಿಂದ ಸಣ್ಣಪುಟ್ಟ ಆರ್ಡರ್‌ಗಳನ್ನು ಪಡೆಯುವುದು. ಕುಷ್ಠರೋಗವೆಂದರೇ ಜನರು ಭಯಪಡುತ್ತಾರೆ, ಹಾಗಿರುವಾಗ ಅವರು ತಯಾರಿಸಿದ ಉತ್ಪನ್ನಗಳನ್ನು ಮಾರಾಟ ಮಾಡುವುದು ಕಷ್ಟದ ಕೆಲಸ. ಅಲ್ಲದೆ, ಕುಷ್ಠ ರೋಗಿಗಳಿಗೆ ಉದ್ಯೋಗ ಸಿಗುವುದು ವಿರಳ. ಅಂಥ ಪರಿಸ್ಥಿತಿಯಲ್ಲಿ ಪುನರ್ವಸತಿ ಘಟಕ ಕಾರ್ಯೋನ್ಮುಖವಾಗಿ, ಘಟಕದಲ್ಲಿರುವವರಿಗೆ ಕೆಲಸ ಕಲಿಸಿಕೊಟ್ಟು ಅವರು ಬಯಸಿದರೆ ಆಸ್ಪತ್ರೆಯನ್ನು ಬಿಡಲು ಅನುಮತಿ ನೀಡುತ್ತದೆ. ಸ್ವ ಸಹಾಯ ಸಾಧನಗಳನ್ನು ಒದಗಿಸಿ ಅರೆ (piece) ಕಾರ್ಮಿಕರಾಗಿ ಘಟಕದಲ್ಲಿ ಅಥವಾ ಮನೆಯಲ್ಲಿ ಕೆಲಸ ಮಾಡಲು ಅವಕಾಶ ಕಲ್ಪಿಸಲಾಗುತ್ತದೆ. ಪುನರ್ವಸತಿ ಯೋಜನೆಯ ಬೆನ್ನೆಲುಬು ಗೃಹ ಕೈಗಾರಿಕೆ. ಅಲ್ಲಿ ಕುಷ್ಠರೋಗ ಪೀಡಿತರು, ಗುಣಮುಖರಾದ ಅಂಗ ಊನರು ಸ್ವ ಇಚ್ಛೆಯಿಂದ ಮುಕ್ತವಾಗಿ ಕೆಲಸ ಮಾಡಬಹುದು.[೩೦]

## ೩.೧೫. ಫಾ। ಮುಲ್ಲರ್ಸ್ ವೃತ್ತಿಪರ ಪುನರ್ವಸತಿ ಯೋಜನೆ (Vocational Rehabilitation Project )

ಫಾ। ಮರಿಯನ್ ಫೆರ್ನಾಂಡಿಸ್ ಅವರು ಅಂಗವಿಕಲರಿಗೆ ಉಪಶಮನ ಮಾಡುವ ಉದ್ದೇಶದಿಂದ ವೃತ್ತಿಪರ ಪುನರ್ವಸತಿ ಸಹಾಯ(ವಿ.ಆರ್.ಎ.) ಯೋಜನೆಯನ್ನು ಹಮ್ಮಿಕೊಂಡರು. ೧೯೬೯ರಲ್ಲಿ ಜಾರಿಗೆ ಬಂದ ಆ ಯೋಜನೆಯಂತೆ ಹೊಲಿಗೆ, ಮುದ್ರಣ, ಲಘು ಯಂತ್ರಕರ್ಮಿ (light mechanic) ಹಾಗೂ ಲಘು ಸುತಾರಿಕೆಗಳಲ್ಲಿ(light carpentry) ತರಬೇತಿ ನೀಡಲಾಗಿದೆ. ೧೯೭೫ರಲ್ಲಿ ವಿ. ಆರ್.ಎ. ಯೋಜನೆಯನ್ನು ಕುಷ್ಠರೋಗದಿಂದ ಗುಣಮುಖರಾದವರ ಪುನರ್ವಸತಿ ಘಟಕದೊಂದಿಗೆ ವಿಲೀನಗೊಳಿಸಲಾಗಿದೆ. ಆ ವಿಲೀನ ಪ್ರಕ್ರಿಯೆಯಿಂದ ಕುಷ್ಠರೋಗಿಗಳಿಗೆ ಶಿಕ್ಷಣ ದೊರೆತಿದೆ; ಅಸಹಾಯಕರಿಗೆ ಅವರ ಕುಟುಂಬ ಮತ್ತು ಸಮಾಜದೊಂದಿಗೆ ಒಂದಾಗಲು ಅವಕಾಶವಾಗಿದೆ. ಬಹುದೊಡ್ಡ ಸಂಖ್ಯೆಯಲ್ಲಿ ಕುಷ್ಠರೋಗಿಗಳು ಮತ್ತು ಇತರರನ್ನು ಅವರ ಜಾತಿ, ಕುಲ ಮತ್ತು ಧರ್ಮ ಪರಿಗಣಿಸದೆ ಪಾಲನೆ ಮಾಡಲಾಗುತ್ತಿದೆ.[೩೧]

## ೩.೧೬. ಫಾ। ಮುಲ್ಲರ್ಸ್ ಮನೋರೋಗ ಚಿಕಿತ್ಸಾ ವಿಭಾಗ

ಫಾ। ಮರಿಯನ್ ಫೆರ್ನಾಂಡಿಸ್ ಅವರು ೧೯೬೬ರಲ್ಲಿ ಮನೋರೋಗ ಚಿಕಿತ್ಸಾ ವಿಭಾಗವನ್ನು ಫಾ। ಮುಲ್ಲರ್ಸ್ ಆಸ್ಪತ್ರೆಯಲ್ಲಿ ಆರಂಭಿಸಿದರು. ಮನೋರೋಗಿಗಳ ಚಿಕಿತ್ಸೆಗಾಗಿ ಸ್ಥಾಪನೆಯಾಗಿರುವ ಆ ವಿಭಾಗವು ದೇಶದ ಪ್ರಾಚೀನ ಕೇಂದ್ರಗಳಲ್ಲಿ ಒಂದು. ಮನೋರೋಗ ವಿಭಾಗ ಸ್ಥಾಪನೆಯಾಗುವುದಕ್ಕಿಂತಲೂ ಮೊದಲು ಜನರು ಮಂತ್ರವಾದಿಗಳ, ಜಾದೂಗಾರರ ಹಾಗೂ ಪುರೋಹಿತರ ಬಳಿಗೆ ಹೋಗುತ್ತಿದ್ದರು. ಕೆಲವರು ಸ್ಥಳೀಯ ಪದ್ಧತಿಗಳಾದ ಗಿಡಮೂಲಿಕೆಗಳ ಎಣ್ಣೆ ಹಚ್ಚಿ ತಂಪುಗೊಳಿಸುವುದು, ಪೀಡೆಯಿಂದ ಬಳಲುತ್ತಿರುವವರನ್ನು ಜಲಪಾತದ ಕೆಳಗೆ ಕುಳ್ಳಿರಿಸುವುದು ಹಾಗೂ ಕೆಲವೊಮ್ಮೆ ಅವರನ್ನು ತೆಂಗಿನ ಮರಕ್ಕೆ ಕಟ್ಟಿ ಹತ್ತಿರದಲ್ಲಿರುವ ಬಾವಿಯಿಂದ ನೀರೆಳೆದು ಸತತವಾಗಿ ಅವರ ಮೇಲೆ ಸುರಿಯುವುದು ಮುಂತಾದ ಪ್ರಯೋಗಗಳನ್ನು ಮಾಡುತ್ತಿದ್ದರು.ಅವುಗಳಿಂದ ಗುಣ ಪಡಿಸಲಾಗದಿದ್ದಾಗ ಮ್ಯಾಜಿಸ್ಟ್ರೇಟರ ಪ್ರಮಾಣಪತ್ರವನ್ನು ಪಡೆದು ಕಣ್ಣಾನೂರು ಜೈಲು ಅಥವಾ ಬೆಂಗಳೂರಿನ ರಾಷ್ಟ್ರೀಯ ಮಾನಸಿಕ ಆರೋಗ್ಯ ಸಂಸ್ಥೆಗೆ ಕಳುಹಿಸಲಾಗುತ್ತಿತ್ತು. ಅಲ್ಲಿ ಮಾನಸಿಕ ರೋಗಿಯನ್ನು ತುಂಬಾ ತುಚ್ಛವಾಗಿ ಕಾಣುತ್ತಿದ್ದರು. ಮನೋರೋಗ ವಿಭಾಗವನ್ನು ಒಂದು ಸಾಮಾನ್ಯ ಆಸ್ಪತ್ರೆಯಲ್ಲಿ ಪ್ರಾರಂಭಿಸಿದಾಗ ರೋಗಿಗಳಿಗೆ ಹಚ್ಚಿದ ಕಳಂಕ ನಿವಾರಣೆಯಾಗಿ ತಮ್ಮವರನ್ನು ಹತ್ತಿರದಲ್ಲೇ ಚಿಕಿತ್ಸೆಗೆ ಒಳಪಡಿಸಬಹುದೆಂದು ಸಮಾಧಾನ ಪಡುವಂತಾಗಿದೆ. ಡಾ. ಕೆ.ಎಸ್. ಶೆಟ್ಟಿ ಅವರು ಮನೋರೋಗ ವಿಭಾಗದ ಪ್ರಥಮ ಮನೋರೋಗ ಚಿಕಿತ್ಸಕ ಹಾಗೂ ಸಂಸ್ಥಾಪಕರು. ಅವರು ದೆಹಲಿಯ ಅಖಿಲ ಭಾರತ ವೈದ್ಯ ವಿಜ್ಞಾನ ಸಂಸ್ಥೆಯಲ್ಲಿ ಮನೋರೋಗ ಚಿಕಿತ್ಸೆಯಲ್ಲಿ ಎಂ.ಡಿ. ಪದವಿ ಪಡೆದ ಮೊದಲ ಮಂಗಳೂರಿಗನೆಂಬ ಕೀರ್ತಿಗೆ ಪಾತ್ರರಾಗಿದ್ದಾರೆ. ಆಸ್ಪತ್ರಯ ಸಂದರ್ಶನ ಕೊಠಡಿ ಸಮೇತ ೨೫ ಹಾಸಿಗೆಗಳ ಜವಾಬ್ದಾರಿಯನ್ನು ಪ್ರಾರಂಭದಲ್ಲಿ ಅವರಿಗೆ ವಹಿಸಿದ್ದರು. ಆದರೆ, ರೋಗಿಗಳ ಸಂಖ್ಯೆ ಹೆಚ್ಚುತ್ತಿದ್ದಂತೆ ೧೦೦ ಹಾಸಿಗೆಗಳ ಪ್ರತ್ಯೇಕ ವಾರ್ಡ್ ವಹಿಸಿಕೊಟ್ಟರು. ಮೊನ್ಸಿಞೊರ್ ಎ.ಎಫ್. ಡಿ'ಸೋಜರವರು ಎರಡು ಪ್ರತ್ಯೇಕ ಮನೋರೋಗ ಚಿಕಿತ್ಸಾ ಘಟಕವನ್ನು ಸ್ಥಾಪಿಸಿದ್ದಾರೆ. ಹಾಗೂ ಫಾ। ಬರ್ನಾಡ್ ಮೋರಾಸ್‌ರವರ ಅವಧಿಯಲ್ಲಿ ಮನೋರೋಗ ಚಿಕಿತ್ಸೆಯ ಸ್ನಾತಕೋತ್ತರ ಕೋರ್ಸನ್ನು ಪ್ರಾರಂಭಿಸಿದರು. ೧೯೯೩ರಲ್ಲಿ ಸೈಕಿಯಾಟ್ರಿ ನರ್ಸಿಂಗ್‌ನಲ್ಲಿ ಎಂ. ಎಸ್. ಸಿ. ಪ್ರಾರಂಭಗೊಂಡಿದೆ.[೩೨]

## ೩.೧೭. ಫಾ। ಮುಲ್ಲರ್ಸ್ ಗ್ರಾಮೀಣ ಆರೋಗ್ಯ ಹಾಗೂ ಸಮುದಾಯದತ್ತ ಕಾರ್ಯಕ್ರಮ

೧೯೮೦ರಲ್ಲಿ ಫಾ। ಪೀಟರ್ ಎಸ್. ನೊರೋನ್ಹಾರವರು ಗ್ರಾಮೀಣ ಆರೋಗ್ಯ ಹಾಗೂ ಸಮುದಾಯದತ್ತ ಕಾರ್ಯಕ್ರಮವನ್ನು ಆರಂಭಿಸಿದರು.

೩.೧೭.೧. ಉದ್ದೇಶಗಳು:

೧. ಸಮುದಾಯ ಆರೋಗ್ಯ ಸೇವೆಯ ಮೂಲಕ ಪ್ರತಿಬಂಧಕ ಪರಿಹಾರಿಕಆರೋಗ್ಯವನ್ನು ಒದಗಿಸುವುದು.

೨. ದಕ್ಷಿಣ ಕನ್ನಡ ಜಿಲ್ಲೆಯ ಯಾವುದೇ ಭಾಗದಲ್ಲಿಯಾದರೂ ಸಂಚಾರಿ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸುವುದು.

ಆಸ್ಪತ್ರೆ ಆಡಳಿತವು ಅವಶ್ಯಕತೆಗನುಗುಣವಾಗಿ ಸ್ಥಳೀಯರನ್ನೊಳಗೊಂಡು ಗ್ರಾಮೀಣ ಕೇಂದ್ರಗಳಲ್ಲಿ ಗ್ರಾಮೀಣ ಆರೋಗ್ಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ನಿರ್ಧರಿಸಿದೆ. ಆರೋಗ್ಯ ಜಾಗೃತಿಗೆ ಒತ್ತು ನೀಡಿ, ಜನರ ಮತ್ತು ಸಮುದಾಯದ ಸರ್ವತೋಮುಖ ಅಭಿವೃದ್ಧಿಗಾಗಿ ಪ್ರಾಯೋಗಿಕವಾಗಿ ಜಲ್ಲಿಗುಡ್ಡೆ ಹಾಗೂ ಮುಲ್ಲರ್‌ಕಾಡ್ ಎಂಬ ಸ್ಥಳಗಳಲ್ಲಿ ೧೯೮೦ರಲ್ಲಿ ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ. ನಂತರದ ವರ್ಷಗಳಲ್ಲಿ ಕಾರ್ಯಕ್ರಮಗಳನ್ನು ಮಂಗಳೂರು, ಬಂಟ್ವಾಳ ಮತ್ತು ಬೆಳ್ತಂಗಡಿ ತಾಲೂಕುಗಳ ನಾನಾ ಗ್ರಾಮಗಳಲ್ಲಿ ಹಮ್ಮಿಕೊಂಡಿದೆ.[೩೩]

೩.೧೭.೨.ಆರೋಗ್ಯ ಶಿಕ್ಷಣ

ಆರೋಗ್ಯ ಶಿಕ್ಷಣ ಮತ್ತು ಗ್ರಾಮೀಣ ಆರೋಗ್ಯ ಇವು ಸಮುದಾಯದತ್ತ ಕಾರ್ಯಕ್ರಮದ ಪ್ರಧಾನ ಅಂಗ. ಈ ಯೋಜನೆಯಲ್ಲಿ ಆರೋಗ್ಯದ ಬಗ್ಗೆ ಅರಿವು ಮೂಡಿಸುವ ಕೆಲಸವನ್ನು ನಿರಂತರವಾಗಿ ವಾರದ ಕ್ಲಿನಿಕ್‌ಗಳಲ್ಲಿ, ಮನೆ ಭೇಟಿಯ ಸಮಯದಲ್ಲಿ ಮತ್ತು ಇತರ ಸಂದರ್ಭಗಳಲ್ಲಿ ಕೈಗೆತ್ತಿಕೊಳ್ಳಲಾಗುತ್ತದೆ. ವಾರದ ಕ್ಲಿನಿಕ್‌ಗಳನ್ನು ಗ್ರಾಮದ ಕೇಂದ್ರದಲ್ಲಿ ಆರೋಗ್ಯ ಇಲಾಖೆಯ ಸಿಬ್ಬಂದಿಗಳು ನಡೆಸಿಕೊಡುತ್ತಾರೆ. ಕ್ಷಯ ರೋಗ ಹಾಗೂ ಇತರ ಮಾರಕ ರೋಗಗಳ ಬಗ್ಗೆ ಗ್ರಾಮಗಳಿಂದ ಮಾಹಿತಿ ಸಂಗ್ರಹಿಸಿ, ಆರೋಗ್ಯ ಕಾರ್ಯಕರ್ತರ ಮೂಲಕ ನಿಗಾ ವಹಿಸಲಾಗುತ್ತದೆ. ಆರೋಗ್ಯ ಕಾರ್ಯಕರ್ತರು ಗಾಯಗಳನ್ನು ಶುಚಿಗೊಳಿಸಿ ಬ್ಯಾಂಡೇಜ್ ಮಾಡುವುದು, ಚುಚ್ಚುಮದ್ದು ನೀಡುವುದು ಹಾಗೂ ಸಣ್ಣ ಪುಟ್ಟ ನೋವುಗಳನ್ನು ಉಪಚರಿಸುವ ತರಬೇತಿಯನ್ನು ಆಸ್ಪತ್ರೆಯ ಸಿಬ್ಬಂದಿಗಳಿಂದ ಪಡೆದಿರುತ್ತಾರೆ. ಗ್ರಾಮದ ೭೫%ಕ್ಕಿಂತಲೂ ಹೆಚ್ಚು ಜನರು ರೋಗ ನಿರೋಧಕದ ಮಹತ್ವವನ್ನು ಅರಿತುಕೊಂಡಿರುವುದರಿಂದ, ಗ್ರಾಮ ಕೇಂದ್ರದಲ್ಲಿ ವಾರಕ್ಕೊಮ್ಮೆ ರೋಗ ನಿರೋಧಕ ಚಿಕಿತ್ಸೆಯನ್ನು ನೀಡಲಾಗುತ್ತದೆ. ಅಂತೆಯೇ, ಆರೋಗ್ಯವಂತರಾಗಿ ಜೀವಿಸಲು ಮಕ್ಕಳಿಗೆ ಪೌಷ್ಟಿಕ ಆಹಾರದ ಅಗತ್ಯವಿರುತ್ತದೆ. ಪೌಷ್ಟಿಕ ಆಹಾರದ ಕೊರತೆ ಇರುವ ಮಕ್ಕಳನ್ನು ಗುರುತಿಸಿ ಅವರಿಗೆ ಮೊಟ್ಟೆ, ಗೋಧಿ, ಹಾಲಿನ ಹುಡಿ ಮತ್ತು ವೈದ್ಯೋಪಚಾರ ನೀಡುವ ಕಾರ್ಯವನ್ನು ಗ್ರಾಮದ ಆರೋಗ್ಯ ಕಾರ್ಯಕರ್ತರು ಮಾಡುತ್ತಾರೆ. 'ಪಿ ಕಿಚನ್ ಗಾರ್ಡನಿಂಗ್' ಎಂಬ ವಿನೂತನ ಕಾರ್ಯಕ್ರಮವನ್ನು ಹಳ್ಳಿಯ ಜನರಿಗೆ ಪೌಷ್ಟಿಕ

ಮತ್ತು ಸಮತೋಲನದ ಆಹಾರ ಒದಗಿಸುವ ಉದ್ದೇಶದಿಂದ ಹಮ್ಮಿಕೊಳ್ಳಲಾಗುತ್ತಿದೆ. ತಮ್ಮ ಉಪಯೋಗಕ್ಕೆ ಅಗತ್ಯವಿರುವ ತರಕಾರಿ ಮತ್ತು ಹಣ್ಣು ಹಂಪಲುಗಳನ್ನು ತಾವೇ ಬೆಳೆಸಿ ಸ್ವಾವಲಂಬಿ ಜೀವನ ನಡೆಸಲು ತರಬೇತಿ ನೀಡುವುದು ಆ ಯೋಜನೆಯ ಬಹುಮುಖ್ಯ ಉದ್ಧೇಶವಾಗಿದೆ. ಆ ಯೋಜನೆಯಡಿಯಲ್ಲಿ ಜನರಿಗೆ ಉತ್ತಮ ತಳಿಯ ಸಸಿಗಳನ್ನು ಹಾಗೂ ಬಿತ್ತನೆ ಬೀಜಗಳನ್ನು ಪೂರೈಸಿ, ಕೃಷಿ ಶಿಕ್ಷಣ ನೀಡುವುದರೊಂದಿಗೆ ತೋಟಗಾರಿಕೆಯ ಪ್ರಾಮುಖ್ಯತೆ, ತರಕಾರಿ ಸೇವನೆಯ ಪ್ರಯೋಜನಗಳು ಮುಂತಾದ ವಿಷಯಗಳಲ್ಲಿ ಜಾಗೃತಿ ಮೂಡಿಸಲಾಗಿದೆ.[೩೪]

### ೩.೧೮. ಫಾ। ಮುಲ್ಲರ್ಸ್ ಮದ್ಯ ವರ್ಜನ (De- addiction) ಕಾರ್ಯಕ್ರಮ

ಮದ್ಯಪಾನ ಒಂದು ಕಾಯಿಲೆ ಎಂದು ಹಲವರಿಗೆ ಅರಿವಿಲ್ಲ. ಡಾ. ಡೇವಿಡ್ ಓಮ್ಸ್‌ರವರು ಮದ್ಯಪಾನವನ್ನು ಈ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ: "ಒಂದು ಸ್ಥಿತಿಯಲ್ಲಿ ವ್ಯಕ್ತಿ ಕುಡಿತದ ಮೇಲಿನ ನಿಯಂತ್ರಣ ತಪ್ಪಿ, ಅದರಿಂದ ದೂರ ಉಳಿಯಲು ಸಾಧ್ಯವಾಗುವುದಿಲ್ಲ. ಮತ್ತೇರುವ ಮೊದಲೂ ಅಥವಾ ಮತ್ತೇರಿದ ನಂತರವೂ ಕುಡಿತವನ್ನು ನಿಲ್ಲಿಸಲಾಗುವುದಿಲ್ಲ". ಫಾ। ಮುಲ್ಲರ್ ಚಾರಿಟೇಬಲ್ ಸಂಸ್ಥೆಯಲ್ಲಿ ೧೨ ಮೇ ೧೯೯೨ರಂದು 'ಪ್ರಜ್ಞಾ ಮದ್ಯವರ್ಜನ ಕೇಂದ್ರ'ವು ಅಸ್ಥಿತ್ವಕ್ಕೆ ಬಂತು. ಆ ಕಾರ್ಯಕ್ರಮದ ಪ್ರಧಾನ ಉದ್ದೇಶವೆಂದರೆ ವಸತಿ ಮತ್ತು ಸಹಾಯಕ ಚಿಕಿತ್ಸಾ ಸೇವೆಯ ಮೂಲಕ ಮದ್ಯ ವ್ಯಸನಿಗಳ ಮತ್ತು ಮಾದಕ ವ್ಯಸನಿಗಳ ಪುನರ್ವಸತಿ. ಭಾರತ ಸರ್ಕಾರದ ಸಾಮಾಜಿಕ ನ್ಯಾಯ ಮತ್ತು ಸಶಕ್ತೀಕರಣ (empowerment) ಸಚಿವಾಲಯದ ಮಾನ್ಯತೆ ಮತ್ತು ಉದಾರತೆಯಿಂದ ಕಾರ್ಯಕ್ರಮವನ್ನು ನಡೆಸಿಕೊಂಡು ಬರಲಾಗುತ್ತಿದೆ. ಫಾ। ಮುಲ್ಲರ್ಸ್ ಆಸ್ಪತ್ರೆಯಲ್ಲಿ ಈಗ ೬೦ ಜನರಿಗೆ ಆಶ್ರಯ ನೀಡುವ ಅವಕಾಶವಿದೆ. ಆಸ್ಪತ್ರೆಗೆ ಯಾವುದೇ ಪ್ರತ್ಯೇಕ ಆರ್ಥಿಕ ಹೊರೆಯಾಗದಂತೆ ವೈದ್ಯಕೀಯ, ಮಾನಸಿಕ ಮತ್ತು ದಾದಿಯರ ಸೇವೆಯನ್ನು ನೀಡಲಾಗುತ್ತದೆ. ಡಾ.ಸುಧಾಕರ ಶೆಟ್ಟಿಯವರು ಮದ್ಯವಸನಿಗಳಿಗಾಗಿಯೇ ಮೀಸಲಾಗಿಟ್ಟಿರುವ ವೆಲ್ಲಾಂಕಣಿ ವಾರ್ಡಿನ ಉಸ್ತುವಾರಿ ನೋಡಿಕೊಳ್ಳುತ್ತಾರೆ ಮತ್ತು ಉಳಿದ ಕಾರ್ಯಕ್ರಮಗಳನ್ನು, ಪ್ರಜ್ಞಾದ ಪರಿಣಿತ ಸಿಬ್ಬಂದಿಗಳು ನಿರ್ವಹಿಸುತ್ತಾರೆ. ಪ್ರಜ್ಞಾಮದ್ಯ ವರ್ಜನ ಕೇಂದ್ರ ಇತರ ಕೇಂದ್ರಗಳಂತೆಯೇ ಸಮುದಾಯವನ್ನು (community oriented) ಒಳಗೊಂಡ ಚಿಕಿತ್ಸಾ ಮಾದರಿಯನ್ನು ಅನುಸರಿಸುತ್ತದೆ. ಇದರಲ್ಲಿ ಪ್ರೇರಣಾ ಸಮಾಲೋಚನೆ, ಮದ್ಯಪಾನ ಬಿಡಿಸುವುದು, ವೈಯಕ್ತಿಕ ಸಮಾಲೋಚನೆ, ಸಮೂಹ ಸಮಾಲೋಚನೆ, ಮಾನಸಿಕ ಚಿಕಿತ್ಸೆ, ಶೈಕ್ಷಣಿಕ ತರಗತಿಗಳು, ನಡತೆ ಬದಲಾಯಿಸಲು ಚಿಕಿತ್ಸೆ, ಮದುವೆ ಸಂಬಂಧಿ ಸಮಾಲೋಚನೆ, ಕುಟುಂಬದೊಂದಿಗೆ ವಾರದ ಸಭೆ, ಕುಟುಂಬದ ಮಾಸಿಕ ಸಹಮಿಲನ, ಮಾದಕ ವ್ಯಸನ ಚಿಕಿತ್ಸೆ, ಮದ್ಯಪಾನ ನಿವಾರಣಾ ಚಳುವಳಿಯಲ್ಲಿ

ಸೇರ್ಪಡೆ, ಮದ್ಯಪಾನ ತೊರೆದವರಿಗೆ ಉದ್ಯೋಗ ದೊರಕಿಸಿಕೊಡುವುದು, ಮರಳಿ ಮದ್ಯ ವ್ಯಸನಿಗಳಾಗದಂತೆ ತಡೆಗಟ್ಟುವ ಕಾರ್ಯಕ್ರಮಗಳು, Al – Anon (ಕುಟುಂಬ) ಹಾಗೂ Al – Teen (ಮದ್ಯ ವ್ಯಸನಿಗಳ ಮಕ್ಕಳಿಗಾಗಿ) ಸಭೆಗಳು ಮುಂತಾದ ಕಾರ್ಯಕ್ರಮಗಳು ಇರುತ್ತವೆ.[೩೫]

೧೯ನೇ ಶತಮಾನದ ಪೂರ್ವಾರ್ಧದಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಆರೋಗ್ಯ ಕ್ಷೇತ್ರದಲ್ಲಿ ದೇಶದ ಇತರ ರಾಜ್ಯಗಳಂತೆ ತೀರ ಹಿಂದುಳಿದಿತ್ತು. ರೋಗ ರುಜಿನಗಳು ಕಾಣಿಸಿಕೊಂಡಾಗ ಜನರು ಸೂಕ್ತವಾದ ಔಷಧೋಪಚಾರ ದೊರೆಯದೆ ಅಧಿಕ ಸಂಖ್ಯೆಯಲ್ಲಿ ತಮ್ಮ ಪ್ರಾಣ ಕಳೆದುಕೊಳ್ಳುತ್ತಿದ್ದರು. ಇಂತಹ ಹಿನ್ನಲೆಯಲ್ಲಿ ಕಂಕನಾಡಿಯ ನಿರ್ಜನ ಪ್ರದೇಶದಲ್ಲಿ ಸಣ್ಣ ಡೇರೆಯೊಂದನ್ನು ನಿರ್ಮಿಸಿ 'ಫಾ। ಮುಲ್ಲರ್ಸ್ ಪುವರ್ ಡಿಸ್ಪೆನ್ಸರಿ'ಯನ್ನು ಆರಂಭಿಸಲಾಯಿತು. ಸಣ್ಣ ರೀತಿಯಲ್ಲಿ ಆರಂಭಗೊಂಡ ಫಾ। ಮುಲ್ಲರ್ಸ್ ಆಸ್ಪತ್ರೆ ಕಾಲಕ್ರಮೇಣ ಪ್ರಗತಿ ಪಥದಲ್ಲಿ ಸಾಗಿ ಜಿಲ್ಲೆಯ ಪ್ರತಿಷ್ಠಿತ ಆಸ್ಪತ್ರೆಗಳಲ್ಲಿ ಒಂದು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಬಡಬಗ್ಗರಿಗೆ ವಿಶೇಷ ರಿಯಾಯಿತಿ ಮತ್ತು ಉಚಿತ ವೈದ್ಯಕೀಯ ನೆರವು ನೀಡುವ ಈ ಆಸ್ಪತ್ರೆಯನ್ನು ಅನುಕರಿಸಿ ಇತರ ಆಸ್ಪತ್ರೆಗಳಲ್ಲಿಯೂ ಈಗ ಉಚಿತ ಹಾಗೂ ರಿಯಾಯಿತಿ ದರದಲ್ಲಿ ವೈದ್ಯಕೀಯ ಆರೈಕೆ ದೊರೆಯುತ್ತದೆ. ಫಾ। ಮುಲ್ಲರ್ಸ್ ಅಲೋಪತಿ ಆಸ್ಪತ್ರೆಯಲ್ಲಿ ೧೦೫೦ ಹಾಸಿಗೆಗಳಿದ್ದು, ಅದರಲ್ಲಿ ೭೫೦ ಹಾಸಿಗೆಗಳು ಉಚಿತ ಮತ್ತು ರಿಯಾಯಿತಿ ದರದಲ್ಲಿ ನಡೆಸಲ್ಪಡುತ್ತವೆ. ಫಾ। ಮುಲ್ಲರ್ಸ್ ಹೋಮಿಯೋಪಥಿಕ್ ಆಸ್ಪತ್ರೆ ದೇಶದಲ್ಲಿಯೇ ಅದ್ವಿತೀಯ ಎಂಬ ಕೀರ್ತಿಗೆ ಪಾತ್ರವಾಗಿದೆ. ಇಲ್ಲಿ ತಯಾರಾಗುವ ಹೋಮಿಯೋಪಥಿಕ್ ಉತ್ಪನ್ನಗಳಿಗೆ ದೇಶದಲ್ಲಿ ಮಾತ್ರವಲ್ಲವೆ ಹೊರದೇಶಗಳಲ್ಲಿಯೂ ಅಧಿಕ ಬೇಡಿಕೆ ಇದೆ. ಆಸ್ಪತ್ರೆಯ ಕುಷ್ಠರೋಗ ಮತ್ತು ಮನೋರೋಗ ವಿಭಾಗಗಳಿಗೆ ಜಿಲ್ಲೆ ಮತ್ತು ಇತರ ಕಡೆಗಳಿಂದಲೂ ರೋಗಿಗಳನ್ನು ಕರೆತರುತ್ತಾರೆ. ಈ ಎರಡೂ ವಿಭಾಗಗಳೂ ಜಿಲ್ಲೆಯಲ್ಲಿಯೇ ಪ್ರಥಮ ಎಂಬ ಗೌರವಕ್ಕೆ ಪಾತ್ರವಾಗಿವೆ. ಇಂದು ದಕ್ಷಿಣ ಕನ್ನಡ ಜಿಲ್ಲೆ ವೈದ್ಯಕೀಯ ಕ್ಷೇತ್ರದಲ್ಲಿ ಅದ್ಭುತ ಪ್ರಗತಿಯನ್ನು ಸಾಧಿಸಿದ್ದರೆ, ಫಾ। ಮುಲ್ಲರ್ಸ್ ಚಾರಿಟೇಬಲ್ ಸಂಸ್ಥೆಗಳು ಅದಕ್ಕೆ ಮುಖ್ಯ ಕಾರಣ. ಕುಷ್ಠರೋಗಿಗಳನ್ನು ಶಾಪಗ್ರಸ್ತರೆಂದು ಭಾವಿಸಿ ಕುಟುಂಬದಿಂದ ಮತ್ತು ಸಮಾಜದಿಂದ ದೂರವಿಡುತ್ತಿದ್ದ ಆ ಕಾಲದಲ್ಲಿ ಜೀವದ ಹಂಗು ತೊರೆದು ಅವರಿಗೆ ಆಶ್ರಯ ನೀಡಿ ಅವರ ಶುಶ್ರೂಷೆ ಮಾಡಿ ಗುಣಮುಖರಾದ ಬಳಿಕ ಅವರಿಗೆ ಪುನರ್ವಸತಿ ಕೇಂದ್ರಗಳನ್ನು ತೆರೆದು ಆಧರಿಸಿದ್ದು ಸಂಸ್ಥೆಯ ಮಾನವೀಯತೆಯ ಗುಣಕ್ಕೆ ಕೈಗನ್ನಡಿಯಾಗಿದೆ. ಕುಷ್ಠ ಮತ್ತು ಕ್ಷಯರೋಗದ ಬಗ್ಗೆ ಇಂದು ಆತಂಕ ದೂರವಾಗಿದ್ದರೆ ಅದಕ್ಕೆ ಚಾರಿಟಿ ಧರ್ಮಭಗಿನಿಯರ ನಿಸ್ವಾರ್ಥ ಹಾಗೂ ತ್ಯಾಗದ ಸೇವೆಯೇ ಕಾರಣ ಎಂಬುದು ಎಲ್ಲರೂ ಒಪ್ಪಿಕೊಳ್ಳಬೇಕಾದ ಕಟು ಸತ್ಯವಾಗಿದೆ.

## ೩.೧೯. ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್ನಿನ ವೈದ್ಯಕೀಯ ಸೇವೆ

ಬಾಸೆಲ್ ಮಿಶನರಿಗಳು ೧೮೩೪ರಲ್ಲಿಯೇ ಭಾರತಕ್ಕೆ ಬಂದು, ಮಂಗಳೂರನ್ನು ತಮ್ಮ ಕೇಂದ್ರ ಕಾರ್ಯಾಲಯವಾಗಿ ಮಾಡಿಕೊಂಡಿದ್ದರೂ ಕೂಡಾ, ವ್ಯವಸ್ಥಿತ ರೀತಿಯಲ್ಲಿ ವೈದ್ಯಕೀಯ ಕಾರ್ಯ ಪ್ರಾರಂಭವಾದುದು ಬಹಳ ವರ್ಷಗಳ ನಂತರ. "ವೈದ್ಯಕೀಯ ಮಿಶನ್ ಭಾರತದ ಬಾಸೆಲ್ ಮಿಶನ್ನಿನ ಯುವ ಶಾಖೆಗಳಲ್ಲಿ ಒಂದು" ಎಂದು ರೆವೆ. ಸೊಸ್ಸರ್ ೧೯೧೫ರಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ದಕ್ಷಿಣ ಭಾರತದ ಹಳ್ಳಿಗಳಲ್ಲಿ ವೈದ್ಯಕೀಯ ನೆರವಿನ ತುರ್ತು ಅಗತ್ಯವನ್ನು ಮನಗಂಡ ದಕ್ಷಿಣ ಕನ್ನಡ ಜಿಲ್ಲಾ ಚರ್ಚ್ ಸಮಿತಿಯವರು ಬಾಸೆಲ್ ಮಿಶನ್ನಿಗೆ ನೆರವು ಕೋರಿ ಅನೇಕ ಬಾರಿ ಬೇಡಿಕೆಗಳನ್ನು ಸಲ್ಲಿಸಿದರು. ಆದರೆ ಆ ಬೇಡಿಕೆಗಳಿಗೆ ಯಾವುದೇ ಪ್ರತಿಕ್ರಿಯೆ ದೊರೆಯಲಿಲ್ಲ.[೩೬] ಬಹುಪಾಲು ಕ್ರೈಸ್ತ ವೈದ್ಯಕೀಯ ಕಾರ್ಯಗಳು ಪ್ರಾರಂಭಗೊಂಡದ್ದು ಆಮೇಲಿನ ಆಲೋಚನೆಯಿಂದ. ಮತ ಪ್ರಸಾರಕ್ಕಾಗಿ ಒಂದು ನಿರ್ದಿಷ್ಟ ಪ್ರದೇಶದಲ್ಲಿ ನೆಲೆನಿಂತ ಮಿಶನರಿಗಳಲ್ಲಿ ಔಷಧಿಗಾಗಿ ರೋಗಿಗಳು ಮತ್ತು ಸಾಯುವ ಸ್ಥಿತಿಯಲ್ಲಿ ಇರುವವರು ಬೇಡಿಕೆ ಸಲ್ಲಿಸತೊಡಗಿದರು. ಆರಂಭದಲ್ಲಿ ವೈದ್ಯಕೀಯ ಸೇವೆಯನ್ನು ವೈಯಕ್ತಿಕ ಹಾಗೂ ಪ್ರಾದೇಶಿಕ ನೆಲೆಯಲ್ಲಷ್ಟೇ ಮಾಡಿದರು. ರೋಗಿಗಳು ಮತ್ತು ಮರಣ ಶಯ್ಯೆಯಲ್ಲಿರುವವರು ಇವರ ಬಳಿ ಔಷಧಿಗಾಗಿ ಮೊರೆ ಇಟ್ಟಾಗ ಔಷಧಿ ಹಾಗೂ ಕಷಾಯದಂಥ ಮದ್ದುಗಳನ್ನು ವಿತರಿಸಲು ಶುರು ಮಾಡಿದರು. ಹೀಗೆ ವೈಯಕ್ತಿಕ ನೆಲೆಯಲ್ಲಿ ಸದ್ದಿಲ್ಲದೆ ನಡೆಯುತ್ತಿದ್ದ ಸೇವೆ ಶೀಘ್ರದಲ್ಲೇ ವ್ಯವಸ್ಥಿತವಾಗಿ ನಡೆಯಲು ಆರಂಭವಾಯಿತು. ಬಾಸೆಲ್ ಮಿಶನ್‌ನ ಸೆಮಿನರಿಗಳಲ್ಲಿ ಕಲಿತ ಶುಶ್ರೂಷೆಯ ವಿಧಾನವನ್ನಷ್ಟೇ ದಕ್ಷಿಣ ಕನ್ನಡದಲ್ಲಿ ಕಾರ್ಯಕರ್ತರು ಬಳಸುತ್ತಿದ್ದರು. ದಕ್ಷಿಣ ಕನ್ನಡದಲ್ಲಿ ಆಗಲೇ ಜನಜನಿತವಾಗಿದ್ದ, ಕಾಗದದಲ್ಲಿ ಸುತ್ತಿ ನೀಡುವ ಔಷಧಿಯನ್ನು ಆಗ ಕಾರ್ಯಕರ್ತರು ವಿತರಿಸುತ್ತಿದ್ದರು. ಈ ಔಷಧಿಗಳು ತುಟ್ಟಿಯಾಗಿದ್ದರೂ ಪರಿಣಾಮಕಾರಿಯಾಗಿದ್ದವು ಎಂಬುದು ವಿಶೇಷ.[೩೭] ರೆವೆ. ರಿತ್ತರ್ ಎಂಬವರು ಮದ್ದು ಕೊಡುವುದರಲ್ಲಿ ನಿಪುಣರಾಗಿದ್ದರಿಂದ ಕ್ರೈಸ್ತರು ಮತ್ತು ಕ್ರೈಸ್ತೇತರರು ಅವರಿಂದ ಮದ್ದಿನ ಸಹಾಯವನ್ನು ಧರ್ಮಾರ್ಥವಾಗಿ ಪಡೆಯುತ್ತಿದ್ದರು.[೩೮]

ಭಾರತದಲ್ಲಿ ಬಾಸೆಲ್ ಮಿಶನ್‌ನ ಪ್ರಥಮ ವೈದ್ಯಕೀಯ ಕೇಂದ್ರದ ಸ್ಥಾಪನೆಯು ಕೇರಳದ ಕಲ್ಲಿಕೋಟೆ ಎಂಬಲ್ಲಿ ಜನವರಿ ೧೮೮೬ರಲ್ಲಿ ಡಾ. ಯೂಜಿನ್ ಲಿಬೆನ್‌ಡೋರ್ಫರ್ ಎಂಬ ಮಿಶನರಿಯ ನೇತೃತ್ವದಲ್ಲಿ ಆಯಿತು. ೧೮೬೫ರಲ್ಲಿ ಡಾ। ಲಿಬೆನ್‌ಡೋರ್ಫರ್ ಬಾಸೆಲ್‌ಗೆ ಹಿಂತಿರುಗಿದ ಅನಂತರ ಡಾ. ಸ್ಟೋಕ್ಸ್ ಎಂಬವರು ಆ ಕಾರ್ಯವನ್ನು ಮುಂದುವರಿಸಿದರು. ಬಾಸೆಲ್ ಮಿಶನಿನ ಪ್ರಥಮ ಮಹಿಳಾ ದಾದಿ ಎಂ. ಹ್ಯಾನ್ ಹರ್ಟ್ ಎಂಬವರು ಈ ಕಾರ್ಯದಲ್ಲಿ ತಮ್ಮ ಸಹಾಯವನ್ನು ನೀಡಿದರು. ಕಲ್ಲಿಕೋಟೆ ಮಾತ್ರವಲ್ಲದೆ ಕೇರಳದ ವಾಣಿಯಕುಲಂ (೧೮೯೬), ಪಯ್ಯನ್ನೂರು (೧೯೧೧), ಬೆಟಗೇರಿ

### ೩.೨೦.೧. ಡಾ. ಈವಾ ಲೊಂಬಾರ್ಡ್

ಡಾ. ಈವಾ ಲೊಂಬಾರ್ಡ್ ಅವರು ೨ ಫೆಬ್ರವರಿ ೧೮೯೦ರಂದು ಸ್ವಿಟ್ಜರ್ಲೆಂಡಿನ ಜಿನಿವಾ ಪಟ್ಟಣದಲ್ಲಿ ಜನಿಸಿದರು. ೧೯೧೦ರಲ್ಲಿ ಮೆಟ್ರಿಕ್ಯುಲೇಷನ್ ಮುಗಿಸಿದ ಅವರು ಜಿನಿವಾದಲ್ಲಿರುವ ಮೆಡಿಸಿನ್ ಯೂನಿವರ್ಸಿಟಿಗೆ ಸೇರಿದರು. ೧೯೧೫ರಲ್ಲಿ ಜಿನಿವಾ ವಿಶ್ವವಿದ್ಯಾಲಯದಿಂದ ತನ್ನ ವೈದ್ಯಕೀಯ ಪದವಿ ಪಡೆದ ನಂತರ ಸ್ವಲ್ಪ ಸಮಯ ಡಾ. ಲೊಂಬಾರ್ಡ್‌ರವರು ಜಿನಿವಾ ಪಟ್ಟಣದ ಕೇಂದ್ರ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸಿದರು. ೧೯೨೧ರಲ್ಲಿ ಭಾರತಕ್ಕೆ ಬಂದು ಮೈಸೂರಿನ ಹೋಲ್ಡ್ಸ್‌ವರ್ತ್ ಸ್ಮಾರಕ ಆಸ್ಪತ್ರೆಯಲ್ಲಿ ಒಂದು ವರ್ಷ ಕಾಲ ರೋಗಿಗಳ ಆರೈಕೆ ಮಾಡುತ್ತಾ ಸ್ಥಳೀಯ ರೋಗಗಳು, ಭಾಷೆ, ಆಚಾರ ವಿಚಾರಗಳ ಬಗ್ಗೆ ಬಹಳಷ್ಟು ವಿಚಾರಗಳನ್ನು ತಿಳಿದುಕೊಂಡರು. ೧೯೨೩ರಲ್ಲಿ ಆಕೆಯನ್ನು ಉಡುಪಿಗೆ ಬರಲು ಕೇಳಿಕೊಳ್ಳಲಾಯಿತು. ಕೊನೆಗೆ ರೆವೆ. ಬುರ್ಕಾರ್ಟ್ ಮತ್ತು ಮಾರ್ಗರೇಟ್ ಗ್ರೈಲೋಜ್‌ರವರ ಸಹಕಾರದಿಂದ, ೧೫ ಜೂನ್ ೧೯೨೩ರಂದು ಉಡುಪಿಯಲ್ಲಿ ಬಾಸೆಲ್ ಮಿಶನ್ ಆಸ್ಪತ್ರೆಯನ್ನು ಉದ್ಘಾಟಿಸಲಾಯಿತು. ಈ ಸಮಾರಂಭಕ್ಕೆ ಎಲ್ಲಾ ಮತಕ್ಕೆ ಸೇರಿದ ಸ್ಥಳೀಯ ಜನರು ಮತ್ತು ಇತರ ಕೆಲವು ಅತಿಥಿಗಳು ಬೇರೆ ಸ್ಥಳಗಳಿಂದಲೂ ಬಂದು ತಮ್ಮ ಸಹಾಯದ ಭರವಸೆಯನ್ನು ನೀಡಿದರು.[೫೩] ಡಾ. ಈವಾರವರು ೩೧ ವರ್ಷಗಳ ಸುದೀರ್ಘ ಸೇವೆಯ ಬಳಿಕ, ೧೯೫೪ರಲ್ಲಿ ಸೇವೆಯಿಂದ ನಿವೃತ್ತರಾಗಿ ಮಂಡಗದ್ದೆಯಲ್ಲಿರುವ ಆಶ್ರಮಕ್ಕೆ ಹೋಗಿ, ಅಲ್ಲಿ ೧೦ ವರ್ಷಗಳ ಕಾಲ ಸೇವೆ ಸಲ್ಲಿಸಿ, ಕಡೆಗೆ ಸ್ವದೇಶಕ್ಕೆ ಹಿಂದಿರುಗಿದರು.[೫೪]

### ೩.೨೦.೨. ಬಾಸೆಲ್ ಮಿಶನ್ ಆಸ್ಪತ್ರೆ ಸ್ಥಾಪನೆಯ ಉದ್ದೇಶಗಳು

ಏಸು ಕ್ರಿಸ್ತನ ಸಂದೇಶದಂತೆ ನಮ್ಮ ನಡುವೆ ಇರುವವರ ಜಾತಿ, ಧರ್ಮ ಹಾಗೂ ಇತರ ಯಾವುದೇ ವೈಯಕ್ತಿಕ ಸ್ಥಿತಿಯನ್ನು ಲೆಕ್ಕಿಸದೆ ಆರೋಗ್ಯ ಕಾಪಾಡುವ ವಿಷಯದಲ್ಲಿ ಸಹಾಯ ಮಾಡುವುದು ಹಾಗೂ ದೇವರ ಪ್ರೀತಿಯನ್ನು ಅವರ ಮೇಲೆ ಸುರಿಯುವುದು ವೈದ್ಯಕೀಯ ಮಿಶನ್ ಹೊಂದಿರುವ ಉದ್ದೇಶವಾಗಿತ್ತು.[೫೫] ಭೌಗೋಳಿಕ ಕಾರಣಗಳಿಗಾಗಿ ಡಾ.ಈವಾ ಉಡುಪಿಯನ್ನು ಆಸ್ಪತ್ರೆ ಸ್ಥಾಪನೆಗಾಗಿ ಆರಿಸಿಕೊಂಡರು. ಇದು ಜಿಲ್ಲೆಯ ಉತ್ತರ ಭಾಗದ ಮಧ್ಯದಲ್ಲಿತ್ತು. ಎರಡನೆಯದಾಗಿ ಅಲ್ಲಿದ್ದಂತಹ ಬಂಗಲೆ ಕಡಿಮೆ ಖರ್ಚಿನಲ್ಲಿ ಉಪಲಬ್ಧವಿತ್ತು. ಬಂಗಲೆಯು ಆಸ್ಪತ್ರೆ ಸ್ಥಾಪಿಸಲು ಹೇಳಿ ಮಾಡಿಸಿದಂತಿತ್ತು. ಉಡುಪಿಯಲ್ಲಿ ಆಸ್ಪತ್ರೆ ಸ್ಥಾಪಿಸಲು ಇದ್ದ ಮುಖ್ಯ ಉದ್ದೇಶವೆಂದರೆ ಇಲ್ಲಿ ಮಹಿಳೆಯರು ಮತ್ತು ಮಕ್ಕಳು ವೈದ್ಯಕೀಯ ಸೇವೆಯ ಕೊರತೆಯಿಂದ ಬಹಳವಾಗಿ ಬಳಲುತ್ತಿದ್ದರು. ಪುರುಷ ವೈದ್ಯರು ಲಭ್ಯವಿದ್ದರೂ ಹೆರಿಗೆಯಲ್ಲಿ ಅವರ ನೆರವನ್ನು ಪಡೆಯುವುದಕ್ಕೆ ಅನುಮತಿ ಇರಲಿಲ್ಲ. ಜೊತೆಗೆ ಹೆರಿಗೆ ಕಾರ್ಯವನ್ನು ಅಶುಚಿಯೆಂದು ಪರಿಗಣಿಸಿದ್ದರಿಂದ ಸಾಮಾನ್ಯವಾಗಿ ಗರ್ಭಿಣಿ

ಹೆಂಗಸನ್ನು ಹೊರಮನೆಯಲ್ಲಿ ಅಥವಾ ದನದ ಕೊಟ್ಟಿಗೆಯಲ್ಲಿ ಇರಿಸಲಾಗುತ್ತಿತ್ತು. ಅಂತಹ ಅನಾರೋಗ್ಯಕರವಾದ ಪರಿಸರದಲ್ಲಿ ಆಕೆ ಯಾವುದೇ ನೆರವು ಪಡೆಯದೆ ಪ್ರಸವಿಸಬೇಕಾಗಿ ಬರುತ್ತಿತ್ತು.[೪೬] ಹಳ್ಳಿ ಸೂಲಗಿತ್ತಿ ಹೆರಿಗೆ ಸಂದರ್ಭದಲ್ಲಿ ಸಹಾಯ ಮಾಡುತ್ತಿದ್ದಳು. ಆದರೆ ಹೆಚ್ಚಿನ ಅನುಭವವುಳ್ಳ ಹಸ್ತದ ಅಗತ್ಯತೆ ಅಲ್ಲಿ ಹೆಚ್ಚಾಗಿತ್ತು. ಅಲ್ಲಿ ಒಬ್ಬ ಸ್ತ್ರೀ ವೈದ್ಯರ ಅಗತ್ಯತೆ ಎದ್ದು ಕಾಣುತ್ತಿತ್ತು. ಇದು ಪ್ರತಿಯೊಬ್ಬರ ಆಸೆಯಾಗಿತ್ತು. ಮಂಗಳೂರಿನಲ್ಲಿ ಈಗಾಗಲೇ ಸರಕಾರಿ ವೆನ್‌ಲಾಕ್ ಆಸ್ಪತ್ರೆ ಮತ್ತು ಫಾ। ಮುಲ್ಲರ್ಸ್ ಆಸ್ಪತ್ರೆ ಈ ಎರಡು ಆಸ್ಪತ್ರೆಗಳು ಪ್ರಾರಂಭವಾಗಿದ್ದವು. ಆದ್ದರಿಂದ ಉಡುಪಿಯನ್ನೇ ಆಸ್ಪತ್ರೆ ಸ್ಥಾಪನೆಗಾಗಿ ಆರಿಸಿಕೊಳ್ಳಲಾಯಿತು.[೪೭]

### ೩.೨೦.೩. ಆಸ್ಪತ್ರೆಯಲ್ಲಿ ಪ್ರಾರಂಭದ ಸೇವೆ

೧೫ ಜೂನ್ ೧೯೨೩ ರಂದು ಪ್ರಾರಂಭವಾದ ಆಸ್ಪತ್ರೆಯಲ್ಲಿ ರೋಗಿಗಳ ಸಂಖ್ಯೆ ದಿನದಿಂದ ದಿನಕ್ಕೆ ಏರುತ್ತಲೇ ಇತ್ತು. ಮಳೆಗಾಲದ ಸಮಯದಲ್ಲಿ ದಿನಕ್ಕೆ ೮೦-೧೦೦ ರೋಗಿಗಳಿಗೆ ಚಿಕಿತ್ಸೆ ನೀಡಬೇಕಾಗಿತ್ತು. ಕುಂಟರನ್ನು ಮತ್ತು ಸಾಯುವ ಸ್ಥಿತಿಯಲ್ಲಿದ್ದವರನ್ನು, ಗಂಭೀರ ಸ್ಥಿತಿಯಲ್ಲಿರುವ ಮಹಿಳೆಯರನ್ನು ಆಸ್ಪತ್ರೆಗೆ ಕರೆತರಲಾಗುತ್ತಿತ್ತು. ಮಕ್ಕಳು ಅಪೌಷ್ಟಿಕತೆಯಿಂದ, ವಿಟಮಿನ್ ಕೊರತೆಯಿಂದ ಬಳಲುತ್ತಿದ್ದರು. ಅಷ್ಟು ಮಾತ್ರವಲ್ಲದೆ ಕಫ, ಅಸ್ತಮಾ, ಕಣ್ಣಿನ ಮತ್ತು ಚರ್ಮರೋಗ, ಕರುಳು ಹುಣ್ಣು, ಹುಳಬಾಧೆ ಮುಂತಾದ ರೋಗಗಳಿಗೆ ಒಳಗಾಗಿ ಆಸ್ಪತ್ರೆಗೆ ಬರುತ್ತಿದ್ದರು. ಕೆಲವೊಮ್ಮೆ ಬಹಳ ಕಠಿಣವಾದ ಹೆರಿಗೆಯ ಸಂದರ್ಭದಲ್ಲಿ ಗರ್ಭಿಣಿ ಸ್ತ್ರೀಯ ಮನೆಗೆ ಹೋಗಬೇಕಾಗಿತ್ತು. ಜಟಕಾದಲ್ಲಿ , ದೋಣಿ ಮೂಲಕ ಅಥವಾ ನಡೆದುಕೊಂಡೇ ಹೋಗುವ ಪರಿಸ್ಥಿತಿ ಇತ್ತು.[೪೮] ಅನೇಕ ವೇಳೆ ವೈದ್ಯರು ದಾದಿಯನ್ನು ಕೂಡಿಕೊಂಡು ಹಳ್ಳಿಗೆ ಹೆರಿಗೆಯ ಕೆಲಸಕ್ಕಾಗಿ ಹೋಗಬೇಕಾಗುತ್ತಿತ್ತು. ನದಿಗಳನ್ನು ದಾಟಿ, ಭತ್ತದ ಗದ್ದೆಗಳ ಮಧ್ಯದಲ್ಲಿ ನಡೆದು ದೂರ ಸ್ಥಳಗಳಿಗೆ ಹೋಗುವ ಸಂದರ್ಭಗಳಿರುತ್ತಿದ್ದವು. ಹೆರಿಗೆಯ ನಂತರವೂ ಜಾಗ್ರತೆಯ ಅಗತ್ಯ ಇದ್ದರೂ ಬಾಣಂತಿಯನ್ನೂ ಶಿಶುವನ್ನೂ ಶುದ್ಧವಾದ ಒಂದು ಚಾಪೆಯ ಮೇಲೆ ಮಲಗಿಸಿ ಸಂಬಂಧಿಕರ ವಶಕ್ಕೆ ನೀಡಿ, ವೈದ್ಯರು ಕೂಡಲೇ ಆಸ್ಪತ್ರೆಗೆ ಹಿಂದೆ ಧಾವಿಸಬೇಕಾಗುತ್ತಿತ್ತು. ಏಕೆಂದರೆ ಆಸ್ಪತ್ರೆಯಲ್ಲಿ ರೋಗಿಗಳು ಸಾಲುಗಟ್ಟಿ ಕಾಯುತ್ತಿರುತ್ತಿದ್ದರು.[೪೯]

### ೩.೨೦.೪. ಮಿಶನ್ ಆಸ್ಪತ್ರೆ ಮತ್ತು ಸುವಾರ್ತಾ ನಿಯೋಗ

ಉಡುಪಿಯಲ್ಲಿ ಮಿಶನ್ ಆಸ್ಪತ್ರೆಯ ಸ್ಥಾಪನೆ ರೋಗಿಗಳಿಗೆ ಉಪಕಾರಿಯಾದುದರ ಜತೆಯಲ್ಲಿಯೇ ಕ್ರಿಸ್ತನ ಸುವಾರ್ತೆಯನ್ನು ಪಸರಿಸುವಲ್ಲಿ ಕೂಡ ಸಹಾಯಕವಾಯಿತು. ಅಂದರೆ ರೋಗಿಗಳಾಗಿ ಈ ಆಸ್ಪತ್ರೆಗೆ ಬಂದವರು ಕೇವಲ ದೈಹಿಕವಾಗಿ ಮಾತ್ರ ಗುಣ ಹೊಂದಲಿಲ್ಲ, ಬದಲಾಗಿ

ಕ್ರಿಸ್ತನ ಕುರಿತಾದ ಸುವಾರ್ತೆಯನ್ನು ಕೇಳಿ ಆತ್ಮಬಲವನ್ನು ಹೊಂದಿದರು. [೫೦] ಆಸ್ಪತ್ರೆಯಲ್ಲಿ ರೋಗಿಗಳನ್ನು ಪ್ರಾರ್ಥನೆಯ ಮೂಲಕ ಬಲಪಡಿಸಲು ಸುವಾರ್ತಾ ಸೇವಕಿ ಸಹಾಯಕರಾಗಿದ್ದರು[೫೧] ಆಸ್ಪತ್ರೆಯಲ್ಲಿ ಸುವಾರ್ತೆ ಸೇವೆಗೆ ಎಷ್ಟು ಪ್ರಾಮುಖ್ಯ ನೀಡಲಾಗಿತ್ತೆಂದರೆ ಸುವಾರ್ತೆ ಸೇವೆಗಾಗಿಯೇ ೧೯೫೪ರಲ್ಲಿ ಒಬ್ಬ ಸ್ತ್ರೀಯ ನೇಮಕ ಮಾಡಲಾಯಿತು.[೫೨] ಇದಕ್ಕಿಂತ ಮೊದಲು ದಾದಿಯರೇ ವಾರ್ಡುಗಳಲ್ಲಿ ಪ್ರಾರ್ಥನೆಯನ್ನು ನಡೆಸಿ ರೋಗಿಗಳೊಡನೆ ಆತ್ಮದ ವಿಚಾರವಾಗಿ ಮಾತನಾಡುತ್ತಿದ್ದರು. ಆದರೆ, ಕೆಲಸದೊತ್ತಡದಿಂದಾಗಿ ಆಧ್ಯಾತ್ಮಿಕ ಕೆಲಸ ನಡೆಸಲು ಬಹಳ ಕಷ್ಟವಾಗುತ್ತಿತ್ತು. ಆದರೆ ಈಗ ಸುವಾರ್ತೆ ಸೇವೆಗಾಗಿ ಪ್ರತ್ಯೇಕವಾದ ಸೇವಕಿಯ ನೇಮಕವಾದ್ದದರಿಂದ ರೋಗಿಗಳಿಗೆ ಇನ್ನೂ ಹೆಚ್ಚು ಸುವಾರ್ತೆಯನ್ನು ಕೇಳುವ ಸಂದರ್ಭ ದೊರಕಿತು.

**೩.೨೦.೫. ಆಸ್ಪತ್ರೆಯ ಬೆಳವಣಿಗೆ ಮತ್ತು ವಿಸ್ತರಣೆ**

೧೯೨೩ರಲ್ಲಿ ಕೇವಲ ೭ ಜನ ಸಿಬ್ಬಂದಿಗಳಿಂದ ಮತ್ತು ಹೊರ ರೋಗಿಗಳ ವಿಭಾಗದಿಂದ ಒಂದು ಸಣ್ಣ ಬಂಗಲೆಯಲ್ಲಿ ಪ್ರಾರಂಭವಾದ ಆಸ್ಪತ್ರೆ ಬೇಗನೆ ಬೆಳೆಯಿತು. ವಾರ್ಡ್‌ಗಳು ಆಸ್ಪತ್ರೆಗೆ ಸೇರಿಸಲ್ಪಟ್ಟವು. ರೋಗಿಗಳ ಸಂಖ್ಯೆ ಹೆಚ್ಚುತ್ತಾ ಬಂದಂತೆ ವಾರ್ಡ್‌ಗಳ ಅಗತ್ಯತೆ ಕೂಡಾ ಹೆಚ್ಚಾಯಿತು. ಆದ್ದರಿಂದ ಒಳರೋಗಿಗಳ ವಿಭಾಗಗಳು ಪ್ರಾರಂಭವಾದವು. ಪ್ರಾರಂಭದಲ್ಲಿ ಆಸ್ಪತ್ರೆಯಲ್ಲಿ ಮಹಿಳೆಯರ ಮತ್ತು ಮಕ್ಕಳ ಆರೋಗ್ಯಕ್ಕೆ ಪ್ರಾಮುಖ್ಯತೆ ನೀಡಿದರೂ ಕಾಲಕ್ರಮೇಣ ಪುರುಷ ರೋಗಿಗಳನ್ನೂ ದಾಖಲು ಮಾಡಿಕೊಳ್ಳಲಾಗಿದೆ. ಉಡುಪಿಯ ಬಾಸೆಲ್ ಮಿಶನ್ ಆಸ್ಪತ್ರೆಯು ಪ್ರಾರಂಭವಾದಂದಿನಿಂದ ಪ್ರಗತಿ ಪಥದಲ್ಲಿದೆ. ಕೆಲವು ಅಂಟುರೋಗಳಿಂದ ಪೀಡಿತರಾದ ರೋಗಿಗಳ ಆರೈಕೆಗಾಗಿ ೧೯೨೪ರಲ್ಲಿ 'ಐಸೋಲೇಶನ್ ವಾರ್ಡ'ನ್ನು ಪ್ರಾರಂಭಿಸಲಾಗಿದೆ. ನಂತರ ೧೯೨೫ರಲ್ಲಿ ಹೆರಿಗೆ ವಿಭಾಗವನ್ನು,[೫೩] ೧೯೩೦ರಲ್ಲಿ ಹೊಸ ಶಸ್ತ್ರ ಚಿಕಿತ್ಸಾ ವಾರ್ಡ್‌ನ್ನು,[೫೪] ೧೯೩೨ರಲ್ಲಿ ಮಕ್ಕಳ ವಿಭಾಗವನ್ನು,[೫೫] ೧೯೪೫ರಲ್ಲಿ ಕ್ಷ-ಕಿರಣ ವಿಭಾಗವನ್ನು,[೫೬] ಡಾ। ಮಿಸ್. ಎಂ. ಫ್ಲುಗ್‌ಫೆಲ್ಡರ್ ಎಂಬ ಕಣ್ಣಿನ ತಜ್ಞರ ಆಗಮನದ ಬಳಿಕ ೧೯೪೭ರಲ್ಲಿ ಕಣ್ಣಿನ ವಿಭಾಗವನ್ನು ಆರಂಭಿಸಲಾಗಿದೆ.[೫೭] ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದ ನಂತರ ೧೯೫೨ರಲ್ಲಿ ಪುರುಷ ರೋಗಿಗಳ ಆರೈಕೆಗಾಗಿ 'ಬೆಥೆಸ್ದಾ ವಾರ್ಡ್' ಮತ್ತು ಅದೇ ವರ್ಷ ಪುರುಷ ರೋಗಿಗಳಿಗಾಗಿ 'ಕೃಪಾ ವಾರ್ಡ್' ಎಂಬ ಟಿ.ಬಿ. ವಾರ್ಡನ್ನು, ೧೯೬೨ರಲ್ಲಿ ಮಹಿಳಾ ಕ್ಷಯ ರೋಗಿಗಳಿಗಾಗಿ ' ಉದಯ ವಾರ್ಡ್' ಎಂಬ ಪ್ರತ್ಯೇಕ ವಾರ್ಡನ್ನು, ೧೯೬೫ರಲ್ಲಿ ಡಾ। ಮಿಸ್ .ಐ. ಶೆಂಪ್ ಸ್ಕೆಮ್ಪ್ ಎಂಬ ಮಕ್ಕಳ ತಜ್ಞೆಯ ಆಗಮನದ ಬಳಿಕ ಆಸ್ಪತ್ರೆಯಲ್ಲಿ ಮಕ್ಕಳ ವಿಭಾಗವನ್ನು, ಇ.ಎನ್.ಟಿ.ತಜ್ಞೆ ಡಾ.ಎ.ಎ. ಕುಂದರಗಿಯವರ ನೇತೃತ್ವದಲ್ಲಿ ಕಣ್ಣು, ಮೂಗು, ಗಂಟಲು ವಿಭಾಗವನ್ನು (ಇ.ಎನ್.ಟಿ) ೧೯೬೯ರಲ್ಲಿ ಆರಂಭಿಸಲಾಗಿದೆ.[೫೮]

೧೯೭೦ರಲ್ಲಿ ವೈದ್ಯಕೀಯ ಸಮಾಜ ಸೇವಾ ಕಾರ್ಯ (Medico-Social work) ಪ್ರಾರಂಭವಾಯಿತು. ಈ ಸಮಾಜಸೇವೆಯ ಮುಖ್ಯ ಉದ್ದೇಶ ದೈಹಿಕವಾಗಿ ರೋಗಕ್ಕೆ ಒಳಗಾದವರ ಸಾಮಾಜಿಕ ಮತ್ತು ಭಾವನಾತ್ಮಕ ಸಮಸ್ಯೆಗಳ ಬಗ್ಗೆ ಆಸಕ್ತಿ ವಹಿಸುವುದು.[೫೯] ೧೯೭೫ರಲ್ಲಿ ಹೊರರೋಗಿಗಳ ವಿಭಾಗವನ್ನು ಮತ್ತು ಐ.ಸಿ.ಯು.(ಇಂಟೆನ್ಸಿವ್ ಕೇರ್ ಯೂನಿಟ್)ವನ್ನೂ ಪ್ರಾರಂಭಿಸಲಾಗಿದೆ. ೧೭ ಸೆಪ್ಟೆಂಬರ್ ೨೦೦೦ದಂದು ‘ ಪರಿವರ್ತನಾ ವಾರ್ಡ್’ ಎಂಬ ಮದ್ಯವರ್ಜನ ವಾರ್ಡನ್ನು ಆರಂಭಿಸಲಾಗಿದೆ. ಆದರೆ ಈಗ ಕಾರಣಾಂತರಗಳಿಂದ ಆ ವಾರ್ಡನ್ನು ಮುಚ್ಚಲಾಗಿದೆ. ೨೦೦೮ರಲ್ಲಿ ಆಸ್ಪತ್ರೆಯ ಹೊರರೋಗಿಗಳ ವಿಭಾಗದಲ್ಲಿ ಪೂರ್ಣ ಪ್ರಮಾಣದ ಫಿಸಿಯೋಥೆರಪಿ ವಿಭಾಗವನ್ನು ಪುನರಾರಂಭಿಸಿದ್ದಾರೆ.[೬೦]

### ೩.೨೦.೬. ಸಮುದಾಯದತ್ತ ಆರೋಗ್ಯ ಸೇವೆ

ಪ್ರಮುಖ ಆಸ್ಪತ್ರೆಯ ಹೊರತಾಗಿ ಅನೇಕ ಸಣ್ಣ ಚಿಕಿತ್ಸಾಲಯಗಳನ್ನು ದಕ್ಷಿಣ ಕನ್ನಡದ ಅನೇಕ ಕಡೆ ಸ್ಥಾಪಿಸಲಾಗಿದೆ. ೧೯೨೩ ಆಗಸ್ಟ್‌ನಲ್ಲಿ ಡಾ.ಲೊಂಬಾರ್ಡ್ ಮನೆಗಳಿಗೆ ಭೇಟಿ ಕೊಡುತ್ತಿದ್ದ ಸಂದರ್ಭಗಳಲ್ಲಿ ದೂರದೂರುಗಳಿಂದ ಜನರು ಚಿಕಿತ್ಸೆಗಾಗಿ ಆಸ್ಪತ್ರೆಗೆ ಬರುವುದು ಕಷ್ಟವಾಗುತ್ತದೆ ಎಂದು ತಿಳಿದು ಮೊದಲ ಬಾರಿಗೆ ಮಲ್ಪೆಯಲ್ಲಿ ಒಂದು ಸಣ್ಣ, ವಾರದ ಚಿಕಿತ್ಸಾಲಯವನ್ನು ಪ್ರಾರಂಭಿಸಿದರು. ಮಲ್ಪೆಯಲ್ಲಿರುವ ಮಿಶನ್ ಶಾಲೆಯ ಒಂದು ತರಗತಿ ಕೋಣೆಯಲ್ಲಿ ಆ ಚಿಕಿತ್ಸಾಲಯವನ್ನು ಆರಂಭ ಮಾಡಲಾಗಿದೆ.[೬೧] ಆರಂಭದಲ್ಲಿ ವಾರದಲ್ಲಿ ಒಂದು ಸಂಜೆ ಬಂದ ರೋಗಿಗಳಿಗೆ ಔಷಧವನ್ನು, ಮುಲಾಮುಗಳನ್ನು ಕೊಡಲಾಗುತ್ತಿತ್ತು. ಆದರೆ ಅದರಿಂದ ರೋಗಿಗಳ ನಿಜವಾದ ಸಂಕಷ್ಟದಲ್ಲಿ ಹೆಚ್ಚಿನ ಸಹಾಯ ಮಾಡಲಾಗುತ್ತಿರಲಿಲ್ಲ. ಆದ್ದರಿಂದ ೧೯೩೭ರಲ್ಲಿ ಆಸ್ಪತ್ರೆಯ ಇಬ್ಬರು ಸಹೋದರಿಯರು ಅಲ್ಲಿಯೇ ವಾಸ ಮಾಡುವ ಏರ್ಪಾಡು ಮಾಡಲಾಯಿತು. ಅವರು ಅಲ್ಲಿಯೇ ಇದ್ದು ರೋಗಿಗಳನ್ನು ಸಂದರ್ಶಿಸಿ, ಹಳ್ಳಿಯವರಿಗೆ ಹೆರಿಗೆ ಸಮಯದಲ್ಲಿ ಸಹಾಯಮಾಡುತ್ತಿದ್ದರು. ನಂತರ ದೇವಾಲಯದ ವಠಾರದಲ್ಲಿದ್ದ ಸಣ್ಣದೊಂದು ಮನೆಯನ್ನು ಔಷಧ ಶಾಲೆಯಾಗಿ ಮಾರ್ಪಡಿಸಲಾಯಿತು. ಆಗ ವಾರಕ್ಕೆ ಎರಡು ಬಾರಿ ಹೋಗಿ ಜನರಿಗೆ ಮೊದಲಿಗಿಂತ ಒಳ್ಳೆಯ ರೀತಿಯಲ್ಲಿ ವೈದ್ಯಕೀಯ ಸಹಾಯವನ್ನು ನೀಡಲು ಅವಕಾಶವಾಯಿತು.[೬೨] ಮಲ್ಪೆಯಲ್ಲಿ ಆ ಕಾರ್ಯ ೧೯೬೨ರ ವರೆಗೆ ಮುಂದುವರೆಯಿತು. ನಂತರ ಅಲ್ಲಿ ಸರಕಾರಿ ಕ್ಲಿನಿಕ್ ತನ್ನ ಪೂರ್ಣಾವಧಿಯ ಕಾರ್ಯವನ್ನು ಪ್ರಾರಂಭಿಸಿದ್ದರಿಂದ ಚಿಕಿತ್ಸಾಲಯವನ್ನು ಮುಚ್ಚಲಾಯಿತು.

೧೯೫೦ರಲ್ಲಿ ಕಾರ್ಕಳದ ಪರ್ಪಲೆಯಲ್ಲಿ ವಾರದ ಕ್ಲಿನಿಕನ್ನು ಪ್ರಾರಂಭಿಸಲಾಗಿದೆ. ವಾರದಲ್ಲಿ ಒಂದು ಅಥವಾ ಎರಡು ದಿನ ಉಡುಪಿ ಆಸ್ಪತ್ರೆಯ ಒಬ್ಬ ವೈದ್ಯರು ಅಲ್ಲಿಗೆ ಭೇಟಿ

ಕೊಡುತ್ತಿದ್ದರು.[೬೩] ಪರ್ಪಲೆಯಲ್ಲಿನ ಉತ್ತಮ ವಾತಾವರಣದಲ್ಲಿ , ಕ್ಷಯರೋಗ ಪೀಡಿತ ಮಹಿಳಾ ರೋಗಿಗಳಿಗೆ 'ಕ್ರಿಸ್ತ ಸೇವಕಿ ಆಶ್ರಮ'ದ ಸಿಸ್ಟರ್‌ಗಳಿಂದ ಪ್ರೀತಿಯಿಂದ ಆರೈಕೆ ದೊರೆಯಿತು. ಇಲ್ಲಿನ ಔಷಧಾಲಯ ಸಿಸ್ಟರ್ ಹನ್ನಾರವರಿಂದ ನಡೆಸಲ್ಪಡುತ್ತಿತ್ತು. ಪರ್ಪಲೆ ಮತ್ತು ಸುತ್ತಲಿನ ಹಳ್ಳಿಯ ಜನರಿಗೆ ಅಲ್ಲಿನ ಔಷಧಾಲಯದಿಂದ ತುಂಬಾ ಸಹಾಯವಾಗುತ್ತಿತ್ತು.[೬೪] ೧೯೬೫ರಲ್ಲಿ ಕೊರಂಗ್ರಪಾಡಿಯಲ್ಲಿ ಫೀಲ್ಡ್ ಕೆಲಸಗಳನ್ನು ಪ್ರಾರಂಭಿಸಲಾಗಿದೆ. ಅಂತೆಯೇ, ಮೆಟರ್ನಿಟಿ ಕ್ಲಿನಿಕ್‌ನ್ನು ಬೈಲೂರು ಶಾಲೆಯಲ್ಲಿ ಆರಂಭಿಸಲಾಯಿತು. ನಂತರ ೧೯೬೭ರಲ್ಲಿ ಕೊರಂಗ್ರಪಾಡಿಯಲ್ಲಿ ತಾಯಂದಿರ ಹಾಗೂ ಮಕ್ಕಳ ಯೋಗಕ್ಷೇಮ ನೋಡಿಕೊಳ್ಳುವ ಕೇಂದ್ರ ಸ್ಥಾಪಿತವಾಯಿತು.[೬೫] ಆ ಕೇಂದ್ರಕ್ಕೆ ಹೊಂದಿಕೊಂಡಂತೆ ಶಿಶುವಿಹಾರವನ್ನು ಆರಂಭಿಸಲಾಗಿದೆ. ಶುಶ್ರೂಷಕಿಯರು ಮನೆಯಲ್ಲಿಯೇ ಹೆರಿಗೆ ಮಾಡಿಸುವ ಹಾಗೂ ಮಕ್ಕಳಿಗೆ ರೋಗ ನಿರೋಧಕ ಚುಚ್ಚುಮದ್ದು ನೀಡುವ ಕೆಲಸ ಮಾಡುತ್ತಿದ್ದರು. ಇದೇ ರೀತಿ ಗ್ರಾಮೀಣ ಜನತೆಗೆ ಸಾಂಕ್ರಾಮಿಕ ರೋಗಗಳ ಬಗ್ಗೆ ಜಾಗೃತಿ ಮೂಡಿಸುವ, ಪೌಷ್ಟಿಕ ಆಹಾರದ ಬಗ್ಗೆ ತಿಳಿಸುವ ಹಾಗೂ ಸ್ವಚ್ಛತೆ ಕುರಿತು ಅರಿವು ಮೂಡಿಸುವ ಕೆಲಸ ಕೂಡ ಅವರು ಮಾಡುತ್ತಿದ್ದರು. ಹಗಲು ಹೊತ್ತಿನಲ್ಲಿ, ಉದ್ಯೋಗಸ್ಥ ಮಹಿಳೆಯರ ಮಕ್ಕಳ ಆರೈಕೆ ಮಾಡುವ ಕೇಂದ್ರವನ್ನು ೧೯೭೩ರಲ್ಲಿ ತೆರೆದಿದ್ದಾರೆ.

೧೯೭೭ರಲ್ಲಿ ವಾರದ ಕ್ಲಿನಿಕನ್ನು ಕುಂದಾಪುರದಲ್ಲಿ ಪ್ರಾರಂಭ ಮಾಡಲಾಯಿತ್ತಾದರೂ ಕಾರಣಾಂತರದಿಂದ ೧೯೭೮ರಲ್ಲಿ ಅದನ್ನು ಮುಚ್ಚಲಾಗಿದೆ.

ಮಿಶನ್ ಆಸ್ಪತ್ರೆ ಗ್ರಾಮೀಣ ಪ್ರದೇಶಗಳಲ್ಲಿ ತನ್ನ ಸೇವಾ ಕಾರ್ಯವನ್ನು ಬಲಪಡಿಸುವ ಉದ್ದೇಶದಿಂದ ಎಡಪದವು ಮತ್ತು ಅದರ ಸುತ್ತಮುತ್ತಲಿನ ಎಂಟು ಹಳ್ಳಿಗಳನ್ನು ಆರಿಸಿಕೊಂಡಿದೆ. ಅಲ್ಲಿ ಮುಖ್ಯವಾಗಿ ಮೂಲಭೂತ ಸೌಕರ್ಯಗಳಾದ ಆರೋಗ್ಯ, ನೀರು, ಶಾಲೆ ಇತ್ಯಾದಿಗಳ ಕೊರತೆ ಇರುವುದನ್ನು ಮನಗಂಡು ಸಮುದಾಯದ ಆರೋಗ್ಯ ಕೇಂದ್ರವನ್ನು ಆರಂಭಿಸಲಾಗಿದೆ. ಆ ಕೇಂದ್ರ ಸ್ಥಳೀಯ ನಿವಾಸಿಗಳ ವೈದ್ಯಕೀಯ ಸೇವಾ ಕಾರ್ಯದ ಹೊರತಾಗಿ ಆರೋಗ್ಯ, ನೈರ್ಮಲ್ಯ, ಪೌಷ್ಟಿಕಾಂಶ ಆಹಾರ ಮುಂತಾದ ವಿಚಾರಗಳ ಬಗ್ಗೆ ಮಾಹಿತಿ ನೀಡುತ್ತದೆ. ೧೯೮೨ರಲ್ಲಿ ಅಲ್ಲಿ ಒಬ್ಬ ಸಾಮಾಜಿಕ ಕಾರ್ಯಕರ್ತರನ್ನು ನೇಮಕ ಮಾಡಲಾಗಿದೆ. ಬಡ ಮತ್ತು ಸಣ್ಣ ರೈತರ ಸಮಸ್ಯೆಗಳನ್ನು ಪರಿಹರಿಸುವ ಪ್ರಯತ್ನವನ್ನು ಮಾಡಲಾಗಿದೆ. ಅವರಿಗಿದ್ದ ನೀರಿನ ಪೂರೈಕೆಯ ಸಮಸ್ಯೆ, ಗುಣಮಟ್ಟದ ಬೀಜಗಳ ಕೊರತೆ ಹಾಗೂ ಉತ್ಪನ್ನಗಳ ಮಾರಾಟಕ್ಕೆ ಅಗತ್ಯವಾದ ಮಾರುಕಟ್ಟೆಯಸಮಸ್ಯೆಯನ್ನು ಬಗೆಹರಿಸಲಾಗಿದೆ. ವಿಭಿನ್ನ ಸಾಮರ್ಥ್ಯದ ಮಕ್ಕಳಿಗಾಗಿ ೧೯೮೧ರಲ್ಲಿ 'ಆಶಾ ನಿಲಯ' ಎಂಬ ಸ್ಪೆಶಲ್ ಸ್ಕೂಲನ್ನು ಆರಂಭಿಸಲಾಗಿದೆ. ಮುಂಡ್ಕೂರು ಬಳಿಯ ಸಚ್ಚೇರಿಪೇಟೆಯ ಪರಿಶಿಷ್ಟಜಾತಿ ಮತ್ತು ಪಂಗಡದವರಿಗೆ ವೈದ್ಯಕೀಯ ಸೌಲಭ್ಯ ಒದಗಿಸುವ ಕೆಲಸವನ್ನೂ ಡಾ. ಲೊಂಬಾರ್ಡ್ ಆಸ್ಪತ್ರೆ

ವಹಿಸಿಕೊಂಡಿದೆ. ಅಲ್ಲಿ ಸಮಗ್ರ ಸಾಮಾಜಿಕ ಹಾಗೂ ಆರ್ಥಿಕ ಅಭಿವೃದ್ಧಿ ಕಾರ್ಯವು ಧರ್ಮಪ್ರಾಂತ್ಯದ ಮೂಲಕ ನಡೆಸಲ್ಪಡುತ್ತಿದೆ.[೬೬]

### ೩.೨೦.೭. ದಾದಿಯರ ತರಬೇತಿ ಕಾರ್ಯಕ್ರಮ

ಆಸ್ಪತ್ರೆ ಬೆಳವಣಿಗೆ ಹೊಂದುತ್ತಾ ಹೋದಂತೆ ಆಸ್ಪತ್ರೆಗೆ ಬರುವ ರೋಗಿಗಳ ಸಂಖ್ಯೆಯೂ ಅಧಿಕವಾಗಿದೆ. ಆದರೆ ದಾದಿಯರ ಕೊರತೆ ಆಸ್ಪತ್ರೆಯಲ್ಲಿ ಇತ್ತು. ಅದಕ್ಕೋಸ್ಕರ ೧೯೩೩ರಲ್ಲಿ 'ಸ್ಕೂಲ್ ಫಾರ್ ಕ್ರಿಶ್ಚಿಯನ್ ಸರ್ವಿಸ್' ಎಂಬ ಶಾಲೆಯನ್ನು ಆರಂಭಿಸಿ, ಅಡುಗೆಯಿಂದ ಹಿಡಿದು ನರ್ಸಿಂಗ್ ವಿಷಯದವರೆಗೆ ತರಬೇತಿ ನೀಡಲಾಗುತ್ತಿತ್ತು.[೬೭] 'ಸ್ಕೂಲ್ ಫಾರ್ ಕ್ರಿಶ್ಚಿಯನ್ ಸರ್ವಿಸ್', ದಾದಿಯರನ್ನು ತರಬೇತಿಗೊಳಿಸುತ್ತಾ ಹೋದಂತೆ ಮುಂದೆ ಸರಕಾರಿ ಮಾನ್ಯತೆ ಪಡೆದ ನರ್ಸಿಂಗ್ ಶಾಲೆಯ ಅಗತ್ಯವನ್ನು ಮನಗಾಣಲಾಯಿತು. ಆದ್ದರಿಂದ ೧೯೬೪ರಲ್ಲಿ ಸರಕಾರಿ ಮಾನ್ಯತೆ ಪಡೆದ ಆಕ್ಸಿಲರಿ ನರ್ಸ್ ಆಂಡ್ ಮಿಡ್‌ವೈಫ್ (ಎ.ಎನ್.ಎಂ.) ತರಬೇತಿ ಶಾಲೆಯನ್ನು ಪ್ರಾರಂಭಿಸಲಾಯಿತು. ನರ್ಸಿಂಗ್ ತರಬೇತಿಗೆ ಹೊಂದಿಕೊಂಡು ಕೊರಂಗ್ರಪಾಡಿಯಲ್ಲಿ ಪ್ರಸೂತಿ ಕೇಂದ್ರವನ್ನೂ, ಫೀಲ್ಡ್ ಕೆಲಸಗಳನ್ನೂ ಪ್ರಾರಂಭಿಸಲಾಯಿತು. ವೈದ್ಯಕೀಯ ತಂತ್ರಜ್ಞಾನ ಮುಂದುವರಿದಂತೆ ವಿವಿಧ ಕೌಶಲ್ಯ ಹೊಂದಿದ ದಾದಿಯರ ಅಗತ್ಯ ಹೆಚ್ಚಾಯಿತು. ೧೯೮೧ರಲ್ಲಿ ಎ. ಎನ್.ಎಂ. ತರಬೇತಿ ಶಾಲೆಯನ್ನು ಸರಕಾರಿ 'ಎ' ಗ್ರೇಡ್ ಕೋರ್ಸ್ ನೀಡುವ ಸಂಸ್ಥೆಯಾಗಿ ಬಡ್ತಿ ಪಡೆಯಿತು.[೬೮] ಆಸ್ಪತ್ರೆಯ ನರ್ಸಿಂಗ್ ಶಾಲೆಯಲ್ಲಿ ತರಬೇತಿ ಹೊಂದಿದ ಅನೇಕರಲ್ಲಿ ಕೆಲವರು ಮಿಶನ್ ಆಸ್ಪತ್ರೆಯಲ್ಲಿ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರೆ, ಇನ್ನು ಕೆಲವರು ಇತರ ಖಾಸಗಿ ಆಸ್ಪತ್ರೆಗಳಲ್ಲಿ ದುಡಿಯುತ್ತಿದ್ದಾರೆ, ಮಾತ್ರವಲ್ಲ ವಿದೇಶಗಳಲ್ಲಿ ಕೂಡ ದಾದಿಯರಾಗಿ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ.[೬೯]

### ೩.೨೦.೮.ಡಾ. ಈವಾ ಲೊಂಬಾರ್ಡ್ ಅವರ ನಂತರ ಆಸ್ಪತ್ರೆ

ಡಾ. ಈವಾ ಲೊಂಬಾರ್ಡ್ ಅವರು ೩೧ ವರ್ಷ ಅಧೀಕ್ಷಕಿಯಾಗಿ ಸೇವೆ ಸಲ್ಲಿಸಿ ೧೯೫೪ರಲ್ಲಿ ನಿವೃತ್ತಿ ಹೊಂದಿದರು. ಆ ಬಳಿಕ ಆಸ್ಪತ್ರೆಯ ಅಧೀಕ್ಷಕಿಯರಾಗಿ ಡಾ.ಕೆ.ಎ.ಸಾಲಿನ್ಸ್, ಡಾ.ಪಿ.ಎ.ಕುಂದರಗಿ, ಡಾ. ಈವಾ ಡಿ ಬೆಲ್ ಅವರು ಸೇವೆ ಸಲ್ಲಿಸಿದರು. ಮುಂದೆ, ವೈದ್ಯಕೀಯ ನಿರ್ದೇಶಕರುಗಳಾಗಿ ಡಾ. ಅಶೋಕ್ ರೊನಾಲ್ಡ್, ಡಾ. ಪ್ರದೀಪ್ ಜಾನ್ (೨೦೦೨-೨೦೦೭) ಮತ್ತು ಡಾ.ಎ.ಆರ್. ಆಚಾರ್ಯ (೨೦೦೭-೨೦೦೯) ಸೇವೆ ಸಲ್ಲಿಸಿದರು. ಪ್ರಸ್ತುತ ಡಾ. ರತೀಶ್ ಜಾನ್ಸನ್ (೨೦೦೯ರಿಂದ) ಅವರು ವೈದ್ಯಕೀಯ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.[೭೦]

ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್‌ನ ವೈದ್ಯಕೀಯ ಸೇವಾಕಾರ್ಯ ಸ್ವಲ್ಪ ತಡವಾಗಿಯೇ ಆರಂಭಗೊಂಡರೂ, ಜಿಲ್ಲೆಯ ಎರಡನೇ ದೊಡ್ಡ ಪಟ್ಟಣ ಹಾಗೂ ಪ್ರಮುಖ ಹಿಂದೂ ಆರಾಧನಾ ಕೇಂದ್ರವಾಗಿದ್ದ ಉಡುಪಿಯಲ್ಲಿ ಡಾ. ಲೊಂಬಾರ್ಡ್ ಸ್ಮಾರಕ ಆಸ್ಪತ್ರೆ ತನ್ನ ಛಾಪನ್ನು ಮೂಡಿಸಿದೆ. ಸಣ್ಣ ಪ್ರಮಾಣದಲ್ಲಿ ಆರಂಭಗೊಂಡ ಆ ಆಸ್ಪತ್ರೆ ತಾಯಿ ಮತ್ತು ಶಿಶು ಮರಣ ಪ್ರಮಾಣವನ್ನು ಕಡಿಮೆಗೊಳಿಸಿದ್ದು ಮಾತ್ರವಲ್ಲದೆ ಹೆರಿಗೆ ಕಾರ್ಯವಿಧಾನವನ್ನು ಅಶುಚಿಯೆಂಬ ಪೂರ್ವಾಗ್ರಹವನ್ನು ಸಾವಕಾಶವಾಗಿ ಜನರ ಮನಸ್ಸಿನಿಂದ ದೂರ ಮಾಡುವುದರಲ್ಲಿ ಯಶಸ್ವಿಯಾಯಿತು. ಆಸ್ಪತ್ರೆ ಆರಂಭಗೊಂಡಾಗ ಮಿಶನರಿಗಳನ್ನೂ ಅವರ ಸೇವಾ ಕಾರ್ಯವನ್ನೂ ಸಂದೇಹದಿಂದ ಗಮನಿಸುತ್ತಿದ್ದವರೂ ಕಾಲಕ್ರಮೇಣ ಡಾ.ಈವಾ ಮತ್ತು ಅವರ ಸಂಗಡಿಗರ ನಿಸ್ವಾರ್ಥ ಸೇವೆಯನ್ನು ಕಂಡು ಮೆಚ್ಚಿದರು. ಹೀಗೆ ಆಸ್ಪತ್ರೆಯ ಕೀರ್ತಿ ಉಡುಪಿ ಮತ್ತು ಅದರ ಸುತ್ತಮುತ್ತಲೂ ಹರಡಿ ಜನರು ರೋಗಿಗಳನ್ನು ತಂಡೋಪತಂಡವಾಗಿ ಆಸ್ಪತ್ರೆಗೆ ತರಲಾರಂಭಿಸಿದರು. ಇದರಿಂದ ಸ್ಥಳಾವಕಾಶದ ಅಭಾವ ಉಂಟಾಯಿತು. ತತ್‌ಕ್ಷಣ ಡಾ. ಲೊಂಬಾರ್ಡ್‌ರವರು ವಿದೇಶಿ ಮಿತ್ರರ, ಮುಖ್ಯವಾಗಿ ತಮ್ಮ ತಾಯಿ ನೀಡಿದ, ದೊಡ್ಡ ಮೊತ್ತದ ನೆರವಿನಿಂದ ಆಸ್ಪತ್ರೆಯ ಕಟ್ಟಡ ವಿಸ್ತರಣಾ ಕಾರ್ಯವನ್ನು ಕೈಗೆತ್ತಿಕೊಂಡು ಅಲ್ಪ ಕಾಲದಲ್ಲಿಯೇ ನಿರ್ಮಾಣ ಕಾರ್ಯವನ್ನು ಮುಗಿಸಿ ಹೆಚ್ಚಿನ ರೋಗಿಗಳನ್ನು ಒಳರೋಗಿಗಳಾಗಿ ಸೇರಿಸಿಕೊಂಡರು. ಆಸ್ಪತ್ರೆಯಲ್ಲಿ ರೋಗಿಗಳ ಸಂಖ್ಯೆ ಹೆಚ್ಚುತ್ತಿದ್ದಂತೆಯೇ ಸಿಬ್ಬಂದಿಗಳ, ಮುಖ್ಯವಾಗಿ ದಾದಿಯರ ಕೊರತೆ ಕಂಡುಬಂದಿತು. ಅದಕ್ಕಾಗಿಯೇ ನರ್ಸಿಂಗ್ ಮತ್ತು ಸೂಲಗಿತ್ತಿಯರ ತರಬೇತಿ ಶಾಲೆಯನ್ನೂ ಆರಂಭಿಸುವ ಮೂಲಕ ಯುವತಿಯರಿಗೆ ಉದ್ಯೋಗಾವಕಾಶವನ್ನು ಕಲ್ಪಿಸಿದರು. ೧೯೨೩ರಲ್ಲಿ ೬ ಹಾಸಿಗೆಗಳನ್ನು ಹೊಂದಿ ಆ ಸಂಸ್ಥೆಯು, ೧೯೯೫ರಲ್ಲಿ ೨೦೦ ಹೊಂದುವ ಮೂಲಕ ಗಣನೀಯ ಪ್ರಮಾಣದಲ್ಲಿ ಅಭಿವೃದ್ಧಿ ಹೊಂದಿದೆ. ಆದರೆ, ೨೦೦೦ನೇ ಇಸವಿಯ ನಂತರ ಆರ್ಥಿಕ ಮುಗ್ಗಟ್ಟಿನಿಂದಲೂ, ತಜ್ಞವೈದ್ಯರುಗಳ ಕೊರತೆಯಿಂದಲೂ, ಸುತ್ತಲೂ ಹಲವಾರು ಸುಸಜ್ಜಿತ ಆಸ್ಪತ್ರೆಗಳ ನಿರ್ಮಾಣವಾದುದರಿಂದಲೂ ಈ ಆಸ್ಪತ್ರೆಯಲ್ಲಿ ಒಳರೋಗಿಗಳ ಹಾಗೂ ಹೊರರೋಗಿಗಳ ಸಂಖ್ಯೆ ಇಳಿಮುಖವಾಗಿದೆ. ಹಾಗಿದ್ದರೂ ಈ ಆಸ್ಪತ್ರೆಯು ಬಡಬಗ್ಗರ ಮತ್ತು ಕಡೆಗಣಿಸಲ್ಪಟ್ಟ ಸಮುದಾಯಗಳ ಹೊರ ಹಾಗೂ ಒಳರೋಗಿಗಳಿಗೆ ಉಚಿತವಾಗಿಯೂ, ರಿಯಾಯಿತಿ ದರದಲ್ಲೂ ಚಿಕಿತ್ಸೆ ನೀಡುವ ಕಾಯಕವನ್ನು ಮುಂದುವರಿಸುತ್ತಿದೆ.

## ೩.೨೧. ಇತರ ಆರೋಗ್ಯ ಕೇಂದ್ರಗಳು

### ೩.೨೧.೧. ರೋಜರಿ ಮಾತೆಯ ಕ್ಷಯ ರೋಗ ಆಸ್ಪತ್ರೆ, ಮೂಡಬಿದರೆ

ಮಂಗಳೂರಿನಿಂದ ೨೨ ಮೈಲು ದೂರದಲ್ಲಿ ಕಾರ್ಕಳಕ್ಕೆ ಹೋಗುವ ಮಾರ್ಗದಲ್ಲಿ ಮೂಡಬಿದ್ರೆ ಎಂಬ ಒಂದು ಸಣ್ಣ ಪಟ್ಟಣವಿದೆ. ಆ ಪಟ್ಟಣದ ಉತ್ತರದಲ್ಲಿ ಮೌಂಟ್ ರೋಸರಿ ಇದೆ. ಅಲ್ಲಿಗೆ ಸಮೀಪದಲ್ಲಿ ಮೂಡಬಿದ್ರೆ ಆಲಂಗಾರ್ ಚರ್ಚಿನ ಧರ್ಮಗುರುಗಳಾದ ಫಾ। ಫ್ರಾನ್ಸಿಸ್ ಎಲಿಯಾಸ್ ಡಿ'ಸೋಜರವರು ಕ್ಷಯರೋಗದ ಆಸ್ಪತ್ರೆಯೊಂದನ್ನು ಸ್ಥಾಪಿಸಿದರು. ೨೭ ಜೂನ್ ೧೯೩೭ರಂದು ಬಿಷಪ್ ವಿಕ್ಟರ್ ಫೆರ್ನಾಂಡಿಸ್‌ರವರು ೨ ಹಾಸಿಗೆಗಳ ಆ ಚಿಕ್ಕ ಆಸ್ಪತ್ರೆಯನ್ನು ಉದ್ಘಾಟಿಸಿದರು. ಆರಂಭದಲ್ಲಿದ್ದ ಕಟ್ಟಡದಲ್ಲಿ ಒಂದು ಕೋಣೆಯಲ್ಲಿ ಪುರುಷ ರೋಗಿಗಳು ಮತ್ತೊಂದರಲ್ಲಿ ಮಹಿಳಾ ರೋಗಿಗಳು ಚಿಕಿತ್ಸೆಯನ್ನು ಪಡೆಯುತ್ತಿದ್ದರು ಹಾಗೂ ಮಧ್ಯದಲ್ಲಿ ಔಷಧಾಲಯ ಇದೆ. ಆಸ್ಪತ್ರೆಯ ಸ್ಥಾಪಕರು ೧೯೪೧-೪೨ರ ಅವಧಿಯಲ್ಲಿ ಮೂರು ಮನೆಗಳನ್ನು ಕಟ್ಟಿಸಿದರು. ೧೯೫೨ರಲ್ಲಿ ಫಾ। ಎಲಿಯಾಸ್ ಡಿ'ಸೋಜ ಅವರಿಗೆ ಅವರು ಮಾಡಿದ ರೋಗಿಗಳ ಸೇವೆಗಾಗಿ ಜಗದ್ಗುರುಗಳು 'ಪ್ರಿವಿ ಚೆಂಬರ್ಲನ್' ಗೌರವ ನೀಡಿ ಸನ್ಮಾನಿಸಿದರು. ಕಾಲಕ್ರಮೇಣ ಆಸ್ಪತ್ರೆಯಲ್ಲಿ ೫೦ ಹಾಸಿಗೆಗಳ ವ್ಯವಸ್ಥೆ ಮಾಡಲಾಯಿತು. ದೀನ, ದಲಿತ, ನಿರ್ಗತಿಕರ ಆಧಾರ ಸ್ತಂಭದಂತಿದ್ದ ಗುರುಗಳು ಸುದೀರ್ಘವಾದ ೨೧ ವರ್ಷಗಳ ಸೇವೆಯನ್ನು ಸಲ್ಲಿಸಿ ೩ ಸೆಪ್ಟೆಂಬರ್ ೧೯೫೮ರಲ್ಲಿ ದೈವಾಧೀನರಾದರು.[೭೧]

ತದನಂತರ ಫಾ। ಜಾನ್ ಎಂ. ಮಿನೇಜಸ್ (೧೯೫೯-೧೯೭೦), ಫಾ। ಜೋಸ್ ಮಿನೆಜಸ್ (೧೯೭೦-೧೯೭೭), ಫಾ। ಎಲ್. ಎಸ್ ಪಾಯ್ಸ್ (೧೯೭೭-೧೯೮೭), ಫಾ।ಎಲ್. ವಿ. ಎಂ. ಫೆರ್ನಾಂಡಿಸ್ ಮುಂತಾದವರು ನಿರ್ದೇಶಕರುಗಳಾಗಿ ಸೇವೆ ಸಲ್ಲಿಸಿದ್ದಾರೆ. ಆಸ್ಪತ್ರೆಯಲ್ಲಿ ಕ್ಷ-ಕಿರಣ ಸೌಲಭ್ಯ, ಹೆಂಗಸರ ಪ್ರತ್ಯೇಕ ವಾರ್ಡ್, ಅವಿವಾಹಿತ ತಾಯಂದಿಯರಿಗಾಗಿ 'ನಿರ್ಮಲ ನಿವಾಸ' (೧೯೬೦) ಮತ್ತು ಅಲ್ಲಿ ಜನಿಸಿದ ಶಿಶುಗಳಿಗೆ 'ಶಿಶುವಿಹಾರ' ಹಾಗೂ ಅನಾಥ ಮಕ್ಕಳಿಗೆ 'ಸಂತ ಜೋನರ ಆಶ್ರಮ' ಸ್ಥಾಪಿಸಲಾಗಿದೆ. ಕ್ಷಯ ರೋಗವಲ್ಲದೆ ಇತರ ಕಾಯಿಲೆಗಳಿಗೂ ಚಿಕಿತ್ಸೆ ನೀಡಲು ಪ್ರತ್ಯೇಕ 'ಚಿಕಿತ್ಸಾಲಯ' ಮತ್ತು ವೃದ್ಧರಿಗಾಗಿ 'ವೃದ್ಧಾಶ್ರಮ'ವನ್ನು ಸ್ಥಾಪಿಸಲಾಗಿದೆ.[೭೨] ಗುಣಮುಖರಾದ ರೋಗಿಗಳಿಗೆ ಮತ್ತು ಇತರ ನಿರಾಶ್ರಿತರಿಗೆ ಪುನರ್ವಸತಿ ಕೇಂದ್ರವನ್ನೂ ತೆರೆಯಲಾಗಿದೆ. ಉದಾರ ಮನಸ್ಸಿನ ದಾನಿಗಳ ಆರ್ಥಿಕ ನೆರವಿನಿಂದ ನಡೆಸುತ್ತಿರುವ ಈ ಸಂಸ್ಥೆ ಹತ್ತು ಹಲವು ಅಡಚಣೆಗಳನ್ನು ಎದುರಿಸುತ್ತಿದೆ. ಅದಕ್ಕಾಗಿ ವ್ಯವಸಾಯ, ಪಶುಪಾಲನೆ, ಕೋಳಿಸಾಕಣೆಗಳನ್ನು ಅವಲಂಬಿಸಿ ಸಂಸ್ಥೆಯನ್ನು ನಡೆಸಿಕೊಂಡು ಹೋಗುತ್ತಿದ್ದಾರೆ.[೭೩] ಅಲ್ಲದೆ, ಇಂದಿನ ಪರಿಸ್ಥಿತಿಯಲ್ಲಿ ಕ್ಷಯರೋಗಿಗಳನ್ನು ಪ್ರತ್ಯೇಕವಾಗಿ

ಸ್ಯಾನಿಟೋರಿಯಂನಲ್ಲಿ ಬಿಡುವ ಅಗತ್ಯವಿಲ್ಲದಿರುವುದರಿಂದ ಒಳರೋಗಿಗಳ ಸಂಖ್ಯೆ ಇಳಿಮುಖವಾಗುತ್ತಿದೆ.[೭೪]

**೩.೨೧.೨. ಫಾ। ಎಲ್. ಎಂ. ಪಿಂಟೋ ಆಸ್ಪತ್ರೆ ಬದ್ಯಾರ್, ಬೆಳ್ತಂಗಡಿ**

ಬೆಳ್ತಂಗಡಿ ತಾಲೂಕಿನಲ್ಲಿ ಬದ್ಯಾರ್ ಎಂಬುದು ಒಂದು ಅತೀ ಸಣ್ಣ ಹಳ್ಳಿ. ಇಪ್ಪತ್ತನೆಯ ಶತಮಾನದ ಮೊದಲಾರ್ಧದಲ್ಲಿ ಕ್ರೈಸ್ತ ಧರ್ಮ ಪ್ರಚಾರ ಮಾಡಿದ ಯೇಸು ಸಭೆಯ ಫಾ। ಗವಿರಾಘಿಯವರು ಕ್ರೈಸ್ತ ಧರ್ಮ ಸ್ವೀಕರಿಸಿದವರಿಗಾಗಿ ಮುಳಿ ಹುಲ್ಲಿನ ಚರ್ಚೊಂದನ್ನು ನಿರ್ಮಿಸಿದರು. ಡಾ. ಪೌವ್ಲ್ ಪೀಟರ್ ಪಿಂಟೋ ಅವರು ತಮ್ಮ ವೈದ್ಯಕೀಯ ಶಿಕ್ಷಣವನ್ನು ಸ್ವರ್ಣ ಪದಕಗಳಿಕೆಯೊಂದಿಗೆ ಮುಗಿಸಿ ಮದ್ರಾಸಿನಿಂದ ತಾಯ್ನಾಡಿಗೆ ವಾಪಸಾದರು. ೧೯೨೭ರಲ್ಲಿ ಡಾ. ಪಿಂಟೋ ಅವರ ಸಹೋದರ ಫಾ। ಎಲ್. ಎಂ. ಪಿಂಟೋ ಹಾಗೂ ಅವರ ಇಬ್ಬರು ಸಹೋದರಿಯರು ಒಂದುಗೂಡಿ ಫಾ। ಗವಿರಾಘಿಯವರು ಸ್ಥಾಪಿಸಿದ್ದ ಆ ಹಳೆಯ ಮುಳಿಹುಲ್ಲಿನ ದೇವಾಲಯದಲ್ಲಿಯೇ ಬಡ ಜನರ ಸೇವೆಗಾಗಿ ಆಸ್ಪತ್ರೆಯೊಂದನ್ನು ಆರಂಭಿಸಿದರು. ನಗುಮುಖ, ಪ್ರೀತಿ, ವಾತ್ಸಲ್ಯದಿಂದ ರೋಗಿಗಳ ಚಿಕಿತ್ಸೆ ಮಾಡುತ್ತಿದ್ದ ಇವರು ಬಡ ರೋಗಿಗಳ ಪಾಲಿಗೆ ವರದಾನವಾಗಿದ್ದರು. ಕಾಲಕ್ರಮೇಣ ಆ ಆರೋಗ್ಯ ಕೇಂದ್ರದ ಪ್ರಸಿದ್ಧಿ ಸುತ್ತಮುತ್ತಲ ಹಳ್ಳಿಗಳಿಗೆ ಪಸರಿಸಿ ಬರುವ ರೋಗಿಗಳ ಸಂಖ್ಯೆ ಅಧಿಕವಾಯಿತು. ಬೆಳ್ತಂಗಡಿ ತಾಲೂಕು ಮಾತ್ರವಲ್ಲದೆ ದಕ್ಷಿಣ ಕನ್ನಡ ಜಿಲ್ಲೆಯ ದೂರದ ಊರುಗಳಾದ ಮೂಲ್ಕಿ, ಕಾರ್ಕಳ, ಉಪ್ಪಿನಂಗಡಿ ಹಾಗೂ ನೆರೆಯ ಚಿಕ್ಕಮಗಳೂರು ಜಿಲ್ಲೆಯಿಂದಲೂ ಜನರು ಇಲ್ಲಿಗೆ ಚಿಕಿತ್ಸೆಗಾಗಿ ಬರತೊಡಗಿದರು. ಇದಕ್ಕೆ ಮುಖ್ಯ ಕಾರಣ ಆ ದಿನಗಳಲ್ಲಿ ಎಲ್ಲೆಡೆ ಹರಡಿ ಬಡ ಜನರನ್ನು ಕಂಗೆಡಿಸುತ್ತಿದ್ದ ಮಲೇರಿಯ, ಕ್ಷಯ, ರಕ್ತಹೀನತೆ, ಅಸ್ತಮ ಮತ್ತು ಚರ್ಮವ್ಯಾಧಿಯಂತಹ ಕಾಯಿಲೆಗಳು. ಈ ಎಲ್ಲಾ ಕಾಯಿಲೆಗಳಿಗೂ ಬದ್ಯಾರಿನ ಆಸ್ಪತ್ರೆಯಲ್ಲಿ ಉತ್ತಮ ಹಾಗೂ ಸೂಕ್ತ ಚಿಕಿತ್ಸೆ ದೊರೆಯುತ್ತಿತ್ತು. ಆದರೆ, ಬಡವರ ಪಾಲಿಗೆ ಆಶಾಕಿರಣವಾಗಿದ್ದ ಆ ಆಸ್ಪತ್ರೆಯನ್ನು ಆರ್ಥಿಕ ಮುಗ್ಗಟ್ಟಿನಿಂದಾಗಿ ೧೯೪೭ರಲ್ಲಿ ಮುಚ್ಚಬೇಕಾಯಿತು. ಡಾ. ಪೌವ್ಲ್ ಪೀಟರ್ ಪಿಂಟೋ ಅವರು ವಿಧಿವಶರಾಗುವುದರೊಂದಿಗೆ ಅವರು ನಡೆಸಿಕೊಂಡು ಬರುತ್ತಿದ್ದ ಔಷಧಾಲಯವೂ ಮುಚ್ಚಲ್ಪಟ್ಟಿತು. ಬಳಿಕ ೧೯೮೪ರಲ್ಲಿ ಫಾ। ಜೆರಾಲ್ಡ್ ಲೋಬೊ ಅವರು ಬದ್ಯಾರಿನ ಧರ್ಮಗುರುಗಳಾಗಿದ್ದ ಸಮಯದಲ್ಲಿ ಸಿ.ಒ.ಡಿ.ಪಿ. ನೆರವಿನಿಂದ ಆಸ್ಪತ್ರೆಯನ್ನು ಪುನರಾರಂಭಿಸಿದರು. ಮುಂದೆ ೧೯೯೨ರಲ್ಲಿ ಹೆಚ್ಚಿನ ಚಿಕಿತ್ಸಾ ಸೇವೆಗಾಗಿ ಆರೋಗ್ಯ ಕೇಂದ್ರದ ನಿರ್ವಹಣೆಯನ್ನು ಬೆಥನಿ ಧರ್ಮಭಗಿನಿಯರ ಕೈಗೊಪ್ಪಿಸಲಾಯಿತು. ೧೯೯೨-೧೯೯೫ರ ಅವಧಿಯಲ್ಲಿ ಡಾ. ಭ। ಕ್ಲಾರಾ ಮತ್ತು ಡಾ. ಭ। ಜೀವಿತಾರವರು

ವೈದ್ಯಾಧಿಕಾರಿಗಳಾಗಿ ಇಲ್ಲಿ ಸೇವೆ ಸಲ್ಲಿಸಿದರು. ೧೯೯೫ರಲ್ಲಿ ಭ। ಹೋಪ್‌ರವರು ಆಡಳಿತಾಧಿಕಾರಿಯಾಗಿ ಹಾಗೂ ಡಾ. ಡೆನ್ಜಿಲ್ ಅವರು ವೈದ್ಯಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.

೧೯೯೭ರಲ್ಲಿ ಹಳ್ಳಿಯ ಬಡ ಹೆಣ್ಣು ಮಕ್ಕಳಿಗಾಗಿ ಸಹಾಯಕ ದಾದಿಯರ ತರಬೇತಿ ಯೋಜನೆಯೊಂದನ್ನು ಆರಂಭಿಸಲಾಗಿದೆ. ಸಮುದಾಯ ಆರೋಗ್ಯ ಯೋಜನೆಯಡಿಯಲ್ಲಿ ಜನರಿಗೆ ಆರೋಗ್ಯದ ಮಾಹಿತಿ ನೀಡುವ ಕಾರ್ಯಕ್ರಮವನ್ನು ಹತ್ತು ಹಳ್ಳಿಗಳಲ್ಲಿ ಹಮ್ಮಿಕೊಂಡಿದ್ದಾರೆ. ೨೦೦೧ರಲ್ಲಿ ಡಾ. ಕಾಜಲ್ ಎ. ವಿ. ಡಿ'ಸೋಜ ಅವರು ಸಹಾಯಕ ವೈದ್ಯಾಧಿಕಾರಿಯಾಗಿ ನೇಮಕಗೊಂಡು ಸೇವೆ ಸಲ್ಲಿಸುತ್ತಿದ್ದಾರೆ. ಪ್ರಾರಂಭದಲ್ಲಿ ೧೨ ಹಾಸಿಗೆಗಳಿಂದ ಆರಂಭಿಸಲ್ಪಟ್ಟ ಆರೋಗ್ಯ ಕೇಂದ್ರವನ್ನು ಇಂದು ೬೦ ಹಾಸಿಗೆಯ ಸುಸಜ್ಜಿತ ಆಸ್ಪತ್ರೆಯನ್ನಾಗಿ ಪರಿವರ್ತಿಸಲಾಗಿದೆ. ಪ್ರಸ್ತುತ ಐವರು ಬೆಥನಿ ಧರ್ಮಭಗಿನಿಯರು, ಮೂವರು ಖಾಯಂ ವೈದ್ಯರು, ಎಂಟು ಸಂದರ್ಶಕ ವೈದ್ಯರು ಹಾಗೂ ೩೫ ದಾದಿಯರು ಈ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.[೭೫]

## ೩.೨೧.೩. ಕೊನ್ಸೆಟ್ಟಾ ಆಸ್ಪತ್ರೆ, ಕಿನ್ನಿಗೋಳಿ

ಸುಮಾರು ೫೦ ವರ್ಷಗಳ ಹಿಂದೆ ಕಿನ್ನಿಗೋಳಿ ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಹೆಚ್ಚಾಗಿ ಬಡ ಮತ್ತು ಮಧ್ಯಮ ವರ್ಗದ ಕೃಷಿಕರು ಜೀವಿಸುತ್ತಿದ್ದರು. ಮೂಲಭೂತ ಸೌಲಭ್ಯಗಳಿಗೆ ಕೊರತೆಯಿದ್ದ ಆ ದಿನಗಳಲ್ಲಿ ವೈದ್ಯಕೀಯ ಚಿಕಿತ್ಸೆಗಾಗಿ ಜನರು ಮೂಲ್ಕಿ ಅಥವಾ ಮಂಗಳೂರಿಗೆ ಹೋಗುವ ಅನಿವಾರ್ಯತೆ ಇತ್ತು. ಜನರ ಕಷ್ಟವನ್ನು ಅರಿತ ಫಾ। ಜೇಕಬ್ ಲೋಬೊರವರು ಹಲವಾರು ದಾನಿಗಳ ಸಹಕಾರದಿಂದ ೧೯೫೭ರಲ್ಲಿ ೧೫ ಹಾಸಿಗೆಗಳ ಕಿನ್ನಿಗೋಳಿ ಕೊನ್ಸೆಟ್ಟಾ ಆಸ್ಪತ್ರೆಯನ್ನು ಪ್ರಾರಂಭಿಸಿದರು. ಆಸ್ಪತ್ರೆಗೆ ಆರ್ಥಿಕ ನೆರವು ನೀಡಲು ತೆಂಗಿನ ಮತ್ತು ಕರಿ ಮೆಣಸು ಕೃಷಿಯನ್ನು ಮಾಡಲಾಗುತ್ತಿದೆ. ಇಲ್ಲಿ ಸೇವೆ ಸಲ್ಲಿಸಿದ ವೈದ್ಯರಲ್ಲಿ ಡಾ. ಜೋಸೆಫ್ ಪಿರೇರಾರವರು ಕಾರಿತಾಸ್ ಸಂಸ್ಥೆಯ ನೆರವಿನಿಂದ ಒಂದು ಸಂಚಾರಿ ಚಿಕಿತ್ಸಾಲಯವನ್ನು ತೆರೆದಿದ್ದರು. ೧೯೮೬ರಿಂದ ಆಸ್ಪತ್ರೆಯನ್ನು ನಡೆಸುವ ಜವಾಬ್ದಾರಿಯನ್ನು ಬೆಥನಿ ಧರ್ಮಭಗಿನಿಯರು ನಿರ್ವಹಿಸುತ್ತಿದ್ದಾರೆ.[೭೬]

## ೩.೨೧.೪. ಗೊರೆಟ್ಟಿ ಆಸ್ಪತ್ರೆ ಕಲ್ಯಾಣಪುರ, ಉಡುಪಿ

೧೯೫೪ರಲ್ಲಿ, ಕಲ್ಯಾಣಪುರದ ಆಸುಪಾಸಿನ ಜನತೆಯ ವೈದ್ಯಕೀಯ ಅವಶ್ಯಕತೆಗಳನ್ನು ಮನಗಂಡು, ಮೊ। ಆರ್. ಡೆನಿಸ್ ಸಿಕ್ವೇರಾರವರ ನಿರ್ದೇಶಕತ್ವದಲ್ಲಿ ಮೂರು ಸಣ್ಣ ವಿಭಾಗಗಳನ್ನೊಳಗೊಂಡ ಒಂದು ಚಿಕ್ಕ ಆಸ್ಪತ್ರೆಯನ್ನು ಸ್ಥಾಪಿಸಲಾಯಿತು.[೭೭] ಮೊ। ಸಿಕ್ವೇರಾರವರು ಆ ದಿನಗಳಲ್ಲಿ ಕಲ್ಯಾಣಪುರದ ಮೌಂಟ್ ರೋಸರಿ ದೇವಾಲಯದ ಧರ್ಮಗುರುಗಳಾಗಿದ್ದರು. ಮೂರು ಚಿಕ್ಕ

ಕಟ್ಟಡಗಳನ್ನೊಳಗೊಂಡಿದ್ದ ಆ ಸಣ್ಣ ಆಸ್ಪತ್ರೆಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವಂತೆ ಪ್ರೇಷಿತರ ರಾಣಿ(ಕ್ವೀನ್ ಆಫ್ ಅಪೋಸ್ತಲ್ಸ್) ಧರ್ಮಭಗಿನಿಯರನ್ನು, ಆ ಕಾಲದಲ್ಲಿ ಮಂಗಳೂರು ಧರ್ಮಪ್ರಾಂತ್ಯದ ಧರ್ಮಾಧ್ಯಕರಾಗಿದ್ದ ಬಿಷಪ್ ರೇಮಂಡ್ ಡಿಮೆಲ್ಲೊರವರು ಆಹ್ವಾನಿಸಿದ್ದರು. ಆಗ ಆದ್ಯರಾದ ಭ। ಸ್ಟೆಫಾನಿ, ಭ। ಲಿಡ್ವಿನಾ ಮತ್ತು ಭ। ಕ್ಲೆಮೆಂಟ್ಯಾನ್ ಇವರುಗಳು ೧೯ ಜನವರಿ ೧೯೬೨ ರಂದು, ದೈವಕೃಪೆಯ ನಂಬಿಕೆಯಿಂದ ತಮ್ಮೆಲ್ಲಾ ಸೇವಾ ಮನೋಭಾವದ ಒಳಿತಿನ ಆಕಾಂಕ್ಷೆಯಿಂದ ಕಲ್ಯಾಣಪುರದಲ್ಲಿ ಆ ಸೇವಾ ಕೈಂಕರ್ಯಕ್ಕೆ ಬೀಜಾಂಕುರಗೈದರು. ಹೀಗೆ, ಪ್ರೇಷಿತ ರಾಣಿ ಧರ್ಮಭಗಿನಿಯರಿಂದ ಕರ್ನಾಟಕದ ಮಣ್ಣಿನಲ್ಲಿ ಅವರ ಅಸ್ತಿತ್ವ ಆರಂಭಗೊಂಡಿತು. ಆ ಮೂರು ಮಂದಿ ಧರ್ಮಭಗಿನಿಯರು ಆಸ್ಪತ್ರೆಯಲ್ಲಿ ರೋಗಿಗಳೊಂದಿಗೆ, ಅವರನ್ನು ನೋಡಿಕೊಳ್ಳುತ್ತ ಅಲ್ಲಿಯೇ ತಂಗುತ್ತಿದ್ದರು. ಸುತ್ತಮುತ್ತಲ ಪ್ರದೇಶದಲ್ಲಿನ ಯುವತಿಯರಿಗೆ ಪ್ರಯೋಜನವಾಗುವಂತೆ, ಅತೀ ಶೀಘ್ರದಲ್ಲಿ ಕಸೂತಿ ಕೆಲಸವನ್ನು ಕಲಿಸುವ ತರಗತಿಗಳನ್ನು ತೆರೆದ ಭ। ಕ್ಲೆಮೆಂಟ್ಯಾನ್‌ರವರು, ಅತ್ಯಂತ ಸೇವಾ ನಿಷ್ಠೆಯಿಂದ ತಮ್ಮ ಕೊನೆ ತನಕವೂ, ಆ ಕಾಯಕದಲ್ಲಿ ತೊಡಗಿಕೊಂಡಿದ್ದರು. ಭ। ಲಿಡ್ವಿನಾರವರ ಮೇಲ್ವಿಚಾರಣೆಯಲ್ಲಿ ಆ ಚಿಕ್ಕ ಆಸ್ಪತ್ರೆಯು ಬಹಳಷ್ಟು ಪ್ರಗತಿಯನ್ನು ಸಾಧಿಸಿತಲ್ಲದೆ, ಮನೆಗಳಲ್ಲಿ ಪ್ರಸೂತಿ ಕಾರ್ಯಗಳನ್ನೂ ನಡೆಸಲಾಗುತ್ತಿತ್ತು. ೧೯೬೨ರಲ್ಲಿ ಆಸ್ಪತ್ರೆಯಲ್ಲಿ ಪ್ರಸೂತಿ ವಿಭಾಗದ ಹೊಸ ಕಟ್ಟಡವನ್ನು ತೆರೆಯಲಾಯಿತು. ಆ ಆಸ್ಪತ್ರೆಯ ಅಸ್ತಿತ್ವದ ಉದ್ದಕ್ಕೂ, ಕಷ್ಟ ಪಡುತ್ತಿದ್ದ ರೋಗಿಗಳ ಸಮುದಾಯಕ್ಕೆ ಉತ್ತಮ ಸೇವೆಯನ್ನು, ಶುಶ್ರೂಷೆಯನ್ನು ನೀಡುವಲ್ಲಿ ಪ್ರಾಮಾಣಿಕ ಪ್ರಯತ್ನವನ್ನು ಮಾಡಲಾಗಿದೆ. ರೋಗಿಗಳ ಸಂಖ್ಯೆಯು ಹೆಚ್ಚುತ್ತಲೇ ಹೋದುದನ್ನು ಗಮನಿಸಿ, ಅವರನ್ನೆಲ್ಲ ಒಳಗೊಳ್ಳಲು ಸ್ಥಳವಕಾಶವಾಗುವಂತೆ ೧೯೬೮ರಲ್ಲಿ ಆಸ್ಪತ್ರೆಯ ಪ್ರಧಾನ ಕಟ್ಟಡವನ್ನು ಆಗ ಆಡಳಿತಾಧಿಕಾರಿಯಾಗಿದ್ದ ಭ। ಅಕ್ವಿಲಿನಾರವರು ನಿರ್ಮಿಸಿದರು. 'ಸೇಕ್ರೆಡ್ ಹಾರ್ಟ್' ಬ್ಲಾಕ್ ೧೯೯೮ರಲ್ಲಿ ಅಸ್ತಿತ್ವಕ್ಕೆ ಬಂದಿತು.[೭೮] ನಿಗದಿತ ದಿನಗಳಲ್ಲಿ ನುರಿತ ತಜ್ಞವೈದ್ಯರು ಆಸ್ಪತ್ರೆಗೆ ಭೇಟಿ ಕೊಟ್ಟು ಹೃದಯ, ಹಲ್ಲು, ಕಣ್ಣು, ಎಲುಬುಗಳ ಕಾಯಿಲೆಗಳಿಗೆ ಔಷಧಿ ಹಾಗೂ ಶಸ್ತ್ರ ಚಿಕಿತ್ಸೆ ನೀಡುತ್ತಾರೆ. ಕಲ್ಯಾಣಪುರದಂತಹ ಹಳ್ಳಿಯಲ್ಲಿ ಜನರಿಗೆ ಕಾಲ ಬುಡದಲ್ಲಿ ವೈದ್ಯಕೀಯ ಸೇವೆ ನೀಡುವುದು ಈ ಆಸ್ಪತ್ರೆಯ ಮುಖ್ಯ ಉದ್ದೇಶ. ಗ್ರಾಮೀಣ ಆರೋಗ್ಯ ಸೇವೆ, ತಾಯಿ- ಮಗುವಿನ ಆರೈಕೆ ಮಾತ್ರವಲ್ಲದೆ ಹತ್ತಿರದ ಕೊಳಲಗಿರಿಯಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ನಡೆಸುವ ವಿಶಿಷ್ಟ ಸೇವೆಯನ್ನು ಗೊರಟ್ಟಿ ಆಸ್ಪತ್ರೆ ಮಾಡುತ್ತಿದೆ.[೭೯] ಕ್ಯಾನ್ಸರ್ ಪೀಡಿತರ ಬದುಕಿನ ಕೊನೆಯ ಹಂತಗಳು ಬಹಳ ಕರುಣಾಜನಕವಾಗಿರುತ್ತದೆ. ಆರ್ಥಿಕ ಅನುಕೂಲತೆಗಳಿಲ್ಲದ, ಸಮಾಜದಲ್ಲಿ ತಳಹಂತದಲ್ಲಿದ್ದ , ಇಂತಹ ಕ್ಯಾನ್ಸರ್ ಪೀಡಿತರಿಗೆ ನೆರವಾಗಲೆಂದು ಸಿಂಥಿಯಾ ಫೆರ್ನಾಂಡಿಸ್ ಸ್ಮಾರಕ Palliative care centre ನ್ನು (ಉಪಶಾಮಕ ನಿಗಾ ಕೇಂದ್ರ) ೨೦೦೬ರಲ್ಲಿ ಲೆಸ್ಲಿ ಫೆರ್ನಾಂಡಿಸ್ ಅವರ ಉದಾರ ಕೊಡುಗೆಯಿಂದ ಸ್ಥಾಪಿಸಲಾಗಿದೆ. ಈ ಕೇಂದ್ರದಲ್ಲಿ ರೋಗ ಕಾಣಿಸಿಕೊಂಡಾಗ ಅದನ್ನು

ಸರಿಯಾಗಿ ಪರಿಶೀಲನೆಗೊಳಪಡಿಸಿ ಗುರುತಿಸಿ, ನೂತನ ಶಸ್ತ್ರಚಿಕಿತ್ಸೆ ವಿಧಾನಗಳನ್ನು ಬಳಸಿ, ಕಿಮೊಥೆರಪಿ ಮತ್ತು ರೇಡಿಯೋ ಗ್ರಾಫಿಯ ಮೂಲಕ ಉಪಚರಿಸಲಾಗುತ್ತದೆ. ಇಷ್ಟೆಲ್ಲವನ್ನು ಮಾಡಿದರೂ ರೋಗಿಯನ್ನು ಗುಣಪಡಿಸಲಾಗದ, ಯಾವ ಔಷಧೋಪಚಾರವೂ ಪ್ರಯೋಜನಕ್ಕೆ ಬಾರದ ಒಂದು ಉಲ್ಬಣ ಸ್ಥಿತಿಗೆ ಕ್ಯಾನ್ಸರ್ ರೋಗಿ ತಲುಪುವುದುಂಟು. ಆರ್ಥಿಕವಾಗಿ, ಸಾಮಾಜಿಕವಾಗಿ ಮೊದಲೇ ಹಿಂದುಳಿದ ಅಂತಹ ಕ್ಯಾನರ್ ರೋಗಿಗಳು ಆ ಸಂದರ್ಭದಲ್ಲಿ ಶಾರೀರಿಕವಾಗಿಯೂ, ಮಾನಸಿಕವಾಗಿಯೂ ತೀರಾ ಜರ್ಜರಿತರಾಗಿರುತ್ತಾರೆ. ಅಂತಹ ಸ್ಥಿತಿಯಲ್ಲಿ ರೋಗಿಗಳಿಗೆ ಸಿಂಥಿಯಾ ಫೆರ್ನಾಂಡಿಸ್ ಸ್ಮಾರಕ Palliative care centre ನಲ್ಲಿ ಆರೈಕೆ ನೀಡಲಾಗುತ್ತದೆ.[೮೦]

**೩.೨೧.೫. ಫಾ। ಪತ್ರಾವೊ ಆಸ್ಪತ್ರೆ ಪುತ್ತೂರು**

ದಕ್ಷಿಣ ಫ್ರಾನ್ಸ್‌ನ ತಾರ್ಬ್ಸ್ ಧರ್ಮ ಪ್ರಾಂತ್ಯದ ಕ್ಯಾಂಟೌಸ್ (Cantaous) ಎಂಬಲ್ಲಿ ೧೮೪೩ ರಲ್ಲಿ ಆರು ಜನ ಯುವತಿಯರ ಒಕ್ಕೂಟದಿಂದ ತಾರ್ಬ್ಸ್‌ನ ಸಂತ ಜೋಸೆಫರ ಧರ್ಮಭಗಿನಿಯರ ಸಭೆಯ ಸ್ಥಾಪನೆಯಾಯಿತು. ಫಾ। ಬೆಜಾಕ್ (Bazerque) ರವರ ಮಾರ್ಗದರ್ಶನದಲ್ಲಿ 'ದೇವರು ಮಾತ್ರ' ಎಂಬ ಧ್ಯೇಯದೊಂದಿಗೆ ಈ ಸಭೆ ಅಸ್ತಿತ್ವಕ್ಕೆ ಬಂದಿತು. ೧೮೮೨ರಲ್ಲಿ ತಾರ್ಬ್ಸ್ ಸಭೆಯ ಧರ್ಮಭಗಿನಿಯರು ಬೆಂಗಳೂರಿನಲ್ಲಿ ತಮ್ಮ ಕಾನ್ವೆಂಟನ್ನು ಸ್ಥಾಪಿಸಿದರು. ಇವರು ತಮ್ಮ ಸೇವೆಯನ್ನು ಶಾಲೆ, ಕಾಲೇಜು, ವಿದ್ಯಾರ್ಥಿ ನಿಲಯ ಹಾಗೂ ಅನಾಥಾಶ್ರಮಗಳನ್ನು ನಡೆಸುವ ಮೂಲಕ ನೀಡುತ್ತಿದ್ದಾರೆ. ಆಸ್ಪತ್ರೆ, ಔಷಧಾಲಯ, ಕುಷ್ಠರೋಗಿಗಳ ಆರೈಕೆ, ಮಾನಸಿಕ ಮತ್ತು ದೈಹಿಕ ಅಸ್ವಸ್ಥತೆ ಇರುವವರ ಸಂಗಡ, ವೃದ್ಧಾಶ್ರಮ ಹಾಗೂ ಮದ್ಯವರ್ಜನ ಕೇಂದ್ರಗಳಲ್ಲಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಆದಿವಾಸಿ ಜನರೊಂದಿಗೆ ಸೇವೆ, ಆರೋಗ್ಯ ಮತ್ತು ರೋಗ ನಿಯಂತ್ರಣ ಜಾಗೃತಿ, ಸ್ತ್ರೀ ಸಬಲೀಕರಣ ಮುಂತಾದುವು ಭಗಿನಿಯರು ಮಾಡುತ್ತಿರುವ ಮುಖ್ಯ ಸೇವಾ ಕೈಂಕರ್ಯಗಳು.[೮೧]

ಪುತ್ತೂರು ಪಟ್ಟಣವು ಮಲೆನಾಡು ಪರಿಸರಕ್ಕೆ ಸೇರಿದ್ದರಿಂದ ಇಲ್ಲಿ ರೋಗ ರುಜಿನಗಳು ಜಾಸ್ತಿ. ಆದರೆ ಕಾಯಿಲೆಗಳಿಂದ ಬಳಲುವ ಬಡ ಜನರಿಗೆ ಸೂಕ್ತ ಶುಶ್ರೂಷೆಯನ್ನು ಕೊಡುವ ಆಸ್ಪತ್ರೆಗಳು ಕಡಿಮೆ.[೮೨] ೧೯೭೦ರ ಸಮಯದಲ್ಲಿ ಪುತ್ತೂರು ತಾಲೂಕಿನಲ್ಲಿ ಒಂದು ಆಸ್ಪತ್ರೆ ಹಾಗೂ ಎರಡು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಹೊರತುಪಡಿಸಿ ಬೇರೆ ಯಾವೊಂದು ಆಸ್ಪತ್ರೆಯೂ ಇರಲಿಲ್ಲ.[೮೩] ಆದ್ದರಿಂದ ಬಡರೋಗಿಗಳಿಗೆ ಆರೋಗ್ಯದಾನ ನೀಡಲು ಸುಸಜ್ಜಿತವಾದ ಆಸ್ಪತ್ರೆಯೊಂದನ್ನು ಸ್ಥಾಪಿಸಬೇಕೆಂದು ಮೊ। ಅಂತೋನಿ ಪತ್ರಾವೋರವರು ಯೋಜನೆ ಹಾಕಿದರು.[೮೪] ಮುಂಬಾಯಿಯ ಅಂದಿನ ಆರ್ಚ್ ಬಿಷಪ್ ಕಾರ್ಡಿನಲ್ ಗ್ರೇಶಿಯಸ್ ಅವರು ಫಾ। ಪತ್ರಾವೋ ಆಸ್ಪತ್ರೆಯ ಬುನಾದಿ

ಕಲ್ಲನ್ನು ೧೯೬೬ರಲ್ಲಿ ನೆಟ್ಟರು.[೮೫] ೧೭ ಮೇ ೧೯೭೦ರಂದು ಬಿಷಪ್ ಬಾಸೆಲ್ ಎಸ್. ಡಿ'ಸೋಜರ ಆಶೀರ್ವಾದದೊಂದಿಗೆ ರಾಜ್ಯಪಾಲ ಧರ್ಮವೀರ ಅವರು ನೂತನ ಆಸ್ಪತ್ರೆಯನ್ನು ಉದ್ಘಾಟಿಸಿದರು.[೮೬] ೧೮ ಫೆಬ್ರವರಿ ೧೯೭೧ ರಂದು ಮದರ್ ಆ್ಯನ್ಸ್, ಭ। ವಿಕ್ಟೋರಿಯಾ, ಭ। ಮರ್ಸಿ ಮತ್ತು ಭ। ಎವ್ಲಿನಾ ಪುತ್ತೂರಿಗೆ ಬಂದು ತಲುಪಿದರು. ತಾರ್ಬ್ಸ್‌ನ ಧರ್ಮಭಗಿನಿಯರು ೧೯೭೧ರಿಂದ ಪ್ರಾರಂಭಿಸಿ ತಮ್ಮ ನಿಸ್ವಾರ್ಥ ಸೇವೆಯನ್ನು ಹಳ್ಳಿ ಹಳ್ಳಿಗೂ ವಿಸ್ತರಿಸಿದ್ದಾರೆ.[೮೭] ಗ್ರಾಮೀಣ ಆರೋಗ್ಯ ಸೇವೆಯೊಂದಿಗೆ, ಆರೋಗ್ಯ ಶಿಕ್ಷಣ, ರೋಗ ನಿರೋಧಕ ಸೇವೆ, ಕುಟುಂಬ ಯೋಜನೆ ಮುಂತಾದ ಉದ್ದೇಶಗಳನ್ನು ಹೊಂದಿರುವ ಫಾ। ಪತ್ರಾವೋ ಆಸ್ಪತ್ರೆಯಲ್ಲಿ ೪೦ ಹಾಸಿಗೆ, ಲ್ಯಾಬೋರೇಟರಿ, ಆಪರೇಷನ್ ಥಿಯೇಟರ್, ಕ್ಷ-ಕಿರಣ ಇತ್ಯಾದಿ ಮೂಲಭೂತ ಸೌಕರ್ಯಗಳು ದೊರೆಯುತ್ತಿವೆ. ಡಾ. ಭ। ಫ್ಲೋರಿನ್ ಮಥಾಯಸ್ ಮತ್ತಿತರರು ಇಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.[೮೮]

### ೩.೨೧.೬. ಹೋಲಿ ಕ್ರಾಸ್ ಆಸ್ಪತ್ರೆ ತ್ರಾಸಿ, ಉಡುಪಿ

ಕುಂದಾಪುರ ತಾಲೂಕಿನ ತ್ರಾಸಿ ಎಂಬಲ್ಲಿ ಸುತ್ತಮುತ್ತಲಿನ ೧೦-೧೨ ಗ್ರಾಮಗಳಲ್ಲಿ ಜೀವಿಸುವ ಜನರಿಗೆ ಆರೋಗ್ಯ ಸೇವೆ ಒದಗಿಸಿಕೊಡುವ ಉದ್ದೇಶದಿಂದ ೨೫ ಹಾಸಿಗೆಗಳ ಸೌಲಭ್ಯದ ಆಸ್ಪತ್ರೆಯನ್ನು ೧೯೭೧ ರಲ್ಲಿ ಫಾ। ಇಸಿದೋರ್ ನೊರೋನ್ಹಾರವರು ಸ್ಥಾಪಿಸಿದರು. ಸಿಸ್ಟರ್ಸ್ ಆಫ್ ಮರ್ಸಿ ಆಫ್ ದ ಹೋಲಿ ಕ್ರಾಸ್ ಸಭೆಗೆ ಸೇರಿದ ಭ। ಅಂಜೆಲಿಕಾ ಅವರು ಇದನ್ನು ನಡೆಸುತ್ತಿದ್ದರು. ಎಲ್ಲಾ ಮೂಲಭೂತ ಸೌಕರ್ಯಗಳನ್ನು ಹೊಂದಿರುವ ಹೋಲಿ ಕ್ರಾಸ್ ಆಸ್ಪತ್ರೆ ರೋಗ ನಿರೋಧಕ ಚುಚ್ಚುಮದ್ದು, ತಾಯಿ-ಮಗುವಿನ ಆರೈಕೆ ಮತ್ತು ಗ್ರಾಮೀಣ ಸಂಚಾರಿ ಆರೋಗ್ಯ ಸೇವೆಯನ್ನು ಒದಗಿಸಿಕೊಟ್ಟಿದೆ. ಬಡ ಬಗ್ಗರಿಗೆ ಮತ್ತು ನಿರ್ಗತಿಕರಿಗೆ ಆಶ್ರಯ ನೀಡಬೇಕೆಂಬ ಸದುದ್ದೇಶದಿಂದ ಸ್ಥಾಪಿತವಾದ ಆ ಆಸ್ಪತ್ರೆ ಎರಡು ದಶಕಗಳಿಗಿಂತಲೂ ಹೆಚ್ಚು ಕಾಲ ಸೇವೆ ಸಲ್ಲಿಸಿದ ಬಳಿಕ ಬದಲಾದ ಪರಿಸ್ಥಿತಿಯಲ್ಲಿ ಅತ್ಯಾಧುನಿಕ, ಸುಸಜ್ಜಿತ ಆಸ್ಪತ್ರೆಗಳ ಭರಾಟೆಯಲ್ಲಿ ನಿಧಾನವಾಗಿ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿದೆ. ಕಡೆಗೆ, ವಸತಿ ವೈದ್ಯರ ಅಲಭ್ಯತೆ ಮತ್ತು ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಗಳ ಅಬ್ಬರದಿಂದಾಗಿ ಮುಚ್ಚಲಾಗಿದೆ.[೮೯]

### ೩.೨೧.೭. ನಿರ್ಮಲ ಆಸ್ಪತ್ರೆ ಉಳ್ಳಾಲ, ಮಂಗಳೂರು

ಇಟಲಿ ಮೂಲದ ಭ। ಕೆರೊಲೀನಾ ಕರೀನಾ ಅವರು ಸ್ಥಳೀಯ ಬಡವರಿಗಾಗಿ 'ನಿರ್ಮಲ ಆಸ್ಪತ್ರೆ' ಎಂಬ ಉಚಿತ ಔಷಧಾಲಯವನ್ನು ಮೇ ೧೯೭೩ ರಲ್ಲಿ ಉಳ್ಳಾಲದಲ್ಲಿ ಸ್ಥಾಪಿಸಿದರು. ಜನರಿಂದ ಆಸ್ಪತ್ರೆಗೆ ಅಭೂತಪೂರ್ವ ಪ್ರತಿಕ್ರಿಯೆ ದೊರೆತಿದ್ದರಿಂದ ಉತ್ತೇಜಿತರಾದ ಭ। ಕೆರೋಲಿನಾ ಅವರು ೧೯೭೭ ರಲ್ಲಿ ೧೨ ಹಾಸಿಗೆಗಳ ಸಾಮರ್ಥ್ಯದ ಮಹಿಳೆಯರ ಹಾಗೂ ಮಕ್ಕಳ ಆಸ್ಪತ್ರೆಯನ್ನು ಆರಂಭಿಸಿದರು. ಪ್ರಸ್ತುತ ಈ

ಆಸ್ಪತ್ರೆ ಸುಸಜ್ಜಿತ ಪ್ರಸೂತಿ ಆಸ್ಪತ್ರೆಯಾಗಿ ೪೦ ಹಾಸಿಗೆಗಳ ಸಾಮರ್ಥ್ಯವನ್ನು ಹೊಂದಿ ಒಬ್ಬ ಪೂರ್ಣಕಾಲಿಕ ಪ್ರಸೂತಿ ತಜ್ಞೆ , ಅರ್ಹ ದಾದಿಯರು, ಸೂಲಗಿತ್ತಿಯರು ಮತ್ತು ಆಯಗಳನ್ನು ಒಳಗೊಂಡಿದೆ. ಒಳರೋಗಿಗಳಂತೆ ಹೊರರೋಗಿಗಳೂ ಸಹ ಈ ಆಸ್ಪತ್ರೆಯ ಸೌಕರ್ಯಗಳನ್ನು ಫಲಪ್ರದವಾಗಿ ಬಳಸಿಕೊಳ್ಳುತ್ತಿದ್ದಾರೆ.[೬೦] ತಾಯಿ-ಮಗು ಆರೈಕೆ ಕಾರ್ಯಕ್ರಮದಡಿ ಹೆಚ್ಚು ಕಡಿಮೆ ೨೦೦ ಕುಟುಂಬಗಳಿಗೆ ವೈದ್ಯಕೀಯ ಮತ್ತು ಆಹಾರ ಯೋಜನೆಯ ಪ್ರಯೋಜನ ದೊರೆಯುತ್ತಿದೆ. ಸಂಚಾರಿ ಚಿಕಿತ್ಸಾಲಯದ ಮೂಲಕ ಅಮ್ಮೆಂಬಳ ಮತ್ತು ಪಜೀರ್ ಧರ್ಮಕೇಂದ್ರದ ವ್ಯಾಪ್ತಿಯಲ್ಲಿ ಬರುವ ರೋಗಿಗಳಿಗೆ ನೆರವು ಒದಗಿಸಿಕೊಡಲಾಗುತ್ತಿದೆ.[೬೧]

### ೩.೨೧.೮. ಒಲವಿನ ಹಳ್ಳಿ ಕಿನ್ಯಾ, ಮಂಗಳೂರು

ಒಲವಿನಹಳ್ಳಿಯನ್ನು ೧೯೭೩ರಲ್ಲಿ ಉಳ್ಳಾಲದ ನಿರ್ಮಲ ವೆಲ್‌ಫೇರ್ ಸಂಸ್ಥೆಯ ಸಹ ಸಂಸ್ಥೆಯಾಗಿ ಆರಂಭಿಸಲಾಯಿತು.[೬೨] ಈ ಯೋಜನೆಯ ಮುಖ್ಯ ಉದ್ದೇಶ ಕುಷ್ಠರೋಗಿಗಳಿಗೆ, ನಿರ್ಗತಿಕರಿಗೆ, ಕ್ಷಯ ರೋಗಿಗಳಿಗೆ ಹಾಗೂ ನಿರ್ಲಕ್ಷಿಸಲ್ಪಟ್ಟವರಿಗೆ ಪುನರ್ವಸತಿ ಕಲ್ಪಿಸುವುದು ಹಾಗೂ ಸ್ವಾವಲಂಬಿಯಾಗಿ ಬದುಕಲು ವೃತ್ತಿ ಕೌಶಲ್ಯವನ್ನು ಕಲಿಸುವುದು. ಈ ಯೋಜನೆ ಬರ್ಮದ ಮಿಶನ್‌ನಿಂದ ವಾಪಸ್ಸಾದ ಇಟಲಿಯನ್ ಮೂಲದ ಸಿಸ್ಟರ್ಸ್ ಆಫ್ ಚಾರಿಟಿ ಸಭೆಯ ಭ। ಅಮೆಲಿಯ ಸಿಮೊಲಿನೊ ಅವರ ಕನಸಿನ ಕೂಸಾಗಿದೆ. ಪ್ರಾರಂಭದಲ್ಲಿ ಮೂವರು ಮಾತ್ರ ಇಲ್ಲಿ ಪುನರ್ವಸತಿ ಪಡೆಯುತ್ತಿದ್ದರು. ೧೯೭೫ರಲ್ಲಿ ಇನ್ನೂ ೬ ಮಂದಿ ರೋಗಿಗಳಿಗೆ ಆಶ್ರಯ ನೀಡಲಾಯಿತು. ಮಾತ್ರವಲ್ಲದೆ ಒಂದು ಸಣ್ಣ ಆಸ್ಪತ್ರೆ ಮತ್ತು ಸಂಚಾರಿ ಚಿಕಿತ್ಸಾಲಯವನ್ನು ಆರಂಭಿಸಲಾಯಿತು. ಯೋಜನೆಯ ಪ್ರಧಾನ ಆರ್ಥಿಕ ನೆರವು ಸ್ವಿಟ್ಜರ್‌ಲ್ಯಾಂಡಿನ UDINE AMICI DEI LEBROSI ಎಂಬ ಸಂಘಟನೆಯಿಂದ ಹಾಗೂ ಹಲವಾರು ಉದಾರ ದಾನಿಗಳಿಂದ ಹರಿದು ಬಂದಿದೆ. ಜೊತೆಗೆ ಈ ಯೋಜನೆ ಸ್ವ-ಸಾಮರ್ಥ್ಯದಿಂದ ನಡೆಯಬೇಕೆಂಬ ಉದ್ದೇಶದಿಂದ ಕೃಷಿ, ಕೋಳಿ ಸಾಕಣೆ ಮತ್ತು ಹೈನುಗಾರಿಕೆಯನ್ನು ಕೈಗೆತ್ತಿಕೊಳ್ಳಲಾಗಿದೆ. ಡಾ। ಭ। ಇಮ್ಯಾಕ್ಯುಲೇಟ್ ರೊಡ್ರಿಗಸ್ ಅವರು ೧೯೭೮ರಿಂದ ೧೯೮೫ ರವರೆಗೆ ಆಸ್ಪತ್ರೆಯ ವೈದ್ಯಾಧಿಕಾರಿಯಾಗಿ ಮತ್ತು ಆಡಳಿತಾಧಿಕಾಯಾಗಿ ಸೇವೆ ಸಲ್ಲಿಸಿದ್ದರು. ಭ। ಎರ್ಮನಾ ಜೋಸೆಫ್ ಅವರು ಭ। ಅಮೆಲಿಯ ಅವರ ನೆರವಿನಿಂದ ಆಸ್ಪತ್ರೆಯನ್ನು ಅಭಿವೃದ್ಧಿಪಥದತ್ತ ಕೊಂಡೊಯುತ್ತಿದ್ದಾರೆ. ಪ್ರಸ್ತುತ ಸಂದರ್ಶಕ ವೈದ್ಯರು ರೋಗಿಗಳ ಚಿಕಿತ್ಸೆಯನ್ನು ನೋಡಿಕೊಳ್ಳುತ್ತಿದ್ದಾರೆ ಹಾಗೂ ಸಿಸ್ಟರ್ ದಾದಿಯರು ದಿನದ ೨೪ ಗಂಟೆಯಲ್ಲೂ ರೋಗಿಗಳ ಯೋಗಕ್ಷೇಮಕ್ಕಾಗಿ ಶ್ರಮಿಸುತ್ತಿದ್ದಾರೆ. ಒಲವಿನ ಹಳ್ಳಿ ಯೋಜನೆಯ ಆರ್ಥಿಕ ಹೊರೆಯನ್ನು ಜರ್ಮನಿಯ ಶ್ರೀ ಮತ್ತು ಶ್ರೀಮತಿ

ಎಲ್ಸಿ ಕ್ಯೂಪರ್ಸ್ ಅವರು ಭರಿಸುತ್ತಿದ್ದಾರೆ. ಕೇಂದ್ರದಲ್ಲಿ ಹತ್ತು ಹಲವು ಬದಲಾವಣೆಗಳಾಗಿವೆ ಮತ್ತು ೧೫೦ಕ್ಕಿಂತಲೂ ಅಧಿಕ ಮಂದಿ ಆಶ್ರಯವನ್ನು ಪಡೆಯುತ್ತಿದ್ದಾರೆ.[೯೩]

**೩.೨೧.೯. ನಿತ್ಯ ಸಹಾಯ ಆಸ್ಪತ್ರೆ ಸಾಸ್ತಾನ, ಉಡುಪಿ**

ಮಿಶನ್ ಸಿಸ್ಟರ್ಸ್ ಆಫ್ ಅಜ್ಮೀರ್ ಸಭೆಯ ಭ। ಅಂಜಲಾ ಅವರು ೧೮ ಜನವರಿ ೧೯೭೭ ರಂದು ನಿತ್ಯ ಸಹಾಯ ಆಸ್ಪತ್ರೆಯನ್ನು ಸಾಸ್ತಾನದಲ್ಲಿ ಕಟ್ಟಿಸಿದರು. ಫಾ। ಎಡ್ವಿನ್ ಪಿಂಟೋರವರು ಆಸ್ಪತ್ರೆಗೆ ಅಗತ್ಯವಿರುವ ಹಣಕಾಸಿನ ನೆರವನ್ನು ಕಾರಿತಾಸ್ ಸಂಸ್ಥೆಯ ಮೂಲಕ ದೊರಕಿಸಿಕೊಟ್ಟು ಸಹಕರಿಸಿದರು.[೯೪] ಆಸ್ಪತ್ರೆ ಸ್ಥಾಪನೆಗೆ ಅಗತ್ಯವಿರುವ ಸ್ಥಳವನ್ನು ಸಿಲ್ವೆಸ್ಟರ್ ಪಿಂಟೋರವರು ಕಡಿಮೆ ಬೆಲೆಯಲ್ಲಿ ಒದಗಿಸಿಕೊಟ್ಟರು. ಆರಂಭದಲ್ಲಿ ಇದು ೩೨ ಹಾಸಿಗೆಗಳ ಆಸ್ಪತ್ರೆಯಾಗಿತ್ತು. ಡಾ। ರೊಡ್ರಿಗಸ್, ಡಾ। ಮೆಲ್ಬ ಹಾಗೂ ಡಾ। ಲ್ಡೇರವರು ೧೯೮೫ರ ವರೆಗೆ ಇದನ್ನು ಉತ್ತಮವಾಗಿ ನಡೆಸಿದರು. ಸುತ್ತಮುತ್ತಲಿನ ರೋಗಿಗಳಿಗೆ ಉತ್ತಮ ಆರೋಗ್ಯ ಸೇವೆ ಮತ್ತು ಔಷಧಗಳನ್ನು ನೀಡಿದ್ದರಿಂದ ಅದು ಜನರ ಪ್ರೀತಿ, ವಿಶ್ವಾಸ ಮತ್ತು ಗೌರವಕ್ಕೆ ಪಾತ್ರವಾಗಿತ್ತು. ಕಾಲಕ್ರಮೇಣ ವಸತಿ ವೈದ್ಯರ ಅಲಭ್ಯತೆ ಮತ್ತು ಸುತ್ತಮುತ್ತಲೂ ಸುಸಜ್ಜಿತ ಆಸ್ಪತ್ರೆಗಳ ಸ್ಥಾಪನೆಯಿಂದಾಗಿ ಜನರು ಆ ಕಡೆಗೆ ಹೆಚ್ಚು ಆಕರ್ಷಿತರಾದರು. ೧೯೯೨ರಲ್ಲಿ ಆಸ್ಪತ್ರೆಯನ್ನು ವೃದ್ಧಸೇವಾಶ್ರಮವಾಗಿ ಪರಿವರ್ತಿಸಲಾಯಿತು.[೯೫]

**೩.೨೧.೧೦. ಜಯರಾಣಿ ಆರೋಗ್ಯ ಕೇಂದ್ರ ತಲ್ಲೂರು, ಕುಂದಾಪುರ**

೧೯೮೫ರಲ್ಲಿ ಪೂನಾದ ಸಿಸ್ಟರ್ಸ್ ಆಫ್ ಅವರ್ ಲೇಡಿ ಆಫ್ ಫಾತಿಮಾ ಸಭೆಗೆ ಸೇರಿದ ಭ। ಝೀಟಾ ಅವರು ಜಯರಾಣಿ ಆರೋಗ್ಯ ಕೇಂದ್ರ ಮತ್ತು ಸಂಚಾರಿ ಆರೋಗ್ಯ ಕೇಂದ್ರವನ್ನು ತಲ್ಲೂರಿನಲ್ಲಿ ಸ್ಥಾಪಿಸಿದರು. ನಗರ ಕೇಂದ್ರಿತ ಆಸ್ಪತ್ರೆಗಳ ಕಾಲದಲ್ಲಿ ತಲ್ಲೂರಿನಂತಹ ಪುಟ್ಟ ಹಳ್ಳಿಯೊಂದರಲ್ಲಿ ಆಸ್ಪತ್ರೆ ಸ್ಥಾಪಿಸಿ ಜನರ ಕಷ್ಟ- ನೋವುಗಳಿಗೆ, ರೋಗ ರುಜಿನಗಳಿಗೆ ಉಪಶಮನ ನೀಡಿದ್ದರಿಂದ ಈ ಆಸ್ಪತ್ರೆ ಜನಾನುರಾಗಿಯಾಗಿ ಜನರ ಮನಸ್ಸಿನಲ್ಲಿ ಅಚ್ಚಳಿಯದೆ ಬೇರೂರಿದೆ. ತಜ್ಞ ವೈದ್ಯರು ತಮ್ಮ ನಿಸ್ವಾರ್ಥ ಸೇವೆಯ ಮೂಲಕ ಬಡ ಜನರ ಆರೋಗ್ಯ ತಪಾಸಣೆ ಮತ್ತು ಉಚಿತ ಔಷಧ ವಿತರಣೆಯಂತಹ ಮಾನವತಾ ಕಾರ್ಯಗಳನ್ನು ಮಾಡುತ್ತಿದ್ದರು. ಕಾಲಕ್ರಮೇಣ ಸುತ್ತಮುತ್ತಲೂ ಆಸ್ಪತ್ರೆಗಳ ಸ್ಥಾಪನೆ, ಸಾರಿಗೆ ಅಭಿವೃದ್ಧಿ ಇತ್ಯಾದಿ ಕಾರಣಗಳಿಂದಾಗಿ ಆಸ್ಪತ್ರೆ ತನ್ನ ಹಿಂದಿನ ವೈಭವವನ್ನು ಕಳೆದುಕೊಂಡಿತು.[೯೬]

ಫಾ। ಡೆನಿಸ್ ಜೆರೊಮ್ ಡಿ'ಸೋಜರವರು ಉಡುಪಿ ಜಿಲ್ಲೆಯ ಬಾರ್ಕೂರು ಚರ್ಚಿನ ಧರ್ಮಗುರುಗಳಾಗಿದ್ದ ಕಾಲಾವಧಿಯಲ್ಲಿ (೧೯೨೩) ಆಸ್ಪತ್ರೆಯೊಂದನ್ನು ಕಟ್ಟಿಸಿದ್ದರು.[೯೭] ಬದ್ವಾರಿನ ಹೆಸರಾಂತ ವೈದ್ಯರಾದ ಡಾ. ಪೀಟರ್ ಪೌಲ್ ಪಿಂಟೊ ಹಾಗೂ ಕಿರೆಂಯ ಸಂತಾನ್ ಡಿಮೆಲ್ಲೊರವರು

೧೯೩೨ರಲ್ಲಿ ಒಂದುಗೂಡಿ ಪಂಜದಲ್ಲಿ ಮೂರು ಎಕರೆ ಜಮೀನನ್ನು ಖರೀದಿಸಿ ಅಲ್ಲಿ ಧರ್ಮಗುರುಗಳ ನಿವಾಸ, ಚಾಪೆಲ್, ಕಾನ್ವೆಂಟ್ ಮತ್ತು ಔಷಧಾಲಯವನ್ನು ಕಟ್ಟಿಸಿ ಅಲ್ಲಿಯೇ ವಾಸಿಸತೊಡಗಿದರು. ಹೀಗೆ ಸುಳ್ಯ ತಾಲೂಕಿನ ಪಂಜ ಗ್ರಾಮ ಒಂದು ವೈದ್ಯಕೀಯ ಮಿಶನ್ ಠಾಣ್ಯವಾಗಿ ಸಂತ ರೀಟಾರಿಗೆ ಸಮರ್ಪಿಸಲ್ಪಟ್ಟಿತು.[೯೮] ೧೯೬೫ರಲ್ಲಿ ಪಿಲಾರ್ ಆಸ್ಪತ್ರೆಯನ್ನು ಉಡುಪಿ ಜಿಲ್ಲೆಯ ಪೆರ್ನಾಲ್‌ನಲ್ಲಿ ಆರಂಭಿಸಲಾಯಿತು.[೯೯] ಅಂತೆಯೇ, ಫಾ। ಪೀಟರ್ ಸೆರಾವೊರವರು ಸಂತ ಲಾರೆನ್ಸರ ಗ್ರಾಮೀಣ ಆರೋಗ್ಯ ಕೇಂದ್ರವನ್ನು ಬಂಟ್ವಾಳ ತಾಲೂಕಿನ ಕರಾಡಿ ಎಂಬ ಸಣ್ಣ ಗ್ರಾಮದಲ್ಲಿ ೧೯೭೬ರಲ್ಲಿ ಆರಂಭಿಸಿದರು. ಈ ಕೇಂದ್ರದ ನಿರ್ವಹಣೆಯನ್ನು 'ಫ್ರಾನ್ಸಿಸ್ಕನ್ ಹಾಸ್ಪಿಟಲರ್' ಧರ್ಮಭಗಿನಿಯರು ೨೦೦೨ರಿಂದ ನಿರ್ವಹಿಸುತ್ತಿದ್ದಾರೆ.[೧೦೦] ಕಾರ್ಕಳ ತಾಲೂಕಿನ ಹಿರ್ಗಾಣ್ ಎಂಬಲ್ಲಿ ಫಾ। ಜೇಕಬ್ ಲೋಬೊರವರು ೧೯೮೦ರಲ್ಲಿ ಫಾತಿಮಾ ಚಿಕಿತ್ಸಾಲಯ ಹಾಗೂ ಹೊಲಿಗೆ ತರಗತಿಗಳನ್ನು ಪ್ರಾರಂಭಿಸಿದರು.[೧೦೧]

ಅದೇ ರೀತಿಯಲ್ಲಿ, ಮಣೀಪುರ ಕುರ್ಕಾಲ್‌ನಲ್ಲಿ ಹಾಗೂ ಪಾದೂರಿನಲ್ಲಿ ಡಾ. ಲೊಂಬಾರ್ಡ್ ಸ್ಮಾರಕ ಆಸ್ಪತ್ರೆಯವರು ಕ್ರಮವಾಗಿ ೧೯೯೫ ಮತ್ತು ೧೯೯೮ರಲ್ಲಿ ವಾರದ ಕ್ಲಿನಿಕ್‌ಗಳನ್ನು ಆರಂಭಿಸಿ ನಡೆಸುತ್ತಿದ್ದಾರೆ. ಮಂಗಳೂರಿನ ಪಳ್ನೀರಿನಲ್ಲಿರುವ ಅಥೆನಾ ಹಾಗೂ ಬೆಂದೂರ್‌ವೆಲ್‌ನ ಕೊಲಾಸೊ ಆಸ್ಪತ್ರೆಗಳೂ, ವೈದ್ಯಕೀಯ ಸೇವೆಯಲ್ಲಿ ತೊಡಗಿಸಿಕೊಂಡಿರುವ ಕ್ರೈಸ್ತ ಖಾಸಗಿ ಆಸ್ಪತ್ರೆಗಳಾಗಿವೆ. ಬೆಳ್ತಂಗಡಿ ಬಳಿ ಲ್ಯಾಲದಲ್ಲಿನ ಡೆಸ್ಟಿಟ್ಯೂಟ್ ಸಭೆಯವರು ನಡೆಸುತ್ತಿರುವ "ಜ್ಯೋತಿ ಆಸ್ಪತ್ರೆ" ವೈದ್ಯಕೀಯ ಕ್ಷೇತ್ರಕ್ಕೆ ಬೆಳ್ತಂಗಡಿ ಧರ್ಮಪ್ರಾಂತ್ಯದ ಅಮೂಲ್ಯ ಕೊಡುಗೆ. ೬೫ ಹಾಸಿಗೆಗಳುಳ್ಳ ಸುಸಜ್ಜಿತವಾದ ಜ್ಯೋತಿ ಆಸ್ಪತ್ರೆಯನ್ನು ೧೯ ಜೂನ್ ೨೦೦೫ರಂದು ಉದ್ಘಾಟಿಸಲಾಯಿತು. ಮಾರ್ಟಿನ್ ಡಿ ಪೊರೆಸ್ ಆಸ್ಪತ್ರೆಯನ್ನು ಸೇಕ್ರೆಡ್ ಹಾರ್ಟ್ ಸಭೆಯ ಧರ್ಮಭಗಿನಿಯರು ಶಿರಾಡಿ ಬಳಿಯ ಉದನೆ ಎಂಬಲ್ಲಿ ಸ್ಥಾಪಿಸಿ ಮುನ್ನಡೆಸುತ್ತಿದ್ದಾರೆ. ಉಡುಪಿ ಜಿಲ್ಲೆಯ ಜಡ್ಕಲ್ ಎಂಬಲ್ಲಿ ಸೈಂಟ್ ಜಾರ್ಜ್ ಚಿಕಿತ್ಸಾಲಯವನ್ನೂ,[೧೦೨] ಬೆಳ್ತಂಗಡಿ ತಾಲೂಕಿನ ಉಜಿರೆಯಲ್ಲಿ ಹೋಮಿಯೋ ಚಿಕಿತ್ಸಾಲಯವನ್ನು ಫ್ರಾನ್ಸಿಸ್ಕನ್ ಕ್ಲಾರಿಸ್ಟ್ ಸಭೆಯವರು ತೆರೆದಿದ್ದಾರೆ.[೧೦೩]

ಈ ರೀತಿಯಲ್ಲಿ, ಧರ್ಮಗುರುಗಳು ಹಾಗೂ ಧರ್ಮಭಗಿನಿಯರು ಜನರ ಅಗತ್ಯಗಳನ್ನು ಮನಗಂಡು ಮುಖ್ಯವಾಗಿ ಬಡವರ, ಆರ್ತರ ಹಾಗೂ ನಾನಾ ರೋಗರುಜಿನಗಳಿಂದ ಬಳಲುತ್ತಿರುವವರ ಆರೈಕೆಗಾಗಿ ಸಣ್ಣ ಪ್ರಮಾಣದಲ್ಲಿ ಔಷಧಾಲಯಗಳನ್ನು ಅಥವಾ ಚಿಕಿತ್ಸಾಲಯಗಳನ್ನು ಆರಂಭಿಸಿ ದಾನಿಗಳ ನೆರವಿನಿಂದ ಮುನ್ನಡೆಸಿದ್ದಾರೆ. ಅದರೊಂದಿಗೆ ಕೆಲವು ಸಾಮಾಜಿಕ ಕಳಕಳಿ ಇದ್ದ ವ್ಯಕ್ತಿಗಳೂ ಸ್ವ-ಇಚ್ಛೆಯಿಂದ ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿ ಜನಹಿತಕ್ಕಾಗಿ ಅಲ್ಲಲ್ಲಿ ಚಿಕಿತ್ಸಾಲಯವನ್ನೂ, ಆಸ್ಪತ್ರೆಗಳನ್ನೂ ಆರಂಭಿಸಿದ್ದಾರೆ. ಅಲ್ಲದೆ, ಧರ್ಮಾರ್ಥವಾಗಿ ಅಥವಾ ರಿಯಾಯತಿ ದರದಲ್ಲಿ ಚಿಕಿತ್ಸೆ ನೀಡಿ

ರೋಗಿಗಳಿಗೆ ಉಪಶಮನ ನೀಡಿದರು. ವೈದ್ಯಕೀಯ ಕ್ಷೇತ್ರ ಸಾಕಷ್ಟು ಪ್ರಮಾಣದಲ್ಲಿ ಅಭಿವೃದ್ಧಿ ಹೊಂದದೆ ಇರುವಂತಹ ಆಗಿನ ಪರಿಸ್ಥಿತಿಯಲ್ಲಿ ಇವರ ಸೇವಾ ಕಾರ್ಯ ಮೆಚ್ಚುಗೆಗೆ ಪಾತ್ರವಾಗಿದೆ. ಇಂತಹ ಕೆಲವು ವ್ಯಕ್ತಿಗಳು ಸಮಾಜದ ಒಳಿತಿಗಾಗಿ ತಮ್ಮ ಇಡೀ ಜೀವನವನ್ನು ಮುಡಿಪಾಗಿಟ್ಟು , ವೈದ್ಯಕೀಯ ಕ್ಷೇತ್ರದಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಅಭಿವೃದ್ಧಿ ಹೊಂದಲು ಕಾರಣೀಭೂತರಾದರು. ಡಾ. ಕಾಸ್ಮಿರ್ ಮಥಾಯಸ್, ಡಾ. ಬೊನವೆಂಚರ್ ವಿ. ಮಥಾಯಸ್, ಓಸ್ವಾಲ್ಡ್ ಕೊಲಾಸೊ ಮತ್ತಿತರರು ಇದರಲ್ಲಿ ಪ್ರಮುಖರಾಗಿದ್ದಾರೆ.

## ೩.೨೨. ಡಾ. ಕಾಸ್ಮಿರ್ ಮಥಾಯಸ್

ವೈದ್ಯಕೀಯ ಕ್ಷೇತ್ರದಲ್ಲಿ ಬಡವರ ಸೇವೆಯಿಂದ ಮಂಗಳೂರಿನಾದ್ಯಂತ ಮನೆ ಮಾತಾಗಿದ್ದ ಸರಳ ವ್ಯಕ್ತಿ ಡಾ. ಕಾಸ್ಮಿರ್ ಮಥಾಯಸ್. ಸೇವೆಯನ್ನೇ ತಮ್ಮ ಉಸಿರಾಗಿಸಿಕೊಂಡಿದ್ದ ಇವರು ಜೀವನ ಪರ್ಯಂತ ಬ್ರಹ್ಮಚಾರಿಯಾಗಿದ್ದರು. ಇವರು ೩ ಆಗಸ್ಟ್ ೧೮೯೪ರಲ್ಲಿ ಮಂಗಳೂರಿನ ಬಿಜೈಯಲ್ಲಿ ಅಂತೋನಿ ಮಥಾಯಸ್ ಮತ್ತು ಅನ್ನಾ ಪಾಯ್ಸ್ ದಂಪತಿಯ ನಾಲ್ಕು ಜನ ಮಕ್ಕಳಲ್ಲಿ ಕಡೆಯವರಾಗಿ ಜನಿಸಿದರು. ಇವರ ತಾಯಿ ಅಕ್ಕಪಕ್ಕದವರಿಗೆ ಗಿಡಮೂಲಿಕೆಗಳ ಔಷಧಿ ನೀಡುತ್ತಿದ್ದು, ಸಹಜವಾಗಿ ಇದರ ಪ್ರಭಾವ ಮಗ ಕಾಸ್ಮಿರ್ ಮೇಲೆ ಉಂಟಾಯಿತು. ತಮ್ಮ ಮೆಟ್ರಿಕ್ ಶಿಕ್ಷಣ ಮುಗಿಸಿ ಆಯುರ್ವೇದದಲ್ಲಿ ಎಂ. ಬಿ. (ಆಯು) ಮತ್ತು ಹೋಮಿಯೋಪಥಿಯಲ್ಲಿ ಎಂ. ಡಿ. (ಹೋಮಿ) ಪದವಿಗಳಿಸಿ ರಿಜಿಸ್ಟರ್ಡ್ ಮೆಡಿಕಲ್ ಪ್ರಾಕ್ಟಿಶನರ್ ಆದರು. ಇವರು ೧೯೧೫ರಲ್ಲಿ 'ಬಡವರ ಸೇವಾ ಮಂದಿರ' (ಗರೀಬ್ ಸೇವಾ ಮಂದಿರ್) ಸ್ಥಾಪಿಸಿ ಸಾವಿರಾರು ರೋಗಿಗಳ ಬಾಳಿಗೆ ಬೆಳಕಾದರು. ೧೯೩೫ರಲ್ಲಿ 'ಬಡವರ ಸೇವಾ ಮಂದಿರ'ಕ್ಕೆ ಸ್ವತಂತ್ರ ಕಟ್ಟಡವನ್ನು ಕಟ್ಟಿಸಿ ಮಕ್ಕಳ ಆರೈಕೆಯನ್ನೂ ಪ್ರಾರಂಭಿಸಿದರೂ, ಆರ್ಥಿಕ ಮುಗ್ಗಟ್ಟಿನಿಂದಾಗಿ ಮಕ್ಕಳ ಆಸ್ಪತ್ರೆ ಯೋಜನೆಯನ್ನು ಕೈಬಿಟ್ಟರು. ಮಂಗಳೂರಿನಲ್ಲಿ ಆಗಾಗ ಕಾಣಿಸಿಕೊಳ್ಳುತ್ತಿದ್ದ ಕ್ಷಯ, ಸಿಡುಬು, ಪ್ಲೇಗ್ ಮುಂತಾದ ಕಾಯಿಲೆಗಳನ್ನು ತಡೆಗಟ್ಟಲು ಪ್ರಾಣದ ಹಂಗು ತೊರೆದು ತಮ್ಮ ಸೇವೆಯನ್ನು ಸಲ್ಲಿಸಿದರು. ಮಕ್ಕಳ ಕಾಯಿಲೆ ಗುಣಪಡಿಸುವುದರಲ್ಲಿ ಡಾ. ಕಾಸ್ಮಿರ್ ಬಹಳ ಪ್ರವೀಣರು. ೧೯೫೧ರಲ್ಲಿ 'ಮಕ್ಕಳ ಪಾಲನೆ ಪೋಷಣೆ' ಎಂಬ ಪುಸ್ತಕವನ್ನು ಬರೆದು ಮಕ್ಕಳ ಔಷಧದ ಬಗ್ಗೆ ಅರಿವು ಮೂಡಿಸುವ ಪ್ರಯತ್ನ ಮಾಡಿದ್ದರು. ಹೋಮಿಯೊಪಥಿಯಲ್ಲಿ ಗಳಿಸಿದ ಪರಿಣತಿಯನ್ನು 'ಹೊಮೊಕಾಂಬಿನೋಸ್' ಎಂಬ ಔಷಧ ತಯಾರಿಸುವುದರೊಂದಿಗೆ ವ್ಯಕ್ತಪಡಿಸಿದ್ದರು. ಅದರ ಉಪಯೋಗಕ್ಕೆ ಸಂಬಂಧ ಪಟ್ಟಂತೆ 'ಕೀ ಟು ಹೊಮೊ ಕೊಂಬಿನೊ' ಎಂಬ ಪುಸ್ತಕವನ್ನು ೧೯೩೬ರಲ್ಲಿ ಬರೆದು ಪ್ರಕಟಿಸಿದರು. ಡಾ। ಕಾಸ್ಮಿರರ ಕೀರ್ತಿ ನಾಲ್ಕು ದಿಕ್ಕುಗಳಲ್ಲಿ ಪಸರಿಸಿದ ಪರಿಣಾಮವಾಗಿ ಅವರನ್ನು ಹತ್ತು ಹಲವು ಬಿರುದುಗಳೊಂದಿಗೆ

ಗೌರವಿಸಲಾಗಿದೆ. ಮಾತ್ರವಲ್ಲದೆ ಅವರ ಮರಣದ (೧೯೫೮) ನಂತರ 'ಗರೀಬ್ ಸೇವಾ ಮಂದಿರ'ದ ಎದುರಿನ ರಸ್ತೆಗೆ 'ಡಾ. ಕಾಸ್ಮಿರ್ ಮಥಾಯಸ್ ರಸ್ತೆ' ಎಂದು ನಾಮಕರಣ ಮಾಡಿ ಮಂಗಳೂರು ನಗರಸಭೆ ಅವರನ್ನು ಗೌರವಿಸಿತು.[೧೦೪]

### ೩.೨೩. ಡಾ| ಬೊನಾವೆಂಚರ್ ವಿ. ಮಥಾಯಸ್

ಡಾ. ಬೊನಾವೆಂಚರರು ೨೯ ಮೇ ೧೯೧೧ ರಂದು ಮಂಗಳೂರಿನ ಕುಂಟಿಕಾನದಲ್ಲಿ ಜನಿಸಿದರು. ಸೈಂಟ್ ಎಲೋಶಿಯಸ್ ಹೈಸ್ಕೂಲ್‌ನಲ್ಲಿ ಶಿಕ್ಷಣ ಮುಗಿಸಿದ ಅವರು, ಮದ್ರಾಸ್ ಸರ್ಕಾರಿ ವಿದ್ಯಾಲಯದಲ್ಲಿ ಆಯುರ್ವೇದಿಕ್ ಮತ್ತು ಅಲೋಪಥಿಕ್ ತರಬೇತಿಯ ಬಳಿಕ ಎಲ್. ಐ. ಎಮ್. ಪದವಿಯನ್ನು ಪಡೆದರು. ಕಣ್ಣಿನ ತಜ್ಞನಾಗುವ ಉದ್ದೇಶದಿಂದ ಅದರಲ್ಲಿ ಹೆಚ್ಚಿನ ಆಸಕ್ತಿಯನ್ನು ತಳೆದರು. ಮಂಗಳೂರಿನ ಹಂಪನಕಟ್ಟೆಯಲ್ಲಿ 'ಗುಡ್ ಪಾಸ್ಟರ್ ಡಿಸ್ಪೆನ್ಸರಿ' ಎಂಬ ಹೆಸರಿನ ವೈದ್ಯಾಲಯವನ್ನು ತೆರೆದು ತಮ್ಮ ಮರಣದವರೆಗೆ ಅದನ್ನು ನಡೆಸಿಕೊಂಡು ಬಂದರು. ಅವರ ಚಿಕ್ಕಪ್ಪ ಡಾ. ಕಾಸ್ಮಿರ್ ಮಥಾಯಸರು ದೈವಾಧೀನರಾದ ನಂತರ 'ಗರಿಬ್ ಸೇವಾ ಮಂದಿರ'ವನ್ನು ಮುಂದುವರಿಸಿ ಬಡವರ ಸೇವೆಯನ್ನು ಮಾಡಿದರು.[೧೦೫]

### ೩.೨೪. ಒಸ್ವಾಲ್ಡ್ ಕೊಲಾಸೊ

೨೪ ಜೂನ್ ೧೯೪೬ರಂದು ಮಂಗಳೂರಿನ ಬೆಂದೂರಿನಲ್ಲಿ ಜನಿಸಿದ ಇವರು ತಮ್ಮ ಬಿ. ಎಸ್ಸಿ ಶಿಕ್ಷಣ ಪೂರೈಸಿದ ನಂತರ ಕೆಲವು ಕಾಲ ಕಿನ್ನಿಗೋಳಿಯ ಕಿರಿಯ ಪುಷ್ಪ ಶಾಲೆಯಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ತದನಂತರ ಸುಮಾರು ೧೨ ವರ್ಷಗಳ ಕಾಲ ಬೇರೆ ಬೇರೆ ಔಷಧಿ ಕಂಪನಿಗಳಲ್ಲಿ ಮಾರಾಟ ಪ್ರತಿನಿಧಿಯಾಗಿ ಸೇವೆ ಸಲ್ಲಿಸುವುದರೊಂದಿಗೆ ಕಾಯಿಲೆ ಬಗ್ಗೆ ಹೆಚ್ಚಿನ ತಿಳುವಳಿಕೆ ಪಡೆದುಕೊಂಡರು. ಪಿತ್ತ ಜನಕಾಂಗ ಮತ್ತು ಅದಕ್ಕೆ ಸಂಬಂಧಪಟ್ಟ ಕಾಯಿಲೆಯನ್ನು ಗುಣಪಡಿಸಲು 'ಫೊರೆಸ್ಟಿಕಾ' ಎಂಬ ಔಷಧಿ ತಯಾರಿಸಿ ಪ್ರಸಿದ್ಧರಾದ ಇವರು, 'ಫೊರೆಸ್ಟಿಕಾ ಕೊಲಾಸೊ' ಎಂದೇ ಪ್ರಖ್ಯಾತರಾದರು. ತರುವಾಯ ಗಾಯಕ್ಕೆ ಸವರುವ 'ಸಿಂಥ್' ಮತ್ತು ಅಜೀರ್ಣತೆಗೆ 'ಫ್ಲೋರ' ಎಂಬ ಔಷಧಿಯನ್ನು ಸಿದ್ಧಗೊಳಿಸಿ ಮಾರಾಟಕ್ಕೆ ಒದಗಿಸಿದರು . ಕಾಲಕ್ರಮೇಣ ಇವರು ತಮ್ಮ 'ವೆಸ್ಟರ್ನ್ ಘಾಟ್ಸ್ ಫಾರ್ಮಾಸ್ಯೂಟಿಕಲ್ಸ್' ಎಂಬ ಸಂಶೋಧನಾ ಸಂಸ್ಥೆಯ ಮೂಲಕ 'ಕೊನ್ಸ್' ಎಂಬ ಕೆಮ್ಮು ನಿವಾರಕ ಔಷಧವನ್ನೂ, 'ಕ್ರೆಸ್ಸ್' ಎಂಬ ತಲೆಗೆ ಹಚ್ಚುವ ತೈಲವನ್ನೂ ಉತ್ಪಾದಿಸಿದರು.[೧೦೬]

ನಾಗರಿಕತೆಯ ಆರಂಭದಿಂದಲೂ ಮಾನವನು ರೋಗ ರುಜಿನಗಳ ಜೊತೆಯಲ್ಲಿ ನಿರಂತರ ಸಂಘರ್ಷವನ್ನು ಮಾಡುತ್ತಲೇ ಬಂದಿರುತ್ತಾನೆ. ಇಂದಿನ ಆಧುನಿಕ ಯುಗದ ಪರಿಸ್ಥಿತಿಯನ್ನು ಅವಲೋಕಿಸಿದಾಗ ಕಾಯಿಲೆಗಳನ್ನು ನಿರ್ಬಂಧಿಸುವುದರಲ್ಲಿ ಹಾಗೂ ರೋಗಗಳಿಗೆ ಸೂಕ್ತ ಚಿಕಿತ್ಸೆ ನೀಡಿ ಆರೋಗ್ಯ ಕಾಯ್ದುಕೊಳ್ಳುವಲ್ಲಿ ಪವಾಡ ಸದೃಶ ಪ್ರಗತಿ ಆಗಿರುವುದು ಕಂಡು ಬರುತ್ತದೆ. ಇದರ ಪರಿಣಾಮವಾಗಿ ವಿಶ್ವದಲ್ಲಿ ಸಾವಿನ ಪ್ರಮಾಣ ಕಡಿಮೆಯಾಗಿ ಮಾನವನ ಆಯುಷ್ಯದಲ್ಲಿ ಗಣನೀಯ ಏರಿಕೆಯಾಗಿದೆ. ಬೈಬಲ್‌ನಲ್ಲಿ ಮತ್ತಾಯನು ಬರೆದ ಸುವಾರ್ತೆ ೧೧ನೇ ಅಧ್ಯಾಯ ೫ನೇ ವಚನಗಳಲ್ಲಿ ಹೀಗೆ ಉಲ್ಲೇಖವಿದೆ. "ನೀವೇ ಕೇಳಿದ್ದೀರಿ ಹಾಗೂ ನೋಡಿದ್ದೀರಿ........ ಕುರುಡರು ನೋಡುತ್ತಾರೆ, ಕುಂಟರು ನಡೆಯುತ್ತಾರೆ, ಕಿವುಡರು ಕೇಳುತ್ತಾರೆ, ಕುಷ್ಠರು ಗುಣಮುಖರಾಗುತ್ತಾರೆ, .......". ಯೇಸು ಸ್ವಾಮಿ, ಅವರ ಸಾರ್ವಜನಿಕ ಜೀವನದಲ್ಲಿ ಸಾಕಷ್ಟು ರೋಗಿಗಳನ್ನು ಗುಣಪಡಿಸಿದ್ದರು ಎಂಬ ನಂಬಿಕೆ ಇದೆ, ತಮ್ಮ ಬಳಿಕ ಆ ಕಾರ್ಯವನ್ನು ಮುಂದುವರಿಸುವ ಜವಾಬ್ದಾರಿಯನ್ನು ಅವರು ಅವರ ಹಿಂಬಾಲಕರಿಗೆ ನೀಡಿದ್ದರು. ಕ್ರೈಸ್ತರಿಗೆ ವೈದ್ಯಕೀಯ ಸೇವೆಗೆ ಕ್ರಿಸ್ತನೇ ಪ್ರೇರಣೆ. ಇದು ಆತನ ಆಜ್ಞೆಯ ಪಾಲನೆಯೂ ಹಾಗೂ ಆತನ ಕೆಲಸದ ಮುಂದುವರಿಕೆಯೂ ಆಗಿದೆ. ಆದ್ದರಿಂದ, ಕಾಯಿಲೆಯನ್ನು ಗುಣಪಡಿಸುವುದಲ್ಲದೆ ಕ್ರೈಸ್ತ ಧರ್ಮದ ಪ್ರಸಾರಕ್ಕಾಗಿಯೂ ವೈದ್ಯಕೀಯ ಸೇವೆಯನ್ನು ಬಳಸಿಕೊಳ್ಳಲಾಗಿದೆ.

ಕೆನರಾ ಜಿಲ್ಲೆಯ ಕೆಲವು ಪ್ರದೇಶಗಳು ಮಲೆನಾಡು ಪರಿಸರಕ್ಕೆ ಸೇರಿದ್ದರಿಂದ ಮಲೇರಿಯ, ಕ್ಷಯ, ರಕ್ತಹೀನತೆ, ಅಸ್ತಮಾ ಮತ್ತು ಚರ್ಮವ್ಯಾಧಿಯಂತಹ ಕಾಯಿಲೆಗಳು ಇಲ್ಲಿ ಹೆಚ್ಚು. ಭಾರತದಲ್ಲಿ ಧರ್ಮಕ್ಕೂ ರೋಗಕ್ಕೂ ನಿಕಟ ಸಂಬಂಧ ಕಲ್ಪಿಸಿ, ಯಾವುದಾದರೂ ಕಾಯಿಲೆ ಬಂದಾಗ ಇಲ್ಲವೆ ಸಾಂಕ್ರಮಿಕ ರೋಗ ಪೀಡಿಸಿದಾಗ ಅವು ದೇವರ ಕೋಪದ ಪರಿಣಾಮಗಳೆಂದು ಜನ ನಂಬುತ್ತಿದ್ದರು. ಆದ್ದರಿಂದ, ಜನರನ್ನು ಅಂತಹ ಅಂಧಶ್ರದ್ಧೆ, ಅಂಧಭಕ್ತಿಗಳಿಂದ ಬಿಡಿಸುವುಕ್ಕಾಗಿ ಕೆನರಾ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ವೈದ್ಯಕೀಯ ಸೇವೆಯನ್ನು ಕಥೋಲಿಕ ಮಿಶನರಿಗಳು ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿಯೇ ಆರಂಭಿಸಿದ್ದರು. ಆದರೆ, ಇಲ್ಲಿಯ ಜನಸಂಖ್ಯೆಯ ಬಾಹುಳ್ಯಕ್ಕೆ ಮತ್ತು ಮಾರಕ ರೋಗಗಳನ್ನು ಗುಣಪಡಿಸುವುದಕ್ಕೆ ಅದು ಒಂದಿಷ್ಟೂ ಸಾಕಾಗುತ್ತಿರಲಿಲ್ಲ. ಅಷ್ಟೇ ಅಲ್ಲದೆ, ಗಿಡಮೂಲಿಕೆಗಳಿಂದ ತಯಾರಿಸುತ್ತಿದ್ದ ನಾಟಿ ಔಷಧಗಳೂ ಜನರಿಗೆ ಅಲ್ಲಲ್ಲಿ ಲಭ್ಯವಾಗುತ್ತಿದ್ದರೂ ಜನರ ರೋಗ ರುಜಿನಗಳನ್ನು ಗುಣಪಡಿಸಿ ಅವರಿಗೆ ಶಾಶ್ವತ ಪರಿಹಾರ ಒದಗಿಸುವಲ್ಲಿ ಅವು ವಿಫಲವಾಗಿದ್ದವು.

ಮಂಗಳೂರಿಗೆ ಆಗಮಿಸಿದ ಯೇಸುಸಭೆಯ ಪ್ರಥಮ ತಂಡದಲ್ಲಿದ್ದ ಫಾ। ಅಗಸ್ಟಸ್ ಮುಲ್ಲರ್, ವೈದ್ಯಕೀಯ ಕ್ಷೇತ್ರದಲ್ಲಿ ಮಂಗಳೂರಿನ ಇಂದಿನ ಅದ್ಭುತ ಸಾಧನೆಗೆ ಮೂಲ ಕಾರಣರಾಗಿದ್ದಾರೆ. ಅಂದು

ಅವರು ಆರಂಭಿಸಿದ ಹೋಮಿಯೋಪಥಿ ಚಿಕಿತ್ಸಾ ವಿಧಾನ ಮತ್ತು ಹೋಮಿಯೋಪಥಿ ಮದ್ದುಗಳ ಉತ್ಪಾದನಾ ಕೇಂದ್ರ ಇಂದು ಭಾರತದಾದ್ಯಂತ ಹೆಸರುವಾಸಿಯಾಗಿದೆ. 'ಫಾದರ್ ಮುಲ್ಲರ್ಸ್ ಸ್ಪೆಸಿಫಿಕ್ಸ್' ಎಂಬ ಹೋಮಿಯೋಪಥಿ ಔಷಧಗಳು ಮಂಗಳೂರಿನಿಂದ ಭಾರತದ ವಿವಿಧ ಭಾಗಗಳಿಗೆ ಮಾತ್ರವಲ್ಲದೆ ಸಿಲೋನ್, ಬರ್ಮಾ ಮತ್ತಿತರ ದೇಶಗಳಿಗೂ ರಫ್ತಾಗುತ್ತದೆ. ಆ ಮೂಲಕ ಫಾ। ಮುಲ್ಲರ್ಸ್ ಆಸ್ಪತ್ರೆ ಸಾಗರೋತ್ತರ ದೇಶಗಳಿಗೂ ವೈದ್ಯಕೀಯ ಸೇವೆ ನೀಡುತ್ತಿದೆ ಎಂದರೂ ತಪ್ಪಾಗಲಾರದು.[೧೦೭] ೧೯೦೫ರಲ್ಲಿ ಮಂಗಳೂರಿನ ಮರೋಳಿಯಲ್ಲಿ ಕುಷ್ಠರೋಗಿಗಳ ಶುಶ್ರೂಷೆ ಮಾಡುತ್ತಿದ್ದ ಕೇಂದ್ರವನ್ನು ತಜ್ಞ ವೈದ್ಯರ ಕೊರತೆಯಿಂದಾಗಿ ಮುಚ್ಚಿ, ಎಲ್ಲಾ ರೋಗಿಗಳನ್ನು ಕೇರಳದ ಕುಷ್ಠರೋಗಿಗಳ ಕೇಂದ್ರಕ್ಕೆ ವರ್ಗಾಯಿಸಲಾಯಿತು. ಆ ಪರಿಸ್ಥಿತಿಯನ್ನು ಅವಲೋಕಿಸಿದಾಗ ಜಿಲ್ಲೆಯಲ್ಲಿ ಮಾತ್ರವಲ್ಲ ಬಾಸೆಲ್‌ನಲ್ಲೂ ತಜ್ಞ ವೈದ್ಯರ ಕೊರತೆ ಹಾಗೂ ರೋಗದ ಬಗ್ಗೆ ಅಂಜಿಕೆ ಇನ್ನೂ ವೈದ್ಯರಲ್ಲಿಯೂ ಸಹ ಇರುವಂತಹ ಚಿತ್ರಣ ಸ್ಪಷ್ಟವಾಗಿ ಗೋಚರಿಸುತ್ತದೆ. ಪರಿಸ್ಥಿ ಹೀಗಿರುವಾಗ, ಫಾ. ಮುಲ್ಲರ್ ಆಸ್ಪತ್ರೆಯಲ್ಲಿ ಕುಷ್ಠರೋಗಿಗಳಿಗಾಗಿ ಆಶ್ರಮ ಆರಂಭಿಸಿ, ಉಚಿತವಾಗಿ ಅವರ ಆರೈಕೆ ಮಾಡಿ, ಗುಣಮುಖರಾದವರಿಗೆ ಪುನರ್ವಸತಿ ಕಲ್ಪಿಸಿ, ನೊಂದ ಜೀವಗಳಿಗೆ ಸಾಂತ್ವನ ನೀಡಿರುವುದು ಕ್ರೈಸ್ತ ಮಿಶನರಿಗಳ ಪ್ರಶಂಸನೀಯ ಕೊಡುಗೆಯಾಗಿದೆ. ಫಾ। ಮುಲ್ಲರ್ ದೈವಾದೀನರಾದಾಗ ಸರ್. ಆರ್ಥರ್ ಲಾಲಿಯವರು ತಮ್ಮ ಸಂತಾಪ ಸೂಚಕ ಸಂದೇಶ ಪತ್ರದಲ್ಲಿ ಫಾ। ಮುಲ್ಲರ್‌ರವರ ಶ್ರೇಷ್ಠತೆಯನ್ನು ಈ ರೀತಿಯಲ್ಲಿ ಕೊಂಡಾಡಿದ್ದಾರೆ. "ಫಾ। ಮುಲ್ಲರ್‌ರವರ ಮರಣದೊಂದಿಗೆ ಭಾರತ ಒಬ್ಬ ಮಹಾನ್ ವ್ಯಕ್ತಿ ಮತ್ತು ಪೋಷಕನನ್ನು ಕಳೆದು ಕೊಂಡಿದೆ". ಅಂತೆಯೇ, ೧೯೫೪ರಲ್ಲಿ ಫಾ। ಮುಲ್ಲರ್ಸ್ ಚಾರಿಟೇಬಲ್ ಸಂಸ್ಥೆಗೆ ಭೇಟಿ ನೀಡಿದ್ದ ಭಾರತ ಸರ್ಕಾರದ ಅಂದಿನ ಗೃಹಮಂತ್ರಿಯಾಗಿದ್ದ ಕೆ. ಎನ್. ಕಾಡ್ಜುರವರು ಫಾ। ಮುಲ್ಲರ್ಸ್‌ರವರ ಕೊಡುಗೆಯನ್ನು ಗುರುತಿಸಿ, "ನಾನು ಮಹಾ ಪುರುಷರ ಆರಾಧಕರಲ್ಲೊಬ್ಬ; ನನ್ನ ಮಹಾನ್ ಪುರುಷರಲ್ಲಿ ಫಾ। ಮುಲ್ಲರ್ ಅವರು ಒಬ್ಬರು"[೧೦೮] ಎಂದು ಅಭಿಪ್ರಾಯಪಟ್ಟಿದ್ದರು.

ಮಿಶನರಿ ಆಸ್ಪತ್ರೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ದಾದಿಯರಿಗೆ ದೇಶ ವಿದೇಶಗಳಲ್ಲಿ ತುಂಬಾ ಬೇಡಿಕೆ ಇದೆ. ಆದರೆ, ಕೆಲವು ದಶಕಗಳ ಹಿಂದೆ, ಭಾರತದಲ್ಲಿ ನರ್ಸಿಂಗ್ ಸೇವೆಗೆ ಯುವತಿಯರನ್ನು ಕಳುಹಿಸುತ್ತಿರಲಿಲ್ಲ, ದಾದಿಯರಾಗುವುದಕ್ಕೆ ಹೆತ್ತವರ ಒಪ್ಪಿಗೆ ಇರಲಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಧರ್ಮಭಗಿನಿಯರು, ಆಂಗ್ಲೋ-ಇಂಡಿಯನ್ಸ್ ಮತ್ತು ಕ್ರೈಸ್ತ ವಿಧವೆಯರು ದಾದಿಯರಾಗಿ, ಆಸ್ಪತ್ರೆ, ಕಛೇರಿ, ಔಷಧಾಲಯ ಮತ್ತು ಪುನರ್ವಸತಿ ಕೇಂದ್ರಗಳಲ್ಲಿ ದುಡಿದಿದ್ದಾರೆ. ೧೯೪೦ರಲ್ಲಿ ಭಾರತದಲ್ಲಿದ್ದ ಶೇಕಡಾ ೯೦ರಷ್ಟು ದಾದಿಯರು ಕ್ರೈಸ್ತರೇ ಆಗಿದ್ದರು, ಹಾಗೂ ಅವರಲ್ಲಿ ೮೦%ದಷ್ಟು ದಾದಿಯರು ಕ್ರೈಸ್ತ ಸಂಸ್ಥೆಗಳಲ್ಲಿಯೇ ತರಬೇತಿ ಪಡೆದವರಾಗಿದ್ದರು. ಆದರೆ ಈಗ ಇತರ ಸಮುದಾಯದವರಲ್ಲಿಯೂ,

ದಾದಿಯರ ಕೆಲಸದ ಬಗ್ಗೆ ಹಿಂದೆ ಇದ್ದ ಪೂರ್ವಾಗ್ರಹ ಮಾಯವಾಗಿರುವುದರಿಂದ ಹಾಗೂ ಆರ್ಥಿಕ ಕಾರಣಗಳಿಂದ, ಅವರೂ ಸಹ ತರಬೇತಿ ಪಡೆದು ನರ್ಸುಗಳಾಗಿ ಕೆಲಸ ಮಾಡುತ್ತಿದ್ದಾರೆ.[೧೯೯] ಆರಂಭದಲ್ಲಿ ದಾದಿಯರ ಕೆಲಸ ಕೇವಲ ಸ್ತ್ರೀಯರಿಗೆ ಮಾತ್ರ ಸೀಮಿತವಾಗಿತ್ತು, ಆದರೆ ಈಗ ಪುರುಷರೂ ಸಹ ತರಬೇತಿ ಪಡೆದು ಪುರುಷ ಪರಿಚಾರಕರಾಗಿ ಕೆಲಸ ಮಾಡುತ್ತಿದ್ದಾರೆ. ನರ್ಸಿಂಗ್ ತರಬೇತಿ ಇಂದು ಉತ್ತಮ ಉದ್ಯೋಗಾವಕಾಶ ಕಲ್ಪಿಸುವುದರಿಂದ ಹೆಚ್ಚು ಹೆಚ್ಚು ವಿದ್ಯಾರ್ಥಿಗಳು ಧಾವಿಸಿ ಬರುತ್ತಿದ್ದಾರೆ. ತರಬೇತಿ ಹೊಂದಿದ ದಾದಿಯರು ದೇಶ ವಿದೇಶಗಳಿಗೆ ಉದ್ಯೋಗ ಅರಸಿ ಹೋಗಿ, ಅಲ್ಲಿ ಕಷ್ಟಪಟ್ಟು ದುಡಿದು ಕೈತುಂಬಾ ಹಣ ಸಂಪಾದಿಸಿ ತಮ್ಮ ಕುಟುಂಬದ ಜವಾಬ್ದಾರಿಯನ್ನು ವಹಿಸಿಕೊಳ್ಳುವುದು ಮಾತ್ರವಲ್ಲದೆ ಐಷಾರಾಮಿ ಕಾರು, ಮನೆ, ಮುಂತಾದವುಗಳನ್ನು ಹೊಂದಿ ತಮ್ಮ ಜೀವನ ಶೈಲಿಯೇ ಬದಲಾಗಿದೆ. ಮಿಶನ್ ಆಸ್ಪತ್ರೆಯಲ್ಲಿ ಶುಶ್ರೂಷಾ ತರಬೇತಿ ಆರಂಭಗೊಂಡದ್ದರಿಂದ ಆಸ್ಪತ್ರೆಗೆ ಅನುಕೂಲವಾಯಿತಲ್ಲದೆ, ಮೂಲ್ಕಿಯ ವಸತಿಗೃಹದ ಅನೇಕ ಅನಾಥರಿಗೆ ಉದ್ಯೋಗವನ್ನು ಕೂಡಾ ಒದಗಿಸಲು ಸಾಧ್ಯವಾಯಿತು.[೨೦೦]

೧೯೮೦ರ ದಶಕದಲ್ಲಿ ಫಾ।ಮುಲ್ಲರ್ಸ್ ಆಸ್ಪತ್ರೆ ತನ್ನ ಗಮನವನ್ನು ಮುಖ್ಯವಾಗಿ ಸಮುದಾಯದತ್ತ ಆರೋಗ್ಯ ಎಂಬ ಯೋಜನೆಯ ಕಡೆಗೆ ಹರಿಸಿದೆ. ಆಸ್ಪತ್ರೆಯ ಸಮುದಾಯದತ್ತ ಯೋಜನೆಯಿಂದ ಪ್ರಭಾವಿತರಾದ ಮಂಗಳೂರು ಮತ್ತು ಸುತ್ತಮುತ್ತಲಿನ ಆಸ್ಪತ್ರೆಗಳೂ ಇಂತಹದೇ ಶಿಬಿರಗಳನ್ನು ಆಯ್ದು ಗ್ರಾಮಗಳಲ್ಲಿ ಆಯೋಜಿಸಿ ಗ್ರಾಮೀಣ ಜನರಿಗೆ ನೆರವಾಗುತ್ತಿದ್ದಾರೆ. ಅಂತೆಯೇ ಫಾ। ಮುಲ್ಲರ್ಸ್ ಆಸ್ಪತ್ರೆಯ ಉಚಿತ ಮತ್ತು ರಿಯಾಯಿತಿ ದರದ ಚಿಕಿತ್ಸಾ ಯೋಜನೆಯನ್ನು ಅನುಕರಿಸಿ ಜಿಲ್ಲೆಯ ಬಹುತೇಕ ಆಸ್ಪತ್ರೆಗಳು ಬಡ ಬಗ್ಗರಿಗೆ ವೈದ್ಯಕೀಯ ಸೇವೆಯನ್ನು ನೀಡುತ್ತಿವೆ. ಆಸ್ಪತ್ರೆಯ ಮನೋರೋಗ ಚಿಕಿತ್ಸಾ ವಿಭಾಗವು ದೇಶದ ಪ್ರಾಚೀನ ಕೇಂದ್ರಗಳಲ್ಲಿ ಒಂದು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇಲ್ಲಿ ಚಿಕಿತ್ಸೆ ಪಡೆದು ಗುಣಮುಖರಾದ ಅಸಂಖ್ಯಾತ ಮನೋರೋಗಿಗಳು ತಮ್ಮ ಕುಟುಂಬದವರೊಂದಿಗೆ ಸಾಮಾನ್ಯ ಜೀವನ ನಡೆಸಲು ಸಾಧ್ಯವಾಗಿದೆ. ಕಂಕನಾಡಿಯಲ್ಲಿರುವ ಫಾ।ಮುಲ್ಲರ್ಸ್ ಚಾರಿಟೇಬಲ್ ಸಂಸ್ಥೆಗಳು ಸರ್ಕಾರಿ ವೆನ್‌ಲಾಕ್ ಆಸ್ಪತ್ರೆಯನ್ನು ಹೊರತುಪಡಿಸಿ, ಮಂಗಳೂರಿನ ಆದ್ಯ ಆಸ್ಪತ್ರೆ ಎಂಬ ಗೌರವಕ್ಕೆ ಪಾತ್ರವಾಗಿರುವುದು ಮಾತ್ರವಲ್ಲದೆ ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಹೊಸದಾಗಿ ನಿರ್ಮಾಣವಾಗುತ್ತಿರುವ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಗಳ ಎಲ್ಲಾ ಸವಾಲುಗಳನ್ನು ಎದುರಿಸಿ ಬಡ ಬಗ್ಗರಿಗೆ ಮತ್ತು ನಿರ್ಲಕ್ಷಿಸಲ್ಪಟ್ಟವರಿಗೆ ಕೈಗೆಟುಕುವ ದರದಲ್ಲಿ ವೈದ್ಯಕೀಯ ಸೇವೆಯನ್ನು ನೀಡುವುದರೊಂದಿಗೆ ಸ್ಥಾಪಕರ ಕನಸು ನನಸಾಗುವಂತೆ ಮಾಡಿವೆ.

ಹೆರಿಗೆ ಕಾರ್ಯವಿಧಾನವನ್ನು ಅಶುಚಿಯೆಂದು ನಂಬುತ್ತಿದ್ದ ಆ ಕಾಲದಲ್ಲಿ ಗರ್ಭಿಣಿ ಮಹಿಳೆಯನ್ನು ಆಸ್ಪತ್ರೆಗೆ ಕರೆತಂದು ಸುರಕ್ಷಿತವಾಗಿ ಹೆರಿಗೆ ಮಾಡಿಸಿ ತಾಯಿ ಶಿಶು ಮರಣ ಸಂಖ್ಯೆಯನ್ನು ಕಡಿಮೆ ಮಾಡಿದುದೇ ಒಂದು ಕ್ರಾಂತಿಕಾರಿ ಬದಲಾವಣೆಯಾಗಿದೆ. ಇಂದಿನ ದಿನಗಳಲ್ಲಿ ಹೆರಿಗೆಗಾಗಿ ಪ್ರತ್ಯೇಕ 'ಪ್ರಸೂತಿ ಆಸ್ಪತ್ರೆ'ಗಳು ಸ್ಥಾಪನೆಯಾಗುವುದಕ್ಕೆ ಡಾ. ಈವಾ ಲೊಂಬಾರ್ಡ್‌ರವರು ಅಂದು ತೆಗೆದುಕೊಂಡ ದಿಟ್ಟ ನಿರ್ಧಾರವೇ ಕಾರಣ ಎಂದರೆ ಅತಿಶಯೋಕ್ತಿಯಾಗಲಾರದು. ಆ ಮೂಲಕ ತಾಯಿ ಹಾಗೂ ಶಿಶುವಿನ ರಕ್ಷಣೆಯಲ್ಲಿ ಉಡುಪಿಯ ಮಿಶನ್ ಆಸ್ಪತ್ರೆಯ ಕೊಡುಗೆ ಶ್ಲಾಘನೀಯ. ಮಿಶನ್ ಆಸ್ಪತ್ರೆಯ ಕೊಡುಗೆಯನ್ನು ಉಲ್ಲೇಖಿಸುತ್ತಾ ವಿ.ಜೆ.ಅಲ್ಸೆಯವರು ಡಾ. ಲೊಂಬಾರ್ಡ್ ಸ್ಮಾರಕ ಆಸ್ಪತ್ರೆಯ ಸುವರ್ಣ ಮಹೋತ್ಸವ ಸಂಚಿಕೆಯಲ್ಲಿ, "ಉಡುಪಿ ಮತ್ತು ಮಣಿಪಾಲ ಇಂದು ಒಂದು ಉನ್ನತ ಮಟ್ಟದ ವೈದ್ಯಕೀಯ ಹಾಗೂ ವಿದ್ಯಾಕೇಂದ್ರವಾಗಿ ಪ್ರಸಿದ್ಧಿ ಪಡೆದಿವೆ. ಇದಕ್ಕೆ ಮೂಲ ಪ್ರಚೋದನೆ ಇಲ್ಲಿಯ ಒಂದು ದೇವರು ಮೆಚ್ಚುವ ಕೆಲಸದಿಂದ ಬಂತೆಂದರೆ ಆಶ್ಚರ್ಯವಾಗಬಹುದು. ಉಡುಪಿಯು ಅತೀ ಚಿಕ್ಕ ಊರಾಗಿರುವಾಗ ದಶಕಗಳ ಹಿಂದೆ- ದೇವರನ್ನು ಮೆಚ್ಚಿಸಲೆಂದು ಇಲ್ಲಿಗೆ ಬಂದು ಕ್ರಿಶ್ಚಿಯನ್ ಹೈಸ್ಕೂಲಿನಂತಹ ವಿದ್ಯಾಸಂಸ್ಥೆಯನ್ನೂ, ಬಾಸೆಲ್ ಮಿಶನ್ ಆಸ್ಪತ್ರೆಯಂತಹ ವೈದ್ಯಕೀಯ ಶುಶ್ರೂಷೆಯ ಸಂಸ್ಥೆಯನ್ನೂ ಸ್ಥಾಪಿಸಿ, ಬೆಳೆಸಿದ ಕ್ರೈಸ್ತ ಮತ ಧರ್ಮಪ್ರಚಾರಕರೇ ಊರಿನ ಬೆಳವಣಿಗೆಯ ಪ್ರಚೋದಕರೆಂದು ನನಗನಿಸುತ್ತದೆ".[೧೧೧] ಎಂದು ಅಭಿಪ್ರಾಯ ಪಟ್ಟಿರುವುದು ಕಟು ಸತ್ಯವಾಗಿದೆ. ವಿದ್ಯೆ ಮತ್ತು ವೈದ್ಯಕೀಯ ಸೇವೆಗಳು ಸರಕಾರಿ ಕ್ಷೇತ್ರಕ್ಕೆ ಮೀಸಲಲ್ಲ. ಜನಹಿತವನ್ನು ಬಯಸುವ, ಸೇವಾ ಮನೋಭಾವವುಳ್ಳ ಯಾರೂ ಆ ಕೆಲಸವನ್ನು ಮಾಡಬಹುದು. ಭಾರತೀಯರ ಅಜ್ಞಾನವನ್ನು ಹೋಗಲಾಡಿಸಲು ವಿದ್ಯೆ, ರೋಗ ರುಜಿನಗಳನ್ನು ಬಗೆಹರಿಸಲು ಆಸ್ಪತ್ರೆಯನ್ನು ಒದಗಿಸುವುದಕ್ಕಾಗಿ ಪರದೇಶದಿಂದ ಜನ ಬಂದು ಸೇವೆ ಸಲ್ಲಿಸಿ ಸ್ಥಳೀಯರು ಮಾಡಬೇಕಾಗಿರುವ ಕೆಲಸ ಮತ್ತು ನಿರ್ವಹಿಸತಕ್ಕ ಜವಾಬ್ದಾರಿಯ ಬಗ್ಗೆ ಎಚ್ಚರಿಕೆ ಹಾಗೂ ಸ್ಫೂರ್ತಿಯನ್ನು ನೀಡಿದರು. ಡಾ. ತೋನ್ಸೆ ಮಾಧವ ಅನಂತ ಪೈಯವರು ಮಣಿಪಾಲದಲ್ಲಿ ಮೆಡಿಕಲ್ ಕಾಲೇಜನ್ನು ಸ್ಥಾಪಿಸಲು ಸರಕಾರದಿಂದ ಒಪ್ಪಿಗೆ ಪಡೆಯಲು ಅರ್ಜಿ ಸಲ್ಲಿದಾಗ ೧೦೦ ಹಾಸಿಗೆಗಳಿರುವ ಆಸ್ಪತ್ರೆ ಹೊಂದಿರಬೇಕು ಎಂಬ ಷರತ್ತನ್ನು ಒಡ್ಡಿದಾಗ ಡಾ. ಈವಾ ಲೊಂಬಾರ್ಡ್‌ರವರ ಒಳ್ಳೆಯ ಸ್ನೇಹಿತರಾಗಿದ್ದ ಪೈಯವರು ಲೊಂಬಾರ್ಡ್ ಆಸ್ಪತ್ರೆಯನ್ನು ತೋರಿಸಲು ಅವಕಾಶ ಪಡೆದಿದ್ದರು. ಆ ರೀತಿಯಲ್ಲಿ ಮಣಿಪಾಲದಲ್ಲಿ ವೈದ್ಯಕೀಯ ಕಾಲೇಜು ಸ್ಥಾಪನೆಯಾಗಲು ಪರೋಕ್ಷವಾಗಿ ಮಿಶನ್ ಆಸ್ಪತ್ರೆ ಕಾರಣವಾಗಿತ್ತು. ಡಾ.ಟಿ.ಎಂ.ಎ.ಪೈಯವರು ಡಾ. ಈವಾರವರನ್ನು ಕುರಿತು, " ಅವರಲ್ಲಿ ದೈವಿಕ ಕಳೆ ಇತ್ತು. ಇಂತಹವರು ನಮಗೆ ಬಹಳ ಮಂದಿ ದೊರೆಯುವಂತಾಗಲಿ. ಅವರು ಯಾವ ದೇಶದಿಂದ ಬಂದವರು ಎಂಬುದು ಮುಖ್ಯವಲ್ಲ. ಭರವಸೆ ಮತ್ತು ಸುಖದ ಕೈ ದೀಪಿಗೆಯನ್ನು ಓಡಿದುಕೊಂಡಿರುವ ದೇವದೂತರು ಅವರು. ಚೇತರಿಕೆಯ ಕಲೆಗೆ

ಡಾ. ಲೊಂಬಾರ್ಡ್‌ರ ಕೊಡುಗೆ ಸಂಕೇತವಾಗಿದೆ" [೧೧೨] ಎಂಬ ಪ್ರಶಂಸನೀಯ ಮಾತುಗಳನ್ನಾಡಿರುವುದು ಅವರ ಸೇವೆಗೆ ಹಿಡಿದ ಕೈಗನ್ನಡಿಯಂತಿದೆ. ಖ್ಯಾತ ಇತಿಹಾಸ ತಜ್ಞರಾದ ಪ್ರೊ. ಗುರುರಾಜ್ ಭಟ್‌ರವರು ಡಾ. ಈವಾರವರ ಬಗ್ಗೆ ಮೆಚ್ಚಿಕೆ ಮಾತುಗಳನ್ನಾಡುತ್ತಾ ಹೀಗೆಂದರು: "ದೂರ ಲೆಕ್ಕಕ್ಕಿಲ್ಲ. ಬಣ್ಣ ಪ್ರತಿಬಂಧವಿಲ್ಲ. ರಾಷ್ಟ್ರೀಯ ಗಡಿಗಳು ತಡೆಯಾಗಿಲ್ಲ. ಆದರೆ ಸೇವೆಯನ್ನು ನೀಡುವ ಛಲ ಬೇಕು..... ಅದು ನಮ್ಮ ವೃತ್ತಿಯ ಹಾದಿಯನ್ನು ಅರ್ಥೈಸುವಿಕೆ, ಪ್ರೀತಿ, ವಾತ್ಸಲ್ಯ ಮತ್ತು ನಿಷ್ಠೆಯ ಹಾದಿಯಲ್ಲಿ ನಡೆಸುತ್ತದೆ." [೧೧೩]

ಮಿಶನ್ ಆಸ್ಪತ್ರೆಗಳ ಬಗ್ಗೆ ಡಾ. ಈವಾ ಬೆಲ್ ಹೀಗೆ ಹೇಳಿದ್ದಾರೆ: " ಹಳೆಯ ಮಿಶನ್ ಆಸ್ಪತ್ರೆಗಳಿಗೆ ತಜ್ಞರ ಸ್ಪರ್ಶವಿರಲಿಕ್ಕಿಲ್ಲ. ವಿನ್ಯಾಸ ಹಾಗೂ ನಿರ್ಮಾಣದಲ್ಲಿ ಅವುಗಳಲ್ಲಿ ಅನೇಕ ಕೊರತೆ ಇರಬಹುದು. ಆಧುನಿಕ ವ್ಯವಸ್ಥೆಗೆ ಹೋಲಿಸಿದರೆ ಅವುಗಳ ಆಡಳಿತದಲ್ಲಿ ಕೆಲವು ದೋಷಗಳು ಇರಬಹುದು. ಆದರೆ ದೈಹಿಕ ಹಾಗೂ ಮಾನಸಿಕ ಸಮಸ್ಯೆಗಳ ಪರಿಹಾರದಲ್ಲಿ ಅವುಗಳ ಪಾತ್ರ ಭಾರೀ ದೊಡ್ಡದು. ಜನರಿಗೆ ಸಹಾಯ ಬೇಕಾದಲ್ಲಿ ಅದನ್ನು ಒದಗಿಸಲು ಅವುಗಳಿಗೆ ಸಾಧ್ಯವಾಯಿತು. ಕತ್ತಲು ಹಾಗೂ ಮಾಹಿತಿಯ ಕೊರತೆ ತುಂಬಿದ ವ್ಯವಸ್ಥೆಯಲ್ಲಿ ಅವುಗಳು ಬೆಳಕಾದವು. ಅನೇಕ ಸಮಸ್ಯೆಗಳ ನಡುವೆಯೂ ಅವುಗಳು ಉತ್ತಮ ಸೇವೆ ಸಲ್ಲಿಸಲು ಮರೆಯಲಿಲ್ಲ." [೧೧೪] ಹೀಗೆ, ಒಂದೇ ಮಾತಿನಲ್ಲಿ ಹೇಳುವುದಾದರೆ, ಬಾಸೆಲ್ ಮಿಶನ್ ಆಸ್ಪತ್ರೆಯು, ದಕ್ಷಿಣ ಕನ್ನಡದ ಹಲವು ರೋಗಿಗಳನ್ನು ಅವರ ನೋವಿನಿಂದ, ಕಷ್ಟಗಳಿಂದ ಪಾರುಮಾಡಿ ಅವರು ತಮ್ಮ ಹಿಂದಿನ ಉತ್ತಮ ಆರೋಗ್ಯವನ್ನು ಪಡೆಯುವಲ್ಲಿ ಬಹಳ ಮಹತ್ತರವಾದ ಮತ್ತು ಜವಾಬ್ದಾರಿಯುತವಾದ ಸೇವೆಯನ್ನು ಸಲ್ಲಿಸುತ್ತಿದೆ. ಇಂದು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯು ರಾಜ್ಯ ಅಥವಾ ದೇಶದ ಬೇರೆಡೆಯ ಜನರನ್ನು ನಿರಂತರವಾಗಿ ಕಾಡುತ್ತಿರುವ ರೋಗಳಿಂದ ಮುಕ್ತರಾಗಿಸಿದ್ದರೆ, ಕಾಡುವ ರೋಗಗಳಿಗೆ ತತ್‌ಕ್ಷಣ ಪರಿಹಾರ ನೀಡಿ ಅವುಗಳನ್ನು ಪ್ರತಿಬಂಧಿಸುವಲ್ಲಿ ಸಫಲರಾಗಿದ್ದರೆ, ಉನ್ನತ ವೈದ್ಯಕೀಯ ಶಿಕ್ಷಣವನ್ನು ನೀಡುವ ಕೇಂದ್ರವಾಗಿ ವಿಶ್ವದಲ್ಲಿಯೇ ಗುರುತಿಸಲ್ಪಟ್ಟಿದ್ದರೆ, ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವಲ್ಲಿ ಮುಂಚೂಣಿಯಲ್ಲಿದ್ದರೆ ಅದಕ್ಕೆ ಜಿಲ್ಲೆಯಲ್ಲಿ ಕ್ರೈಸ್ತ ಮಿಶನರಿ ಸಂಸ್ಥೆಗಳು ವೈದ್ಯಕೀಯ ಕ್ಷೇತ್ರದಲ್ಲಿ ಹಾಕಿಕೊಟ್ಟಿರುವ ಭದ್ರ ಬುನಾದಿಯೇ ಕಾರಣ ಎಂಬುದು ಯಾರೂ ಅಲ್ಲಗಳೆಯಲಾರದ ಸತ್ಯವಾಗಿದೆ ಎಂಬುದು ನನ್ನ ಅನಿಸಿಕೆ.

# ಕೊನೆ ಟಿಪ್ಪಣಿ

೧. ಡೆನಿಸ್ ಫೆರ್ನಾಂಡಿಸ್, "ದ ತುಳು ವರ್ಲ್ಡ್ ಇನ್ ಯೂರೋಪಿಯನ್ ರೈಟಿಂಗ್ಸ್" ಅಪ್ರಕಟಿತ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ ಮಂಗಳೂರು, ೨೦೦೬ ಪುಟ ೨೧೫

೨. ಎಸ್.ಡಿ.ಎಲ್. ಅಳಗೋಡಿ, *ಭಾರತದಲ್ಲಿ ಕ್ರೈಸ್ತ ಧರ್ಮದ ಇತಿಹಾಸ*, ಮಂಗಳೂರು : ಕನ್ನಡ ದೈವಜ್ಞಾನ ಸಾಹಿತ್ಯ ಸಮಿತಿ, ಬಲ್ಮಠ, ೨೦೦೧, ಪುಟ ೯೦

೩. ಮ್ಯಾಂಗಲೂರ್ ಮ್ಯಾಗಝಿನ್ ಸಂಪುಟ ೧, ೧೯೦೧, ಪುಟಗಳು ೮೩,೮೪; ಅಶೋಕ್ ರಾಜೇಶ್ ಡಿ'ಸೋಜ, "ಮ್ಯಾಂಗಲೂರ್ ಮ್ಯಾಗಝಿನ್‌ನಲ್ಲಿ ಬಿಂಬಿತ ದಕ್ಷಿಣ ಕನ್ನಡ", ಹಂಪಿ : ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ, ಹಂಪಿ ಕನ್ನಡ ವಿಶ್ವವಿದ್ಯಾಲಯ, ೨೦೦೮, ಪುಟಗಳು ೮೦,೮೧; ಎಂ.ಗಣಪತಿ ರಾವ್ ಐಗಳ್, *ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ*, ಉಡುಪಿ: ಪಾದೆಕಲ್ಲು ವಿಷ್ಣುಭಟ್ಟ, (ಸಂಪಾದಿಸಿದ) ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಎಂ.ಜಿ.ಎಂ. ಕಾಲೇಜು, ೨೦೦೪, ಪುಟ ೧೪೦

೪. ಜಾರ್ಜ್ ಎಂ. ಮೊರಾಯಸ್, *ಮ್ಯಾಂಗಲೂರ್: ಎ ಹಿಸ್ಟೋರಿಕಲ್ ಸ್ಕೆಚ್*, ಮಂಗಳೂರು: ೧೯೨೭, ಪುಟ ೫೩೪; ಕ್ರಾಂತಿ ಕೆ.ಫರಾಯಸ್, *ದ ಕ್ರಿಶ್ಚಿಯನ್ ಇಂಪಾಕ್ಟ್ ಇನ್ ಸೌತ್ ಕೆನರಾ* ಮುಂಬೈ: ಚರ್ಚ್ ಹಿಸ್ಟರಿ ಅಸೋಸಿಯೇಷನ್ ಇನ್ ಇಂಡಿಯಾ, , ೧೯೯೯, ಪುಟ ೨೬; ಮೋಹನ್ ಕೃಷ್ಣ ರೈ ಕೆ., "ಅರ್ಬನೈಜೇಷನ್ ಆಫ್ ಮ್ಯಾಂಗಲೂರ್ ಎ ಕೊಲೋನಿಯಲ್ ಎಕ್ಸ್‌ಪೀರಿಯನ್ಸ್ (೧೭೯೯-೧೯೪೭)", ಅಪ್ರಕಟಿತ ಮಹಾಪ್ರಬಂಧ,ಇತಿಹಾಸ ವಿಭಾಗ ಮಂಗಳೂರು ವಿಶ್ವವಿದ್ಯಾಲಯ ಪುಟ ೪೨

೫. ಪ್ರಶಾಂತ್ ನೋಯೆಲ್ ಕರ್ಕಡ, "ಸಿ.ಎಸ್.ಐ. ಉಡುಪಿಯ ಲೊಂಬಾರ್ಡ್ ಸ್ಮಾರಕ (ಮಿಷನ್) ಆಸ್ಪತ್ರೆಯ ಚರಿತ್ರೆ ಹಾಗೂ ಸೇವೆಯ ಒಂದು ಅಧ್ಯಯನ" , ಅಪ್ರಕಟಿತ ಬಿ.ಡಿ.ಸಂಪ್ರಬಂಧ , ಕರ್ನಾಟಕ ಥಿಯೋಲಾಜಿಕಲ್ ಕಾಲೇಜು, ಮಂಗಳೂರು, ೨೦೦೯, ಪುಟಗಳು ೪, ೫

೬. ಅದೇ, ಪುಟಗಳು ೪, ೫

೭. ಅದೇ , ಪುಟಗಳು ೪, ೫

೮. ಎಸ್.ಆರ್.ಪುರ್ತಾದೊ, "ದ ವರ್ಕ್ ಆಫ್ ದ ಬಾಸೆಲ್ ಮಿಶನ್ ಇನ್ ಇಂಡಿಯಾ" ಉಡುಪಿ:ಎಡಿಟೋರಿಯಂ ಬೋರ್ಡ್ ಡೈಮಂಡ್ ಜುಬಿಲಿ ಸಾವೆನಿಯರ್, ಡಾ। ಲೊಂಬಾರ್ಡ್ ಮೆಮೋರಿಯಲ್ ಹಾಸ್ಪಿಟಲ್, ೧೯೮೩. ಪುಟ ೨೯

೯. ಎಂ. ಗಣಪತಿ ರಾವ್ ಐಗಳ್, ಪೂರ್ವೋಕ್ತ ,ಪುಟ ೧೪೪

೧೦. ಹೆರಾಲ್ಡ್ ಎ. ಸ್ಟುವರ್ಟ್, *ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನುವೆಲ್ಸ್ - ಸೌತ್ ಕೆನರಾ*, ಮದ್ರಾಸ್: ಸಂಪುಟ ೨, ೧೮೯೫, ಪುಟ ೮೬; 'ಮ್ಯಾಂಗಲೂರ್' ದ ಆರ್ಗನ್ ಆಫ್‌ದ ಕೆಥೋಲಿಕ್ ಎಸೋಸಿಯೇಷನ್ ಆಫ್ ಸೌತ್ ಕೆನರಾ, ಜನವರಿ, ೧೯೩೧ ಪುಟ ೧೧೭

೧೧. ಎಡ್ವರ್ಡ್ ಗೊನ್ಸಾಲ್ವಿಸ್, "ಎ ಶಾರ್ಟ್ ಹಿಸ್ಟರಿ ಆಫ್ ದ ಇನ್‌ಸ್ಟಿಟ್ಯೂಷನ್ಸ್", ಎಡಿಟೋರಿಯ ಬೋರ್ಡ್ ಪೋಸ್ಟ್ ಸಂಟಿನರಿ ಸಿಲ್ವರ್ ಜ್ಯುಬಿಲಿ ಸಾವೆನಿಯರ್, ಫಾ। ಮುಲ್ಲರ್ಸ್ ಚಾರಿಟೇಬಲ್ ಇನ್‌ಸ್ಟಿಟ್ಯೂಷನ್ಸ್ (೧೮೮೦-೨೦೦೫) (ಇನ್ನು ಮುಂದೆ ಎಫ್.ಎಂ.ಸಿ.ಐ) ಪುಟ ೨೨; ಸೆಂಟಿನರಿ ಸಾವೆನೀಯರ್, ಎಫ್‌ಎಂಸಿಐ, ಕಂಕನಾಡಿ, ಮಂಗಳೂರು ಪುಟಗಳು ೧೧-೧೩

೧೨. ಅದೇ, ಪುಟ ೨೩

೧೩. ಎಡ್ವರ್ಡ್ ಎಲ್ . ನಜ್ರೆತ್. "ಭಲಾಯ್ಕೆ ಕ್ಷೇತ್ರಾಂತ್ ಕೊಂಕಣಿ ಲೊಕ್ (ಕೊಂಕಣಿ)" ' ರಾಕ್ಣೊ' ಸಂಪಾದಿಕೀಯ ಮಂಡಳಿ, ' ರಾಕ್ಣೊ ೫೦' ರಾಕ್ಣೊ ಸುವರ್ಣ ಮಹೋತ್ಸವ ಸಂಚಿಕೆ, ೧೯೩೮-೧೯೮೮, ಕೊಡಿಯಾಲ್‌ಬೈಲ್ ಪ್ರೆಸ್, ಮಂಗಳೂರು. ಪುಟ. ೫೯

೧೪. ಅದೇ ,ಪುಟ ೫೯, ೬೦

೧೫. ಅದೇ , ಪುಟ ೬೧

೧೬. ಡಾ। ಎಡ್ವರ್ಡ್ ನಜರೆತ್, "ಕಂಕ್ನಾಡಿ ಆಸ್ಪತ್ರೆಂತ್ಲ್ಯಾ ಸಿಸ್ಟರಾಂಕ್ ಶೆಂಬರ್ ವರ್ಸಾಂ"(ಕೊಂಕಣಿ )'ರಾಕ್ಣೊ ' ಕೊಂಕಣಿ ವಾರ ಪತ್ರಿಕೆ ೧೯ ಏಪ್ರಿಲ್, ೨೦೧೨, ಪುಟಗಳು ೫,೧೧

೧೭. ಎಡ್ವರ್ಡ್ ಗೊನ್ಸಾಲ್ವಿಸ್, ಪೂರ್ವೋಕ್ತ, ಪುಟ ೨೫

೧೮. ಅದೇ, ಪುಟ ೨೬

೧೯. ಅದೇ, ಪುಟ ೨೮

೨೦. ಜೆಸಿಂತಾ ಡಿಸೋಜ, "ಫೋಕಸ್ ಆನ್ ಕಾಲೇಜ್ ಆಫ್ ನರ್ಸಿಂಗ್", ಎಡಿಟೋರಿಯ ಬೋರ್ಡ್ ಪೋಸ್ಟ್ ಸೆಂಟಿನರಿ ಸಿಲ್ವರ್ ಜುಬಿಲಿ ಸಾವೆನಿಯರ್, ಫಾ। ಮುಲ್ಲರ್ಸ್ ಚಾರಿಟೇಬಲ್ ಇನ್‌ಸ್ಟಿಟ್ಯೂಷನ್ಸ್ (೧೮೮೦-೨೦೦೫) ಪುಟ ೬೨; ಭ। ಅಂಜೆಲಾ ಮರಿಯ ಕ್ಯಾಪನಿಲ್ಲೆ, "ಸಿಸ್ಟರ್ಸ್ ಆಫ್ ಚಾರಿಟಿ ಆಂಡ್ ಫಾ। ಮುಲ್ಲರ್ಸ್" ಎಡಿಟೋರಿಯ ಬೋರ್ಡ್, ಸೆಂಟಿನರಿ ಸಾವೆನಿಯರ್ ಎಫ್ .ಎಂ.ಸಿ.ಐ, ೨೦೦೫ ಪುಟಗಳು ೩೦,೩೧

೨೧. ಅದೇ, ಪುಟ ೬೩

೨೨. ವಿ.ಟಿ. ಡಿ.ಸೋಜಾ , " ಆಧುನಿಕ್ ಚಿಕಿತ್ಸಾಕ್ರಮ್ - ಹೊಮಿಯೋಪಥಿ (ಕೊಂಕಣಿ) ಎ.ಎಫ್. ಡಿ.ಸೋಜಾ ರಾಕಣೊ ಬೆಳ್ಳಿಹಬ್ಬದ ಸಂಚಿಕೆ ೧೯೩೯-೧೯೬೩ ಕೊಡಿಯಲ್‌ಬೈಲ್ ಪ್ರೆಸ್ ಮಂಗಳೂರು, ಪುಟ ೧೧೧; ಡಾ. ಶಶಿಕಾಂತ್ ತಿವಾರಿ, "ಪ್ರೋಗ್ರೆಸ್ ಆಫ್ ಫಾ। ಮುಲ್ಲರ್ಸ್ ಹೋಮಿಯೋಪಥಿಕ್ ಮೆಡಿಕಲ್ ಕಾಲೇಜ್" , ಎಡಿಟೋರಿಯ ಬೋರ್ಡ್, ಎಫ್.ಎಂ.ಸಿ.ಐ. ಪೋಸ್ಟ್ ಸೆಂಟಿನರಿ ಸಿಲ್ವರ್ ಜುಬಿಲಿ ಸಾವೆನಿಯರ್, ಮಂಗಳೂರು , ಪುಟ ೬೫

೨೩. ರಾಕಣೊ , ಪೂರ್ವೋಕ್ತ, ಪುಟ ೧೧೨

೨೪. ಡಾ. ಶಶಿಕಾಂತ್ ತಿವಾರಿ, ಪೂರ್ವೋಕ್ತ ಪುಟ ೬೫

೨೫. ಅದೇ , ಪುಟಗಳು ೬೬, ೬೭

೨೬. ಎಡಿಟೋರಿಯ ಬೋರ್ಡ್ ಪೋಸ್ಟ್ ಸೆಂಟಿನರಿ ಸಿಲ್ವರ್ ಜುಬಿಲಿ ಸಾವೆನಿಯರ್ ಫಾ। ಮುಲ್ಲರ್ಸ್ ಚಾರಿಟೇಬಲ್ ಇನ್‌ಸ್ಟಿಟ್ಯೂಷನ್ಸ್ (೧೮೮೦-೨೦೦೫) ಇನ್ನು ಮುಂದೆ (ಪಿ.ಸಿ.ಎಸ್.ಜೆ.ಎಸ್ ಎಫ್ ಎಂ.ಸಿ.ಐ.) ಪುಟಗಳು ೬೯,೭೦

೨೭. ನರಸಿಂಹನ್ ಎಸ್, "ಫಿಸೊಯೋಥೆರಪಿ ಎಟ್ ಫಾ। ಮುಲ್ಲರ್ಸ್" ಪಿ.ಸಿ.ಎಸ್.ಜೆ. ಎಸ್, ಪೂರ್ವೋಕ್ತ ,ಪುಟಗಳು ೭೫, ೭೬

೨೮. 'ಮ್ಯಾಂಗಲೂರ್' ಪೂರ್ವೋಕ್ತ, ಮೇ ೧೯೯೦ ,ಪುಟ ೩೬

೨೯. ಡಾ. ನಂದಕಿಶೋರ್. ಬಿ'., "೧೧೫ ವರ್ಷಗಳು ಕುಷ್ಟರೋಗ ಆಸ್ಪತ್ರೆ", ಪಿ.ಸಿ.ಎಸ್.ಜೆ. ಎಸ್. ಎಫ್. ಎಂ.ಸಿ.ಐ, ಕಂಕನಾಡಿ, ಮಂಗಳೂರು, ಪುಟಗಳು ೭೮-೮೦

೩೦. ಭ। ಎರ್ಮಾನ ಜೋಸಫ್, "ರಿ ಹ್ಯಾಬಿಲಿಟೇಷನ್ ಆಫ್ ದ ಕ್ಯೂರ್ಡ್ ಲೆಪ್ರಸಿ ಪೇಷಿಯಂಟ್ಸ್"; ಪಿ.ಸಿ.ಎ.ಜೆ.ಎಸ್. ಪೂರ್ವೋಕ್ತ ಪುಟಗಳು ೮೧, ೮೨

೩೧. ಅದೇ, ಪುಟ ೮೨

೩೨. ಡಾ। ಡೆಸ್ಲಿನ್ ಪಿಂಟೋ, "ಮೆಂಟಲ್ ಹೆಲ್ತ್ ಕೇರ್ ಎಟ್ ಫಾ। ಮುಲ್ಲರ್ಸ್". ಪಿಸಿಎಜೆಎಸ್, ಪೂರ್ವೋಕ್ತ ,ಪುಟಗಳು ೮೪, ೮೫

೩೩. ಗಾಡ್‌ಫ್ರಿ ಇ. ಪಿಂಟೊ, "ಮೆಂಟಲ್ ಹೆಲ್ತ್ ಕೇರ್ ಎಟ್ ಫಾ। ಮುಲ್ಲರ್ಸ್' , ಪಿಸಿಎ ಜೆಎಸ್, ಪೂರ್ವೋಕ್ತ ,ಪುಟಗಳು ೮೪, ೮೫

೩೪. ಅದೇ , ಪುಟಗಳು ೮೮- ೮೯

೩೫. ಒಲ್ವಾ ರಾಯಪ್ಪನ್, "ಡಿ-ಎಡಿಕ್ಷನ್ ಪ್ರೋಗ್ರಾಂ ಎಟ್ ಫಾ। ಮುಲ್ಲರ್ಸ್", ಪೂರ್ವೋಕ್ತ, ಪುಟಗಳು ೯೨ - ೯೪

೩೬. ಸತ್ಯದೀಪಿಕೆ -೧೧, ಅಕ್ಟೋಬರ್, ೧೯೦೬ ಪುಟ ೧೧೮

೩೭. ಪೀಟರ್ ವಿಲ್ಸನ್ ಪ್ರಭಾಕರ್, (ಇನ್ನು ಮುಂದೆ ಪಿ.ಡಬ್ಲ್ಯುಪಿ) " ದ ಬಾಸೆಲ್ ಮಿಶನ್ ಇನ್ ಸೌತ್ ಕೆನರಾ (೧೮೩೪-೧೯೪೭)" " ಅಪ್ರಕಟಿತ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ೧೯೮೮ ಪುಟ ೧೬೦

೩೮. ಕ್ರೈಸ್ತ ಹಿತವಾದಿ, ಸಂಚಿಕೆ -೨, ಸಂಪುಟ ೭, ಆಗಸ್ಟ್, ೧೯೩೦, ಮಂಗಳೂರು, ಪುಟ ೧೨

೩೯. ಈವಾ ಬೆಲ್, "ಮೆಡಿಕಲ್ ವರ್ಕ್ ಆಫ್ ದ ಬಾಸೆಲ್ ಮಿಶನ್ ಇನ್ ಇಂಡಿಯಾ", ಗಾಡ್ವಿನ್ ಶಿರಿ (ಸಂಪಾದಿಸಿದ), ವೋಟ್ನೆಸ್ ಇನ್ ಕ್ರೈಸ್ಟ್ ದ ಲೆಗಸಿ ಆಫ್ ದ ಬಾಸೆಲ್ ಮಿಶನ್ ಇನ್ ಇಂಡಿಯಾ,ಮಂಗಳೂರು, ಕರ್ನಾಟಕ ಥಿಯೋಲಾಜಿಕಲ್ ರಿಸರ್ಚ್

ಇನ್‌ಸ್ಟಿಟ್ಯೂಟ್, ೧೯೮೫, ಪುಟಗಳು ೨೩೮- ೨೪೯; ಪಿ.ಡಬ್ಲ್ಯುಪಿ "ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್" ಪುತ್ತೂರು : ಕನ್ನಡ ಸಂಘ, ವಿವೇಕಾನಂದ ಕಾಲೇಜು', ೧೯೮೯, ಪುಟ ೨೪; ಪಿಡಬ್ಲ್ಯುಪಿ ಪೂರ್ವೋಕ್ತ, ಪುಟಗಳು ೧೬೧, ೧೬೨

೪೦. ಬಿ.ಎಂ.ಆರ್- ೧೯೦೭, ಪುಟ ೯೪; ಡೆನಿಸ್ ಫೆರ್ನಾಂಡಿಸ್, ಪೂರ್ವೋಕ್ತ ಪುಟ ೨೧೫

೪೧. ಪಿ.ಡಬ್ಲ್ಯೂ.ಪಿ., ಪೂರ್ವೋಕ್ತ, ಪುಟ ೧೬೦

೪೨. ಎಡಿಟೋರಿಯಂ ಬೋರ್ಡ್ ಡೈಮಂಡ್ ಜ್ಯೂಬಿಲಿ ಸಾವೆನಿಯರ್, ಡಾ. ಲೊಂಬಾರ್ಡ್ ಮೆಮೋರಿಯಲ್ ಹಾಸ್ಪಿಟಲ್ (೧೯೨೩-೧೯೮೩), ಪುಟ ೯

೪೩. ಈವಾ ಲೊಂಬಾರ್ಡ್, " ಹೌ ಇಟ್ ಬಿಗ್ಯಾನ್ ಸಮ್ ಸಾವೆನಿಯರ್ಸ್", ಎಡಿಟೋರಿಯಂ ಬೋರ್ಡ್ ಗೋಲ್ಡನ್ ಜುಬಿಲಿ ಸಾವೆನಿಯರ್, ೧೯೭೩, ಮಿಶನ್ ಹಾಸ್ಪಿಟಲ್, ಉಡುಪಿ, ಪುಟಗಳು ೧೫, ೧೬

೪೪. ವಿಜಯ ಕುಮಾರ್, "ಕರ್ನಾಟಕದಲ್ಲಿ ಪ್ರೊಟೆಸ್ಟಾಂಟ ಮಿಷನ್ನುಗಳ ಚರಿತ್ರೆ", ಮಂಗಳೂರು : ೨೦೦೪, ಪುಟ ೧೦೩

೪೫. ವೆಂಡ್ಟ್. ಆರ್ (ಸಂಪಾದಿಸಿದ), " ಆನ್ ದಿ ಇನಿಷಿಯಲ್ ಫೈಲ್ಯೂರ್ ಅಂಡ್ ದ ಪೋಸ್ತುಮಸ್ ಸಕ್ಸಸ್ ಆಫ್ ದ ಮಿಶನರಿ ಫರ್ಡಿನಾಂಡ್ ಕಿಟ್ಟೆಲ್," ಆ್ಯನ್ ಇಂಡಿಯನ್ ಟು ದ ಇಂಡಿಯನ್ಸ್ ?, ೨೦೦೬, ಪುಟ ೧೫೪

೪೬. ಈವಾ ಬೆಲ್, ಪೂರ್ವೋಕ್ತ ಪುಟಗಳು, ೨೫೩, ೨೫೪

೪೭. ಪಿ.ಡಬ್ಲ್ಯೂ.ಪಿ. ಪೂರ್ವೋಕ್ತ, ಪುಟ ೧೬೩

೪೮. ಸಂಪಾದಿಕೀಯ ಮಂಡಳಿ ಲೊಂಬಾರ್ಡ್ ಆಸ್ಪತ್ರೆಯ ೨೫ನೇಯ ವಾರ್ಷಿಕೋತ್ಸವದ ವರದಿ (೧೯೨೩-೧೯೪೮) ಪುಟ ೨

೪೯. ಅದೇ ,ಪುಟ ೪

೫೦. ಸಂಪಾದಕರು ಡಾ. ಲೊಂಬಾರ್ಡ್ ಆಸ್ಪತ್ರೆಯ ವಾರ್ಷಿಕ ವರದಿ, ೧೯೩೬, ಪುಟ ೪

೫೧. ಅದೇ, ೧೯೩೧ ಪುಟ ೩

೫೨. ಅದೇ, ೧೯೫೫ ಪುಟ ೨

೫೩. ಎಸ್. ಕಾಂಚನ್, " ಎ ಸೀಡ್ ಸೋನ್, ಎ ಪ್ಲ್ಯಾಂಟ್ ವಾಟರ್ಡ್ ", ಎಡಿಟೋರಿಯಂ ಬೋರ್ಡ್ ಪ್ಲಾಟಿನಂ ಜುಬಿಲಿ ಸಾವೆನಿಯರ್, ೧೯೯೯, ಪುಟ ಸಂಖ್ಯೆ ಇಲ್ಲ

೫೪. ಎಡಿಟಾರ್ ಗೋಲ್ಡನ್ ಜುಬಿಲಿ ರಿಪೋರ್ಟ್ (೧೯೨೩-೧೯೭೩), ಡಾ ಲೊಂಬಾರ್ಡ್ ಹಾಸ್ಪಿಟಲ್, ಉಡುಪಿ ಪುಟ ೩

೫೫. ಎಸ್. ಕಾಂಚನ್, ಪೂರ್ವೋಕ್ತ, ಪುಟ ಸಂಖ್ಯೆ ಇಲ್ಲ

೫೬. ಎಡಿಟಾರ್ ಗೋಲ್ಡನ್ ಜುಬಿಲಿ ರಿಪೋರ್ಟ್ (೧೯೨೩-೧೯೭೩) ಪೂರ್ವೋಕ್ತ ಪುಟ ೪

೫೭. ಅದೇ , ಪುಟ ೪

೫೮. ಅದೇ , ಪುಟ ೫

೫೯. ಪಿ.ಡಬ್ಲ್ಯೂ.ಪಿ., ಪೂರ್ವೋಕ್ತ ಪುಟ ೧೬೮

೬೦. ಡಾ. ಲೊಂಬಾರ್ಡ್ ಆಸ್ಪತ್ರೆಯ ವಾರ್ಷಿಕ ವರದಿ ಉಡುಪಿ ೨೦೦೮-೨೦೦೯

೬೧. ಎಡಿಟೋರಿಯಂ ಬೋರ್ಡ್ ಡೈಮಂಡ್ ಜುಬಿಲಿ ಸೌನಿಯರ್, ಲೊಂಬಾರ್ಡ್ ಮೆಮೋರಿಯಲ್ ಹಾಸ್ಪಿಟಲ್ (೧೯೨೩-೧೯೮೩), ಪುಟ V

೬೨. ಲೊಂಬಾರ್ಡ್ ಆಸ್ಪತ್ರೆಯ ೨೫ನೇ ವಾರ್ಷಿಕ ವರದಿ, (೧೯ ೨೩-೧೯೪೮), ಪುಟ ೫

೬೩. ಎಡಿಟಾರ್ ಗೋಲ್ಡನ್ ಜುಬಿಲಿ ರಿಪೋರ್ಟ್ (೧೯೨೩-೧೯೭೩), ಪುಟ ೪

೬೪. ಎಡಿಟಾರ್ ಹಾಸ್ಪಿಟಲ್ ಆ್ಯನ್ಯುವಲ್ ಸಂಡೆ ರಿಪೋರ್ಟ್, ೧೯೨೩-೧೯೭೩, ಪುಟ ೪

೬೫. ಅದೇ, ೧೯೬೮, ಪುಟ ೨

೬೬. ಸಂಪಾದಕರು ಸಿ.ಎಸ್. ಐ (ಬಾಸೆಲ್ ಮಿಶನ್) ಆಸ್ಪತ್ರೆ, ಉಡುಪಿ (೧೯೭೭-೭೮) ವರ್ಷದ ವರದಿ ಪುಟ ೬

೬೭. ಎಡಿಟಾರ್ ಗೋಲ್ಡನ್ ಜುಬಿಲಿ ರಿಪೋರ್ಟ್ ೧೯೨೩-೧೯೭೩, ಪುಟ ೪

೬೮. ಎಸ್.ಕಾಂಚನ್ ಪೂರ್ವೋಕ್ತ, ಪುಟ ಸಂಖ್ಯೆ ಇಲ್ಲ

೬೯. ಡಾ. ಲೊಂಬಾರ್ಡ್ ಸ್ಮಾರಕ ಆಸ್ಪತ್ರೆಯ ವಾರ್ಷಿಕ ವರದಿ,ಉಡುಪಿ, ೨೦೦೮-೨೦೦೯

೭೦. ಸ್ವಿಜರ್‌ಲ್ಯಾಂಡ್ ವೈದ್ಯೆ ಸ್ಥಾಪಕಿ- ಪ್ರೇರಣಾ ಶಕ್ತಿ ೮೮ ವರ್ಷ ಇತಿಹಾಸದ ಉಡುಪಿ ಮಿಶನ್ ಆಸ್ಪತ್ರೆ, ಉದಯವಾಣಿ, ಜುಲೈ ೨೬, ೨೦೧೧

೭೧. 'ರಾಕಣೊ', ಪೂರ್ವೋಕ್ತ ,ಪುಟಗಳು ೧೨೩- ೧೨೫

೭೨. 'ರಾಕ್ಣೊ ೫೦', ಪೂರ್ವೋಕ್ತ, ಪುಟಗಳು ೬೮, ೬೯

೭೩. ರಾಕಣೊ, ಪೂರ್ವೋಕ್ತ ಪುಟ ೧೨೬

೭೪. 'ರಾಕ್ಣೊ ೫೦' ಪೂರ್ವೋಕ್ತ ,ಪುಟ ೬೯

೭೫. ಅದೇ ,ಪುಟಗಳು ೭೦,೭೧; ಆಸ್ಪತ್ರೆಯ ಸಿಬ್ಬಂದಿಗಳನ್ನು ೧೦ ಅಕ್ಟೋಬರ್ ೨೦೦೯ರಲ್ಲಿ ಸಂದರ್ಶಿಸಿ ಸಂಗ್ರಹಿಸಿರುವ ಮಾಹಿತಿ.

೭೬. ಮಾರ್ಕ್ ವಾಲ್ದಾರ್, "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ", ಅಡ್ಯನಡ್ಕ ಕೃಷ್ಣ ಭಟ್ (ಸಂಪಾದಿಸಿದ), ಸುದರ್ಶನ ಡಾ. ತೋನ್ಸೆ ಮಾಧವ ಅನಂತ ಪೈ ಅಭಿನಂದನಾ ಗ್ರಂಥ, ವಿಜಯಾ ಕಾಲೇಜ್ ಮೂಲ್ಕಿ, ೧೯೭೭, ಪುಟ ೩೮೯; ಫಾ। ರೊನಾಲ್ಡ್ ಕುಟಿನ್ಹಾ, (ಸಂಪಾದಿಸಿ) ಏಕತಾ ದ ಡೈರೆಕ್ಟರಿ ಆಫ್ ದ ಕ್ರಿಶ್ಚಿಯನ್ ಚರ್ಚಸ್ ಇನ್ ದಕ್ಷಿಣ ಕನ್ನಡ ಅಂಡ್ ಉಡುಪಿ ಡಿಸ್ಟ್ರಿಕ್ಟ್ಸ್, ಕೊಡಿಯಾಲ್ ಬೈಲ್ ಪ್ರೆಸ್, ೨೦೦೩, ಪುಟ ೯೬

೭೭. ರೊನಾಲ್ಡ್ ಕುಟಿನ್ಹಾ , ಪೂರ್ವೋಕ್ತ , ಪುಟ ೮೧

೭೮. ಭ। ಡೊರಿನ್ ಎಸ್.ಆರ್.ಎ., " ಎ ಗ್ಲಾನ್ಸ್ ಎಟ್ ದ ಪಾಸ್ಟ್," ಎಡಿಟರ್ , ಬ್ಲೆಸಿಂಗ್ ಆಂಡ್ ಇನಾಗುರೇಷನ್ ಆಫ್ ಸಿಂಥಿಯಾ ಫೆರ್ನಾಂಡಿಸ್ ಮೆಮೋರಿಯಲ್ ಪ್ಯಾಲಿಯೇಟಿವ್ ಕೇರ್ ಸೆಂಟರ್ ಸಾವೆನಿಯರ್, ೨೦೦೬, ಪುಟಗಳು ೫,೬; ಫಾ। ಮಾರ್ಕ್ ವಾಲ್ದಾರ್, ಪೂರ್ವೋಕ್ತ ಪುಟ ೩೮೯; ೧೫ ನವೆಂಬರ್, ೨೦೧೧ರಲ್ಲಿ ಸಂದರ್ಶನ ನಡೆಸಿ ಮೇಲ್ವಿಚಾರಕರಿಂದ ಸಂಗ್ರಹಿಸಿದ ಮಾಹಿತಿ

೭೯. ರಾಕ್ಣೊ ೫೦, ಪೂರ್ವೋಕ್ತ , ಪುಟ ೬೯

೮೦. ಡೋರಿನ್ ಎಸ್ ಆರ್ ಎ, "ಎ ಗ್ಲಾನ್ಸ್ ಎಟ್ ದ ಪಾಸ್ಟ್", ಅರ್ಚನಾ ಎಸ್ ಆರ್ ಎ(ಸಂಪಾದಿಸಿದ) ಬ್ಲೆಸಿಂಗ್ ಆಂಡ್ ಇನಾಗುರೇಷನ್ ಆಫ್ ಸಿಂಥಿಯಾ ಫೆರ್ನಾಂಡಿಸ್ ಮೆಮೋರಿಯಲ್ ಪ್ಯಾಲಿಯೇಟಿವ್ ಕೇರ್ ಸೆಂಟರ್ ಗೋರಟ್ಟಿ ಆಸ್ಪತ್ರೆ ಕಲ್ಯಾಣಪುರ, ೨೦೦೬ ಪುಟಗಳು ೫,೬)

೮೧. ಪುತ್ತೂರ್ ಫಿರ್ಗಜಿಚೆಂ ಪತ್ರ್, 'ಆವಯ್' (ಕೊಂಕಣಿ) ಮಾದ್ಯೆ ದೆವುಸ್ ಚರ್ಚ್, ಪುತ್ತೂರು, ಸೆಪ್ಟೆಂಬರ್, ೨೦೧೧ ಪುಟಗಳು ೧೯,೨೦

೮೨. ವಿ.ಬಿ.ಅರ್ತಿಕಜೆ, 'ಅನನ್ಯ ಸಾಧಕ' ಪುತ್ತೂರು : ಕನ್ನಡ ಸಂಘ, ಸಂತ ಫಿಲೋಮಿನಾ ಕಾಲೇಜು, , ೨೦೦೧ ಪುಟ ೨೨

೮೩. 'ಆವಯ್', ಪೂರ್ವೋಕ್ತ ಪುಟಗಳು ೧೯, ೨೦; ೧೫ ಅಕ್ಟೋಬರ್ ೨೦೦೮ರಂದು ಫಾ। ಪತ್ರಾವೊ ಆಸ್ಪತ್ರೆಯ ಮದ್ಯವರ್ಜನ ಕೇಂದ್ರದ ನಿರ್ದೇಶಕಿ ಭ। ಬರ್ನಾಡಿನ್‌ರವರ ಸಂದರ್ಶನ ನಡೆಸಿ ಸಂಗ್ರಹಿಸಿದ ಮಾಹಿತಿ

೮೪. ವಿ.ಬಿ.ಅರ್ತಿಕಜೆ , ಪೂರ್ವೋಕ್ತ ,ಪುಟ ೨೨

೮೫. 'ಆವಯ್', ಪೂರ್ವೋಕ್ತ ,ಪುಟಗಳು ೧೯, ೨೦

೮೬. ವಿ.ಬಿ. ಅರ್ತಿಕಜೆ, ಪುಟ ೨೨

೮೭. 'ಆವಯ್', ಪೂರ್ವೋಕ್ತ , ಪುಟಗಳು ೧೯, ೨೦ ; ಫಾ। ರೊನಾಲ್ಡ್ ಕುಟಿನ್ಹಾ , ಪೂರ್ವೋಕ್ತ ಪುಟ ೧೫೭

೮೮. 'ರಾಕ್ಣೊ ೫೦', ಪೂರ್ವೋಕ್ತ , ಪುಟ ೭೦

೮೯. ಭ। ಲೂಸಿ ಅವರ ಸಂದರ್ಶನ ನಡೆಸಿ ಸಂಗ್ರಹಿಸಿದ ಮಾಹಿತಿ; 'ರಾಕ್ಣೊ ೫೦', ಪುಟಗಳು ೭೦, ೭೧; ಫಾ। ಮಾರ್ಕ್ ವಾಲ್ದಾರ್, ಪುಟ ೩೮೯; ಫಾ। ರೊನಾಲ್ಡ್ ಕುಟಿನ್ಹಾ, ಪುಟ ೧೭೮

೯೦. ಭ। ವಿಡಾ ಒಲಿವೆರಾ " ಇನ್ ದ ಕೇರ್ ಆಫ್ ದ ಸಿಕ್ ಅಂಡ್ ದ ಸಫರಿಂಗ್" , ಎಡಿಟೋರಿಯಂ ಬೋರ್ಡ್ ಸೆಂಟಿನರಿ ಸಾವನಿಯರ್, (೧೮೯೮-೧೯೯೮), ಸಿಸ್ಟರ್ಸ್ ಆಫ್ ಚಾರಿಟಿ ಇನ್ ಮ್ಯಾಂಗಲೂರ್ ೧೯೯೮, ಮಂಗಳೂರು, ಪುಟ ೧೧೧

೯೧. ಭ। ಬರ್ನಾಡೆಟ್ ಡಿ.ಸೋಜಾ , " ಜೆನೆಸಿಸ್ ಆಫ್ ದ ಮ್ಯಾಂಗಲೂರ್ ಪ್ರೋವಿನ್ಸ್ " , ಪೂರ್ವೋಕ್ತ ಪುಟ ೮೪

೯೨. ಭ। ಇಲಾರಿಯಾ ಮೊಂತೇರೋ , " ದ ಲೈಡ್ ಡೀಪ್ ದ ಫೌಂಡೇಶನ್ " ಪೂರ್ವೋಕ್ತ ಪುಟ ೭೦

೯೩. ಭ। ವಿಡಾ ಒಲಿವೆರಾ , ಸೆಂಟಿನರಿ ಸೌವನಿಯರ್ , ( ೧೮೯೮-೧೯೯೮) ಸಿಸ್ಟರ್ಸ್ ಆಫ್ ಚಾರಿಟಿ ಇನ್ ಮ್ಯಾಂಗಲೂರ್, ೧೯೯೮, ಪುಟಗಳು ೧೧೧,೧೧೨

೯೪. ರೊನಾಲ್ಡ್ ಕುಟಿನ್ಹಾ, ಪೂರ್ವೋಕ್ತ, ಪುಟ ೧೬೨

೯೫. ೮ ಅಕ್ಟೋಬರ್ ೨೦೧೧ರಂದು ಭ। ಬ್ಲಾಂಡಿನಾರವರ ಸಂದರ್ಶನ ನಡೆಸಿ ಸಂಗ್ರಹಿಸಿದ ಮಾಹಿತಿ

೯೬. ೬ಆಗಸ್ಟ್ ೨೦೦೯ ಭ। ಜಿಜಿ.ಅವರ ಸಂದರ್ಶನದ ಮೂಲಕ ದೊರೆತ ಮಾಹಿತಿ

೯೭. ರೊನಾಲ್ಡ್ ಕುಟಿನ್ಹಾ ಪೂರ್ವೋಕ್ತ ಪುಟ ೩೫

೯೮. ಅದೇ, ಪುಟ ೧೪೪

೯೯. ಅದೇ, ಪುಟ ೧೫೧

೧೦೦. ಅದೇ, ಪುಟ ೮೪

೧೦೧. ಅದೇ, ಪುಟ ೮೪

೧೦೨. ‘ಸೌಹಾರ್ದ ಸಂಪದ’ ,ಉದಯ ಕಮ್ಯೂನಿಕೇಷನ್ಸ್, ಡಯಾಸಿಸ್ ಆಫ್ ಬೆಳ್ತಂಗಡಿ, ೨೦೦೭, ಪುಟ ೬

೧೦೩. ಡೈರೆಕ್ಟರಿ ೨೦೧೧, ಡಯಾಸಿಸ್ ಆಫ್ ಬೆಳ್ತಂಗಡಿ, ಪುಟಗಳು ೬೯, ೭೦

೧೦೪. ‘ ರಾಕ್ಣೊ ೫೦’ ಪೂರ್ವೋಕ್ತ ,ಪುಟ ೭೦

೧೦೫. ಅದೇ, ಪುಟ ೭೨

೧೦೬. ಅದೇ ,ಪುಟಗಳು ೭೨, ೭೩

೧೦೭. ಫಾ। ಮಾರ್ಕ್ ವಾಲ್ಡಾರ್, ಪೂರ್ವೋಕ್ತ , ಪುಟ ೩೮೯

೧೦೮. ಎಡ್ವರ್ಡ್ ಗೊನ್ಸಾಲ್ವಿಸ್, “ಎ ಶಾರ್ಟ್ ಹಿಸ್ಟರಿ ಆಫ್ ದ ಇನ್‌ಸ್ಟಿಟ್ಯೂಷನ್ಸ್”, ಪೋಸ್ಟ್ ಸೆಂಟನರಿ ಸ್ವಿಲರ್ ಜುಬಿಲಿ ಸಾವೆನಿಯರ್ ಫಾ। ಮುಲ್ಲರ್ಸ್ ಚಾರಿಟೇಬಲ್ ಇನ್‌ಸ್ಟಿಟ್ಯೂಷನ್ಸ್ (೧೮೮೦-೨೦೦೫) ಪುಟ ೨೨; ಸೆಂಟಿನರಿ ಸಾವೆನಿಯರ್. ಫಾ। ಮುಲ್ಲರ್ಸ್ ಚಾರಿಟೇಬಲ್ ಇನ್‌ಸ್ಟಿಟ್ಯೂಷನ್ಸ್ ,ಪುಟಗಳು ೨೩, ೨೪

೧೦೯. ಎಸ್ ಡಿ ಎಲ್ ಅಳಗೋಡಿ, ಪೂರ್ವೋಕ್ತ , ಪುಟ ೧೦೨

೧೧೦. ಈವಾ ಬೆಲ್, ಪೂರ್ವೋಕ್ತ , ಪುಟ ೨೫೫

೧೧೧. ವಿ.ಜೆ.ಅಲ್ವೆ, "ದೇವರು ಮೆಚ್ಚುವ ಕೆಲಸ" ಎಡಿಟೋರಿಯಂ ಬೋರ್ಡ್ ಗೋಲ್ಡನ್ ಜ್ಯೂಬಿಲಿ ಸಾವೆಸೀಯರ್ ಡಾ. ಲೊಂಬಾರ್ಡ್ ಸ್ಮಾರಕ ಆಸ್ಪತ್ರೆ, ಉಡುಪಿ, ೧೯೭೩, ಪುಟ ೩೩

೧೧೨. ಡಾ.ಟಿ.ಎಂ.ಎ.ಪೈ, “ ಡಾ. ಲೊಂಬಾರ್ಡ್ ಆಂಡ್ ದ ಮಿಶನ್ ಹಾಸ್ಪಿಟಲ್”, ಎಡಿಟೋರಿಯಂ ಬೋರ್ಡ್ ಗೋಲ್ಡನ್ ಜುಬಿಲಿ ಸಾವೆನಿಯರ್, ಮಿಶನ್ ಹಾಸ್ಪಿಟಲ್, ಉಡುಪಿ ೧೯೭೩, ಪುಟಗಳು ೨೯, ೩೦

೧೧೩. ಡಾ.ಗುರುರಾಜ್ ಭಟ್, “ ಇನ್ ಗ್ರಾಟಿಟ್ಯೂಡ್’ , ಪೂರ್ವೋಕ್ತ , ಪುಟ ೩೨

೧೧೪. ಪಿ.ಡಬ್ಲ್ಯು..ಪಿ., ಪೂರ್ವೋಕ್ತ, ಪುಟ ೧೮೧

# ಅಧ್ಯಾಯ- ೪

## ಸಮಾಜ ಸೇವೆ

ಕ್ರೈಸ್ತ ಧರ್ಮದ ಆಚರಣೆಯ ಮೂಲಭೂತ ವಿಷಯಗಳಲ್ಲಿ ಸಮಾಜ ಸೇವೆ ಪ್ರಧಾನ ಪಾತ್ರ ವಹಿಸುತ್ತದೆ. ಇದಕ್ಕೆ ಕಾರಣ ಯೇಸು ಕ್ರಿಸ್ತನ ಜೀವನ ಮತ್ತು ಭೋಧನೆ. ಹಸಿದವರಿಗೆ ಊಟವನ್ನೀಯುವವರು, ಬಾಯಾರಿದವರಿಗೆ ಕುಡಿಯಲು ಕೊಡುವವರು, ಪರದೇಶಿಯಾಗಿದ್ದವರಿಗೆ ಆಶ್ರಯ ಕೊಡುವವರು, ಬಟ್ಟೆ ಇಲ್ಲದವರಿಗೆ ಉಡುವುದಕ್ಕೆ ಕೊಡುವವರು, ರೋಗದಲ್ಲಿ ಬಿದ್ದವರನ್ನು ಆರೈಕೆ ಮಾಡುವವರು ಮಾತ್ರ ನೀತಿವಂತರೆಂದು ಪರಿಗಣಿಸಿ ದೇವರ ರಾಜ್ಯದಲ್ಲಿ ಸೇರಿಸಲ್ಪಡುವವರು ಎಂಬುದು ಯೇಸು ಸ್ವಾಮಿಯ ಬೋಧನೆ. (ಮತ್ತಾಯ ೨೫: ೩೪-೪೬). "ನನ್ನ ಸಹೋದರರಲ್ಲಿ ಕೇವಲ ಅಲ್ಪನಾದವನೊಬ್ಬನಿಗೆ ಏನೇನು ಮಾಡಿದಿರೊ, ಅದನ್ನು ನನಗೆ ಮಾಡಿದ ಹಾಗಾಯಿತು" (ಮತ್ತಾಯ ೨೫: ೪೦) ಎಂದು ಯೇಸು ಕ್ರಿಸ್ತನು ಸಾರಿರುವನು.[೧] ಅಂತೆಯೇ, 'ನಾ ಹಸಿದಿದ್ದೆ ನೀನು ನನಗೆ ಉಣ ಬಡಿಸಿದೆ. ನಾ, ಅನಾಥನಾಗಿದ್ದೆ ನೀ ನನಗೆ ಆಸರೆ ಕೊಟ್ಟೆ, ನಾ ಕಷ್ಟದಲ್ಲಿದ್ದೆ ನೀ ನನಗೆ ಆಧಾರವಾದೆ' ಎಂಬ ಮಾತಿಗೆ ಪೂರಕ ಎಂಬಂತೆ ಅನಾಥರ ಮತ್ತು ನಿರ್ಗತಿಕರ ನೋವಿಗೆ, ದುಃಖಕ್ಕೆ ಕ್ರೈಸ್ತರು ಪ್ರತಿಸ್ಪಂದಿಸುತ್ತಿದ್ದಾರೆ.[೨] ದಕ್ಷಿಣ ಕನ್ನಡ ಜಿಲ್ಲೆಗೆ ಸುವಾರ್ತಾ ಪ್ರಚಾರಕ್ಕಾಗಿ ಪರ ಊರಿನಿಂದ ಬಂದ ಮಿಶನರಿಗಳೂ, ಸ್ಥಳೀಯ ಧರ್ಮಗುರುಗಳೂ ಕ್ರಿಸ್ತನ ಆದೇಶಕ್ಕನುಗುಣವಾಗಿ ತಾವು ಹೋದೆಡೆಗಳಲ್ಲಿ ಅನಾಥಾಲಯಗಳನ್ನೋ, ಆಸ್ಪತ್ರೆ, ಶಾಲೆ, ವೃದ್ಧಾಶ್ರಮಗಳನ್ನೋ ಸ್ಥಾಪಿಸುತ್ತಾ ಬಂದಿದ್ದಾರೆ.

೧೮ ಹಾಗೂ ೧೯ನೇ ಶತಮಾನಗಳಲ್ಲಿ ಪ್ರೊಟೆಸ್ಟೆಂಟ್ ಕ್ರೈಸ್ತ ಮಿಶನರಿಗಳು ಭಾರತಕ್ಕೆ ಬಂದಾಗ ಭಾರತೀಯ ಮಹಿಳೆಯರ ಹೀನಸ್ಥಿತಿಯನ್ನು ಹಾಗೂ ಅವರನ್ನು ವಿವಿಧ ಧಾರ್ಮಿಕ ಹಾಗೂ ಸಾಮಾಜಿಕ ಸಂಕೋಲೆಗಳಿಂದ ಸಮಾಜ ಬಂಧಿಸಿರುವುದನ್ನು ಕಂಡು ಬೆರಗಾದರು. ಭಾರತೀಯ ಸಮಾಜದಲ್ಲಿ ಮಹಿಳೆಯರನ್ನು ಬಂಧನಕ್ಕೊಳಪಡಿಸಿದ ಸಾಮಾಜಿಕ ಪಿಡುಗುಗಳಾದ ಸತಿ ಪದ್ಧತಿ, ಬಾಲ್ಯವಿವಾಹ, ಒತ್ತಾಯದ ವಿಧವಾ ಜೀವನ, ದೇವದಾಸಿ ಪದ್ಧತಿ ಮುಂತಾದುವುಗಳನ್ನು ಕಂಡು ಪ್ರೊಟೆಸ್ಟೆಂಟ್ ಮಿಶನರಿಗಳು ಅವುಗಳನ್ನು ಕ್ರೂರ ಹಾಗೂ ಅಮಾನವೀಯ ಪದ್ಧತಿಗಳೆಂದು ಪರಿಗಣಿಸಿ ಆ ಕೆಡುಕುಗಳಿಂದ ಮಹಿಳೆಯರನ್ನು ವಿಮೋಚಿಸುವ ಕಾರ್ಯಕ್ಕೆ ಕೈ ಹಚ್ಚಿದರು. ಭಾರತದಲ್ಲಿನ ಸಾಮಾಜಿಕ ಸುಧಾರಣೆಗೂ ಮತ್ತು ಮಹಿಳೆಯರ ವಿಮೋಚನೆಗೂ ಶಿಕ್ಷಣವನ್ನು ಬಲವಾದ ಸಾಧನವನ್ನಾಗಿ

ಉಪಯೋಗಿಸಿದರು. ಪುರುಷರಿಗೆ ಮಾತ್ರ ಸೀಮಿತವಾಗಿದ್ದ ಶಿಕ್ಷಣವನ್ನು ಮೇಲ್ವರ್ಗದವರ ಬಲವಾದ ವಿರೋಧಗಳ ಮಧ್ಯದಲ್ಲಿಯೂ ಮಹಿಳೆಯರಿಗೂ ಕೊಟ್ಟದ್ದು ಅಂದು ಒಂದು ಸಾಮಾಜಿಕ ಕ್ರಾಂತಿಯೇ ಆಗಿತ್ತು. ಹೆಣ್ಣಿನ ಸ್ವಾತಂತ್ರ್ಯವನ್ನು ನಿರಾಕರಿಸಿದ ಆ ಸಂಸ್ಕೃತಿ ಅವಳಿಗೆ ವಿವಿಧ ಸಂಕೋಲೆಗಳಿಂದ ಬಿಗಿದು ಧ್ವನಿ ಎತ್ತದಂತೆ ಮಾಡಿತ್ತು. ಆದರೆ, ಕ್ರೈಸ್ತ ಮಿಶನರಿಗಳು ಅವರಿಗೆ ಕೊಟ್ಟ ಶಿಕ್ಷಣ, ಅವರು ತಮ್ಮ ಹಕ್ಕು ಸ್ವಾತಂತ್ರ್ಯಗಳಿಗಾಗಿ ಸಾಮಾಜಿಕ ನ್ಯಾಯ ಮತ್ತು ಸಮಾನತೆಗಾಗಿ ಸಮಾಜದಲ್ಲಿ ಧ್ವನಿಯೆತ್ತಲು ಬಲ, ಧೈರ್ಯ, ಮತ್ತು ಆತ್ಮ ವಿಶ್ವಾಸವನ್ನು ನೀಡಿತು.

ಭಾರತದಲ್ಲಿ ಕ್ರೈಸ್ತ ಧರ್ಮ ಸ್ವೀಕರಿಸಿದವರಲ್ಲಿ ಹೆಚ್ಚಿನವರು ಆರ್ಥಿಕವಾಗಿ ಬಡವರೂ, ಸಾಮಾಜಿಕವಾಗಿ ಹಿಂದುಳಿದವರೂ, ದುರ್ಬಲರೂ ಆಗಿದ್ದರು. ಆ ಕಾರಣದಿಂದ ಭಾರತದಲ್ಲಿಯ ಕ್ರೈಸ್ತರ ಬಡತನದ ಹಾಗೂ ಸಾಮಾಜಿಕ ದುಸ್ಥಿತಿಯ ಸಮಸ್ಯೆಯೂ ಸರ್ವಸಾಧಾರಣ ಭಾರತಕ್ಕೆ ಬಂದ ಎಲ್ಲ ಮಿಶನ್ನುಗಳನ್ನು ಕಾಡಿದೆ. ಭಾರತೀಯ ಕ್ರೈಸ್ತ ಸಮಾಜವನ್ನು ಒಂದು ಭದ್ರವಾದ ಆರ್ಥಿಕ ಅಸ್ತಿವಾರದ ಮೇಲೆ ಕಟ್ಟುವುದರ ಅವಶ್ಯಕತೆಯನ್ನು ಎಲ್ಲಾ ಮಿಶನ್ನುಗಳು ಮನಗಂಡವರಾಗಿದ್ದರೂ ಆ ಗುರಿಯನ್ನು ಸಾಧಿಸುವುದರಲ್ಲಿ ಮಿಶನ್ನುಗಳು ವಿವಿಧ ಪ್ರಯತ್ನಗಳನ್ನೂ, ಪ್ರಯೋಗಗಳನ್ನೂ ಮಾಡಿದವು. ಕೆಲವು ಮಿಶನ್ನುಗಳು ಹಲವು ಬಗೆಯ ಸಾಮಾಜಿಕ ಅಭಿವೃದ್ಧಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವು. ಆ ಎಲ್ಲಾ ಸಾಮಾಜಿಕ ಅಭಿವೃದ್ಧಿ ಕಾರ್ಯಗಳ ಪ್ರಯೋಜನವು ಕ್ರೈಸ್ತರಿಗಷ್ಟೇ ಅಲ್ಲದೆ ಇಡೀ ಸಮಾಜಕ್ಕೂ ಹಾಗೂ ದೇಶಕ್ಕೂ ಆಗಿದೆ ಎನ್ನಬಹುದು.

೧೯ನೇ ಶತಮಾನದ ದ್ವಿತೀಯಾರ್ಧದಲ್ಲಿ ಭಾರತದಲ್ಲಿ ಸಂಭವಿಸಿದ ಘೋರವಾದ ಬರಗಾಲಗಳಿಂದಾಗಿ ಅನೇಕ ಮಕ್ಕಳು ಅನಾಥರಾದರು ಮತ್ತು ಮಹಿಳೆಯರು ವಿಧವೆಯರಾದರು. ಹೀಗೆ ಅನಾಥರಾದ ಮಕ್ಕಳಿಗಾಗಿ, ಬಾಲಕ ಬಾಲಕಿಯರಿಗಾಗಿ ಮತ್ತು ವಿಧವೆಯರಿಗಾಗಿ ವಿವಿಧ ಮಿಶನ್ನುಗಳು ಅನಾಥಾಶ್ರಮಗಳನ್ನು, ವಿಧವಾಶ್ರಮಗಳನ್ನು, ಶಾಲೆಗಳನ್ನು ಸ್ಥಾಪಿಸಿದರು. ಅಲ್ಲಿ ಆಹಾರ ಬಟ್ಟೆಗಳನ್ನು ಒದಗಿಸಿದುದಲ್ಲದೆ ದೇವರ ವಾಕ್ಯದ ಬೋಧನೆಯನ್ನು ಕೊಟ್ಟು ಅವರನ್ನು ಕ್ರಿಸ್ತನ ಮಾರ್ಗದಲ್ಲಿ ಬೆಳೆಯುವಂತೆ ಮಾಡಿದರು. ಆದರೆ ಕೆಲವು ಆಶ್ರಮಗಳಲ್ಲಿ ಹಾಗೂ ಬೋರ್ಡಿಂಗ್ ಶಾಲೆಗಳಲ್ಲಿ ವಿವಿಧ ಬಗೆಯ ವೃತ್ತಿ ಶಿಕ್ಷಣವನ್ನು ನೀಡಿದರು. ಇಂಥ ಕೈಗಾರಿಕಾ ತರಬೇತಿ ಶಾಲೆಗಳ ಮುಖ್ಯ ಉದ್ದೇಶ ಶಿಸ್ತು ಹಾಗೂ ಸ್ವಾವಲಂಬನೆಯಾಗಿತ್ತು. ಬಾಲಕರಿಗಾಗಿ ಸ್ಥಾಪಿತವಾದ ಅನಾಥಾಶ್ರಮಗಳಲ್ಲಿಯೂ ಸಣ್ಣಪುಟ್ಟ ವೃತ್ತಿ ಕೌಶಲ್ಯಗಳನ್ನು ಕಲಿಸಲಾಗಿದೆ. ಏಕೆಂದರೆ ೧೪ ಅಥವಾ ೧೫ನೇ ವಯಸ್ಸಿನಲ್ಲಿ ಅವರು ಅನಾಥಾಶ್ರಮವನ್ನು ಬಿಟ್ಟು ಹೋಗುವಾಗ ತಮ್ಮ ಕಾಲ ಮೇಲೆ ತಾವು ನಿಂತುಕೊಳ್ಳುವ ಹಾಗೆ ಮಾಡಬೇಕು ಎಂಬುದು ಕೈಗಾರಿಕಾ ಶಾಲೆಗಳ ಉದ್ದೇಶವಾಗಿತ್ತು. ಇಂಥ ಶಾಲೆಗಳಲ್ಲಿ ಸಾಮಾನ್ಯವಾಗಿ

ಮರಗೆಲಸ, ಕಮ್ಮಾರ ಕೆಲಸ, ನೇಯ್ಗೆ, ಹೊಲಿಗೆ, ಚರ್ಮಕಾರ ಕೆಲಸ, ಕಲ್ಲು ಕಟ್ಟುವ ಕೆಲಸ, ಕಸೂತಿ ಹಾಕುವುದು, ಚಿತ್ರ ತೆಗೆಯವುದು, ತೋಟಗಾರಿಕೆ, ಅಚ್ಚು ಹಾಕುವುದು, ಬೈಂಡ್ ಮಾಡುವುದು ಮುಂತಾದ ಕಸುಬುಗಳಲ್ಲಿ ತರಬೇತಿ ಕೊಡಲಾಗಿದೆ. ಸಮಾಜ ಸೇವೆಯ ಭಾಗವಾಗಿ ಈ ಕೆಳಗಿನ ಸಂಸ್ಥೆಗಳನ್ನು ಆರಂಭಿಸಲಾಗಿದೆ.

### ೪.೧. ಅನಾಥಾಲಯಗಳು

ಸ್ಥಳೀಯ ಕ್ರೈಸ್ತ ಮಕ್ಕಳಿಗೆ ಶಿಕ್ಷಣ ಮತ್ತು ರಕ್ಷಣೆಯನ್ನು ನೀಡಲು ಕ್ರೈಸ್ತ ಮಿಶನ್‌ಗಳು ಅನಾಥಾಲಯಗಳನ್ನು ಅಥವಾ ವಸತಿ ಶಾಲೆಗಳನ್ನು ಸ್ಥಾಪಿಸಿದೆ. ಸನಿವಾಸ (ವಸತಿ) ಶಾಲೆಗಳಿಗೆ ಸೇರ್ಪಡೆಗೊಂಡ ಎಲ್ಲಾ ಮಕ್ಕಳೂ, ಖಚಿತವಾಗಿ ಹೇಳುವುದಾದರೆ, ಅನಾಥರಲ್ಲ. ಅವರಲ್ಲಿ ಕೆಲವರ ಹೆತ್ತವರು, ಇನ್ನೂ ಬದುಕಿರುವವರಾದರೂ, ಅವರ ಬಡತನದ ಕಾರಣಕ್ಕಾಗಿ ಆ ಶಾಲೆಗಳಲ್ಲಿ ಪ್ರವೇಶಾವಕಾಶ ಕಲ್ಪಿಸಲಾಗಿದೆ.[೩] ಕೆನರಾದ ಕಲೆಕ್ಟರ್ ಯೂರೋಪಿಯನ್ ಮೂಲದ ಇಬ್ಬರು ಹುಡುಗರನ್ನು ರೆವೆ. ಹೆಬಿಕ್ ಅವರ ವಶಕ್ಕೆ ಒಪ್ಪಿಸಿದಾಗ ಬಾಸೆಲ್ ಮಿಶನ್‌ನ ಮೊದಲ ಅನಾಥಾಲಯದ ಸ್ಥಾಪನೆಯಾಗಿದೆ. ಮಂಗಳೂರಿನಲ್ಲಿ ಹುಡುಗರು ಮತ್ತು ಹುಡುಗಿಯರಿಗೆ ಪ್ರತ್ಯೇಕ ಅನಾಥಾಲಯಗಳು ಇದ್ದವು. ೧೮೪೩ರಲ್ಲಿ ಕದಿಕೆಯಲ್ಲಿ ಹೆಣ್ಮಕ್ಕಳ ಶಾಲೆಯನ್ನು ಸ್ಥಳೀಯ ಕ್ರೈಸ್ತರ ಹೆಣ್ಣು ಮಕ್ಕಳಿಗಾಗಿ ಅಥವಾ ಮಿಶನ್ನಿನ ಪೋಷಣೆಯಲ್ಲಿದ್ದ ಅನಾಥ ಮಕ್ಕಳಿಗಾಗಿ ಆರಂಭಿಸಲಾಗಿದೆ. ಶ್ರೀಮತಿ ಗ್ರೀನ್ ಅವರ ಆಗಮನದ ಬಳಿಕ ಆ ಶಾಲೆಯನ್ನು ವಸತಿ ಶಾಲೆಯಾಗಿ ಪರಿವರ್ತಿಸಲಾಗಿದೆ. ಉತ್ತಮ ಕ್ರೈಸ್ತ ಪತ್ನಿಯರಾಗಿ ಮತ್ತು ತಾಯಂದಿರಾಗಿ ರೂಪುಗೊಳ್ಳಲು ಕಲಿಸುವುದು ಕದಿಕೆ ಶಾಲೆಯ ಉದ್ದೇಶವಾಗಿತ್ತು.[೪]

### ೪.೧.೧. ಸಿ.ಎಸ್.ಐ.ಹುಡುಗಿಯರ ಬೋರ್ಡಿಂಗ್ ಹೋಮ್, ಮೂಲ್ಕಿ

೧೮೫೭ರಲ್ಲಿ ಬಿ. ಜೀಗ್ಲರ್‌ರವರು ಹುಡುಗರ ಇನ್ನೊಂದು ವಸತಿ ಶಾಲೆಯನ್ನು ಮೂಲ್ಕಿಯಲ್ಲಿ ಆರಂಭಿಸಿದರು, ಆದರೆ ೧೮೭೩ರಲ್ಲಿ ಹುಡುಗರನ್ನು ಉಡುಪಿಗೆ ಸ್ಥಳಾಂತರಿಸಿ, ಮಂಗಳೂರಿನ ಅನಾಥಾಲಯದ ಹುಡುಗಿಯರನ್ನು ಮೂಲ್ಕಿಗೆ ವರ್ಗಾಯಿಸಲಾಯಿತು.[೫] ಮೂಲ್ಕಿಯಲ್ಲಿರುವ ಹೆಣ್ಣು ಮಕ್ಕಳು ಬೇಸಾಯ, ಅಡುಗೆ, ಕಸೂತಿ, ಹುರಿಹಗ್ಗ ತಯಾರಿ, ಹೈನುಗಾರಿಕೆ, ನೇಯುವುದು, ಹೊಲಿಗೆ, ಮಸಾಲೆ ಪುಡಿ ತಯಾರಿಸುವುದು ಮುಂತಾದವುಗಳನ್ನು ವಿದ್ಯಾಭ್ಯಾಸದೊಂದಿಗೆ ಕಲಿಯುತ್ತಿದ್ದು ಉತ್ತಮ ಗೃಹಿಣಿಯಾಗಿ ರೂಪುಗೊಳ್ಳುತ್ತಿದ್ದರು. ಮೂಲ್ಕಿಯಲ್ಲಿ ಮಿಸ್ಟರ್ ಓಟ್ಟ್ ಎಂಬುವರು ಬೇಸಾಯದಲ್ಲಿ ಒಂದು ಪ್ರಯೋಗವನ್ನು ನಡೆಸಿದರು, ಹೆಚ್ಚಿನ ಹುಡುಗಿಯರು ಕೃಷಿ ಕುಟುಂಬಕ್ಕೆ ಸೇರಿದವರಾಗಿದ್ದುದೇ

ಇದಕ್ಕೆ ಕಾರಣ. ಅವರು ಮಾಡಿದ ಪ್ರಯೋಗ ಯಶಸ್ವಿಯಾಗಿದೆ. ಆ ಮೂಲಕ ಅಲ್ಪ ದ್ರವ್ಯರೂಪದ ಲಾಭವನ್ನು ಮಾಡಲಾಯಿತು; ಆದರೂ ಮಕ್ಕಳಿಂದಾಗಿ ಆದ ಸಂಪಾದನೆಯ ಮಿತಿ ಮೀರಿದ ಮೌಲ್ಯ ಕಟ್ಟುವಂತಿಲ್ಲ.[೬] ಹುಡುಗಿಯರು ಹೊಲದ ಕೆಲಸ, ನಿತ್ಯ ಕೆಲಸ, ಕ್ಷೀರೋತ್ಪಾದನೆ, ಅಡುಗೆ ಕೆಲಸ ಮತ್ತು ಕಸೂತಿಗಳಲ್ಲಿ ಚೆನ್ನಾಗಿ ಪಳಗುವುದರ ಮೂಲಕ ರೈತರ ಬಾಳ ಸಂಗತಿಗಳಾಗಲು, ಸೇವಕಿಯರಾಗಿ ಜೀವನ ಸಾಗಿಸಲು ತಕ್ಕವರೆನಿಸಿದ್ದಾರೆ.[೭] ಪ್ರಸ್ತುತ ಅನಾಥ ಶಾಲೆಯು (೨೦೦೮)ಸಿ.ಎಸ್.ಐ. ಬಾಲಿಕಾಶ್ರಮ ಎಂಬ ಹೆಸರಿನಿಂದ ನಡೆಯುತ್ತಿದ್ದು ೭೫ ಮಕ್ಕಳು ಇದ್ದಾರೆ. ಈ ಹಿಂದೆ ಎಸ್.ಎಸ್.ಎಲ್.ಸಿ.ಅನುತ್ತೀರ್ಣಗೊಂಡ ಮಕ್ಕಳನ್ನು ಇಲ್ಲಿಟ್ಟುಕೊಂಡು ಹೊಲಿಗೆ ತರಬೇತಿ ಮುಂತಾದವುಗಳಿಗೆ ಕಳುಹಿಸಲಾಗುತ್ತಿತ್ತು. ಆದರೆ ಈಗ ಉತ್ತೀರ್ಣಗೊಂಡ ಆಯ್ದ ಮಕ್ಕಳಿಗೆ ಮಾತ್ರ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಅವಕಾಶ ಕಲ್ಪಿಸಲಾಗುತ್ತಿದೆ.

೧೯೮೮ರಲ್ಲಿ ಮಹಿಳೆಯರಿಗಾಗಿ ವೃತ್ತಿ ತರಬೇತಿ ಕೇಂದ್ರ ಬಾಲಿಕಾಶ್ರಮದ ಉಸ್ತುವಾರಿಯಲ್ಲಿ ೧೩ ಹೆಣ್ಮಕ್ಕಳೊಂದಿಗೆ ಸ್ಥಾಪನೆಯಾಗಿದೆ. ಎಸ್.ಎಸ್.ಎಲ್.ಸಿ. ಅನುತ್ತೀರ್ಣಗೊಂಡ ಹೆಣ್ಮಕ್ಕಳ ತರಬೇತಿಗೆಂದು ಸ್ಥಾಪನೆಯಾದ ಆ ಸಂಸ್ಥೆಯಲ್ಲಿ ಈ ಹಿಂದೆ ಮೈಸೂರು, ಹಾಸನ, ಮಡಿಕೇರಿ, ಮಂಡಗದ್ದೆ ಮುಂತಾದ ಕಡೆಗಳಿಂದ ಮಕ್ಕಳನ್ನು ತರಿಸಿ ಅವರಿಗೆ ಬಾಲಿಕಾಶ್ರಮದಲ್ಲಿ ವಾಸ್ತವ್ಯ ಕಲ್ಪಿಸಿ ಅಲ್ಲಿ ತರಬೇತಿ ನೀಡಲಾಗುತ್ತಿತ್ತು. ಅಲ್ಲದೆ ಆಗ ಅಲ್ಲಿ ತರಬೇತಿ ಪಡೆಯುತ್ತಿದ್ದ ಮಕ್ಕಳನ್ನು ಹತ್ತಿರವಿರುವ ಅನುದಾನಿತ ಸಂಸ್ಥೆಯ ಮೂಲಕ ಪರೀಕ್ಷೆಗೆ ಹಾಜರುಪಡಿಸಿ ಸರಕಾರದ ಅರ್ಹತಾ ಪತ್ರಗಳನ್ನು ಕೊಡಿಸಲಾಗುತ್ತಿದ್ದು ಪಾಸಾದವರಿಗೆ ಹೊಲಿಗೆ ಯಂತ್ರವನ್ನು ತೆಗೆದುಕೊಟ್ಟು ಅವರು ಸ್ವಂತ ಉದ್ದಿಮೆಯಲ್ಲಿ ತೊಡಗುವಂತೆ ಕ್ರಮ ಕೈಗೊಳ್ಳಲಾಗುತ್ತಿತ್ತು. ಪ್ರಸ್ತುತ ಇಲ್ಲಿ ಸ್ಥಳೀಕರಿಗೆ ಮಾತ್ರ ತರಬೇತಿ ನೀಡಲಾಗುತ್ತಿದ್ದು ೨೦ ಮಕ್ಕಳು ಎಂಬ್ರೈಡರಿ, ಗ್ಲಾಸ್ ಪೈಂಟಿಂಗ್, ಫ್ಯಾಬ್ರಿಕ್ ಪೈಂಟಿಂಗ್, ಹೊಲಿಗೆ, ಕ್ರೋಸ್ ಸ್ಟಿಚ್, ಗೊಂಬೆ ತಯಾರಿ ಇತ್ಯಾದಿ ನೀಡುತ್ತಿದ್ದಾರೆ.[೮] ದೇಶದಲ್ಲಿ ಮಹಿಳೆಯರ ಸ್ಥಾನಮಾನವನ್ನು ಎತ್ತರಿಸುವಲ್ಲಿ ಸಣ್ಣದಾದರೂ ಗಣನೀಯ ಪ್ರಯತ್ನವನ್ನು ಸಭೆ ಮತ್ತು ವಿಸ್ತಾರವಾದ ಜನಸಮುದಾಯ ಮಾಡಿದೆ. ಆ ಅವಕಾಶವನ್ನು ಒದಗಿಸಿಕೊಟ್ಟ ಸಮಾಧಾನವು ಮಿಶನ್ ಸಂಸ್ಥೆಗಿದೆ.[೯]

### ೪.೧.೨. ಸಿ.ಎಸ್.ಐ.ಬಾಲಕರ ಬೋರ್ಡಿಂಗ್ ಹೋಮ್, ಉಡುಪಿ

ಉಡುಪಿಯಲ್ಲಿರುವ, ಅನಾಥಾಲಯದ ಉದ್ದೇಶ ಪರಿತ್ಯಕ್ತರನ್ನು ರಕ್ಷಿಸುವುದು, ಹೆತ್ತವರಲ್ಲಿ ಯಾರಾದರೊಬ್ಬರನ್ನು ಅಥವಾ ಇಬ್ಬರನ್ನು ಕಳೆದುಕೊಂಡ ಹುಡುಗರಿಗೆ ಒಂದು ವಾಸಸ್ಥಾನವನ್ನು ಒದಗಿಸುವುದು, ಯಾರ ಹೆತ್ತವರು ದುಷ್ಟರ ಒಡನಾಟಕ್ಕೆ ಗುರಿಯಾಗಿರುವರೋ ಅಂಥವರ ಮಕ್ಕಳನ್ನು ಆಸರೆ ನೀಡಿ ಸರಿ ದಾರಿಯಲ್ಲಿ ಮುನ್ನಡೆಸುವುದು ಮತ್ತು ದಾರಿ ತಪ್ಪಿದ ತಾಣಗಳಲ್ಲಿ ಜೀವನ ಸಾಗಿಸುತ್ತಿರುವ ಕುಟುಂಬಗಳಲ್ಲಿನ ಹುಡುಗರಿಗೆ ವಿದ್ಯಾಭ್ಯಾಸ ನೀಡುವುದು ಇವೇ ಆಗಿವೆ.[೧೦] ಉಡುಪಿಯ

ಹುಡುಗರ ಅನಾಥಾಲಯವನ್ನು ಕೈಗಾರಿಕಾ ಕಾರ್ಯಗಾರ ಮತ್ತು ಕೃಷಿ ಫಾರ್ಮ್‌ಗೆ ಜೋಡಿಸಿ, ಹುಡುಗರಿಗೆ ಇಲ್ಲಿ ವಿಬಿನ್ನ ತಂತ್ರಗಾರಿಕೆಗಳನ್ನು ಕಲಿಸಲಾಗುತ್ತಿತ್ತು.[೧೧] ಉಡುಪಿಯಲ್ಲಿನ ಅನಾಥಾಲಯವು ಮಿ। ಹಾರ್ಟ್‌ಮನ್ನ್‌ರ ನಿರ್ದೇಶನದಂತೆ, ಓರ್ವ ಶಾಲಾ ಅಧ್ಯಾಪಕ ಮತ್ತು ಒಬ್ಬಾತ ಮೇಲ್ವಿಚಾರಕರ ಸಹಾಯದಿಂದ ಪ್ರಾರಂಭಗೊಂಡಿದೆ, ಈ ಸಂಸ್ಥೆಯ ಉಸ್ತುವಾರಿಯಲ್ಲಿ ಭಾಗಶಃ ಪಾಲ್ಗೊಂಡ ಮಿ। ಬ್ರಾಷೆ ಎಂಬುವರು ೫೮ ಹುಡುಗರನ್ನು ನೋಡಿಕೊಳ್ಳುವ ಹೊಣೆಯನ್ನು ಹೊತ್ತುಕೊಂಡರು. ಇವರಲ್ಲಿ ೮ ಮಂದಿಗೆ ಸನ್ನಾಹ ಶಾಲೆಗೆ ಸೇರಲು ಸಾಧ್ಯವಾಗಿದೆ. ಅವರಲ್ಲಿ ಮೂವರು ವಿವಿಧ ವೃತ್ತಿಗಳನ್ನು ಕಲಿತ್ತಿದ್ದಾರೆ. ಅಬ್ರಹಾಂ ಎಂಬೊಬ್ಬ ಅಂಧ ಬಾಲಕ ಸಹ ನೇಯ್ಗೆ ವಿಭಾಗದಲ್ಲಿ ವೃತ್ತಿ ತರಬೇತಿ ಪಡೆದಿದ್ದಾನೆ. ಈ ಹುಡುಗರೆಲ್ಲ ಭಾಗಶಃ ಬಹಳ ಬಡವರ ಮಕ್ಕಳು. ವಿಶೇಷವಾಗಿ ಕೆಲವು ಹೆತ್ತವರ ಕುರಿತಾಗಿ ಹೇಳುವುದಾದರೆ, ಯಾರ ವಿಶ್ವಾಸರ್ಹತೆಯು ಸಂದೇಹಾಸ್ಪದವಾಗಿದೆಯೋ ಅಂಥವರ ಆದಷ್ಟು ಹೆಚ್ಚು ಹುಡುಗರನ್ನು ವಸತಿ ಶಾಲೆಗೆ ಸೇರಿಸಲು ಪ್ರಯತ್ನಿಸಿ ಅವರಿಗೆ ದೇವರ ಹತ್ತು ಕಟ್ಟಳೆಗಳು ಹಾಗೂ ಪ್ರಭು ಯೇಸು ಕ್ರಿಸ್ತರ ಪ್ರಾರ್ಥನೆಯನ್ನು ಕಲಿಸಲಾಗುತ್ತದೆ. ಇದರಿಂದಾಗಿ, ಅವರ ಹೆತ್ತವರು ಒಂದು ವೇಳೆ ತಮ್ಮ ಹಿಂದಿನ ಧರ್ಮಕ್ಕೆ ಮತ್ತೊಮ್ಮೆ ಮರಳಿದರೂ ಮುಂದೊಂದು ದಿನ ಫಲ ನೀಡಬಲ್ಲಂಥ ಬೀಜವನ್ನು ಅವರ ಹೃದಯದಲ್ಲಿ ಈಗಲೇ ಬಿತ್ತಿದಂತಾಗುವುದು.[೧೨] ಎಂಟು ವರ್ಷಗಳ ಹಿಂದಿನ ಬರಗಾಲದ ದಿನಗಳಲ್ಲಿ ರಕ್ಷಿಸಲ್ಪಟ್ಟ ಹುಡುಗರು ಇಲ್ಲಿ ಆಗ ಬೆಳೆಯುತ್ತಿದ್ದರು. ಅವರಲ್ಲಿ ಕೆಲವರು ತಮ್ಮ ಜೀವನವನ್ನು ಸ್ವತಂತ್ರವಾಗಿ ಸಾಗಿಸುವಷ್ಟು ದೊಡ್ಡವರು. ಅಂದಿನ ಮುಖ್ಯ ಆತಂಕ ಅವರಿಗೆ ನೆಲೆಯನ್ನು ಒದಗಿಸುವುದಾಗಿತ್ತು. ಈ ವಿಚಾರದಲ್ಲಿ ಆ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಸ್ಥಾಪನೆಯಾಗಿದ್ದ ಅನೇಕ ಅನಾಥಾಲಯಗಳ ಅಧಿಕಾರಿಗಳು ಮೂರು ನಿರ್ದಿಷ್ಟ ಕಾರ್ಯನೀತಿಗಳನ್ನು ಅನುಸರಿಸಿದ್ದಾರೆ. ಇವು ಕೆಲವು ಸಂದರ್ಭಗಳಲ್ಲಿ ರೋಮನ್ ಕಥೋಲಿಕರು ಅನುಸರಿಸಿದ ಕಾರ್ಯನೀತಿಗಳಾಗಿವೆ. ಇದರಿಂದ ಹುಡುಗರ ಸ್ಥಾನವು ಜೀತದ ಆಳುಗಳಿಗಿಂತ ಉತ್ತಮವಾಗಿರುವುದು. ಇದರರ್ಥ ಅವರ ಮೇಲೆ ಕ್ರೂರ ಅಧಿಕಾರವನ್ನು ಚಲಾಯಿಸಲಾಗುತ್ತಿತ್ತು ಎಂದೇನಲ್ಲ. ಆದರೆ ಅವರಿರುವ ಸ್ಥಾನದಲ್ಲಿ ಅವರಿಗೆ ಯಾವುದೇ ಸ್ವಾತಂತ್ರ್ಯವಿರಲಿಲ್ಲ. ಚರ್ಚುಗಳಲ್ಲಿ ಜಮೀನು ಇತ್ತು ಮತ್ತು ಆ ಜಮೀನಿನಲ್ಲಿ ಈ ಹುಡುಗರು ಕೂಲಿಯಾಳುಗಳಾಗಿ ದುಡಿಯುತ್ತಿದ್ದರು. ಆಹಾರಕ್ಕೆ ಮತ್ತು ಸ್ವಲ್ಪ ಬಟ್ಟೆಗೆ ಸಾಕಾಗುವಷ್ಟು ಮಾತ್ರ ಅವರಿಗೆ ದೊರೆಯುತ್ತಿತ್ತು. ಅವರಿಗೆ ಉಳಿತಾಯ ಮಾಡುವುದು ಸಾಧ್ಯವಿರಲಿಲ್ಲ. ಹೆಚ್ಚು ಮೇಲಕ್ಕೇರುವುದು ಕೂಡಾ ಅಸಾಧ್ಯವಾಗಿತ್ತು. ಅವರ ವಿವಾಹದ ನಂತರ ಅವರ ಮಕ್ಕಳ ಜವಾಬ್ದಾರಿಯನ್ನು ಕೂಡಾ ಚರ್ಚ್ ವಹಿಸಿಕೊಳ್ಳುತ್ತಿತ್ತು. ಅಂತಿಮವಾಗಿ ಆ ಮಕ್ಕಳನ್ನು ಕೂಡ ಅದೇ ರೀತಿಯ ಸ್ಥಾನಕ್ಕೆ (ಹೆತ್ತವರ ಸ್ಥಾನ) ಬರಮಾಡಿಕೊಳ್ಳುತ್ತಿತ್ತು. ಮಿತವ್ಯಯ, ಶಕ್ತಿ ಮತ್ತು ಪ್ರತಿಭೆಗೆ ಅವಕಾಶವಿರಲಿಲ್ಲ. ಅವರು ದೈನಂದಿನ ಕೆಲಸವನ್ನು ಮಾಡಿಕೊಳ್ಳಬೇಕು. ಹಾಗಿದ್ದರೆ ಅವರಿಗೆ ಬೇಕಾದುದನ್ನೆಲ್ಲಾ ಒದಗಿಸಲಾಗುವುದು. ಚರ್ಚಿನ

ಸಮೃದ್ಧತೆಯಲ್ಲಿ ಬದುಕುತ್ತಿದ್ದ ಅವರು ಯಾವಾಗಲೂ ಮತ್ತು ಆ ಕ್ಷಣಕ್ಕೆ ಕೆಲವೊಮ್ಮೆ ಮನಸ್ಸಿಲ್ಲದಿದ್ದರೂ, ಚರ್ಚಿನ ಶಿಸ್ತಿಗೆ ಒಗ್ಗಿಕೊಂಡಿರುತ್ತಿದ್ದರು.[೧೩]

ಎರಡನೆ ಕಾರ್ಯನೀತಿಯು ಮೊದಲನೆಯದರ ತತ್ತ್ವಕ್ಕಿಂತ ಅನ್ವಯತೆಯಲ್ಲಿ ಭಿನ್ನವಾಗಿದ್ದು, ಇದರಲ್ಲಿ ಮಿಶನ್ ಕಾರ್ಯಗಾರಗಳು (ವರ್ಕ್‌ಶಾಪ್) ಮತ್ತು ತೋಟ (ಫಾರ್ಮ್)ಗಳನ್ನು ಹೊಂದಿರುವುದಾಗಿದೆ. ಇದರಲ್ಲಿ ಯುವಕರಿಗೆ ಸೂಕ್ತ ಉದ್ಯೋಗ ದೊರೆಯುತ್ತದೆ. ಅವರ ಸಾಮರ್ಥ್ಯ ಮತ್ತು ದುಡಿಮೆಗೆ ಅನುಗುಣವಾಗಿ ಸದ್ಯದ ಮಾರುಕಟ್ಟೆ ದರದಲ್ಲಿ ವೇತನವನ್ನು ನೀಡಲಾಗುತ್ತಿತ್ತು. ಅವರು ಇಷ್ಟ ಬಂದಷ್ಟು ಸಂಪಾದಿಸಬಹುದು. ಅವರು ಬಯಸಿದಷ್ಟು ಖರ್ಚು ಮಾಡಬಹುದು. ಅವರ ಸ್ವಾತಂತ್ರ್ಯದಲ್ಲಿ ಬೇಕೆಂದೇ ಮಧ್ಯಪ್ರವೇಶಿಸುವಂತಿಲ್ಲ . ಈ ವ್ಯವಸ್ಥೆಯನ್ನು ಮಂಗಳೂರಿನಲ್ಲಿ ಬಾಸೆಲ್ ಮಿಶನ್ ಅನೇಕ ವರ್ಷಗಳ ಕಾಲ ಅನುಸರಿಸಿತ್ತು. ಪ್ರಾಯೋಗಿಕವಾಗಿ ನೋಡುವುದಾದರೆ, ಇಲ್ಲಿ ಮಿಶನ್ ವಾಣಿಜ್ಯ ಸಂಸ್ಥೆಯಾಗುವುದು ಮತ್ತು ಕಾರ್ಮಿಕರ ದೊಡ್ಡ ಉದ್ಯೋಗದಾತವಾಗುವುದು ಮತ್ತು ಕ್ರೈಸ್ತರು ಈ ಸಂಸ್ಥೆಯ ಸೇವಕರಾಗುವರು. ಲಾಭವಾದರೆ ಅದು ಮಿಶನ್ನಿನ ಪಾಲಿಗೆ, ಕಾರ್ಮಿಕರಿಗೆ ಅದು ಸಿಗುವುದಿಲ್ಲ. ಹೀಗೆ ಮಿಶನ್ ತನ್ನ ಸ್ವಂತದ ವಾಣಿಜ್ಯ ಯಶಸ್ಸಿನಿಂದ ಬೆಳೆಯಿತಲ್ಲದೆ, ಕ್ರೈಸ್ತ ಧರ್ಮ ಸ್ವೀಕರಿಸಿದವರ ಮಕ್ಕಳ ಮನಸ್ಸಿನ ಅರ್ಪಣೆಗಳಿಂದಲ್ಲ. ಮಿಶನ್ನಿಗೆ ವ್ಯಾಪಾರ ವೈಫಲ್ಯವುಂಟಾದರೆ ಕಾರ್ಮಿಕರನ್ನು ಬಿಟ್ಟು ಬಿಡಲಾಗುವುದು. ಮಿಶನ್ ತನ್ನ ಸದಸ್ಯರನ್ನು ಕಳೆದುಕೊಳ್ಳುವುದು ಅದೇ ರೀತಿ ಹಣವನ್ನು ಕೂಡಾ. ಅನಾಥಾಲಯದ ಹುಡುಗರ ಠರಾವಣೆಗೆ ಸಾಕಷ್ಟು ಟೀಕೆ ಮತ್ತು ವಿರೋಧಗಳನ್ನು ಈ ಮೇಲಿನ ಕಾರಣಕ್ಕಾಗಿ ವ್ಯಕ್ತಪಡಿಸಲಾಗಿದೆ.[೧೪]

ಆದರೆ 'ಅನಾಥಾಲಯದ ಹುಡುಗರ ಠರಾವಣೆ'ಯ ಉದ್ದೇಶವನ್ನು ಅರ್ಥೈಸಿಕೊಳ್ಳದೆ ತಪ್ಪಾಗಿ ವಿನಃ ಕಾರಣ ಅದನ್ನು ಟೀಕಿಸಲಾಗುತ್ತದೆ ಎಂಬ ಅಭಿಪ್ರಾಯವನ್ನು ಇ. ಡಯಾಜ್ ಎಂಬ ಮಿಶನರಿಯೊಬ್ಬರು ವ್ಯಕ್ತಪಡಿಸುತ್ತಾರೆ. ಅಲ್ಲದೆ ಠರಾವಣೆಯ ಉದ್ದೇಶವನ್ನು ಈ ಕೆಳಗಿನಂತೆ ವಿವರಿಸುತ್ತಾರೆ. ಕೆನರಾದಲ್ಲಿ ಹುಡುಗರ ಅನಾಥಾಲಯಗಳೊಂದಿಗೆ ಜಮೀನು ಜೋಡಿಸಿಕೊಳ್ಳಲಾಗಿತ್ತು. ಆದರೆ ಹುಡುಗರು ದೊಡ್ಡವರಾದ ಮೇಲೆ ಇಲ್ಲಿ ಕೆಲಸ ಮಾಡಬೇಕಾಗಿರಲಿಲ್ಲ. ಅವರು ಸಂಸ್ಥೆಯಲ್ಲಿದ್ದಾಗ ಹಿತಕರವಾದ ಮತ್ತು ಆರೋಗ್ಯಕರವಾದ ಮರುಸೃಷ್ಟಿಗೆ ಅನುಕೂಲವಾಗುವಂತೆ ಇವು ಇರುತ್ತಿದ್ದವು. ಜೊತೆಗೆ ಅವರಿಗೆ ತೋಟಗಾರಿಕೆಯನ್ನು ಕಲಿಸಲು ಮತ್ತು ಅದರಲ್ಲಿ ಅಭಿರುಚಿ ಹುಟ್ಟಿಸಲು ಕೂಡಾ ಇದರ ಉಪಯೋಗ ಇರುತ್ತಿತ್ತು.[೧೫] ಇದನ್ನು 'ಅನಾಥಾಲಯದ ಹುಡುಗರ ಠರಾವಣೆ' ಎಂದು ಕರೆಯಲಾಗುತ್ತಿತ್ತು.[೧೬]

ಹುಡುಗರು ೧೪ ಅಥವಾ ೧೫ ವರ್ಷದವರಾದಾಗ ಮತ್ತು ಅನಾಥಾಲಯವನ್ನು ಬಿಟ್ಟು ಹೋಗುವ ಸಿದ್ಧತೆಯಲ್ಲಿದ್ದಾಗ ಅವರಿಗೆ ಕೆಲವೊಂದು ಉದ್ಯೋಗವನ್ನು ಖಾತರಿ ಪಡಿಸಲಾಗುತ್ತಿತ್ತು. ಈ ನಿರ್ಧಾರವನ್ನು ಹುಡುಗರ ಆಸಕ್ತಿ ಮತ್ತು ಸಾಮರ್ಥ್ಯದ ಕುರಿತು ಅವರೊಂದಿಗೆ ಸಮಾಲೋಚನೆ ನಡೆಸಿದ ನಂತರವೇ ಕೈಗೊಳ್ಳಲಾಗುತ್ತಿತ್ತು. ಕೆಲವರು ಅವರ ಶಿಕ್ಷಣವನ್ನು ಮುಂದುವರಿಸುವ ಇಚ್ಛೆಯನ್ನು ಹೊಂದಿದವರಾಗಿರಬಹುದು. ನಂತರ ಇವರು ಶಿಕ್ಷಕರು, ಓದುಗರು ಮತ್ತು ಉಪದೇಶಿಗಳಾಗುತ್ತಾರೆ; ಇನ್ನು ಕೆಲವರು ಕೆಲವು ವ್ಯವಹಾರಗಳಲ್ಲಿ ತರಬೇತುದಾರರಾಗಲು ಬಯಸುತ್ತಾರೆ, ಉಳಿದವರು ತೋಟದ ಕಾರ್ಮಿಕರು, ಹಗಲು ಕಾರ್ಮಿಕರು ಮತ್ತು ಸೇವಕರಾಗಿರಲು ಇಷ್ಟಪಡುತ್ತಾರೆ. ಬಡಗಿ, ಕಮ್ಮಾರ ಇತ್ಯಾದಿಗಳಾಗಿ ತರಬೇತಿ ಹೊಂದಿದವರು ಮಂಗಳೂರಿನ ಯಾಂತ್ರಿಕ ಸಂಸ್ಥೆಯನ್ನು ಬಿಟ್ಟು ಹೊರಗೆ ಸ್ವತಂತ್ರ ಕೆಲಸಗಾರರಾಗಿ ದುಡಿಯುತ್ತಾರೆ. ಹಾಗಿದ್ದರೂ ಅನೇಕ ಮಂದಿ ಸ್ವತಂತ್ರವಾಗಿ ಬಡಗಿ, ಕಮ್ಮಾರ ಇತ್ಯಾದಿಗಳಾಗಿ ಅನಿಶ್ಚಿತ ವರಮಾನವನ್ನು ಪಡೆಯುವುದಕ್ಕಿಂತ, ಉದ್ಯೋಗಿಗಳಾಗಿ ನಿಶ್ಚಿತ ಆದಾಯವನ್ನು ಪಡೆಯಲು ಬಯಸುತ್ತಾರೆ.[೧೭] ಇದು ಸಮಾಜ ಸೇವಾ ಕ್ಷೇತ್ರಕ್ಕೆ ಬಾಸೆಲ್ ಮಿಶನ್ನಿನ ಅತ್ಯಂತ ದೊಡ್ಡ ದೇಣಿಗೆ ಆಗಿದೆ.[೧೮] ಅನಾಥಾಶ್ರಮಗಳು, ಹೆಚ್ಚೆಂದರೆ ವಾಸಸ್ಥಾನದ ಒಂದು ಬದಲಾವಣೆ ಮತ್ತು ನಿರ್ಗತಿಕ ಮಕ್ಕಳಿಗೆ ವಾಸಕ್ಕೊಂದು ಮನೆ ಒದಗಿಸುವ ಒಂದು ಸಣ್ಣ ಪ್ರಯತ್ನ ಅಷ್ಟೇ. ಕುಟುಂಬಗಳಲ್ಲಿ ಬೆಳೆದು ಬಂದ ಮಕ್ಕಳು ಜಗತ್ತನ್ನು ಧೈರ್ಯದಿಂದ ಎದುರಿಸುವಲ್ಲಿ ಎದುರಾದ ಕಷ್ಟ ಸಂಕಷ್ಟ ಹಾಗೂ ಮತ್ತಿತರ ಆಕರ್ಷಣೆಗಳ ವಿರುದ್ಧ ಹೋರಾಡುವಲ್ಲಿ ಅನಾಥಾಶ್ರಮದ ಮಕ್ಕಳಿಗಿಂತ ಎಷ್ಟೋ ಪಾಲು ಮೇಲು ಎಂಬುದು ಸ್ಪಷ್ಟ.[೧೯] ಇಂದಿಗೂ ಕಾರ್ಯನಿರ್ವಹಿಸುತ್ತಿರುವ ಈ ನಿಲಯದಲ್ಲಿ ಪ್ರಸ್ತುತ ೫೦ಕ್ಕಿಂತ ಹೆಚ್ಚಿನ ಬಡವಿದ್ಯಾರ್ಥಿಗಳಿದ್ದು ರೆವೆ. ಸ್ಟೀವನ್ ಸರ್ವೋತ್ತಮರವರು ಅದರ ಮೇಲುಸ್ತುವಾರಿ ನೋಡಿಕೊಳ್ಳುತ್ತಾರೆ.

### ೪.೧.೩. ಸಿ.ಎಸ್.ಐ.ಬಾಲಕರ ಬೋರ್ಡಿಂಗ್ ಹೋಮ್, ಪುತ್ತೂರು

೧೮೪೮ರಲ್ಲಿ ಬಾಸೆಲ್ ಮಿಶನ್ ಸಂಸ್ಥೆಯು, ಪುತ್ತೂರಿನ ಮಂಜಲ್ಪಡ್ಪುವಿನಲ್ಲಿ ತನ್ನ ಧಾರ್ಮಿಕ ಮತ್ತು ಶೈಕ್ಷಣಿಕ ಕೇಂದ್ರಗಳನ್ನು ತೆರೆದಿದೆ. ಪುತ್ತೂರು ಕ್ಷೇತ್ರವು, ಮಿಶನರಿಗಳ ಮುಖ್ಯ ಠಾಣ್ಯವಾಗಿದ್ದುದರಿಂದ ಅಲ್ಲೊಂದು ಬಂಗಲೆಯನ್ನು ಕಟ್ಟಲಾಗಿದೆ. ಮುಂದೆ ನಿರ್ಗತಿಕ ಮಕ್ಕಳಿಗಾಗಿ ಅಲ್ಲೊಂದು ಬಾಲಕರ ಅನಾಥಾಶ್ರಮವನ್ನು ಕಟ್ಟುವ ಯೋಜನೆಯನ್ನು ಬಾಸೆಲ್ ಮಿಶನರಿಗಳಾದ ರೆವೆ. ವೈಗಲ್‌ರವರು ೨೦ನೇ ಶತಮಾನದ ಮಧ್ಯಭಾಗದಲ್ಲಿ ಕಾರ್ಯರೂಪಕ್ಕೆ ತಂದರು. ತಮ್ಮ ಯೋಜನೆಯಂತೆ ೧೯೬೧ರಲ್ಲಿ ರೆವೆ. ವೈಗಲ್‌ರವರು, ರೆವೆ. ಡಿ.ಪಿ.ಶೆಟ್ಟಿಯಾನ್‌ರವರನ್ನು ಪುತ್ತೂರು ಸಭೆ ಮತ್ತು ಅನಾಥಾಶ್ರಮದ ಮುಖ್ಯಸ್ಥರನ್ನಾಗಿ ಕಳುಹಿಸಿದರು. ೧೯೬೧ರಂದು ಬಾಲಕರ ಈ ಅನಾಥಾಶ್ರಮವನ್ನು ೧೬ ಮಕ್ಕಳೊಂದಿಗೆ ಆರಂಭಿಸಿದ್ದರು. ಅನಾಥಾಲಯದ ಹೊಣೆ ಹೊತ್ತ ರೆವೆ.

ಶೆಟ್ಟಿಯಾನ್‌ರವರಿಗೆ, ಈ ಕಾರ್ಯದಲ್ಲಿ ಅವರ ಪತ್ನಿ ಶ್ರೀಮತಿ ಡೋರತಿ ಶೆಟ್ಟಿಯಾನ್‌ರವರು ನೆರವಾಗಿದ್ದಾರೆ. ಪ್ರಸ್ತುತ ಈ ನಿಲಯದಲ್ಲಿ ೫೦ಕ್ಕಿಂತಲೂ ಹೆಚ್ಚು ಬಡ ವಿದ್ಯಾರ್ಥಿಗಳಿದ್ದು ಚಂದ್ರಶೇಖರ್‌ರವರು ಅದರ ಮೇಲುಸ್ತುವಾರಿ ನೋಡಿಕೊಳ್ಳುತ್ತಿದ್ದಾರೆ. ಯಾವುದೇ ಜಾತಿ, ಮತ, ಬೇಧವಿಲ್ಲದೆ ನಿರ್ಗತಿಕ ಮತ್ತು ಬಡ ಕುಟುಂಬಗಳ ಬಾಲಕರನ್ನು ಈ ಅನಾಥಾಶ್ರಮಕ್ಕೆ ಸೇರಿಸಿಕೊಳ್ಳಲಾಗುತ್ತಿದ್ದು, ಅವರಿಗೆ ಊಟ, ವಸತಿ, ಬಟ್ಟೆ, ಪುಸ್ತಕ ಮತ್ತು ಶಿಕ್ಷಣ ನೀಡಲಾಗುವುದಲ್ಲದೇ, ಅವರ ಆಸಕ್ತಿಗೆ ಅನುಗುಣವಾದ ಔದ್ಯೋಗಿಕ ತರಬೇತಿ ಕೊಟ್ಟು ಅವರೆಲ್ಲರೂ ಸ್ವಯಂ ಉದ್ಯೋಗವನ್ನು ಮಾಡುವಂತ ವ್ಯವಸ್ಥೆಯನ್ನು ಇಲ್ಲಿ ಕಲ್ಪಿಸಿಕೊಡಲಾಗಿದೆ. ಕಳೆದ ೫೦ ವರ್ಷಗಳ ಕಾಲ ಅಸ್ಥಿತ್ವದಲ್ಲಿರುವ ಈ ನಿಲಯದಲ್ಲಿ ಸುಮಾರು ೫೦೦ಕ್ಕಿಂತಲೂ ಹೆಚ್ಚಿನ ಮಕ್ಕಳು ನೆಲೆಸಿ, ಇಂದು ಸಮಾಜದ ನಾನಾ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ನಿರ್ಗತಿಕ ಮತ್ತು ಬಡ ಬಾಲಕರಿಗೆ ಆಶ್ರಯ ನೀಡಿ ಅವರ ಮುಂದಿನ ಬಾಳಿಗೆ ದಾರಿ ತೋರಿಸುವ ಈ ಅನಾಥಾಶ್ರಮವು, ಬಾಸೆಲ್ ಮಿಶನ್ ಸಂಸ್ಥೆಯ ಸಾಮಾಜಿಕ ಪರಿಕಲ್ಪನೆಯ ಕೊಡುಗೆಯಾಗಿದೆ.[೨೦] ಪ್ರಸ್ತುತ ಚರ್ಚಸ್ ಕೌನ್ಸಿಲ್ ಫಾರ್ ಚೈಲ್ಡ್ ಎಂಡ್ ಯೂತ್ ಕೇರ್ ಹಾಗೂ ಸರಕಾರದ ಆಂಶಿಕ ನೆರವಿನಿಂದ ಈ ಸಂಸ್ಥೆ ನಡೆಯುತ್ತಿದೆ.[೨೧]

### ೪.೧.೪. ಸಿ.ಎಸ್.ಐ. ಹೆಣ್ಣು/ಗಂಡು ಮಕ್ಕಳ ಬೋರ್ಡಿಂಗ್ ಹೋಮ್, ಕೊಡಗು

ಹೆಣ್ಣುಮಕ್ಕಳ ಪಾಲನೆಗಾಗಿ ಸಿ.ಎಸ್.ಐ. ಹೆಣ್ಣು ಮಕ್ಕಳ ಬೋರ್ಡಿಂಗ್ ಹೋಮ್ ಮಡಿಕೇರಿಯಲ್ಲಿ ಹಾಗೂ ಬಾಲಕರ ಉಪಯೋಗಕ್ಕಾಗಿ ಸಿ.ಎಸ್.ಐ. ಬಾಲಕರ ಬೋರ್ಡಿಂಗ್ ಹೋಮ್ ಕೊಡಗು ಜಿಲ್ಲೆಯ ಆನಂದಪುರದಲ್ಲಿ ಕ್ರಮವಾಗಿ ೧೯೬೫ ಮತ್ತು ೧೯೭೫ರಲ್ಲಿ ಸ್ಥಾಪಿಸಲಾಗಿದೆ. ಕೌನ್ಸಿಲ್ ಫಾರ್ ಚೈಲ್ಡ್ ಎಂಡ್ ಯೂತ್ ಕೇರ್ ಹಾಗೂ ನಗರದ ದೊಡ್ಡ ಸಭೆಗಳಿಂದ ನೆರವು ಲಭಿಸುತ್ತಿದೆ.[೨೨]

ಈ ರೀತಿಯಲ್ಲಿ ಬಾಸೆಲ್ ಮಿಶನ್ ಸಭೆಯವರು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಉಡುಪಿ, ಮೂಲ್ಕಿ, ಪುತ್ತೂರು ಹಾಗೂ ಕೊಡಗು ಜಿಲ್ಲೆಯ ಮಡಿಕೇರಿ ಮತ್ತು ಆನಂದಪುರಗಳಲ್ಲಿ ಬಡ ಹುಡುಗರ ಮತ್ತು ಹುಡುಗಿಯರ ವಸತಿಗಾಗಿ ಅನಾಥಾಲಯಗಳನ್ನು ಸ್ಥಾಪಿಸಿ ಅವರ ಶೈಕ್ಷಣಿಕ, ಧಾರ್ಮಿಕ, ಆರ್ಥಿಕ ಅಗತ್ಯತೆಗಳನ್ನು ಪೂರೈಸಿ ಅವರು ಮುಂದೆ ಸಮಾಜದ ಮುಖ್ಯವಾಹಿನಿಗೆ ಬಂದು ಗೌರವದಿಂದ ಜೀವಿಸಲು ನೆರವನ್ನು ನೀಡಿದರು.

### ೪.೧.೫. ಸ್ಯೆಂಟ್ ಜೋಸೆಫ್ಸ್ ಅನಾಥಾಲಯ, ಜೆಪ್ಪು

ಕಾರ್ಮೆಲೈಟ್ ಧರ್ಮಗುರು ಫಾ। ಪೌವ್ಲ್‌ರವರಿಂದ ೧೮೮೨ರಲ್ಲಿ ಒಂದು ಸಣ್ಣ ಔಷಧಾಲಯವಾಗಿ ಆರಂಭಗೊಂಡ ಸ್ಯೆಂಟ್ ಜೋಸೆಫ್ಸ್ ಅನಾಥಾಲಯ, ೧೮೮೩ರಲ್ಲಿ ಯೇಸುಸಭೆಗೆ

ಹಸ್ತಾಂತರಿಸಲಾಗಿದೆ. ಯೇಸುಸಭೆಯ ಧರ್ಮಗುರು ಫಾ। ಅಗಸ್ಟೊ ದಯಾಮಾಂಟಿ ಅವರು ತಮ್ಮಲ್ಲಿ ಆಶ್ರಯ ಬೇಡಿ ಬಂದ ಅನಾಥರಿಗೆ ಆಧಾರವಾಗಲೆಂದು ಕೆಲವು ಗುಡಿಸಲುಗಳನ್ನು ನಿರ್ಮಿಸಿದರು. ೧೮೯೮ರಲ್ಲಿ, ಧರ್ಮಭಗಿನಿಯರ ಆಗಮನವಾದಾಗ, ಈ ಅನಾಥಾಶ್ರಮವು ಚಿಕ್ಕದಾದ, ಮಣ್ಣಿನ ಗೋಡೆಗಳನ್ನು ಹೊಂದಿದ ಕೆಲವು ಗುಡಿಸಲುಗಳ ಸಮೂಹವಾಗಿತ್ತು. ಅವುಗಳಲ್ಲಿ ಸುಮಾರು ೧೦೦ ಮಂದಿ ಆರ್ತರಿದ್ದರು, ಯೇಸುಸಭೆಯ ಕೈ ಕೆಳಗೆ ಕಾರ್ಯನಿರ್ವಹಿಸುತ್ತಿದ್ದ ಆ ಅನಾಥಾಶ್ರಮದಲ್ಲಿ ಕೆಲವು ಹುಡುಗರೂ ವಾಸವಾಗಿದ್ದರು. ಈ ಅನಾಥ ಮಕ್ಕಳ, ನಿರಾಶ್ರಿತ ಗಂಡಸರ ಮತ್ತು ಹೆಂಗಸರ ಯೋಗಕ್ಷೇಮವನ್ನು, ಅರ್ಸುಲಾಯ್ನ್ ಟೆರ್ಶರೀಸ್ ಸಭೆಯವರು ನೋಡಿಕೊಳ್ಳುತ್ತಿದ್ದರು. ಇವರಿಂದ ಈ ಅನಾಥಾಶ್ರಮದ ಮೇಲುಸ್ತುವಾರಿ ಸಿಸ್ಟರ್ಸ್ ಆಫ್ ಚಾರಿಟಿಯವರಿಗೆ ಹಸ್ತಾಂತರಿತವಾದಾಗ ಅರ್ಸುಲಾಯ್ನ್ ಧರ್ಮಭಗಿನಿಯರಲ್ಲೊಬ್ಬಾಕೆ ಸಿಸ್ಟರ್ಸ್ ಆಫ್ ಚಾರಿಟಿ ಸಭೆಯನ್ನು ಸೇರಿ ಅನಾಥಾಶ್ರಮವನ್ನು ನಿರ್ವಹಿಸುವ ಕಾರ್ಯದಲ್ಲಿ ನೆರವಾದರು.

ಅನಾಥಾಶ್ರಮದ ಜವಾಬ್ದಾರಿ ವಹಿಸಿಕೊಂಡ ಬಳಿಕ ಆರ್ತರ, ಅನಾರೋಗ್ಯ ಪೀಡಿತರ ಸೇವೆಯು, ಧರ್ಮಭಗಿನಿಯರಿಂದ ನಡೆದೇ ಇತ್ತು. ಆದರೆ ಬೆಳೆಯುತ್ತಿದ್ದ ಹುಡುಗಿಯರ ವಿಚಾರ ಗಮನಾರ್ಹವೆನಿಸಿತು. ೧೮೮೯ರಲ್ಲಿ ಆರಂಭವಾಗಿ ಯೇಸುಸಭೆಯವರು ನಡೆಸುತ್ತಿದ್ದ ಅನಾಥಾಶ್ರಮದ ಬಾಲಕರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಪೂರೈಸುತ್ತಲೇ ಅನಾಥಾಶ್ರಮದ ಕಾರ್ಯಗಾರದ ವಿವಿಧ ವೃತ್ತಿ ಕೌಶಲ್ಯ ತರಬೇತಿ ಪಡೆಯುತ್ತಿದ್ದರು. ೧೯೧೨ರಲ್ಲಿ ಧರ್ಮಭಗಿನಿಯರು ಹುಡುಗಿಯರಿಗಾಗಿ ಕಸೂತಿ ಮತ್ತು ಹೊಲಿಗೆ ತರಬೇತಿ ವಿಭಾಗಗಳನ್ನೊಳಗೊಂಡ ಕೈಗಾರಿಕಾ ಶಾಲೆಯನ್ನು ತೆರೆದರು. ಈ ಕೈಗಾರಿಕಾ ಸಂಸ್ಥೆಯಲ್ಲಿ ತರಬೇತಿ ಹೊಂದಿದ ಹುಡುಗಿಯರನ್ನು ಯೇಸುಸಭೆಯವರಿಂದ ತರಬೇತಿ ಹೊಂದಿ ಕಾರ್ಯಗಾರಗಳಲ್ಲಿದ್ದ ಹುಡುಗರಿಗೆ ಮದುವೆ ಮಾಡಿ ಕೊಡಲಾಗುತ್ತಿತ್ತು.[೨೨] ೧೯೮೧ರಲ್ಲಿ ಈ ಅನಾಥಾಲಯವು ಒಂದು ನೋಂದಾಯಿತ ಸಂಸ್ಥೆಯಾಗಿ, 'ಸೈಂಟ್ ಜೋಸೆಫ್ಸ್ ಪ್ರಶಾಂತ್ ನಿವಾಸ್ ಸೊಸೈಟಿ' ಎಂಬ ಹೆಸರು ಪಡೆಯಿತು.ಇದು ನಿರಾಶ್ರಿತರ, ಅನಾಥರ, ಒಡಕಿನ ಮನೆಗಳಿಂದ ಹೊರಬಂದ ಹುಡುಗಿಯರ, ವೃದ್ಧ ಸ್ತ್ರೀ-ಪುರುಷರ, ದೈಹಿಕ ಅಂಗ ವೈಕಲ್ಯವುಳ್ಳವರ, ಮಾನಸಿಕ ಅಸ್ವಸ್ಥತೆ ಉಳ್ಳವರ ನೆಲೆಯಾಗಿದೆ. ಭ। ಮರಿಯಾರವರು ' ಔದ್ಯೋಗಿಕ ಪರಿಹಾರ' (Occupational Therapy) ಯೋಜನೆಯನ್ನು ಆರಂಭಿಸಿ ಇಲ್ಲಿನ ನಿವಾಸಿಗಳಿಗೆ ಕಾಲೊರಸಿ, ಹವಾಯಿ ಚಪ್ಪಲಿ ತಯಾರಿ, ಬುಟ್ಟಿ ಹೆಣೆಯುವಿಕೆ, ಕಸೂತಿ ಹೆಣಿಗೆ ಮತ್ತು ತೋಟಗಾರಿಕೆಗಳಲ್ಲಿ ತರಬೇತಿ ನೀಡಿದ್ದಾರೆ. ಸೈಂಟ್ ಜೆರೊಸಾ ಕಾನ್ವೆಂಟಿನಲ್ಲಿದ್ದ 'ಎಂಬ್ರಾಡರಿ ಘಟಕವನ್ನು' ಪ್ರಶಾಂತ್ ನಿವಾಸಕ್ಕೆ ಸ್ಥಳಾಂತರಿಸಿ ಅನಾಥ ಬಾಲಕಿಯರಿಗೆ

ಹಾಗೂ ಇತರ ನಿವಾಸಿಗಳಿಗೆ ಅನುಕೂಲ ಮಾಡಿಕೊಟ್ಟಿದ್ದಾರೆ. ಈ ಸಂಸ್ಥೆಯಲ್ಲಿ ದುಡಿಯುತ್ತಿರುವ ಮಹಿಳೆಯರ ಮಕ್ಕಳನ್ನು ನೋಡಿಕೊಳ್ಳುವುದಕ್ಕಾಗಿ 'ಕ್ರೆಶ್' ಕೂಡಾ ಆರಂಭಿಸಲಾಗಿದೆ.[೨೪]

ಭ। ಇಸಬೆಲ್ಲಾ ಲೂವಿಸ್‌ರವರು ಸಿ.ಓ.ಡಿ.ಪಿ.ಯವರ (ಕೆನರಾ ಓರ್ಗನೈಜೇಶನ್ ಫಾರ್ ಡೆವಲಪ್‌ಮೆಂಟ್ ಎಂಡ್ ಪೀಸ್ - ಅಭಿವೃದ್ಧಿ ಮತ್ತು ಶಾಂತಿಗಾಗಿ ಕೆನರಾ ಸಂಘಟನೆ) ನೆರವಿನಿಂದ 'ಮಕ್ಕಳ ನಿವಾಸ'ದ ವಿಸ್ತರಣೆಯನ್ನೂ, ಕ್ರಿಶ್ಚಿಯನ್ ಚಿಲ್ಡ್ರನ್ಸ್ ಫಂಡ್(C.C.F.) ಎಂಬ ಯೋಜನೆಯನ್ನೂ ಕೈಗೆತ್ತಿಕೊಂಡಿದ್ದಾರೆ. ಈ ಕುಟುಂಬ ಸಹಾಯಕ ಯೋಜನೆಯ ಮುಖ್ಯ ಉದ್ದೇಶ ಬಡ ಕುಟುಂಬದ ಒಂದು ಮಗುವಿಗೆ ಸಹಾಯಧನ ನೀಡಿ ಸ್ವ-ಸಾಮರ್ಥ್ಯದಿಂದ ಬದುಕುವ ವಿದ್ಯೆಯನ್ನು ಕಲಿಸುವುದು.[೨೫] ೧೯೯೮ರ ವರೆಗೆ ಸುಮಾರು ೧೫೦೦೦ ನಿರಾಶ್ರಿತರಿಗೆ ಈ ಆಶ್ರಮ ಆಶ್ರಯ ನೀಡಿದೆ. ಯೇಸು ಸಭೆಯ ಬ್ರ। ಫೊಗ್ಲಿಯಾನಿರವರು ಸಂಸ್ಥೆಯ ಮೊದಲ ವ್ಯವಸ್ಥಾಪಕರಾಗಿ ಸಲ್ಲಿಸಿದ ಸೇವೆಯನ್ನು ಗುರುತಿಸಿ ಸರ್ಕಾರ ಅವರಿಗೆ ಕೈಸರ್ - ಐ- ಹಿಂದ್ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.[೨೬]

**೪.೧೬. ಸೈಂಟ್ ಆ್ಯಂಟನೀಸ್ ಚಾರಿಟಿ ಇನ್‌ಸ್ಟಿಟ್ಯೂಷನ್ಸ್**

೧೮೯೮ರಲ್ಲಿ ಮೊನ್ಸಿಞೊರ್ ಎಂ.ಪಿ.ಕೊಲಾಸೊ ಅವರಿಂದ ಮಂಗಳೂರಿನ ಮಿಲಾಗ್ರಿಸ್‌ನಲ್ಲಿ ಸ್ಥಾಪಿಸಲ್ಪಟ್ಟ ಪರೋಪಕಾರಿ ಸಂಸ್ಥೆಯೇ, ಸೈಂಟ್ ಆ್ಯಂಟನೀಸ್ ಬ್ರೆಡ್ (ಜೀವನಾಧಾರ). ಮಂಗಳೂರಿನ ಮಿಲಾಗ್ರಿಸ್ ಚರ್ಚಿನಲ್ಲಿ ಸಂತ ಅಂತೋನಿಯವರ ಪೀಠವೊಂದಿತ್ತು. ಫಾ। ಕೊಲಾಸೊರವರು ಚರ್ಚಿನ ಸಹಾಯಕ ಧರ್ಮಗುರುಗಳಾಗಿ ಸೇವೆ ಸಲ್ಲಿಸುತ್ತಿದ್ದ ಅಂದಿನ ದಿನಗಳಲ್ಲಿ ಆ ಪೀಠದಲ್ಲಿ ದಿವ್ಯ ಬಲಿಪೂಜೆ ನೆರವೇರಿಸಿ ವಿಶೇಷ ಪ್ರಾರ್ಥನಾ ವಿಧಿಗಳನ್ನು ಆರಂಭಿಸಿದರು. ಅವರ ಈ ನೂತನ ಪ್ರಾರ್ಥನಾ ವಿಧಿಗಳು ಸ್ಥಳೀಯರನ್ನಲ್ಲದೇ ಸುತ್ತಮುತ್ತಲ ಜನರನ್ನು ತನ್ನೆಡೆಗೆ ಸೆಳೆಯತೊಡಗಿತು. ನೂರಾರು ಭಕ್ತರು ಸಂತ ಅಂತೋನಿಯವರಿಗೆ ಕೃತಜ್ಞತೆ ಸಲ್ಲಿಸಲು ಬರತೊಡಗಿದರು. ಅವರು ನೀಡಿದ ಕಾಣಿಕೆಗಳನ್ನು ಸಮಾಜದ ಬಡವರಿಗೆ ಹಂಚುವ ಕ್ರಮ ಆರಂಭಗೊಂಡಿತು. ಹೀಗೆ "ಸಂತ ಅಂತೋನಿಯವರ ಜೀವನಾಧಾರ" ಆರಂಭವಾಯಿತು. ಪ್ರಾರ್ಥನಾ ವಿಧಿಯ ಪ್ರಸಿದ್ಧಿಯಿಂದಾಗಿ ಭಾರತ ಮಾತ್ರವಲ್ಲದೇ ಸಿಂಗಾಪುರ, ಚೀನಾ, ಜಪಾನ್, ಮಲಯ, ಆಫ್ರಿಕಾ ಹಾಗೂ ಯೂರೋಪಿನಿಂದ ಹರಕೆಯ ರೂಪದಲ್ಲಿ ಹಣ ಬರತೊಡಗಿತು.[೨೭] ಪ್ರತಿ ಮಂಗಳವಾರ ಬೆಳಿಗ್ಗೆ ಸುಮಾರು ೩೦೦ ಮಂದಿ ಬಿಕ್ಷುಕರಿಗೆ ಅಕ್ಕಿದಾನ ಮತ್ತು ಪ್ರತಿ ತಿಂಗಳೂ ಸಾಧಾರಣ ಒಂದು ನೂರು ಕುಟುಂಬಗಳಿಗೆ ಆರ್ಥಿಕ ನೆರವು ನೀಡಲಾಗುತ್ತಿತ್ತು. ಬಾಸೆಲ್ ಮಿಶನರಿ ಮಿ. ರಿಟ್ಟರ್‌ರವರು ಕಥೋಲಿಕರು ಮಾಡುತ್ತಿರುವ ಈ ರೀತಿಯ ದಾನ ಧರ್ಮ, ಮಂಗಳೂರಿನ ಮತ್ತು ಕಾರ್ಕಳದ ಹಿಂದೂಗಳು ಯೇಸುಸಭೆಯ ಕಡೆಗೆ ಆಕರ್ಷಿತರಾಗಲು ಕಾರಣವಿರ

ಬಹುದೆಂಬುದಾಗಿ ಅಭಿಪ್ರಾಯ ಪಡುತ್ತಾರೆ. ಅವರು ವರದಿ ಮಾಡಿರುವಂತೆ ಮಂಗಳೂರಿನಲ್ಲಿ ಓರ್ವ ಧರ್ಮಗುರು ಪ್ರತಿದಿನವೂ ಸುಮಾರು ೩೦೦ ಮಂದಿ ಕ್ರೈಸ್ತೇತರನ್ನು ಸಾಕುತ್ತಿದ್ದಾರೆ. ಹೊಸಬರು ಯಾರಾದರೂ ಬಂದರೆ ಅಂಥವರಿಗೆ ಒಂದೆರಡು ತಿಂಗಳ ಕಾಲ, ಆ ಧರ್ಮಗುರು ಸಂಪೂರ್ಣವಾಗಿ ಆಧಾರವಾಗಿ ನಿಲ್ಲುತ್ತಾರೆ. ಈ ಕಾಲಾವಧಿಯಲ್ಲಿ ಅವರು ರೋಮನ್ ಕಥೋಲಿಕ ಸಿದ್ಧಾಂತದಲ್ಲಿ, ದಿನಕ್ಕೆ ಮೂರು ಸಲ, ಶಿಕ್ಷಣ ಹೊಂದುವುದಲ್ಲದೆ ಎಲ್ಲಾ ವಿಧವಾದ ಆಧ್ಯಾತ್ಮಿಕ ಕಸರತ್ತುಗಳನ್ನು ಮಾಡಬೇಕಾಗುವುದು; ಇದು ಅವರ ಜ್ಞಾನಸ್ನಾನಕ್ಕೆ ಪೂರ್ವಭಾವಿ ತಯಾರಿಯಾಗಿದೆ. ಈ ಔದಾರ್ಯವು ಹಲವರನ್ನು ಆಕರ್ಷಿಸಿದರೂ, ಅದು ಬಹುಕಾಲ ಬಾಳಲಿಲ್ಲ. ಅವರು ಒಮ್ಮೆ ಕ್ರೈಸ್ತ ಮತಕ್ಕೆ ಕಾಲಿರಿಸಿದರೆಂದರೆ ಅನಂತರ ಅವರನ್ನು ಗಮನಿಸುತ್ತಲೇ ಇರಲಿಲ್ಲ; ದೈನಂದಿನ ದುಡಿಮೆಯಿಂದ, ವೈಯಕ್ತಿಕವಾಗಿ ಅವರೇ ತಮ್ಮ ಆಹಾರವನ್ನು ಸಂಪಾದಿಸಬೇಕಾಗಿತ್ತು. ಹಾಗೆ, ಸ್ವಂತ ಸಂಪಾದನೆಯಿಂದ, ತಮ್ಮ ಕಾಲ ಮೇಲೆಯೇ ನಿಲ್ಲಲು ಅಸಮರ್ಥರಾದರೆ, ಅವರು ಭಿಕ್ಷೆ ಬೇಡುವ ದಾರಿ ಹಿಡಿಯಬೇಕಾಗುತ್ತಿತ್ತು.[೨೮]

೧೯೧೦ರಲ್ಲಿ ಮಂಗಳೂರಿನ ಧರ್ಮಾಧ್ಯಕ್ಷರಾದ ಪೆರಿನಿಯವರು ಈ ದಾನಶೀಲ ಕಾರ್ಯವನ್ನು ಮಿಲಾಗ್ರಿಸ್ ಚರ್ಚ್‌ನ ಆಡಳಿತದಿಂದ ಬೇರ್ಪಡಿಸಿದರು. ಕುಲಶೇಖರ ಚರ್ಚಿನಿಂದ ಫಾ। ಕೊಲಾಸೊರವರನ್ನು ಹಿಂದಕ್ಕೆ ಕರೆಸಿ ಆಶ್ರಮದ ಜವಾಬ್ದಾರಿಯನ್ನು ಅವರಿಗೆ ವಹಿಸಿದರು. ಇದುವರೆಗೆ ಕಾಣಿಕೆ ರೂಪದಲ್ಲಿ ಸಿಗುತ್ತಿದ್ದ ದಾನವನ್ನು ಬಡವರಿಗೆ ಹಂಚುತ್ತಿದ್ದರು. ಆದರೆ ಈಗ ನಿರ್ಗತಿಕರಿಗೆ, ವೃದ್ಧರಿಗೆ ಮತ್ತು ಅನಾಥರಿಗೆ ಆಶ್ರಯ ನೀಡುವ ಉದ್ದೇಶದಿಂದ 'ಬಡವರ ನಿವಾಸ' (ಪುವರ್ ಹೌಸ್) ನಿರ್ಮಿಸಲು ನಿರ್ಧರಿಸಿದರು. ಸೈಂಟ್ ಆ್ಯಂಟನೀಸ್ ಸಂಸ್ಥೆಗಳ ಪ್ರಧಾನ ಉದ್ದೇಶವೇನೆಂದರೆ ಎಲ್ಲಾ ನಿರ್ವಸಿತರಿಗೆ ಮನೆಗಳನ್ನು ಒದಗಿಸುವುದಲ್ಲದೆ ಹುಡುಗ ಹುಡುಗಿಯರಿಗೆ ಬಡಗಿತನ, ಆವೆಮಣ್ಣಿನಲ್ಲಿ ಮಾದರಿ ತಯಾರಿ, ಪೈಂಟಿಂಗ್, ಲೇಸ್ ತಯಾರಿ, ಕಸೂತಿ ಕೆಲಸ ಇತ್ಯಾದಿ ಯಾವುದಾದರೊಂದು ಉಪಯುಕ್ತ ಕೈಗಾರಿಕೆಯಲ್ಲಿ ತರಬೇತಿ ನೀಡುವುದಾಗಿದೆ.[೨೯] ಪುವರ್ ಹೌಸ್‌ನಲ್ಲಿ ಅನಾಥ ಶಿಶುಗಳಿಗೆ ಮತ್ತು ಮಗುವಿರುವ ತಾಯಂದಿರಿಗೆ - ಬೆತ್ಲೆಹೆಮ್ ನಿವಾಸ, ಐದು ವರ್ಷ ಮೇಲ್ಪಟ್ಟ ಹೆಣ್ಮಕ್ಕಳಿಗೆ- ಸೈಂಟ್ ಆ್ಯಗ್ನೆಸ್ ನಿವಾಸ, ಐದು ವರ್ಷ ಮೇಲ್ಪಟ್ಟ ಗಂಡು ಮಕ್ಕಳಿಗೆ - ನಜರೆತ್ ನಿವಾಸ, ಹತ್ತು ವರ್ಷ ಮೇಲ್ಪಟ್ಟ ಗಂಡು ಮಕ್ಕಳಿಗೆ - ಸಂತ ಕ್ಸೇವಿಯರ್ ನಿವಾಸ, ಹತ್ತು ವರ್ಷ ಮೇಲ್ಪಟ್ಟ ಹೆಣ್ಣು ಮಕ್ಕಳಿಗೆ - ಸಂತ ಕ್ಲಾರಳ ನಿವಾಸ, ವೃದ್ಧರಿಗೆ- ಸಂತ ಜೋಕಿಮರ ನಿವಾಸ ಹಾಗೂ ವೃದ್ಧೆಯರಿಗೆ- ಸಂತ ಅನ್ನಾರ ನಿವಾಸ ಎಂಬ ವಿಭಾಗಗಳಿವೆ.

ಫಾ। ಜುಲಿಯಾನ್ ರೇಗೊರವರು ಮಿಲಾಗ್ರಿಸಿನಲ್ಲಿ ವಾಸವಾಗಿದ್ದ ಆಶ್ರಮವಾಸಿಗಳನ್ನು ಜೆಪ್ಪುವಿನಲ್ಲಿ ಹೊಸದಾಗಿ ಕಟ್ಟಿದ ಬಿಡಾರಗಳಿಗೆ ಸ್ಥಳಾಂತರಿಸಿದರು (೧೯೩೬). ಇವರ ಕಾಲಾವಧಿಯಲ್ಲಿ ಯುವತಿಯರಿಗಾಗಿ 'ಸೈಂಟ್ ಮೇರಿಸ್ ನಿವಾಸ' ಕಟ್ಟಿಸಲಾಗಿದೆ. ಫಾ। ಎಫ್.ಎಂ.ಸಿ. ಕ್ಯಾಸ್ಟಲಿನೊರವರು ಹಾಸಿಗೆ ಹಿಡಿದಿರುವ ಸ್ತ್ರೀಯರಿಗಾಗಿ - ಪ್ರೊವಿಡೆನ್ಸ್ ನಿವಾಸ, ಫಾಯ್ಲೆರಿಯದ ರೋಗಿಗಳಿಗಾಗಿ- ಸೈಂಟ್ ಕೊತ್ತೊಲೆಂಗೊರ ನಿವಾಸ, ದಡರಾ, ಸಿಡುಬು ಮುಂತಾದ ಅಂಟುರೋಗಿಗಳಿಗಾಗಿ - ಸಂತ ಜೋನರ ಆಸ್ಪತ್ರೆ, ಜ್ವರದಿಂದ ಬಳಲುವವರಿಗಾಗಿ ಸೈಂಟ್ ಕಾಮಿಲ್ ದೆ ಲೆಲ್ಲಿಸ್ ಆಸ್ಪತ್ರೆ, ಎರಡೂವರೆ ವರ್ಷದಿಂದ ಐದು ವರ್ಷದೊಳಗಿನ ಮಕ್ಕಳಿಗಾಗಿ - ಬಾಲ ಯೇಸು ನಿವಾಸ ಹಾಗೂ ಕೈಗಾರಿಕಾ ಶಾಲೆಯನ್ನು ಕಟ್ಟಿಸಿದ್ದಾರೆ.[೨೦] ಕೈಗಾರಿಕಾ ಶಾಲೆಯಲ್ಲಿ ಮಕ್ಕಳಿಗೆ ಓದು, ಬರಹ ಮತ್ತು ಹೊಲಿಗೆಯ ಮೂಲಭೂತ ಶಿಕ್ಷಣ ನೀಡಲಾಗುತ್ತದೆ. ಅಲ್ಲದೆ ಹತ್ತಿ ಮತ್ತು ಉಣ್ಣೆಯ ಕಾಲುಚೀಲ, ಮೇಲಂಗಿ, ಟೊಪ್ಪಿ, ಬೆಚ್ಚನೆಯ ಉಡುಪುಗಳು ಮತ್ತು ಹಲವು ತರಹದ ಫ್ಯಾನ್ಸಿ ಮತ್ತು ಗೃಹ ಕಸೂತಿ ಯಂತ್ರಗಾರಿಕೆಯ ವಿಭಾಗಗಳಿವೆ. ಈ ಸಂಸ್ಥೆಯ ವಿಶೇಷತೆ ಏನೆಂದರೆ ಸ್ಥಳೀಯ ಕೈಗಾರಿಕೆಗಳ ಅಭಿವೃದ್ಧಿಗೆ ಪ್ರಾಮಾಣಿಕ ಯತ್ನ ನಡೆಸುವುದಾಗಿದೆ; ಇದರಿಂದಾಗಿ ಜನರ ಅಗತ್ಯತೆಗೆ ತಕ್ಕಂತೆ ಸುರಕ್ಷಿತ ನೌಕರಿ ಮತ್ತು ಜೀವನೋಪಾಯಕ್ಕೆ ಸಂಪಾದನೆ ಹೊಂದಲು ಅನುಕೂಲವಾಗುತ್ತದೆ. ಈ ಸಂಸ್ಥೆಯಲ್ಲಿ, ಹಪ್ಪಳ ತಯಾರಿ, ಶುಂಠಿ ಮತ್ತು ಮಾವಿನಕಾಯಿಯ ಕೆಡದಂತೆ ರಕ್ಷಿಸಿ ಇಡುವ ವಸ್ತುವಿನ ತಯಾರಿ, ಉಪ್ಪಿನಕಾಯಿ, ಹಣ್ಣಿನ ರಸ, ಜೆಲ್ಲಿಗಳು ಮುಂತಾಗಿ ಆಯಾ ಋತುಮಾನಕ್ಕೆ ತಕ್ಕ ಉತ್ಪನ್ನಗಳನ್ನು ತಯಾರಿಸಲು ಉತ್ತೇಜಿಸುವ ಮೂಲಕ ಆಶ್ರಮವಾಸಿಗಳನ್ನು ಸದಾ ಕಾರ್ಯನಿರತವಾಗಿಡಲಾಗುತ್ತದೆ. ಆಧುನಿಕ, ಸರಳ ತಂತ್ರಜ್ಞಾನದ ನೆರವಿನಿಂದಾಗಿ ಸ್ಥಳೀಯ ಕೈಗಾರಿಕೆಗಳು ವ್ಯಾಪಕವಾಗಿ, ಯಶಸ್ವಿಯಾಗಿ ಪ್ರಗತಿ ಪಥದಲ್ಲಿ ಮುನ್ನಡೆಯಲು ಅವಕಾಶವಾಗಿದೆ. ಸಂಸ್ಥೆಯಲ್ಲಿ ಬಡ ಹುಡುಗರ, ಅಲೆಮಾರಿ ನಿರ್ಗತಿಕರ, ಅಲ್ಪಾದಾಯದ ಕಾರಣದಿಂದಾಗಿ ಶಿಕ್ಷಣ ಸೌಲಭ್ಯದಿಂದ ವಂಚಿತರಾದವರ ಹಿತ ಸಂರಕ್ಷಣೆಗೆಂದೇ ಒಂದು ಮರಗೆಲಸ ಶಾಲೆಯನ್ನೂ ಆರಂಭಿಸಿದ್ದಾರೆ. ಮರಕೆಲಸದಲ್ಲಿ ತರಬೇತಿ ನೀಡಲಾಗುತ್ತಿರುವುದರಿಂದ ಅವರಿಗೊಂದು ಜೀವನ ಮಾರ್ಗ ಕಲ್ಪಿಸಿದಂತಾಗುವುದಲ್ಲದೆ, ಅದೊಂದು ವೈಯಕ್ತಿಕ ಪ್ರೋತ್ಸಾಹವೂ ಆಗಿದೆ. ವೃತ್ತಿ ಕೌಶಲ್ಯವನ್ನು ಹೊಂದಿದೊಡನೆ, ಅವರನ್ನು ಸ್ವಾವಲಂಬಿಗಳಾಗಿ ಜೀವಿಸಲು, ಸಂಸ್ಥೆಯಿಂದ ಹೊರಗೆ ಕಳುಹಿಸಲಾಗುತ್ತದೆ. ಈ ಸಂಸ್ಥೆ ಸಮಾಜದಲ್ಲಿ ಎಷ್ಟೋ ಉದ್ಯಮಶೀಲರನ್ನೂ, ಧರ್ಮಭೀರುಗಳನ್ನೂ ನಿಧಾನವಾಗಿಯಾದರೂ ನಿರ್ದಿಷ್ಟವಾಗಿ ನಿರ್ಮಿಸುವಲ್ಲಿ ಸಫಲವಾಗಿದೆ; ಈ ಸಂಸ್ಥೆ ಮುತುವರ್ಜಿ ವಹಿಸದೇ ಹೋಗಿದ್ದರೆ ಅವರೆಲ್ಲ ಗೊತ್ತುಗುರಿಯಿಲ್ಲದೆ ಅಲೆದಾಡುತ್ತಾ ತಪ್ಪುದಾರಿ ಹಿಡಿಯುವ ಸಾಧ್ಯತೆ ಇತ್ತು. ಈ ಎಲ್ಲ ಪರೋಪಕಾರಿ ಕಾರ್ಯಗಳು ಸೈಂಟ್ ಆ್ಯಂಟನೀಸ್ ಬ್ರೆಡ್ ಸಂಸ್ಥೆಯಿಂದ ವ್ಯವಸ್ಥಿತವಾಗಿ ಸಂಘಟಿತವಾಗಿ ನಿರಂತರವಾಗಿ ನಡೆಯುತ್ತಿದೆ.[೨೧]

೪.೧.೭. ಸೈಂಟ್ ವಿನ್ಸೆಂಟ್ ಅನಾಥಾಲಯ

ಸೈಂಟ್ ವಿನ್ಸೆಂಟ್ ಅನಾಥಾಲಯವನ್ನು ಪುತ್ತೂರು ತಾಲೂಕಿನ ಕಡಬ ಎಂಬಲ್ಲಿ ೧೯೨೪ರಲ್ಲಿ ಮಿಶನರಿ ಗುರುಗಳಾದ ಫಾ। ಲಾರೆನ್ಸ್ ಲೋಬೋರವರು ಆರಂಭಿಸಿದರು. ಫಾ। ಬಾಸಿಲ್ ಸಲ್ವದೋರ್ ಡಿಸೋಜರವರು ಬಾಲಕರ ಅನಾಥಾಲಯದ ಕಟ್ಟಡವನ್ನು ನಿರ್ಮಿಸಿದರು. ಆದರೆ ಕಾರಣಾಂತರದಿಂದ ೨೦೦೦ ಇಸವಿಯಲ್ಲಿ ಅನಾಥಾಶ್ರಮವನ್ನು ಮುಚ್ಚಲಾಗಿದೆ.[೩೨]

೪.೧.೮. ಸೈಂಟ್ ಫಿಲೋಮಿನಾ ಅನಾಥಾಲಯ

ಉಪ್ಪಿನಂಗಡಿಯ ಸೈಂಟ್ ಫಿಲೋಮಿನಾ ಅನಾಥಾಲಯ, ೧೯೨೮ರಲ್ಲಿ ಫಾ।ರೊಜಾರಿಯೊ ಡಿ. ಸಿಕ್ವೇರಾ ಅವರಿಂದ ಸ್ಥಾಪನೆಗೊಂಡಿತು. ಆರಂಭದ ದಿನಗಳಲ್ಲಿ ಈ ಅನಾಥಾಲಯದಲ್ಲಿ ವಿದ್ಯಾರ್ಥಿಗಳಿಗೆ ೪ನೇ ತರಗತಿಯವರೆಗೆ ಮಾತ್ರ ಶಿಕ್ಷಣ ನೀಡಲಾಗುತ್ತಿತ್ತು. ಕ್ರಮೇಣ ೭ನೇ ತರಗತಿಯವರೆಗೆ ಶಿಕ್ಷಣ ಸೌಲಭ್ಯವನ್ನು ಕೊಡಲಾರಂಭಿಸಿದರು. ೧೯೬೦ರ ದಶಕದಲ್ಲಿ , ಆಶ್ರಮದ ವಿದ್ಯಾರ್ಥಿಗಳನ್ನು ನೆರೆಯ ಸರಕಾರಿ ಪ್ರೌಢಶಾಲೆಗೆ ಕಳುಹಿಸಲಾಗುತ್ತಿತ್ತು. ಆದರೆ ೨೦೦೭ರಿಂದ ಪ್ರೌಢಶಾಲಾ ಶಿಕ್ಷಣವನ್ನು ಇಲ್ಲಿಯೇ ನೀಡಲಾಗುತ್ತಿದೆ. ಇಲ್ಲಿ ಕಲಿತ ವಿದ್ಯಾರ್ಥಿಗಳನೇಕರು ಸಮಾಜದಲ್ಲಿ ಗಣ್ಯ ವ್ಯಕ್ತಿಗಳಾಗಿ ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದಾರೆ. ಉದಾಹರಣೆಗೆ ಕತಾರ್‌ನ ಖ್ಯಾತ ಕಥೋಲಿಕ ಉದ್ಯಮಿಯಾದ ಫೆಲಿಕ್ಸ್ ಲೋಬೊ ಎಂಬವರು ಮೊದಲಿಗೆ ಈ ಅನಾಥಾಲಯದ ನಿವಾಸಿಯಾಗಿದ್ದರು.[೩೩]

ಮೇರಿವೇಲ್ ಅನಾಥಾಲಯ

೧೯೩೫ರಲ್ಲಿ ಮೊನ್ಸಿಞೊರ್ ಆರ್. ಎಫ್.ಸಿ. ಮಸ್ಕರೇನ್ಹಸ್‌ರವರು ಕಿನ್ನಿಗೋಳಿಯಲ್ಲಿ ಮೇರಿವೇಲ್ ಅನಾಥಾಶ್ರಮವನ್ನು ಸ್ಥಾಪಿಸಿದರು. ಪ್ರಾಥಮಿಕ ಹಂತದಲ್ಲಿಯೇ ಅಥವಾ ಅನಂತರ ಶಿಕ್ಷಣವನ್ನು ಮೊಟಕುಗೊಳಿಸಿದ ಗ್ರಾಮೀಣ ಮತ್ತು ಅರೆ-ಗ್ರಾಮೀಣ ಹೆಣ್ಣುಮಕ್ಕಳಿಗೆ ತಮ್ಮ ಶಿಕ್ಷಣವನ್ನು ಪೂರ್ಣಗೊಳಿಸಲು ಈ ಅನಾಥಾಲಯ ಆಸರೆಯಾಗಿದೆ. ಇದರಿಂದಾಗಿ ಸುತ್ತ ಮುತ್ತಲ ಬಳ್ಕುಂಜೆ, ಕಲ್ಲಮುಂಡ್ಕೂರು,ಯಕ್ಕಾರು, ನೀರುಡೆ, ಪೆರ್ಮುದೆ ಮತ್ತು ಬಜಪೆ ಗ್ರಾಮಗಳ ನಿವಾಸಿಗಳಿಗೆ ಶಿಕ್ಷಣಾವಕಾಶವನ್ನು ಒದಗಿಸಿದಂತಾಗಿದೆ.[೩೪]

ಸೈಂಟ್ ರೀಟಾಸ್ ಅನಾಥಾಲಯ

ಕೊಕ್ಕಡದ ಸಮೀಪ ಕೌಕ್ರಾಡಿ ಎಂಬಲ್ಲಿ ಸೈಂಟ್ ರೀಟಾಸ್ ಅನಾಥಾಲಯವು ೧೯೩೮ರಲ್ಲಿ ಫಾ। ಆಲ್ಬರ್ಟ್ ಪಿಂಟೋ ಅವರಿಂದ ಸ್ಥಾಪಿಸಲ್ಪಟ್ಟಿತು. ಇದೊಂದು ಮಿಶನ್ ಠಾಣ್ಯ ಆಗಿರುವುದರಿಂದ

ಇಲ್ಲಿಯ ಆದಿ ದ್ರಾವಿಡ ಮಕ್ಕಳ  ಶಿಕ್ಷಣಕ್ಕೆ ಇದು ಬಹಳಷ್ಟು ರೀತಿಯಲ್ಲಿ ನೆರವಾಗಿದೆ. ಅನಾಥಾಶ್ರಮದ ನಿರ್ವಹಣೆಯನ್ನು ಆಡಳಿತ ಮಂಡಳ ಸಂಗ್ರಹಿಸಿದ ನಿಧಿ ಹಾಗೂ ಸರಕಾರದ ಅನುದಾನದಿಂದ ನಡೆಸಲಾಗುತ್ತಿದೆ.[೩೫]

### ೪.೧೧. ಸಂತ ಜೋಸೆಫರ ಅನಾಥಾಲಯ

ಮಂಗಳೂರಿನ ಕಿನ್ನಿಕಂಬಳದಲ್ಲಿರುವ ಸಂತ ಜೋಸೆಫರ ಅನಾಥಾಶ್ರಮವನ್ನು ೧೯೩೯ರಲ್ಲಿ ಬೆಥನಿ ಧರ್ಮಭಗಿನಿಯರು ಪ್ರಾರಂಭಿಸಿದರು. ಸುತ್ತಮುತ್ತಲಿನ ಧರ್ಮಪ್ರಾಂತ್ಯಕ್ಕೊಳಪಟ್ಟ, ವಿವಿಧ ಕಾರಣಗಳಿಂದಾಗಿ ಶಿಕ್ಷಣ ವಂಚಿತರಾಗಿದ್ದ, ಹಲವು ಮಕ್ಕಳಿಗೆ ಈ ಸಂಸ್ಥೆ ಆಶ್ರಯ ನೀಡುತ್ತಿದೆ. ಈ ಅನಾಥಾಶ್ರಮವು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಣ ಪಡೆಯುವ ಸುಮಾರು ೧೦೦ ಮಂದಿ ಮಕ್ಕಳನ್ನು ಪೋಷಿಸುತ್ತಿದೆ.[೩೬]

### ೪.೧೨. ಇನ್ಫೆಂಟ್ ಮೇರಿ ಅನಾಥಾಲಯ

೧೯೪೩ರಲ್ಲಿ ಮಂಗಳೂರಿನ ಕುಲಶೇಖರದಲ್ಲಿ ಇನ್ಫೆಂಟ್ ಮೇರಿ ಅನಾಥಾಲಯವನ್ನು ಸುತ್ತ ಮುತ್ತಲಿನ ಗ್ರಾಮಗಳ ಬಡ ಹೆಣ್ಣುಮಕ್ಕಳನ್ನು ಶಿಕ್ಷಿತರನ್ನಾಗಿಸುವ ಉದ್ದೇಶವನ್ನಿರಿಸಿಕೊಂಡು ತೆರೆಯಲಾಗಿದೆ. ಪ್ರಾರಂಭದಲ್ಲಿ ಕೇವಲ ೮ ಮಂದಿ ವಿದ್ಯಾರ್ಥಿನಿಯರನ್ನು ಹೊಂದಿತ್ತು. ಈ ಸಂಸ್ಥೆಯಿಂದಾಗಿ ೧೩೦೦ ಮಕ್ಕಳು ಪ್ರಯೋಜನ ಪಡೆದು, ತಮ್ಮ ಪ್ರೌಢಶಾಲಾ ಶಿಕ್ಷಣಕ್ಕೆಂದು ತೆರಳಿದ್ದಾರೆ. ಈ ಅನಾಥಾಲಯದ ನಿವಾಸಿಗಳಾದ ವಿದ್ಯಾರ್ಥಿನಿಯರು, ಸಮುದಾಯ ಜೀವನಕ್ಕೆ ಹೊಂದಿಕೊಳ್ಳಲು ಅವಕಾಶವಾಗಿದೆ. ಇತರರೊಂದಿಗೆ ನಿಸ್ವಾರ್ಥ ಮನೋಭಾವದಿಂದ ಬದುಕುವ ಕಲೆಯನ್ನು ಸಂಸ್ಥೆ ಅವರಿಗೆ ಕಲಿಸುತ್ತಿದೆ.[೩೭]

### ೪.೧೩. ಸೇಕ್ರೆಡ್ ಹಾರ್ಟ್ ಅನಾಥಾಲಯ

ಭ। ಜೊಸ್ಪಿನ್ ಸಿಕ್ವೇರಾ ಅವರು ಪಾಲಕಿಯಾಗಿ ಸೇವೆ ಆರಂಭಿಸಿದ ಸೆಕ್ರೆಡ್ ಹಾರ್ಟ್ ಅನಾಥಾಲಯ ಉಡುಪಿ ಜಿಲ್ಲೆಯ ಬ್ರಹ್ಮಾವರದಲ್ಲಿ ೧೯೪೩ರಲ್ಲಿ ಸಿಸ್ಟರ್ಸ್ ಆಫ್ ಚಾರಿಟಿ ಸಭೆಯವರಿಂದ ಆರಂಭಗೊಂಡಿದೆ.[೩೮]

### ೪.೧.೧೪.ದೆ ಮರ್ಸಿಡ್ ಅನಾಥಾಲಯ

ಫಾ। ಜಿ.ಎಸ್. ಲೂವಿಸ್ ಅವರು ೧೯೪೪ರಲ್ಲಿ ದೆ ಮರ್ಸಿಡ್ ಅನಾಥಾಲಯವನ್ನು ಮಂಗಳೂರಿನ ದೇರಳಕಟ್ಟೆಯ ಹತ್ತಿರ ಪನೀರ್ ಎಂಬಲ್ಲಿ ಸ್ಥಾಪಿಸಿದರು. ಈಗ ಅನಾಥಾಲಯದ ನಿರ್ವಹಣೆಯನ್ನು ಅರ್ಸುಲಾಯ್ನ್ ಧರ್ಮಭಗಿನಿಯರು ನೋಡಿಕೊಳ್ಳುತ್ತಿದ್ದಾರೆ.[೩೯]

### ೪.೧.೧೫. ಸೈಂಟ್ ಪೌಲ್ಸ್ ಅನಾಥಾಲಯ

ಬೆಳ್ತಂಗಡಿ ತಾಲೂಕಿನಲ್ಲಿರುವ ನಾರಾವಿ ಎಂಬಲ್ಲಿ ಸೈಂಟ್ ಪೌಲ್ಸ್ ಅನಾಥಾಲಯವನ್ನು ೧೯೪೬ರಲ್ಲಿ ಫಾ। ಜೆ.ಬಿ.ಅಲ್ವಾರಿಸ್ ಎಂಬುವರು ಸ್ಥಾಪಿಸಿದರು. ಅನಾಥಾಲಯದ ನಿರ್ವಹಣೆಗೆ ಸರ್ಕಾರದಿಂದ ಅನುದಾನ ೧೯೫೬ರಿಂದ ದೊರೆಯುತ್ತಿದೆ.[೪೦]

### ೪.೧.೧೬. ಸವೇರಾಪುರ ಅನಾಥಾಲಯ

ಸಂಪಾಜೆ ಧರ್ಮಕೇಂದ್ರದ ಪ್ರಥಮ ಧರ್ಮಗುರುಗಳಾದ ಫಾ। ಲಿಯೊ ಅಂತೋನಿ ಕುಟಿನ್ಹಾರವರು ೧೯೫೭ರಲ್ಲಿ ಸವೇರಪುರ ಅನಾಥಾಶ್ರಮವನ್ನು ಆರಂಭಿಸಿದರು. ಅನಾಥಾಲಯದ ಆಡಳಿತವನ್ನು ಏಳು ಮಂದಿ ಸದಸ್ಯರನ್ನೊಳಗೊಂಡ ಒಂದು ಸಮಿತಿ ನಿರ್ವಹಿಸಿದೆ. ಅನಾಥಾಲಯದ ನಿವಾಸಿಗಳಿಗೆ ಶಾಲೆಯ ಶಿಕ್ಷಣ ಮಾತ್ರವಲ್ಲದೆ ಹೊಲಿಗೆ, ಕರಕೌಶಲ್ಯ ಮತ್ತು ಸುಧಾರಿತ ಕೃಷಿ ಪದ್ಧತಿಯಲ್ಲೂ ತರಬೇತಿ ದೊರಕುತ್ತಿದೆ.[೪೧]

### ೪.೧.೧೭. ಸೈಂಟ್ ಜೋಸೆಪ್ಸ್ ಕೃಷಿ ಕಾಲೋನಿ ಅನಾಥಾಲಯ

ಕುಂದಾಪುರ ತಾಲೂಕಿನ ಬೆಳ್ವೆಯ ಸೈಂಟ್ ಜೋಸೆಪ್ಸ್ ಕೃಷಿ ಕಾಲೋನಿಯು ಜೆಪ್ಪುವಿನ ಸಂತ ಜೋಸೆಫರ ಕಾರ್ಯಗಾರದ ಒಂದು ಶಾಖೆಯಾಗಿದೆ. ಯೇಸುಸಭೆಯ ಫಾ। ವಿಲಿಯಂ ಎಫ್. ಸಿಕ್ವೇರಾ ಅವರು ಕಾಲೋನಿಯ ಮಕ್ಕಳಿಗಾಗಿ ಒಂದು ಅನಾಥಾಶ್ರಮವನ್ನು ೧೯೫೩ರಂದು ಆರಂಭಿಸಿದ್ದಾರೆ. ೧೯೬೦ರಂದು ಫಾ। ಅಂಬ್ರೋಸ್ ಅವರು ಅನಾಥರಿಗಾಗಿ ಶಾಲೆಯೊಂದನ್ನು ಆರಂಭಿಸಿದರು. ೧೯೬೮ರಿಂದ ಬೆಳ್ವೆ ಕೃಷಿ ಕಾಲೋನಿಯ ನಿರ್ವಹಣೆಯನ್ನು ಸಿಸ್ಟರ್ಸ್ ಆಫ್ ಚಾರಿಟಿ ಸಭೆಯವರು ನಿರ್ವಹಿಸುತ್ತಿದ್ದಾರೆ.[೪೨]

**೪.೧.೧೮. ಸೈಂಟ್ ಲಾರೆನ್ಸ್ ಅನಾಥಾಲಯ**

೧೯೬೦ರಲ್ಲಿ ಸಿಸ್ಟರ್ಸ್ ಆಫ್ ಚಾರಿಟಿ ಸಭೆಯವರು ಕಾರ್ಕಳ ತಾಲೂಕಿನ ಅತ್ತೂರಿನಲ್ಲಿ ಸೈಂಟ್ ಲಾರೆನ್ಸ್ ಅನಾಥಾಲಯವನ್ನು ಆರಂಭಿಸಿದರು. ಪ್ರಾರಂಭದಲ್ಲಿ ಕುಂಟುತ್ತಲೇ ಸಾಗಿದ ಅನಾಥಾಶ್ರಮ ಕಾಲಕ್ರಮೇಣ ವಿದ್ಯಾರ್ಥಿಗಳ ಹೆಚ್ಚಳದೊಂದಿಗೆ ಭ। ಎಡಿತ್‌ರವರ ನಿರ್ವಹಣೆಯಲ್ಲಿ ಹುರುಪನ್ನು ಪಡೆಯಿತು. ೧೯೭೮ರಲ್ಲಿ ಅನಾಥಾಲಯವನ್ನು ಹೊಸದಾಗಿ ನಿರ್ಮಿಸಿದ ಕಟ್ಟಡಕ್ಕೆ ಸ್ಥಳಾಂತರಿಸಲಾಗಿದೆ.

**೪.೧.೧೯. ಸೈಂಟ್ ಎಲೋಶಿಯಲ್ ಬಾಯ್ಸ್ ಹೋಂ**

ಮಂಗಳೂರಿನ ಕೋಟೆಕಾರಿನಲ್ಲಿರುವ ನೆಹರುನಗರದಲ್ಲಿ ಯೇಸುಸಭೆಯ ಧರ್ಮಗುರುಗಳು ೧೯೮೦ರಲ್ಲಿ 'ಎಲೋಶಿಯನ್ ಬಾಯ್ಸ್ ಹೋಮ'ನ್ನು, ಸೈಂಟ್ ಅಲೋಶಿಯಸ್ ಕಾಲೇಜಿನ ವಿಸ್ತರಣಾ ಕಾರ್ಯಕ್ರಮವಾಗಿ ಆರಂಭಿಸಿದರು. ಸಿಸ್ಟರ್ಸ್ ಆಫ್ ಚಾರಿಟಿ ಸಭೆಯವರ ನಿರ್ವಹಣೆಯಲ್ಲಿರುವ ಈ ಅನಾಥಾಲಯದಲ್ಲಿ ಬಾಲಾಪರಾಧಿ ಹಾಗೂ ನಿರಾಧಾರ ಮಕ್ಕಳಿಗೆ ಆಶ್ರಯ ನೀಡಲಾಗುತ್ತದೆ. ಅನಾಥಾಲಯದ ಮಕ್ಕಳಿಗೆ ಕೃಷಿ, ಹೈನುಗಾರಿಕೆ ಹಾಗೂ ತಾಂತ್ರಿಕ ತರಬೇತಿಯನ್ನು ಸಂಸ್ಥೆಯಲ್ಲಿಯೇ ನೀಡಲಾಗುತ್ತಿದೆ.[೪೩]

ಅಪೋಸ್ತಲಿಕ್ ಕಾರ್ಮೆಲ್ ಧರ್ಮಭಗಿನಿಯರು ವಸತಿಯ ಕಡೆಗೆ ಲಕ್ಷ್ಯ ನೀಡುವುದು ತಮ್ಮ ಸೇವಾ ಕಾರ್ಯದ ಮುಖ್ಯ ಭಾಗ ಎಂದು ತಿಳಿದಿದ್ದರು. ೧೯೩೦ರ ದಶಕದಲ್ಲಿ ಅನಾಥಾಲಯಗಳ ಸ್ಥಾಪನೆಗೆ ಹೆಚ್ಚು ಗಮನ ಹರಿಸಿದ ಅವರು ಕೆಮ್ಮಣ್ಣಿನಲ್ಲಿ ಸೈಂಟ್ ಫಿಲೋಮಿನಾ ಅನಾಥಾಶ್ರಮ (೧೯೨೫)[೪೪], ಕುಂದಾಪುರದಲ್ಲಿ ಸೈಂಟ್ ಜೋಸೆಫ್ಸ್ ಅನಾಥಾಲಯ (೧೯೩೧)[೪೫], ಕೋಟೆಕಾರಿನಲ್ಲಿ ಸ್ಟೆಲ್ಲಾ ಮಾರಿಸ್ ಅನಾಥಾಲಯ (೧೯೩೮)[೪೬] ಮತ್ತು ಮೇರಿಹಿಲ್‌ನಲ್ಲಿ 'ಬಾಲಗೃಹ' (೧೯೪೧) ಎಂಬ ಅನಾಥಾಲಯಗಳನ್ನು ಆರಂಭಿಸಿದ್ದಾರೆ.[೪೭] 'ಮಕ್ಕಳ ಮನೆ' ಇರುವ ಕಡೆಗಳಲ್ಲೆಲ್ಲಾ ಧರ್ಮಭಗಿನಿಯರು ತಮ್ಮ ಹೆಚ್ಚಿನ ಸಮಯವನ್ನು ಮಕ್ಕಳ ದೈಹಿಕ, ಭಾವನಾತ್ಮಕ, ಆಧ್ಯಾತ್ಮಿಕ ಮತ್ತು ಬೌದ್ಧಿಕ ಬೆಳವಣಿಗೆಗೆ ನೆರವು ನೀಡುವುದರಲ್ಲಿ ಕಳೆಯುತ್ತಾರೆ. ಅನಾಥಾಲಯದ ಮಕ್ಕಳಿಗೆ ಕೈ ಕೆಲಸಗಳಾದ ಅಡುಗೆ, ಕಾಯಿಪಲ್ಯ ಬೆಳೆಸುವುದು, ಗುಡಿಸುವುದು, ಮನೆಯ ಸ್ವಚ್ಛಂದತೆ, ಇತ್ಯಾದಿ ಕಲಿಸಲಾಗುತ್ತದೆ.[೪೮]

ಇದೇ ರೀತಿಯಲ್ಲಿ , ಮಂಗಳೂರಿನ ಇನ್ಫೆಂಟ್ ಜೀಸಸ್ ಅನಾಥಾಶ್ರಮ, ವಿಜಯಡ್ಕದ ಶಾಂತಿ ಆಶ್ರಮ, ವೊರ್ಕಾಡಿನ ಸೈಂಟ್ ಜೋಸೆಫ್ಸ್ ಅನಾಥಾಶ್ರಮ, ಬೇಳದ ಬಾರ್ಥೊಲೋಮಿಯೊ ಅನಾಥಾಶ್ರಮ ಇತ್ಯಾದಿ ಅನಾಥಾಶ್ರಮಗಳು ಬಡ ನಿರ್ಗತಿಕರಿಗೆ, ಶೋಷಣೆಗೆ ಒಳಪಟ್ಟವರಿಗೆ

ಆಶಾಕಿರಣವಾಗಿವೆ. ಶಿಕ್ಷಣ ಪಡೆಯಬೇಕೆಂಬ ಹಂಬಲ ಇರುವ ಮಕ್ಕಳಿಗಾಗಿ ಅನಾಥಾಶ್ರಮಗಳನ್ನು ಸರಕಾರದ ನೆರವಿನಿಂದ ಅಥವಾ ನೆರವು ಇಲ್ಲದೆಯೇ ಆರಂಭಿಸಿ ಅಂಚಿಗೆ ತಳ್ಳಲ್ಪಟ್ಟವರು, ದಲಿತರು ಮುಂತಾದವರ ಬಾಳಿನಲ್ಲಿ ಬೆಳಕು ಹಚ್ಚಿದವರು ಕ್ರೈಸ್ತ ಮಿಶನರಿಗಳು ಹಾಗೂ ಸಂಸ್ಥೆಗಳು. ಧಾರ್ಮಿಕ ಸಭೆಗಳ ನೇತೃತ್ವದಲ್ಲಿ ಪ್ರಾರಂಭಗೊಂಡ ಇಂತಹ ಆಶ್ರಮಗಳು ಇತರ ವ್ಯಕ್ತಿಗಳು ಹಾಗೂ ಸಮುದಾಯದವರ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. ಆದುದರಿಂದಲೇ ಇಂದಿನ ದಿನಗಳಲ್ಲಿ ಕ್ರೈಸ್ತೇತರರೂ ನಡೆಸುವ ಸಾಕಷ್ಟು ಆಶ್ರಮಗಳು ಕಾಣ ಸಿಗುತ್ತವೆ.

## ೪.೨. ವೃದ್ಧಾಶ್ರಮಗಳು

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದೇಶದ ಇತರ ಭಾಗಗಳಲ್ಲಿದ್ದಂತೆಯೇ ಅವಿಭಕ್ತ ಮತ್ತು ಪುರುಷ ಪ್ರಧಾನ ಕುಟುಂಬ ಪದ್ಧತಿ ಜಾರಿಯಲ್ಲಿತ್ತು. ಕುಟುಂಬದ ಎಲ್ಲಾ ಸದಸ್ಯರು ಒಟ್ಟಿಗೆ ಜೀವಿಸುವುದು ಹಾಗೂ ಕುಟುಂಬದ ಹಿರಿಯ ಗಂಡು ಸಂತಾನ ಮನೆಯೊಡೆಯನ ಸ್ಥಾನವನ್ನು ಅಥವಾ ಗೌರವವನ್ನು ಪಡೆಯುವುದು ಸಂಪ್ರದಾಯವಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ವೃದ್ಧ ತಂದೆ-ತಾಯಂದಿರ ಅಥವಾ ಇತರ ವಯೋವೃದ್ಧರ ಪಾಲನೆ ಪೋಷಣೆ ಕುಟುಂಬದ ಕರ್ತವ್ಯವಾಗಿತ್ತು. ಆದರೆ ೨೦ನೇ ಶತಮಾನದ ಉತ್ತರಾರ್ಧದಲ್ಲಿ ಮುಖ್ಯವಾಗಿ ಎರಡನೇ ಮಹಾಯುದ್ಧದ ನಂತರ ಆರ್ಥಿಕ ಪರಿಸ್ಥಿತಿಯಲ್ಲುಂಟಾದ ಏರುಪೇರಿನಿಂದಾಗಿ ಜನ ಜೀವನ ಬಹಳ ಕಷ್ಟವಾಯಿತು. ಕುಟುಂಬದ ನಿರ್ವಹಣೆಗೆ ಜನರು ತಡಕಾಡಬೇಕಾಯಿತು. ನಿರುದ್ಯೋಗ, ಬಡತನ, ಶಿಕ್ಷಣ, ಜನಸಂಖ್ಯಾ ಹೆಚ್ಚಳ, ಕೃಷಿ ಭೂಮಿಯ ಅಲಭ್ಯತೆ ಮುಂತಾದ ಕಾರಣಗಳು ಜನರು ಸೂಕ್ತ ಕೆಲಸ ಹುಡುಕಿಕೊಂಡು ಹೋಗಲು ಕಾರಣವಾಯಿತು. ವಿನ್ಸೆಂಟ್ ಆಳ್ವ ಅವರ ಪ್ರಕಾರ, ಸಾಮಾಜಿಕ ಪರಿಸ್ಥಿತಿಯ ಬದಲಾವಣೆ, ಆರ್ಥಿಕ ಒತ್ತಡಗಳು, ಅಂತರ ಕಲಹಗಳು, ಆಸ್ತಿ ವಿವಾದಗಳು, ಬ್ರಹ್ಮಚರ್ಯ ಮುಂತಾದವು ವೃದ್ಧರು ಆಶ್ರಮ ಸೇರಲು ಮುಖ್ಯ ಕಾರಣಗಳಾಗಿವೆ.[೪೯] ವಲಸೆಯು ಸಮಾಜದ ಮೇಲೆ ಋಣಾತ್ಮಕ ಪರಿಣಾಮವನ್ನು ಬೀರಿತು. ಎಪ್ಪತ್ತರ ದಶಕದ ಬಳಿಕ ಜನರು ಎಲ್ಲಾ ದಿಕ್ಕುಗಳಿಗೆ ಪ್ರಯಾಣ ಬೆಳೆಸುವುದನ್ನು ಪ್ರಾರಂಭಿಸಿದ್ದರಿಂದ ವಲಸೆಯು ಹೆಚ್ಚು ಸಂಕೀರ್ಣವಾಗತೊಡಗಿತು. ಇದರ ಫಲವಾಗಿ ಪಶ್ಚಿಮ ಏಶ್ಯಾ ದೇಶಗಳಿಗೆ ಹೋಗಿ ನೆಲೆಸಿದ ಶ್ರೀಮಂತ ಜನರು ತಮ್ಮ ವಯಸ್ಸಾದ ತಂದೆ ತಾಯಿಗಳನ್ನು ವೃದ್ಧಾಶ್ರಮದಲ್ಲಿ ಬಿಡತೊಡಗಿದರು. ೧೯೮೦ರಲ್ಲಿ ಅನೇಕ ವೃದ್ಧಾಶ್ರಮಗಳು ತಲೆಯೆತ್ತಲಾರಂಭಿಸಿದವು. ಇವುಗಳು ಆಯಾ ಸಾಮಾಜಿಕ ಪದ್ಧತಿ ಮತ್ತು ಆಚರಣೆಗಳನ್ನು ಅನುಸರಿಸುವ ಧಾರ್ಮಿಕ ಗುಂಪುಗಳಿಂದ ಪ್ರಾರಂಭವಾದುವುಗಳಾಗಿವೆ.[೫೦] ಸೈಂಟ್ ಆ್ಯನ್ಸ್ ವೃದ್ಧಾಶ್ರಮವನ್ನು ಮಂಗಳೂರಿನ ಬಳಿ ಇರುವ ಅಂಜಲೂರಿನಲ್ಲಿ ಸಿಸ್ಟರ್ಸ್ ಆಫ್ ಸೈಂಟ್ ಆ್ಯನ್ಸ್ ಆಫ್ ಪ್ರೋವಿಡೆನ್ಸ್ (ಎಸ್.ಎ.ಪಿ.) ಅವರು ೧೯೪೯ರಲ್ಲಿ ಸ್ಥಾಪಿಸಿದರು.[೫೧]

### ೪.೨.೧. ಕ್ರಿಸ್ತ ಸೇವಕಿ ಆಶ್ರಮ

ಕ್ರಿಸ್ತ ಸೇವಕಿ ಆಶ್ರಮವು ಕಾರ್ಕಳ ತಾಲೂಕಿನ ಪರ್ಪಲೆ ಗುಡ್ಡದಲ್ಲಿದ್ದ ಕ್ರೈಸ್ತ ಮಿಶನರಿಗಳ ಹಳೆ ಬಂಗಲೆಯಲ್ಲಿ ೧೯ ನವಂಬರ್ ೧೯೫೦ರಂದು ಅಸ್ತಿತ್ವಕ್ಕೆ ಬಂತು.[೫೨] ಈ ಆಶ್ರಮವನ್ನು ಭಗಿನಿಯರಾದ ಹನ್ನ ಎಷಿಮನ್ಸ್, ಕೆತ್ತಿಯ ಕುಂದರ್ ಮತ್ತು ಲೀಲಾವತಿ ಅಮ್ಮನ್ನರವರು ಪ್ರಾರಂಭಿಸಿದರು. ಉಡುಪಿ ಆಸ್ಪತ್ರೆಯಲ್ಲಿ ಕೂಡಾ ಟಿ.ಬಿ. (ಕ್ಷಯರೋಗ) ಚಿಕಿತ್ಸಾ ಕೇಂದ್ರ ಆರಂಭವಾದ ಮೇಲೆ ಪರ್ಪಲೆಯಲ್ಲಿನ ಅನೇಕ ರೋಗಿಗಳನ್ನು ಉಡುಪಿಗೆ ಸ್ಥಳಾಂತರಿಸಲಾಯಿತು.[೫೩] ೧೯೮೪ರಲ್ಲಿ ಮಂಗಳೂರಿನ ಕಾಟಿಪಳ್ಳದ ಇಂದಿರಾ ನಗರದಲ್ಲಿಯೂ ಗ್ರಾಮೀಣ ಆರೋಗ್ಯ ಕೇಂದ್ರವನ್ನು ತೆರೆಯಲಾಯಿತು.[೫೪] ಆಶ್ರಮದಲ್ಲಿ ಅನಾಥ ಶಿಶುಗಳನ್ನು, ಗತಿವಿಹೀನ ವೃದ್ಧ ಸ್ತ್ರೀಯರನ್ನು, ನಿರಾಧಾರ ಪ್ರಾಯ ಪ್ರಬುದ್ಧ ಪುರುಷರನ್ನು ಸ್ವಯಂ ಸೇವಕಿಯರ ಸೇವೆಯ ಮೂಲಕ ಪರಿಪಾಲಿಸಲಾಗುತ್ತದೆ. ವೃದ್ಧಾಶ್ರಮಗಳು ವೃದ್ಧ ಸ್ತ್ರೀ -ಪುರುಷರಿಗೆ ಸಾಯುವ ಮುನ್ನ ಮನಶಾಂತಿಯನ್ನು, ಪ್ರೀತಿಯನ್ನು , ನೆಮ್ಮದಿಯನ್ನು ಕಲ್ಪಿಸುತ್ತವೆ. ಕ್ರೈಸ್ತ ಸೇವೆ ಕ್ರಿಸ್ತನ ಪ್ರೀತಿಯಿಂದ ಕೂಡಿದ ನಿಸ್ವಾರ್ಥ ಸೇವೆಯನ್ನು ಪ್ರತಿನಿಧಿಸುತ್ತದೆ. ಪರ್ಪಲೆಯಲ್ಲಿರುವ ಆಶ್ರಮ, ಭಗಿನಿಯರ ಒಂದು ಸ್ವತಂತ್ರ ಆಶ್ರಮ.[೫೫] ಈ ಆಶ್ರಮದ ಮಹಿಳೆಯರು ಸ್ತ್ರೀಯರ, ಪ್ರಾರಂಭದಲ್ಲಿ ಉಡುಪಿಯ ಬಾಸೆಲ್ ಮಿಶನ್ ಆಸ್ಪತ್ರೆಯ ಸಹಯೋಗದೊಂದಿಗೆ ಸೇವೆಯನ್ನು ನೀಡುತ್ತಿದ್ದರು.[೫೬] ಪರ್ಪಲೆ ಆಶ್ರಮ ಬಂಜೆತನದಿಂದ ಕೊರಗುವ ಹೆತ್ತವರಿಗೆ ಮಕ್ಕಳನ್ನು ದತ್ತು ತೆಗೆದುಕೊಂಡು ಸಾಕುವಂತೆ ಉತ್ತೇಜನ ನೀಡುವ ಮೂಲಕ 'ಮಡಿಲ ಭಾಗ್ಯ'ವನ್ನು ನೀಡಿ ಅವರಲ್ಲಿರುವ ಕೊರತೆಯನ್ನು ನೀಗಿಸುತ್ತದೆ.

### ೪.೨.೨.ಒಲವಿನ ಹಳ್ಳಿ ಆಶ್ರಮ

ಮಂಗಳೂರಿನ ದೇರಳಕಟ್ಟೆಯ ಹತ್ತಿರ ಇರುವ ಕಿನ್ಯಾದಲ್ಲಿ ಕುಷ್ಠರೋಗ ಮತ್ತು ಕ್ಷಯರೋಗದಿಂದ ನರಳುತ್ತಿರುವವರಿಗಾಗಿ ಹಾಗೂ ಅನಾಥರಿಗೆ ಒಂದು ಆಶ್ರಯ ಮತ್ತು ಪುನರ್ವಸತಿ ಕಲ್ಪಿಸುವ ಉದ್ದೇಶದಿಂದ 'ಒಲವಿನ ಹಳ್ಳಿ' ಆರಂಭಗೊಂಡಿತು. ಕೆಲಸ ಮಾಡಲು ಸಾಧ್ಯವಾಗದೆ ನಿರ್ಗತಿಕರಾದವರಿಗೆ ಒಲವಿನ ಹಳ್ಳಿ ಬದುಕಲು ಒಂದು ಪ್ರೀತಿಯ ಆಶ್ರಯ ನೀಡುತ್ತದೆ.[೫೭]

### ೪.೨.೩. ಹೋಲಿ ಕ್ರಾಸ್ ವೃದ್ಧಾಶ್ರಮ

ಕುಂದಾಪುರ ತಾಲೂಕಿನ ತ್ರಾಸಿಯಲ್ಲಿ ಹೋಲಿ ಕ್ರಾಸ್ ಆಸ್ಪತ್ರೆ ಮುಚ್ಚಲ್ಪಟ್ಟ ಬಳಿಕ ಆಸ್ಪತ್ರೆಯ ಕಟ್ಟಡವನ್ನು ಹೋಲಿ ಕ್ರಾಸ್ ವೃದ್ಧಾಶ್ರಮವಾಗಿ ೧೯೮೧ರಲ್ಲಿ ಮಾರ್ಪಾಡಿಸಲಾಗಿದೆ. ಪ್ರಾರಂಭದಲ್ಲಿ ಬೆರಳೆಣಿಕೆಯಷ್ಟು ಮಂದಿ ಮಾತ್ರ ವೃದ್ಧಾಶ್ರಮದಲ್ಲಿದ್ದರು. ಆದರೆ ಕಾಲಕ್ರಮೇಣ ಅವರ ಸಂಖ್ಯೆ ಹೆಚ್ಚುತ್ತಾ

ಪ್ರಸ್ತುತ ೨೭ ಮಂದಿ ನೆಮ್ಮದಿಯಿಂದ ಬಾಳ್ವೆ ನಡೆಸುತ್ತಿದ್ದಾರೆ. ಸಿಸ್ಟರ್ಸ್ ಆಫ್ ಮರ್ಸಿ ಆಫ್ ದ ಹೋಲಿ ಕ್ರಾಸ್ (ಎಸ್.ಸಿ.ಎಸ್.ಸಿ.) ಸಭೆಯವರು ಆಶ್ರಮದ ನಿರ್ವಹಣೆಯ ಹೊಣೆ ಹೊತ್ತಿದ್ದಾರೆ.[೫೮]

### ೪.೨.೪. ಒರ್ಘೊನಂ ಹೋಮ್ ಫಾರ್ ದ ಏಜ್ಡ್

'ಒರ್ಘೊನಂ ಹೋಂ ಫಾರ್ ದ ಏಜ್ಡ್' ಅನ್ನು ಅಂತರರಾಷ್ಟ್ರೀಯ ಅಸ್ವಸ್ಥರ ಮತ್ತು ವೃದ್ಧರ ವರ್ಷದಂದು ಅಂದರೆ ೧೯೮೨ರಂದು ಸ್ಥಾಪಿಸಲಾಯಿತು. ಆಶ್ರಮದ ಸ್ಥಾಪನೆಗೆ ಅಗತ್ಯವಿರುವ ಸ್ಥಳವನ್ನು ಕಲ್ಯಾಣಪುರದ ಕ್ವಾಡ್ರಸ್ ಸಹೋದರಿಯರಾದ ನತಾಲಿಯಾ ಕ್ವಾಡ್ರಸ್ ಮತ್ತು ಮಾರ್ಗರೇಟ್ ಕ್ವಾಡ್ರಸ್ ನೀಡಿದರು.[೫೯] ಸೊಸೈಟಿ ಆಫ್ ಸೈಂಟ್ ವಿನ್ಸೆಂಟ್ ಡಿ ಪೌಲ್ ಉಡುಪಿ, ಪರ್ಟಿಕ್ಯುಲರ್ ಕೌನ್ಸಿಲ್, ಉಡುಪಿ ಅವರ ನೇತೃತ್ವದಲ್ಲಿ ೨ ಮಂದಿ ಆಶ್ರಮವಾಸಿಗಳೊಂದಿಗೆ ಒರ್ಘೊನಂ ವೃದ್ಧಾಶ್ರಮ ಜನ್ಮ ತಳೆಯಿತು.[೬೦] ಪ್ರಾರಂಭದಲ್ಲಿ ಮೇರಿ ಅಪೋಸ್ತಲ ರಾಣಿ ಧರ್ಮಭಗಿನಿಯರು (Sisters Mary the Queen of the Apostles - SRA), ಸಂಸ್ಥೆಯ ನಿರ್ವಹಣೆಯಲ್ಲಿ ಆಡಳಿತ ಮಂಡಳಿಯವರಿಗೆ ನೆರವಾಗುತ್ತಿದ್ದರು.[೬೧] ೧೯೮೫ರಲ್ಲಿ 'ಒರ್ಘೊನಂ ಬ್ಲಾಕ್' ನಿರ್ಮಿಸಿ ೧೬ ಮಂದಿಗೆ ಆಶ್ರಯ ನೀಡಲಾಯಿತು. ಪತಿ ಪತ್ನಿಯವರಿಗೆ ಆಶ್ರಯ ನೀಡುವ 'ವಿನ್ಸೆಂಟ್ ಬ್ಲಾಕ್' ನೆದರ್‌ಲ್ಯಾಂಡ್ಸ್‌ನ ಪ್ಯೂಜೆನ್ ಬ್ರೂಕ್ ಪ್ರತಿಷ್ಠಾನದವರು ನೀಡಿದ ದೇಣಿಗೆಯಿಂದ ೧೯೮೬ರಲ್ಲಿ ಸ್ಥಾಪನೆಯಾಗಿದೆ. ೧೯೮೭ರಲ್ಲಿ ನಿರ್ಮಾಣಗೊಂಡ 'ಕೊಂತಾದೋರ್ ಫೆರಿನಿ ಬ್ಲಾಕ್'ನಲ್ಲಿ ವಿದೇಶಗಳಲ್ಲಿರುವ ಮಕ್ಕಳ ತಂದೆ-ತಾಯಂದಿರಿಗೆ ಆಶ್ರಯ ನೀಡಲಾಗುತ್ತಿದೆ. ಡಾ। ಎಂ.ಜೆ. ಲೂವಿಸ್‌ರವರ ಆರ್ಥಿಕ ನೆರವಿನಿಂದ ಕಾಮಿಲ್ ಮತ್ತು ಎವ್ಲಿನ್ ಲೂವಿಸ್ ಸ್ಮಾರಕ ಬ್ಲಾಕ್ ಅನ್ನು ೧೯೮೮ರಲ್ಲಿ ಸ್ಥಾಪಿಸಲಾಗಿದೆ. ೧೯೯೬ರಿಂದ ಆಶ್ರಮದ ನಿರ್ವಹಣೆಯನ್ನು ಬೆಥನಿ ಧರ್ಮಭಗಿನಿಯರು ನಿರ್ವಹಿಸುತ್ತಿದ್ದಾರೆ. ಸಂಸ್ಥೆಗೆ ತಗಲುವ ಖರ್ಚು ವೆಚ್ಚ ಉದಾರಿಗಳ ದೇಣಿಗೆಯಿಂದ ಸಂಗ್ರಹವಾಗುತ್ತದೆ. ಪ್ರಸ್ತುತ ೩೯ ಹಿರಿಯ ನಾಗರಿಕರು ಇಲ್ಲಿ ಆಶ್ರಯ ಪಡೆದಿದ್ದಾರೆ. ೨೦೦೭ರಲ್ಲಿ ಸಂಸ್ಥೆಯ ಬೆಳ್ಳಿಹಬ್ಬದ ಆಚರಣೆಯ ನೆನಪಿಗಾಗಿ 'ಮಿರಾಕಲ್ಸ್' (Miracles) ಎಂಬ ೨೪ ಮಂದಿಗೆ ಆಶ್ರಯ ನೀಡಬಹುದಾದ ಕಟ್ಟಡವನ್ನು ನಿರ್ಮಿಸಲಾಗಿದೆ.[೬೨] ವೃದ್ಧರಿಗೆ ತಮ್ಮ ಜೀವನದ ಕಡೆಯ ದಿನಗಳನ್ನು ಶಾಂತಿ ಸಮಾಧಾನದಲ್ಲಿ ಕಳೆಯಲು ಅನುವು ಮಾಡಿ ಕೊಡುವ ಉದ್ದೇಶದಿಂದ ಒರ್ಘೊನಂ ಆಶ್ರಮವನ್ನು ಹುಟ್ಟುಹಾಕಲಾಗಿದೆ.[೬೩]

### ೪.೨.೫. ಲಿಟ್ಲ್ ಸಿಸ್ಟರ್ಸ್ ಆಫ್ ದ ಪುವರ್ ಹೋಮ್ ಫಾರ್ ದ ಏಜ್ಡ್

ಮಂಗಳೂರಿನ ಬಜ್ಜೋಡಿಯಲ್ಲಿರುವ ಬಡ ಕಿರಿಯ ಧರ್ಮಭಗಿನಿಯರ (ಲಿಟ್ಲ್ ಸಿಸ್ಟರ್ಸ್ ಆಫ್ ದ ಪುವರ್) ಸಭೆಯವರು ಪ್ರಪಂಚದಾದ್ಯಂತ ಬಡ ವಯೋವೃದ್ಧರ ಸೇವೆಯಲ್ಲಿ ನಿರತರಾಗಿದ್ದಾರೆ. ಈ

ಸಭೆಯ ಸ್ಥಾಪಕಿ ಜೀನ್ ಜುಗಾನ್ ಎಂಬುವವರು ೧೮೩೯ರಲ್ಲಿ ಒಬ್ಬ ಹಾಸಿಗೆ ಹಿಡಿದಿದ್ದ ಪಾರ್ಶ್ವವಾಯು ಪೀಡಿತ ಕುರುಡಿಯ ಶುಶ್ರೂಷೆಯೊಂದಿಗೆ ತಮ್ಮ ಸೇವೆಯನ್ನು ಪ್ರಾರಂಭಿಸಿದರು. ಅವರು ಸ್ಥಾಪಿಸಿದ ಬಡ ಕಿರಿಯ ಧರ್ಮಭಗಿನಿಯರ ಸಭೆ ಅವರ ಮರಣದ (೧೮೭೯) ಸಮಯದಲ್ಲಿ ೧೦ ರಾಷ್ಟ್ರಗಳಲ್ಲಿ ೧೭೭ ನಿವಾಸಗಳಲ್ಲಿ ೨೪೦೦ ಧರ್ಮಭಗಿನಿಯರು ವೃದ್ಧರ ಸೇವೆಯಲ್ಲಿ ನಿರತರಾಗಿದ್ದರು. ಪ್ರಸ್ತುತ ೩೧ ರಾಷ್ಟ್ರಗಳಲ್ಲಿ, ೨೩೫ ಸೇವಾ ಕೇಂದ್ರಗಳಲ್ಲಿ ವೃದ್ಧರ ಸೇವೆಯನ್ನು ಬಡ ಕಿರಿಯ ಧರ್ಮಭಗಿನಿಯರು ಮಾಡುತ್ತಿದ್ದಾರೆ. ಭಾರತದಲ್ಲಿ ಈ ಸಭೆಯ ಸೇವೆ ೧೮೮೨ರಿಂದ ಲಭಿಸುತ್ತಿದೆ. ಕಾಲಕ್ರಮೇಣ ಮಂಗಳೂರಿಗೂ ವಿಸ್ತರಿಸಿದ ಅವರ ಸೇವೆ ನಿರಂತರವಾಗಿ ನಡೆಯುತ್ತಿದೆ. ಬಜ್ಜೋಡಿಯ ವೃದ್ಧಾಶ್ರಮದಲ್ಲಿ ಪ್ರಸ್ತುತ ೮೫ ವೃದ್ಧ –ವೃದ್ಧೆಯರು ತಮ್ಮ ಜೀವನದ ಕಡೆಯ ದಿನಗಳನ್ನು ಕಳೆಯುತ್ತಿದ್ದಾರೆ.[೬೪]

### ೪.೨.೬. ಜಯರಾಣಿ ವೃದ್ಧಾಶ್ರಮ

ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ತಲ್ಲೂರಿನ ಜಯರಾಣಿ ವೃದ್ಧಾಶ್ರಮವನ್ನು ಸಿಸ್ಟರ್ಸ್ ಆಫ್ ಅವರ್ ಲೇಡಿ ಆಫ್ ಫಾತಿಮಾ, ಪೂನಾ ಸಭೆಯವರು ೧೯೮೯ರಲ್ಲಿ ಆರಂಭಿಸಿದ್ದಾರೆ. ಪ್ರಾರಂಭದಲ್ಲಿ ಆಸುಪಾಸಿನ ಜನರಿಗೆ ಆರೋಗ್ಯ ಸೇವೆ ನೀಡುವ ಉದ್ದೇಶದಿಂದ ಜಯರಾಣಿ ಹೆಲ್ತ್ ಸೆಂಟರ್ ಪ್ರಾರಂಭವಾಯಿತು. ಕಾಲಕ್ರಮೇಣ ಆಸ್ಪತ್ರೆ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಾಗ, ಆಸ್ಪತ್ರೆ ಕಟ್ಟಡವನ್ನು ಸದ್ಬಳಕೆ ಮಾಡುವ ಉದ್ದೇಶದಿಂದ ವೃದ್ಧಾಶ್ರಮವಾಗಿ ಪರಿವರ್ತಿಸಿ, ಆರೋಗ್ಯ ಸೇವೆಯೊಂದಿಗೆ ವೃದ್ಧರ ಆರೈಕೆಯನ್ನು ಕೈಗೆತ್ತಿಕೊಳ್ಳಲಾಗಿದೆ. ಪ್ರಸ್ತುತ ೨೦ ಮಂದಿ ಆಶ್ರಯ ಪಡೆದು ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದಾರೆ. ವೃದ್ಧ-ವೃದ್ಧೆಯರಿಗೆ ಇಲ್ಲಿ ಉತ್ತಮ ವೈದ್ಯಕೀಯ ಆರೈಕೆ ದೊರೆಯುತ್ತಿರುವುದರಿಂದ ಕೆಲಸ ಅರಸಿ ದೂರದೂರಿಗೆ ಹೋಗುವ ಮಕ್ಕಳು ತಮ್ಮ ಹೆತ್ತವರನ್ನು ಈ ಆಶ್ರಮದಲ್ಲಿ ಬಿಟ್ಟು ಹೋಗುತ್ತಾರೆ. ಜನ್ಮ ನೀಡಿದ ತಂದೆ-ತಾಯಿಗಳು ಭಾರವಾಗಿ ಆಶ್ರಮ ಸೇರುತ್ತಿರುವ ಇಂದಿನ ದಿನಗಳಲ್ಲಿ ಮಕ್ಕಳು ನಿರ್ವಹಿಸಬೇಕಾದ ಕರ್ತವ್ಯವನ್ನು ಧರ್ಮಭಗಿನಿಯರು ನಿರ್ವಹಿಸಿ ಅವರ ದುಃಖ ದುಮ್ಮಾನಗಳನ್ನು ಹಗುರಗೊಳಿಸುತ್ತಿರುವುದು ಸಮಾಜಕ್ಕೆ ಕ್ರೈಸ್ತರು ನೀಡುತ್ತಿರುವ ಮಹತ್ತರ ಕೊಡುಗೆಯಾಗಿದೆ.[೬೫]

### ೪.೨.೭. ನಿತ್ಯಾಧಾರ ವೃದ್ಧಾಶ್ರಮ

ನಿತ್ಯಾಧಾರ ವೃದ್ಧಾಶ್ರಮವನ್ನು ಉಡುಪಿ ಜಿಲ್ಲೆಯ ಸಾಸ್ತಾನದಲ್ಲಿ ೧೯೯೨ರಲ್ಲಿ ಮಿಶನ್ ಸಿಸ್ಟರ್ಸ್ ಆಫ್ ಅಜ್ಮೀರ್ ಸಭೆಯವರು ಭ। ಅಂಜಲಾರವರ ನೇತೃತ್ವದಲ್ಲಿ ಆರಂಭಿಸಿದರು. ಪ್ರಾರಂಭದಲ್ಲಿ ಇದೊಂದು ಹೆಸರಾಂತ ಆಸ್ಪತ್ರೆಯಾಗಿತ್ತು. ಕಾಲಕ್ರಮೇಣ ಈ ಆಸ್ಪತ್ರೆ ತನ್ನ ಪ್ರಾಮುಖ್ಯತೆಯನ್ನು

ಕಳೆದುಕೊಂಡಿತು. ಇಂತಹ ಪರಿಸ್ಥಿತಿಯಲ್ಲಿ ಆಸ್ಪತ್ರೆ ಕಟ್ಟಡವನ್ನು ಅರ್ಥಭರಿತವಾಗಿ ಬಳಸಿಕೊಳ್ಳುವ ಉದ್ದೇಶದಿಂದ ವೃದ್ಧಾಶ್ರಮವಾಗಿ ಪರಿವರ್ತಿಸಿದರು. ಹಣ, ಆಸ್ತಿಪಾಸ್ತಿ, ಮಕ್ಕಳು ಎಲ್ಲವೂ ಇದ್ದರೂ ತಮ್ಮವರ ಪ್ರೀತಿ, ಗೌರವದಿಂದ ವಂಚಿತರಾದ ಹಿರಿಯ ನಾಗರಿಕರಿಗೆ ಈ ವೃದ್ಧಾಶ್ರಮ ಆಸರೆಯಾಗಿದೆ. ಆದುದರಿಂದ ನಿತ್ಯಾಧಾರ ವೃದ್ಧಾಶ್ರಮದಲ್ಲಿ ಪ್ರಸ್ತುತ ೪೫ ಮಂದಿ ವೃದ್ಧರು ಆಶ್ರಯ ಪಡೆಯುತ್ತಿದ್ದಾರೆ.[೬೬]

### ೪.೨.೮. ವೈಟ್ ಡವ್ಸ್ ಹೋಂ ಕರಂಗಲ್ಪ್ಪಾಡಿ

'ವೈಟ್ ಡವ್ಸ್ ಹೋಂ' ಎಂಬ ಸರ್ಕಾರೇತರ ಸಂಸ್ಥೆ ೧೯೯೪ರಲ್ಲಿ ಒಂದು ವಿಶ್ವಸ್ಥ ಮಂಡಳಿಯಾಗಿ ನೋಂದಾವಣೆಯಾಗುವುದರೊಂದಿಗೆ ಅಸ್ತಿತ್ವಕ್ಕೆ ಬಂತು. ಕೊರೈನ್ ರಸ್ಕಿನ್ಹಾ ಎಂಬ ಮಹಿಳೆ ಇದರ ಸ್ಥಾಪಕಿಯಾಗಿದ್ದು ಸಂಪೂರ್ಣವಾಗಿ ಗ್ರಹಸ್ಥರು (laity)ನಡೆಸುತ್ತಿರುವ ಸಮಾಜ ಸೇವಾಸಂಸ್ಥೆಯಾಗಿದೆ. ಈ ಸಂಸ್ಥೆಯಲ್ಲಿ ಜಾತಿ, ಮತ, ಬೇಧವಿಲ್ಲದೆ ನಿರ್ಗತಿಕರಿಗೆ ಆಶ್ರಯ ನೀಡಲಾಗುತ್ತಿದೆ. ಹೆಚ್ಚಿನ ಇಲ್ಲಿಯ ಆಶ್ರಮವಾಸಿಗಳು ಬೀದಿಗಳಲ್ಲಿ ಗೊತ್ತು ಗುರಿ ಇಲ್ಲದೆ ಅಲೆದಾಡುತ್ತಿದ್ದವರು. ಅವರನ್ನು ಆಶ್ರಮಕ್ಕೆ ತಂದು ಅವರಿಗೆ ಉಡುಗೆ-ತೊಡುಗೆ, ಅನ್ನ ಪಾನಾದಿಗಳನ್ನು ನೀಡಿ ಅವರ ವೈದ್ಯಕೀಯ, ಆಧ್ಯಾತ್ಮಿಕ ಬೇಡಿಕೆಗಳನ್ನು ಪೂರೈಸಿ ಅವರು ಒಂದು ಸ್ವಚ್ಛಂದ ಜೀವನ ನಡೆಸಲು ನೆರವಾಗುವುದೇ 'ವೈಟ್ ಡವ್ಸ್ ಹೋಂ' ಮಾಡುತ್ತಿರುವ ಕೆಲಸ. ಗಂಡಸರು ಹಾಗೂ ಹೆಂಗಸರನ್ನು ಪ್ರತ್ಯೇಕವಾಗಿ ಇರಿಸಿ ಅವರ ಆರೈಕೆ, ಪಾಲನೆ-ಪೋಷಣೆ ಮಾಡಲಾಗುತ್ತಿದೆ. ಬಡ ಹಿಂದುಳಿದ ವರ್ಗದವರ ಮುಖದಲ್ಲಿ ನಗುವನ್ನು ತರುವ ಉದ್ದೇಶದಿಂದ ಕೆಲವಾರು ಸೇವಾ ವಿಸ್ತರಣಾ ಕಾರ್ಯಕ್ರಮಗಳನ್ನು ಆಶ್ರಯದ ವತಿಯಿಂದ ಹಮ್ಮಿಕೊಳ್ಳಲಾಗುತ್ತಿದೆ. ಇವುಗಳಲ್ಲಿ ಮುಖ್ಯವಾದ ಕೆಲವು ಕಾರ್ಯಕ್ರಮಗಳು ಇಂತಿವೆ: ನಿರ್ಗತಿಕ ಬೀದಿ ವಾಸಿಗಳ ಹಸಿವನ್ನು ನೀಗಿಸುವ ಉದ್ದೇಶದಿಂದ ವೈಟ್ ಡವ್ಸ್ ಹೋಂನಲ್ಲಿ ತಯಾರಿಸಿದ ಆಹಾರವನ್ನು ಪೊಟ್ಟಣ ಕಟ್ಟಿ ಸುಮಾರು ೨೦ ಜನರಿಗೆ ಪ್ರತೀ ದಿನ ಹಂಚುವುದು, ಮಾಸಿಕ ಪಡಿತರ ಹಂಚಿಕೆ ಕಾರ್ಯಕ್ರಮದಡಿ ಆಯ್ದ ಕೆಲವು ಬಡ ಕುಟುಂಬಗಳಿಗೆ ಅಕ್ಕಿ ಪೂರೈಸುವುದು, ಶಿಕ್ಷಣ ನಿಧಿ ಸ್ಥಾಪಿಸಿ ಬಡ ಅರ್ಹ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸಕ್ಕಾಗಿ ಆರ್ಥಿಕ ಹಾಗೂ ಇತರ ಅವಶ್ಯಕ ನೆರವನ್ನು ನೀಡುವುದು ಮತ್ತು ಅವರ ಶಿಕ್ಷಣ ಯಾವುದೇ ಅಡೆತಡೆಯಿಲ್ಲದೆ ಮುಂದುವರಿಸಲು ಸಹಕರಿಸುವುದು, ಗೃಹ ನಿರ್ಮಾಣ ಮತ್ತು ಮನೆ ರಿಪೇರಿ ಯೋಜನೆಯಡಿ ಅಗತ್ಯ ಇರುವವರಿಗೆ ಆರ್ಥಿಕ ಹಾಗೂ ಇತರ ಸಹಾಯವನ್ನು ಕಲ್ಪಿಸುವುದು, ವೈದ್ಯಕೀಯ ತಪಾಸಣೆ ಹಾಗೂ ಚಿಕಿತ್ಸೆಗೆ ಆರ್ಥಿಕ ಸಹಾಯ ನೀಡುವುದು ಮತ್ತು ಸಬಲ ಆಶ್ರಮವಾಸಿಗಳಿಗೆ ಹೊಲಿಗೆ, ಕಾಲೊರಸಿ, ಮೇಜಿನ ಹೊದಿಕೆ, ಕಾಗದದ ಚೀಲಗಳು, ಪೊರಕೆ ತಯಾರಿಸುವ ತರಬೇತಿಯನ್ನು ನೀಡುವುದು ಮುಂತಾದ ಕಾರ್ಯಕ್ರಮಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. ಇವರ ನೆರವು

ಇಲ್ಲದಿದ್ದರೆ ಅದೆಷ್ಟೋ ಮಂದಿ ಬೀದಿ ಪಾಲಾದವರು ಸೂಕ್ತ ಔಷಧ, ಬಟ್ಟೆ, ಇತ್ಯಾದಿ ನೆರವು ಲಭಿಸದೆ ಅನಾರೋಗ್ಯದಿಂದ ಅನಾಥರಾಗಿ ಬಾಳಿ ಬೀದಿಯಲ್ಲೇ ಪ್ರಾಣ ಕಳೆದುಕೊಳ್ಳಬೇಕಿತ್ತು. ಮಾನವ ಜೀವದ ಬೆಲೆಯನ್ನು ಅರಿತು, ಅವರಿಗೆ ಆಶ್ರಯ ನೀಡಿ, ಅವರ ಜೀವನ ಅರ್ಥಭರಿತ ಮಾಡಿರುವಂತಹದ್ದು ಸಮಾಜಕ್ಕೆ ವೈಟ್ ಡವ್ಸ್ ಹೋಂನವರ ಅತ್ಯಂತ ದೊಡ್ಡ ಕೊಡುಗೆಯಾಗಿದೆ.[೬೭]

**೪.೨.೯. ಕರುಣಾಲಯ**

ಸೆಕ್ಯುಲರ್ ಫ್ರಾನ್ಸಿಸ್ಕನ್ ಸಹೋದರ/ರಿಯರು ನಡೆಸುವ 'ಕರುಣಾಲಯ' ಎಂಬ ವೃದ್ಧಾಶ್ರಮ, ಉಡುಪಿ ಜಿಲ್ಲೆಯ ಬ್ರಹ್ಮಾವರದ ಹತ್ತಿರ ಹೇರೂರು ಎಂಬಲ್ಲಿ ೨೪ ಅಕ್ಟೋಬರ್ ೧೯೯೫ರಲ್ಲಿ ಸ್ಥಾಪನೆಯಾಗಿದೆ. 'ಕರುಣಾಲಯ' ಒಂದು ವೃದ್ಧೆಯರ ಆಶ್ರಮ. ಇಲ್ಲಿ ಬಡ ದಿಕ್ಕಿಲ್ಲದ ವಯೋವೃದ್ಧೆಯರಿಗೆ ಉಚಿತ ವಸತಿ, ಆಹಾರ ಮತ್ತು ವೈದ್ಯಕೀಯ ನೆರವನ್ನು ನೀಡಲಾಗುತ್ತದೆ. ಆಶ್ರಮದ ನಿರ್ಮಾಣಕ್ಕೆ ಬೇಕಾದ ಸ್ಥಳವನ್ನು ಅಪ್ಲು ಡಿ ಅಲ್ಮೇಡಾ ಮತ್ತು ಸೆರಾಫಿನ್ ಡಿ ಅಲ್ಮೇಡಾ ದಂಪತಿಗಳು ಉದಾರವಾಗಿ ನೀಡಿ ಸಹಕರಿಸಿದ್ದಾರೆ. ವೃದ್ಧೆಯರನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಬೆಂಗಳೂರಿನ ಫ್ರಾನ್ಸಿಸ್ಕನ್ ಸಿಸ್ಟರ್ಸ್ ಆಫ್ ದ ಇಮ್ಯೂಕ್ಯುಲೇಟ್ ಸಭೆಯವರು ನಿಭಾಯಿಸುತ್ತಿದ್ದಾರೆ. ಸೆಕ್ಯುಲರ್ ಫ್ರಾನ್ಸಿಸ್ಕನ್ ಸಭೆ, ಗ್ರಹಸ್ಥರು ಅಥವಾ ಶ್ರೀ ಸಾಮಾನ್ಯರನ್ನೊಳಗೊಂಡಿರುವ ಒಂದು ಧಾರ್ಮಿಕಸಭೆ. ಇದರ ಸದಸ್ಯರು ತ್ಯಾಗ ಮಾಡಿ ತಮ್ಮ ಖರ್ಚಿನಲ್ಲಿ ಅಷ್ಟಿಷ್ಟು ಉಳಿಸಿ ಕಷ್ಟದಲ್ಲಿರುವ ತಮ್ಮ ಸಹೋದರ/ಸಹೋದರಿಯರ ಒಳಿತಿಗಾಗಿ ಶ್ರಮಿಸುತ್ತಿದ್ದಾರೆ. ಇತರರ ಜೀವನದಲ್ಲಿ ಬೆಳಕನ್ನು ತರುವುದು ಸಂಘದ ಧ್ಯೇಯವಾಗಿದೆ. ಇವರ ಸೇವಾ ಕಾರ್ಯದಿಂದ ಸ್ಫೂರ್ತಿ ಹೊಂದಿ ಹಲವಾರು ಧರ್ಮಕೇಂದ್ರದ ಹಂತದಲ್ಲಿ ಇಂತಹ ಆಶ್ರಮಗಳು ಆರಂಭಿಸಲ್ಪಟ್ಟಿವೆ.[೬೮]

**೪.೨.೧೦. ಸಿಯೋನ್ ನಿರ್ಗತಿಕರ ಆಶ್ರಮ:**

ಸಿಯೋನ್ ನಿರ್ಗತಿಕರ ಆಶ್ರಮವನ್ನು ಯು. ಸಿ. ಪೌಲೋಸ್ ಎಂಬವರು ಬೆಳ್ತಂಗಡಿ ತಾಲೂಕಿನ ಗಂಡಿಬಾಗಿಲು ಎಂಬಲ್ಲಿ ಒಬ್ಬ ಪಾರ್ಶ್ವವಾಯು ರೋಗಿಯ ಆರೈಕೆ ಮಾಡುವುದರೊಂದಿಗೆ ೧೯೯೯ರಲ್ಲಿ ಪ್ರಾರಂಭಿಸಿದರು. ಆರಂಭದಲ್ಲಿ, ಅವರು ತಮ್ಮ ಸ್ವಂತ ಮನೆಯಲ್ಲಿಯೇ ಸುಮಾರು ೬೫ ಮಂದಿಗೆ ವಾಸ್ತವ್ಯ ನೀಡಿ ಅವರೊಂದಿಗೆ ಅದೇ ಮನೆಯಲ್ಲಿ ಜೀವನ ನಡೆಸುತ್ತಿದ್ದರು. ನಂತರ, ೨೮ ಮಾರ್ಚ್ ೨೦೦೦ರಂದು ಸಿಯೋನ್ ಆಶ್ರಮ ಟ್ರಸ್ಟ್ (ರಿ) ಸ್ಥಾಪಿಸಿದರು. ಪ್ರಸ್ತುತ ೮೦ ಮಾನಸಿಕ ರೋಗಿಗಳು, ೫೫ ಬುದ್ಧಿಮಾಂದ್ಯರು, ೫೦ ಅಂಗವಿಕಲರು, ೭೦ ವೃದ್ಧರು, ೧೧ ಮಕ್ಕಳು, ಹಾಗೂ ೪ ಪುಟಾಣಿಗಳು ಒಟ್ಟು ೨೭೦ ಮಂದಿ ಆಶ್ರಯ ಪಡೆದಿದ್ದಾರೆ. ಬೀದಿಗಳಲ್ಲಿ ಅಸಹಾಯಕತೆಯಿಂದ ನರಳುತ್ತಿರುವ ನಿರ್ಗತಿಕರೂ,

ವೃದ್ಧರೂ, ರೋಗಿಗಳೂ, ಅಂಗವಿಕಲರೂ, ಅನಾಥರೂ ಮತ್ತು ಮನೋವಿಕಲರನ್ನು ತಂದು ಅವರಿಗೆ ಸ್ನಾನ, ಊಟ, ಬಟ್ಟೆ, ಔಷಧಿ ಮತ್ತು ಉಳಿದುಕೊಳ್ಳಲು ಆಶ್ರಯವನ್ನು ಉಚಿತವಾಗಿ ನೀಡಲಾಗುತ್ತಿದೆ. ಎಲ್ಲರಿಂದಲೂ ಕಡೆಗಣಿಸಲ್ಪಟ್ಟವರಿಗೆ ಸೇವೆ ಮಾಡಿ, ಮಾನವೀಯತೆಯನ್ನು ತೋರಿ ಜಾತಿ, ಮತ, ಭಾಷೆ ಮತ್ತು ಧರ್ಮಗಳ ಬೇಧವಿಲ್ಲದೆ ಇಲ್ಲಿಯ ನಿವಾಸಿಗಳನ್ನು ಪೋಷಿಸಿ ಸಮಾಜದಲ್ಲಿ ಒಂದು ಒಳ್ಳೆಯ ವ್ಯಕ್ತಿಯನ್ನಾಗಿ ರೂಪಿಸುವುದೇ ಈ ಸಂಸ್ಥೆಯ ಮೂಲ ಉದ್ದೇಶವಾಗಿದೆ.. 'ದೇವರನ್ನು ಪ್ರೀತಿಸುವವನು ಮಾನವನನ್ನು ಪ್ರೀತಿಸಲು ಸಾಧ್ಯ' ಎಂಬ ನಂಬಿಕೆಯಿಂದ ಈ ಆಶ್ರಮವನ್ನು ಮುನ್ನಡೆಸಲಾಗುತ್ತಿದೆ. ಸರ್ಕಾರದ ನೆರವಿಲ್ಲದೆ ಊರ ಮತ್ತು ಪರವೂರ ಸಾರ್ವಜನಿಕರ ಸಹಾಯದಿಂದ ಆಶ್ರಮವನ್ನು ನಡೆಸಲಾಗುತ್ತದೆ. ಜನಸಾಮಾನ್ಯನೊಬ್ಬ ಎಲ್ಲರಿಂದಲೂ ಕಡೆಗಣಿಸಲ್ಪಟ್ಟವರಗೆ ಪ್ರೀತಿಯಿಂದ ಸೇವೆ ಮಾಡಿ, ಮಾನವೀಯತೆಯನ್ನು ಮೆರೆಯುವುದು ಇತರರಿಗೆ ಅನುಕರಣೀಯ ಸ್ಫೂರ್ತಿಯಾಗಿದೆ.[೬೯]

ಧಾರ್ಮಿಕರು ಹಾಗೂ ಕೆಲವು ದಾನಶೀಲರು ಸ್ಥಾಪಿಸಿದ ಇತರ ವೃದ್ಧಾಶ್ರಮಗಳು ಇಂತಿವೆ: ಉಡುಪಿ ಜಿಲ್ಲೆಯ ಬೈಂದೂರಿನಲ್ಲಿ ಸಿಸ್ಟರ್ಸ್ ಆಫ್ ಅವರ್ ಲೇಡಿ ಆಫ್ ಫಾತಿಮಾ ಸಭೆಯವರು ನಿರ್ವಹಿಸುತ್ತಿರುವ 'ಸ್ನೇಹಾಲಯ,'[೭೦] ಫ್ರಾನ್ಸಿಸ್ಕನ್ ಸಿಸ್ಟರ್ಸ್ ಆಫ್ ಸೈಂಟ್ ಮೇರಿ ಆಫ್ ದ ಏಂಜಲ್ಸ್ ಸಭೆಯವರು ಮಂಗಳೂರಿನ ಹತ್ತಿರ ಕಾಟಿಪಳ್ಳದಲ್ಲಿ ನಡೆಸುತ್ತಿರುವ ಸೈಂಟ್ ಮೇರೀಸ್ ವೃದ್ಧಾಶ್ರಮ,[೭೧] ಫ್ರಾನ್ಸಿಸ್ಕನ್ ಕ್ಲಾರಿಸ್ಟ್ ಕಾಂಗ್ರೇಗೇಷನ್ ಧರ್ಮಭಗಿನಿಯರು ಬೆಳ್ತಂಗಡಿಯಲ್ಲಿ ನಡೆಸುವ 'ಅನುಗ್ರಹ ಭವನ' ಎಂಬ ವೃದ್ಧಾಶ್ರಮ ಮತ್ತು ಸೈಂಟ್ ಜೋಸೆಫ್ ಸಿಸ್ಟರ್ಸ್ ಆಫ್ ಸೈಂಟ್ ಮಾರ್ಕ್ ಸಭೆಯವರು ಉಡುಪಿ ಜಿಲ್ಲೆಯ ಪಲಿಮಾರು ಎಂಬಲ್ಲಿ ನಡೆಸುತ್ತಿರುವ ಸೈಂಟ್ ಜೋಸೆಫ್ಸ್ ವೃದ್ಧಾಶ್ರಮ.[೭೨]

**೪.೩. ವಸತಿನಿಲಯ (ಬೋರ್ಡಿಂಗ್)**

ಶೈಕ್ಷಣಿಕ ಕ್ಷೇತ್ರದಲ್ಲಿ ಕಳೆದ ೧೬೫ ವರ್ಷಗಳಲ್ಲಿ ಮಹತ್ತರ ಸಾಧನೆ ಮಾಡಿರುವ ದಕ್ಷಿಣ ಕನ್ನಡ ಜಿಲ್ಲೆ ಇಂದು ವಿವಿಧ ಕ್ಷೇತ್ರಗಳ ಶೈಕ್ಷಣಿಕ ವಿಶ್ವವಿದ್ಯಾಲಯಗಳನ್ನು ಹೊಂದಿ ದೇಶ ವಿದೇಶಗಳ ವಿದ್ಯಾರ್ಥಿಗಳನ್ನು ಆಕರ್ಷಿಸುತ್ತಿದೆ. ಶೈಕ್ಷಣಿಕ ಕೇಂದ್ರಗಳು ಸ್ಥಾಪನೆಯಾದಂತೆ ರಾಜ್ಯ ಮತ್ತು ಹೊರರಾಜ್ಯಗಳಿಂದ ವಿದ್ಯಾರ್ಥಿಗಳು ವಿದ್ಯಾಭ್ಯಾಸಕ್ಕಾಗಿ ಜಿಲ್ಲೆಗೆ ಬರತೊಡಗಿದ್ದರಿಂದ ವಸತಿ ಸಮಸ್ಯೆ ಉದ್ಭವವಾಯಿತು. ಹಾಗಾಗಿ, ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಬೇಕಾದ ಅನಿವಾರ್ಯತೆ ಉಂಟಾಯಿತು. ವಿದ್ಯಾರ್ಥಿ ನಿಲಯಗಳನ್ನು 'ದೂರದೂರಿನ ಮನೆ'(A Home away from home) ಎಂದು ಕರೆಯುವ ವಾಡಿಕೆಯುಂಟು. ಹಾಸ್ಟೆಲ್‌ಗಳ ಹಾವಳಿಯಿಂದಾಗಿ ಸ್ಥಳೀಯರಿಗೆ ವಿದ್ಯಾಭ್ಯಾಸದ ಅವಕಾಶ ಕುಂಠಿತವಾಗುತ್ತದೆ ಎಂಬ ಅಪವಾದದ ಹೊರತಾಗಿಯೂ ವಿದ್ಯಾಭ್ಯಾಸದ

ವ್ಯಾಪ್ತಿ ವಿಸ್ತಾರಗೊಳ್ಳಲು ಸಾಧ್ಯವಾಯಿತು. ಹಿಂದೆ ಶಿಕ್ಷಣ ಸಂಸ್ಥೆಗಳು ಹಾಗೂ ವಿದ್ಯಾರ್ಥಿ ನಿಲಯಗಳು ಏಕಕಾಲದಲ್ಲಿ ಪ್ರಾರಂಭವಾಗುತ್ತಿರಲಿಲ್ಲ. ಪ್ರಾರಂಭದಲ್ಲಿ ವಿದ್ಯಾರ್ಥಿಗಳನ್ನು ಶಾಲೆಗೆ ಕಳುಹಿಸಲು ಹೆತ್ತವರು ಹಿಂದೇಟು ಹಾಕುತ್ತಿದ್ದರು. ಏಕೆಂದರೆ ಅವರಿಗೆ ಶಿಕ್ಷಣದ ಮಹತ್ವ ತಿಳಿದಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಆಡಳಿತ ಮಂಡಳಿಯವರೇ ಖುದ್ದು ಆಸಕ್ತಿ ವಹಿಸಿ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಶಾಲೆಗೆ ಬರುವಂತೆ ಮಾಡಬೇಕಾಗುತ್ತಿತ್ತು. ವಿದ್ಯಾರ್ಥಿಗಳಿಗೆ ಊಟ, ವಸತಿ, ನೀಡಿ ಶಾಲೆಯ ಕಡೆಗೆ ಸೆಳೆಯಬೇಕಾಗಿತ್ತು. ಆದರೆ ಈಗ ಪರಿಸ್ಥಿತಿ ಬದಲಾಗಿದೆ. ಭಾರತದಲ್ಲಿ ಸಾಂಪ್ರದಾಯಿಕ ಶಿಕ್ಷಣ ಕ್ರಮ ಅಥವಾ ಗುರುಕುಲ ಪದ್ದತಿ ಅಸ್ತಿತ್ವದಲ್ಲಿದ್ದ ಕಾಲದಲ್ಲಿಯೂ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸದ ವೇಳೆಯಲ್ಲಿ ವಸತಿ ನೀಡುವ ಪದ್ಧತಿ ರೂಢಿಯಲ್ಲಿತ್ತು.

**೪.೩.೧. ಉದ್ದೇಶಗಳು**

ವಸತಿ ನಿಲಯ ಹಾಗೂ ವಿದ್ಯಾರ್ಥಿ ನಿಲಯಗಳ ಸ್ಥಾಪನೆಯ ಉದ್ದೇಶಗಳು ಸಂಸ್ಥೆಯಿಂದ ಸಂಸ್ಥೆಗೆ ವಿಭಿನ್ನವಾಗಿದ್ದರೂ, ಅವುಗಳ ಮೂಲ ಉದ್ದೇಶ ಹೆಚ್ಚು ಕಡಿಮೆ ಒಂದೇ ಆಗಿರುತ್ತದೆ. ಅವುಗಳಲ್ಲಿ ಮುಖ್ಯವಾದವುಗಳಾವುವೆಂದರೆ:

- ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ ವಸತಿ ನೀಡುವುದು.
- ವಸತಿ ಅಥವಾ ವಿದ್ಯಾರ್ಥಿ ನಿಲಯಗಳ ಮೂಲಕ ಸಂಸ್ಥೆಯ ಸೇವಾ ವಿಸ್ತರಣೆ.
- ಬಡ ಹಾಗೂ ಹಿಂದುಳಿದ ವಿದ್ಯಾರ್ಥಿಗಳ ಅನುಕೂಲಕ್ಕಾಗಿ.
- ಮೌಲ್ಯಾಧಾರಿತ ಶಿಕ್ಷಣದ ಮೂಲಕ ವಿಶ್ವಾಸ ನಿರ್ಮಿತಿ.
- ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿ ಅಲ್ಲಿ ವಸತಿ ಕಲ್ಪಿಸಿ ಅವರಲ್ಲಿ ಕ್ರೈಸ್ತ ಗುಣ ಲಕ್ಷಣಗಳಾದ ಶಾಂತಿ, ಸಹನೆ, ಸಹಬಾಳ್ವೆ, ಪ್ರೀತಿ, ತ್ಯಾಗ ಮುಂತಾದವುಗಳನ್ನು ಹರಡುವುದು.
- ವಿದ್ಯಾರ್ಥಿಗಳ ಕೊರತೆಯಿಂದಾಗಿ ಸಂಸ್ಥೆ ಮುಚ್ಚಿ ಹೋಗುವುದನ್ನು ತಪ್ಪಿಸುವುದಕ್ಕಾಗಿ.
- ಗುಣ ಮಟ್ಟದ ಇಂಗ್ಲೀಷ್ ಮಾಧ್ಯಮ ಶಿಕ್ಷಣ ಪಡೆಯ ಬಯಸುವ ವಿದ್ಯಾರ್ಥಿಗಳಿಗೆ ಅವಕಾಶ ನೀಡುವುದು.
- ಮಹಿಳಾ ಶಿಕ್ಷಣವನ್ನು ಉತ್ತೇಜಿಸುವುದು.
- ಉದ್ಯೋಗಸ್ಥ ಮಹಿಳೆಯರಿಗೆ ಸುರಕ್ಷಿತ ವಸತಿ ಕಲ್ಪಿಸುವುದು.

- ರಾಜ್ಯದಿಂದ ಮತ್ತು ಹೊರ ರಾಜ್ಯಗಳಿಂದ ಅಧಿಕ ಸಂಖ್ಯೆಯಲ್ಲಿ ವಿದ್ಯಾರ್ಥಿಗಳನ್ನು ಆಕರ್ಷಿಸುವುದು.

ಹಿಂದೆ, ವಸತಿ ನಿಲಯಗಳಿಗೆ ಬರುತ್ತಿದ್ದ ಹೆಚ್ಚಿನವರು ಶ್ರೀಮಂತ ಹಾಗೂ ಮೇಲ್ಮಧ್ಯಮ ವರ್ಗದ ಕುಟುಂಬಗಳಿಂದ ಬರುತ್ತಿದ್ದರು. ಹೀಗಿದ್ದರೂ, ಕಡು ಬಡವರನ್ನು ನಿರ್ಲಕ್ಷಿಸುತ್ತಿರಲಿಲ್ಲ; ಹೆಚ್ಚು ಕಡಿಮೆ ಎಲ್ಲಾ ವಸತಿ ನಿಲಯಗಳಲ್ಲಿ ಅವರಿಗೆ ರಿಯಾಯತಿ ದರದಲ್ಲಿ ಅಥವಾ ಉಚಿತವಾಗಿ ಶಿಕ್ಷಣ ನೀಡಲಾಗಿದೆ. ಈ ಉದ್ದೇಶದಿಂದಲೇ ಉಡುಪಿಯ ಸೈಂಟ್ ಸಿಸಿಲೀಸ್ ವಸತಿ ನಿಲಯವನ್ನು 'ಅತ್ಯಂತ ಕಡಿಮೆ ಶುಲ್ಕ' ನಿಗದಿ ಪಡಿಸಿ ನಡೆಸಲಾಗುತ್ತಿತ್ತು.

೨೦ನೇ ಶತಮಾನದಲ್ಲಿ ಮಹಿಳೆಯರ ಸ್ವಾತಂತ್ರ್ಯ ಮತ್ತು ಸಬಲೀಕರಣಕ್ಕಾಗಿ ಚಳುವಳಿಗಳು ನಿರಂತರವಾಗಿ ನಡೆಯುತ್ತಿದ್ದವು. ಪರಿಣಾಮವಾಗಿ, ಹಲವಾರು ಶಾಲೆಗಳನ್ನು ಮಹಿಳೆಯರ ಶಿಕ್ಷಣಕ್ಕಾಗಿ ಆರಂಭಿಸಲಾಯಿತು. ಇಲ್ಲದಿದ್ದರೆ ಅವರು ಮನೆಯಲ್ಲಿ ಹೊಲ-ಗದ್ದೆಗಳಲ್ಲಿ ಅಥವಾ ಬೇರೆಯವರ ಮನೆಗೆ ಕೆಲಸಕ್ಕೆ ಹೋಗಬೇಕಾಗುತ್ತಿತ್ತು.[೭೩] ಕೊಡಗು, ಚಿಕ್ಕಮಗಳೂರು, ಹಾಸನ ಮತ್ತು ಇತರ ಸ್ಥಳಗಳಿಂದ ಹೆತ್ತವರು ಶಿಸ್ತು, ಗುಣಮಟ್ಟದ ಶಿಕ್ಷಣ, ಆಧ್ಯಾತ್ಮಿಕ ಹಾಗು ನೈತಿಕ ಮೌಲ್ಯಗಳು ಶಾಲೆಗಳಲ್ಲಿ ಮತ್ತು ವಸತಿ ನಿಲಯಗಳಲ್ಲಿ ಸಿಗುತ್ತವೆ ಎಂಬ ನಂಬಿಕೆಯಿಂದ ದಕ್ಷಿಣ ಕನ್ನಡಕ್ಕೆ ಶಿಕ್ಷಣಕ್ಕಾಗಿ ತಮ್ಮ ಮಕ್ಕಳನ್ನು ಕಳುಹಿಸಲಾರಂಭಿಸಿದರು. ೨೦ನೇ ಶತಮಾನದ ಮೊದಲ ದಶಕಗಳಲ್ಲಿ ಲೇಡಿಹಿಲ್ (೧೯೨೩) ಫಳ್ನೀರ್ (೧೯೩೯) ಬೆಂದೂರು (೧೯೧೮),ಉಡುಪಿ (೧೯೧೮), ಕುಂದಾಪುರ(೧೯೫೨), ಮಡಂಕಾಪು (೧೯೬೪), ಆಶಾ ನಿಕೇಶನ್(೧೯೭೨), ಗಂಗೊಳ್ಳಿ ಮುಂತಾದ ಕಡೆಗಳಲ್ಲಿ ವಸತಿ ನಿಲಯಗಳು ಸ್ಥಾಪನೆಯಾದವು.[೭೪]

**೪.೪. ವಿದ್ಯಾರ್ಥಿ ನಿಲಯ (ಹಾಸ್ಟೆಲ್)ಗಳು**

ಪ್ರೌಢಶಾಲಾ ಶಿಕ್ಷಣ ಮುಗಿದ ಬಳಿಕ ವಿದ್ಯಾರ್ಥಿಗಳಿಗೆ ಒದಗಿಸುವ ವಸತಿ ಸೌಲಭ್ಯವನ್ನು 'ಹಾಸ್ಟೆಲ್' ಎಂಬ ಹೆಸರಿನಿಂದ ಕರೆಯುತ್ತಾರೆ. ಕಾಲೇಜಿನಲ್ಲಿ ಓದುತ್ತಿದ್ದ ಮಕ್ಕಳಿಗೆ ವಸತಿ ವ್ಯವಸ್ಥೆ ಕಲ್ಪಿಸಲು ಪ್ರಾರಂಭಿಸಿದಾಗ 'ಹಾಸ್ಟೆಲ್' ಎಂಬ ಪದದ ಬಳಕೆ ರೂಢಿಗೆ ಬಂತು. ನಂತರ ಪದವಿ ಪೂರ್ವ ಕಾಲೇಜುಗಳು, ಶಿಕ್ಷಕ ತರಬೇತಿ ಕಾಲೇಜುಗಳು ಮತ್ತು ತಾಂತ್ರಿಕ ಕಾಲೇಜುಗಳು ಸ್ಥಾಪನೆಗೊಂಡಾಗ ಹಾಸ್ಟೆಲ್ ಪದದ ಬಳಕೆ ಹೆಚ್ಚು ಜನಪ್ರಿಯವಾಗಿದೆ. ಅದೇ ಸಮಯದಲ್ಲಿ ಉದ್ಯೋಗಸ್ಥ ಮಹಿಳೆಯರಿಗೆ ಸುರಕ್ಷಿತ ವಸತಿ ಒದಗಿಸಬೇಕೆಂಬ ಚಿಂತನೆ ಮೂಡಿ 'ಉದ್ಯೋಗಸ್ಥ ಮಹಿಳೆಯರ ಹಾಸ್ಟೆಲ್'ಗಳನ್ನೂ ಆರಂಭಿಸಲಾಗಿದೆ.

### ೪.೪.೧. ಕಾಲೇಜು ವಿದ್ಯಾರ್ಥಿಗಳ ಹಾಸ್ಟೆಲ್‌ಗಳು

#### ೪.೪.೧.೧ ಸಂತ ಅಲೋಶಿಯಸ್ ಕಾಲೇಜು ಹಾಸ್ಟೆಲ್:

ಯೇಸುಸಭೆಯವರು ಸಂತ ಅಲೋಶಿಯಸ್ ಕಾಲೇಜು ಸ್ಥಾಪಿಸಿ, ೧೯೦೭ರಲ್ಲಿ ವಸತಿ ನಿಲಯವೊಂದನ್ನು ಶಾಲೆಗೆ ಹೋಗುವ ಮಕ್ಕಳಿಗಾಗಿ ಸ್ಥಾಪಿಸಿದರು. ಆ ಬಳಿಕ, ೧೯೦೯ರಲ್ಲಿ ಕಾಲೇಜು ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಲಾಗಿದೆ. ಕೊಡಗಿನಿಂದ ಕಾಲೇಜಿಗೆ ಬರುವವರ ಸಂಖ್ಯೆ ಅಧಿಕವಾಗುತ್ತಿದ್ದಂತೆಯೇ ಇನ್ನೊಂದು ವಿದ್ಯಾರ್ಥಿ ನಿಲಯವನ್ನು ಆರಂಭಿಸಲಾಯಿತು. ಮುಂದೆ, ಮೈಸೂರಿನಿಂದ ಬರುವ ವಿದ್ಯಾರ್ಥಿಗಳಿಗೆ, ಕೇರಳದಿಂದ ಬರುವವರಿಗೆ, ಸಸ್ಯಹಾರಿ ವಿದ್ಯಾರ್ಥಿಗಳಿಗೆ, ಕೈಗಾರಿಕಾ ತರಬೇತಿ ಕೇಂದ್ರದವರಿಗೆ ಹೀಗೆ ವಿವಿಧ ನಮೂನೆಯ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಅವಕಾಶ ಕಲ್ಪಿಸಿದ್ದಾರೆ. ೧೯೬೦ರಲ್ಲಿ ಶಾಲೆಯ ವಿದ್ಯಾರ್ಥಿಗಳ ಹಾಸ್ಟೆಲ್ ಮುಚ್ಚಲಾಗಿದೆ. ಏಕೆಂದರೆ ಅಷ್ಟು ಹೊತ್ತಿಗಾಗಲೇ ಎಲ್ಲಾ ಕಡೆ ಶಾಲೆಗಳು ಸ್ಥಾಪನೆಗೊಂಡಿದ್ದರಿಂದ ಹಾಸ್ಟೆಲಿನಲ್ಲಿ ನಿಂತು ಕಲಿಯುವ ಪರಿಸ್ಥಿತಿ ಬದಲಾಗಿತ್ತು. ಸಂತ ಅಲೋಶಿಯಸ್ ಕಾಲೇಜಿನಲ್ಲಿ ಮಹಿಳೆಯರಿಗೂ ಶಿಕ್ಷಣಕ್ಕೆ ಅನುವು ಮಾಡಿಕೊಟ್ಟ ಬಳಿಕ ಮಹಿಳೆಯರ ವಿದ್ಯಾರ್ಥಿ ನಿಲಯವೂ ಸ್ಥಾಪನೆಯಾಗಿದೆ.

#### ೪.೪.೧.೨. ಸೈಂಟ್ ಆ್ಯಗ್ನೆಸ್ ಕಾಲೇಜ್ ಹಾಸ್ಟೆಲ್

ಅಪೋಸ್ತಲಿಕ್ ಕಾರ್ಮೆಲ್ ಸಭೆಯವರು ಸೈಂಟ್ ಆ್ಯಗ್ನೆಸ್ ಕಾಲೇಜನ್ನು ಆರಂಭಿಸಿದ ಬಳಿಕ ಮಹಿಳಾ ಶಿಕ್ಷಣಕ್ಕೆ ಉತ್ತೇಜನ ಕೊಡುವ ಉದ್ದೇಶದಿಂದ ಭಾರತದ ಇತರ ಭಾಗಗಳಲ್ಲಿಯೂ ಅಂದರೆ ಪಾಟ್ನಾ (ಬಿಹಾರ), ಕಲ್ಲಿಕೋಟೆ (ಕೇರಳ), ನುವೆಮ್ (ಗೋವಾ) ಮುಂತಾದ ಸ್ಥಳಗಳಲ್ಲಿ ಉನ್ನತ ಶಿಕ್ಷಣ ಸಂಸ್ಥೆಗಳನ್ನು ಮತ್ತು ಅದಕ್ಕೆ ಜೋಡಿಸಲ್ಪಟ್ಟ ಹಾಸ್ಟೆಲ್‌ಗಳನ್ನೂ ತೆರೆದರು.[೨೫] ಸೈಂಟ್ ಆ್ಯಗ್ನೆಸ್ ಮಹಾವಿದ್ಯಾಲಯವನ್ನು ಆರಂಭಿಸಿದಾಗ, ಕಾಲೇಜಿನ ಮೊದಲ ಪಂಗಡದಲ್ಲಿ ಮಂಗಳೂರಿನವರು ಮಾತ್ರವಲ್ಲದೆ ಹೊರಗಿನವರು ಸಹ ಇದ್ದರು. ಅವರ ವಸತಿಗಾಗಿ ಬಹುಶಃ ಹಾಸ್ಟೆಲನ್ನು ಕಾಲೇಜಿನ ಆರಂಭದಿಂದಲೇ ನಡೆಸಲಾಗಿದೆ. ಅಪೋಸ್ತಲಿಕ್ ಕಾರ್ಮೆಲ್ ಧರ್ಮಭಗಿನಿಯರು ನೀಡುತ್ತಿದ್ದ ಶ್ರೇಷ್ಠ ಮಟ್ಟದ ಶಿಕ್ಷಣದಿಂದಾಗಿ ಹೆಣ್ಣುಮಕ್ಕಳು ತಮ್ಮ ಶಿಕ್ಷಣಕ್ಕಾಗಿ ದೂರದ ಕೇರಳ, ಗೋವಾ ಮತ್ತು ಕರ್ನಾಟಕದ ಒಳನಾಡುಗಳಿಂದಲೂ ಧಾವಿಸಿ ಬಂದು ಕಾಲೇಜು ಮತ್ತು ಹಾಸ್ಟೆಲಿನಲ್ಲಿ ಪ್ರವೇಶ ಪಡೆಯುತ್ತಿದ್ದರು. ಕಥೋಲಿಕರಿಗೆ ಪ್ರವೇಶಾತಿಯ ಸಮಯದಲ್ಲಿ ಕಾಲೇಜಿಗೆ ಮತ್ತು ಹಾಸ್ಟೆಲಿಗೆ ಹೆಚ್ಚಿನ ಆದ್ಯತೆಯನ್ನು ನೀಡುತ್ತಿದ್ದರು. ಬಡ ವಿದ್ಯಾರ್ಥಿಗಳಿಗೆ ರಿಯಾಯತಿಯೊಂದಿಗೆ ಪುಸ್ತಕ, ಬಟ್ಟೆ ಹಾಗೂ

ಇತರ ಅವಶ್ಯಕ ವಸ್ತುಗಳನ್ನು ಒದಗಿಸಲಾಗಿದೆ. ಕಾಲೇಜಿನಲ್ಲಿ ಶಿಕ್ಷಣ ಪಡೆದ ಸಾವಿರಾರು ವಿದ್ಯಾರ್ಥಿಗಳು ಕಾಲೇಜ್ ಹಾಸ್ಟೆಲಿನಲ್ಲಿ ವಸತಿ ಪಡೆದು ಮುಂದೆ ಉನ್ನತ ಸ್ಥಾನಗಳನ್ನು ಅಲಂಕರಿಸಿದ್ದಾರೆ.[೭೬]

**೪.೪.೧.೩. ಕಥೋಲಿಕ ಶಿಕ್ಷಣ ಮಂಡಳಿಯ ಅಧೀನ ಹಾಸ್ಟೆಲ್‌ಗಳು**

ಮಂಗಳೂರು ಧರ್ಮಪ್ರಾಂತ್ಯವನ್ನು ದೇಶೀಯ ಧರ್ಮಗುರುಗಳ ಆಡಳಿತಕ್ಕೆ ಒಪ್ಪಿಸಿದಾಗ ಈಗಾಗಲೇ ಸ್ಥಾಪಿಸಲ್ಪಟ್ಟಿದ ಎಲ್ಲಾ ಸಂಘ ಸಂಸ್ಥೆಗಳನ್ನು ಕಿಂಚಿತ್ತೂ ಕುಂದು ಬಾರದಂತೆ ಮುನ್ನಡೆಸುವುದರೊಂದಿಗೆ ಹೊಸ ಹಲವಾರು ಸಂಸ್ಥೆಗಳನ್ನು ಹುಟ್ಟು ಹಾಕಿದರು. ಮುಖ್ಯವಾಗಿ ದೇಶೀಯ ಧರ್ಮಗುರುಗಳು ನಡೆಸುವಂತ ಉನ್ನತ ಶಿಕ್ಷಣ ಸಂಸ್ಥೆಗಳು ಒಂದೂ ಇರಲಿಲ್ಲ. ಆದುದರಿಂದ, ಕೆಲವು ಧರ್ಮಗುರುಗಳು ೧೯೩೦ ಮತ್ತು ೧೯೪೦ರ ದಶಕಗಳಲ್ಲಿ ತಮ್ಮ ಸಮಯ, ಸಾಮರ್ಥ್ಯ ಮತ್ತು ಆಯಸ್ಸನ್ನು ಉನ್ನತ ಶಿಕ್ಷಣ ಸಂಸ್ಥೆಗಳ ಸ್ಥಾಪನೆ ಮತ್ತು ನಿರ್ವಹಣೆಗಾಗಿ ಮುಡಿಪಾಗಿಟ್ಟರು. ಆ ರೀತಿ ಸ್ಥಾಪನೆಯಾದ ಶಿಕ್ಷಣ ಸಂಸ್ಥೆಗಳೊಂದಿಗೆ, ದೂರದ ಊರುಗಳಿಂದ ವಿದ್ಯಾಭ್ಯಾಸ ಬಯಸಿ ಬರುವ ವಿದ್ಯಾರ್ಥಿಗಳ ವಸತಿಗಾಗಿ ವಸತಿ ನಿಲಯಗಳನ್ನು ಅಥವಾ ವಿದ್ಯಾರ್ಥಿ/ನಿ ನಿಲಯಗಳನ್ನು ಆರಂಭಿಸಿದರು. ಕೆಲವೊಂದು ವಸತಿ ನಿಲಯಗಳು ಸಂಸ್ಥೆಯನ್ನು ಉಳಿಸುವ ಉದ್ದೇಶದಿಂದಲೇ ಪ್ರಾರಂಭಿಸಲಾಗಿದೆ. ಕಥೋಲಿಕ ಶಿಕ್ಷಣ ಮಂಡಳಿಯ ಅಧೀನದಲ್ಲಿರುವ ಶಿಕ್ಷಣ ಸಂಸ್ಥೆಗಳೊಂದಿಗೆ ಜೋಡಣೆಗೊಂಡಿರುವ ಕೆಲವು ವಿದ್ಯಾರ್ಥಿ ನಿಲಯಗಳು ಯಾವುವೆಂದರೆ: ಪುತ್ತೂರಿನ ಸೈಂಟ್ ಫಿಲೋಮಿನಾ ಮೆನ್ಸ್ ಮತ್ತು ವಿಮೆನ್(೧೯೫೮) (೧೯೯೯) ಹಾಸ್ಟೆಲ್ಸ್, ಶಿರ್ವಾದ ಹಾಸ್ಟೆಲ್ಸ್, ಡೋನ್ ಬೊಸ್ಕೊ ಮೆನ್ಸ್ ಮತ್ತು ಸೈಂಟ್ ಮೇರೀಸ್ ವಿಮೆನ್ ಹಾಸ್ಟೆಲ್ಸ್, ಪುತ್ತೂರಿನ ಸೈಂಟ್ ಫಿಲೋಮಿನಾ ಹೈಸ್ಕೂಲ್ ಬಾಯ್ಸ್ ಹಾಸ್ಟೆಲ್ (೧೯೬೭) ಮಡಂತ್ಯಾರಿನ ಸೇಕ್ರೆಡ್ ಹಾರ್ಟ್ ಬಾಯ್ಸ್ ಹಾಸ್ಟೆಲ್, ಸವೇರಪುರ ವಿದ್ಯಾರ್ಥಿ ನಿಲಯ, ಪಕ್ಷಿಕರೆಯ ಸೈಂಟ್ ಜೂಡ್ ಬಾಯ್ಸ್ ಹಾಸ್ಟೆಲ್ ಮತ್ತು ಪೊಂಪೈ ಕಾಲೇಜ್ ಲೇಡಿಸ್ ಹಾಸ್ಟೆಲ್.

**೪.೪.೧.೪.ಕರ್ನಾಟಕ ಕ್ರಿಶ್ಚಿಯನ್ ಎಜುಕೇಷನಲ್ ಸೊಸೈಟಿ ಅಥವಾ ಕಾಸೆಸ್ ವಿದ್ಯಾರ್ಥಿ ನಿಲಯ**

೧೯೬೪ರಲ್ಲಿ ಸ್ಥಾಪನೆಯಾದ ಹೆಬಿಕ್ ತಾಂತ್ರಿಕ ತರಬೇತಿ ಸಂಸ್ಥೆಯಲ್ಲಿ ವಿದ್ಯಾಭ್ಯಾಸಕ್ಕೆ ಬರುತ್ತಿದ್ದ ಯುವಕರು, ಜಿಲ್ಲೆಯ ಬೇರೆ ಬೇರೆ ಸ್ಥಳಗಳಿಂದ ಬರುತ್ತಿದ್ದರು. ಹೀಗಿರುವಾಗ, ೧೯೬೯ರಲ್ಲಿ ಕರ್ನಾಟಕ ಕ್ರಿಶ್ಚಿಯನ್ ಎಜುಕೇಷನಲ್ ಸೊಸೈಟಿ ಎಂಬ ಸಂಸ್ಥೆಯೊಂದು ಸ್ಥಾಪನೆಯಾಯಿತು. ಅದರ ನೇತೃತ್ವದಲ್ಲಿ ಮಧ್ಯಮ ಹಾಗೂ ಬಡ ವಿದ್ಯಾರ್ಥಿಗಳ ಅಭ್ಯುದಯಕ್ಕಾಗಿ ೧೯೭೨ರಲ್ಲಿ ಕಾಸೆಸ್ ಹಾಸ್ಟೆಲ್ ಆರಂಭವಾಯಿತು. ಕಾಸೆಸ್ ಹಾಸ್ಟೆಲಿನಲ್ಲಿ ಥಿಯೋಲಾಜಿಕಲ್ ಕಾಲೇಜಿನ ಹಾಗೂ ಹೆಬಿಕ್ ತಾಂತ್ರಿಕ ಸಂಸ್ಥೆಯ ವಿದ್ಯಾರ್ಥಿಗಳು ಮಾತ್ರವಲ್ಲದೆ, ಮಂಗಳೂರಿನಲ್ಲಿರುವ ವಿವಿಧ ವಿದ್ಯಾಸಂಸ್ಥೆಗಳಲ್ಲಿ ವಿದ್ಯಾರ್ಜನೆ

ಮಾಡುತ್ತಿರುವ ಪದವಿ, ವೈದ್ಯಕೀಯ, ತಾಂತ್ರಿಕ, ಕಾನೂನು ವಿದ್ಯಾರ್ಥಿಗಳಿಗೆ ಜಾತಿ, ಮತ ಬೇಧವಿಲ್ಲದೆ ವಸತಿ ವ್ಯವಸ್ಥೆ ಕಲ್ಪಿಸಲಾಗುತ್ತಿದೆ. ಕರ್ನಾಟಕ, ಕೇರಳ, ಮುಂಬಯಿ, ನೇಪಾಳ, ಮತ್ತು ಈಶಾನ್ಯ ಭಾರತದಿಂದ ಬಂದ ವಿದ್ಯಾರ್ಥಿಗಳೂ ಸಹ ಇಲ್ಲಿ ವಸತಿ ಪಡೆಯುತ್ತಿದ್ದಾರೆ.[೭೭]

**೪.೪.೧.೫. ಬೆಳ್ತಂಗಡಿ ಧರ್ಮಪ್ರಾಂತ್ಯದ ಅಧೀನದಲ್ಲಿರುವ ವಸತಿ ನಿಲಯಗಳು ಮತ್ತು ವಿದ್ಯಾರ್ಥಿ ನಿಲಯಗಳು**

ಬೆಳ್ತಂಗಡಿ ಧರ್ಮಪ್ರಾಂತ್ಯದ ಸಿರೋ-ಮಲಬಾರ್ ಕಥೋಲಿಕರು, ಹಲವಾರು ಶಿಕ್ಷಣ ಸಂಸ್ಥೆಗಳು, ಆರೋಗ್ಯ ಕೇಂದ್ರಗಳು, ಅನಾಥಾಶ್ರಮಗಳು ಮತ್ತು ವಿದ್ಯಾರ್ಥಿ ನಿಲಯಗಳನ್ನು ಆರಂಭಿಸಿದ್ದಾರೆ. ಈ ರೀತಿಯಲ್ಲಿ ಸ್ಥಾಪನೆಯಾದ ಕೆಲವು ವಸತಿ ನಿಲಯಗಳು ಮತ್ತು ವಿದ್ಯಾರ್ಥಿನಿಲಯಗಳು ಯಾವುವೆಂದರೆ : ಗಂಢಿಬಾಗಿಲಿನಲ್ಲಿ SABS [೭೮] ಧರ್ಮಭಗಿನಿಯರು ಸ್ಥಾಪಿಸಿದ ಹೆಣ್ಮಕ್ಕಳ 'ಆರಾಧನಾ ವಸತಿ ನಿಲಯ', ಸಿ.ಎಸ್.ಟಿ. ಧರ್ಮಗುರುಗಳು ಗೇರುಕಟ್ಟೆಯಲ್ಲಿ ಆರಂಭಿಸಿದ [೭೯] 'ಚಿಲ್ಡ್ರನ್ ವಿಲೇಜ್', ಖಂಃಖ ಧರ್ಮಭಗಿನಿಯರು ಗೋಣಿಕೊಪ್ಪಲಿನಲ್ಲಿ ಸ್ಥಾಪಿಸಿರುವ 'ಸೈಂಟ್ ಪೀಟರ್ಸ್ ಹಾಸ್ಟೆಲ್, ಜೆಪ್ಪುವಿನಲ್ಲಿ ಎಸ್.ಹೆಚ್.[೮೦] ಧರ್ಮಭಗಿನಿಯರು ಆರಂಭಿಸಿರುವ ಹೆಣ್ಮಕ್ಕಳ 'ಸೆಕ್ರೇಡ್ ಹಾರ್ಟ್ ಹೋಂ', ಕಂಕನಾಡಿ ಅಲ್ಫೋನ್ಸಾ ಅಧ್ಯಯನ ಕೇಂದ್ರದವರು ನಡೆಸುವ ಬಾಲಕರ 'ಬ್ಲೆಸ್ಡ್ ಸೈಂಟ್ ಅಲ್ಫೋನ್ಸಾ ಸ್ಟಡಿ ಸೆಂಟರ್', ಮೂದೂರಿನ ಪುವರ್ ಬಾಯ್ಸ್ ಹೋಂ, ನೆಲ್ಯಾಡಿಯಲ್ಲಿ ಎಸ್. ಹೆಚ್. ಧರ್ಮಭಗಿನಿಯರು ಬಾಲಕಿಯರಿಗಾಗಿ ಸ್ಥಾಪಿಸಿರುವ ಹಾಸ್ಟೆಲ್, ಬಾಲಕಿಯರ ಸೈಂಟ್ ಫ್ರಾನ್ಸಿಸ್ ಡಿ ಸೆಲೆಸ್ ವಸತಿ ನಿಲಯ, ಶನಿವಾರ ಸಂತೆ, ಸಿ.ಎಂ. ಐ. ಧರ್ಮಗುರುಗಳ ಬಾಲಕರ ಸೇಕ್ರೆಡ್ ಹಾರ್ಟ್ ಕಾರ್ಮೆಲ್ ಹೌಸ್, ಶನಿವಾರಸಂತೆ ಮತ್ತು ವಾಲೆನ್ಸಿಯಾದಲ್ಲಿ ಡಿ.ಎಸ್.ಹೆಚ್.ಜೆ.ಹೋಂ. [೮೧] ಹೀಗೆ ಬೆಳ್ತಂಗಡಿ ಧರ್ಮಪ್ರಾಂತ್ಯ ಆರಂಭವಾಗಿ ಅಲ್ಪ ಸಮಯದಲ್ಲಿಯೇ ಮಕ್ಕಳ ಒಳಿತನ್ನು ಬಯಸಿ ವಿದ್ಯಾರ್ಥಿ ನಿಲಯಗಳನ್ನು /ವಸತಿ ನಿಲಯಗಳನ್ನು ಆರಂಭಿಸಿ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದೆ. [೮೨]

**೪.೪.೧.೬.ಇತರ ಹಾಸ್ಟೆಲ್‌ಗಳು**

ಅರ್ಸುಲಾಯ್ನ್ ಧರ್ಮಭಗಿನಿಯರ ಮಡಂತ್ಯಾರಿನ ಸೇಕ್ರೆಡ್ ಹಾರ್ಟ್ ಸ್ಟೂಡೆಂಟ್ಸ್ ಹೋಮ್, ಮಂಗಳೂರಿನ ಜೀಸಸ್ ಮತ್ತು ಮೇರಿ ಕಾನ್ವೆಂಟಿನ ಧರ್ಮಭಗಿನಿಯರು ಮಂಗಳಾದೇವಿಯಲ್ಲಿ ನಡೆಸುತ್ತಿರುವ 'ದೀನಾ ಹಾಸ್ಟೆಲ್', ಮಂಗಳೂರಿನ ಸ್ಕೂಲ್ ಆಫ್ ಸೋಶಿಯಲ್ ವರ್ಕ್ ರೋಶನಿ ನಿಲಯ ಮಹಿಳಾ ಹಾಸ್ಟೆಲ್ ಇತ್ಯಾದಿ.[೮೩]

### ೪.೪.೨. ಶಿಕ್ಷಕ ತರಬೇತಿ ವಿದ್ಯಾರ್ಥಿಗಳ ಹಾಸ್ಟೆಲುಗಳು

#### ೪.೪.೨.೧. ಬಿ.ಎಡ್. ಕಾಲೇಜು ಹಾಸ್ಟೆಲ್, ಮಂಗಳೂರು

೧೯೪೩ರಲ್ಲಿ ಸೈಂಟ್ ಆ್ಯನ್ಸ್ ಶಿಕ್ಷಕ ತರಬೇತಿ ಕಾಲೇಜು ಸ್ಥಾಪಿಸಿ, ಅದರೊಂದಿಗೆ ಸಣ್ಣ ಹಾಸ್ಟೆಲೊಂದನ್ನು ಆರಂಭಿಸಿ ವಿದ್ಯಾರ್ಥಿಗಳಿಗೆ ವಸತಿ ನೀಡಲಾಗಿದೆ. ಮೊದಲ ಪಂಗಡದಲ್ಲಿ ೬ ಕಥೋಲಿಕರು ಹಾಗೂ ಒಬ್ಬ ನಾಯರ್ ಸಮುದಾಯದ ವಿದ್ಯಾರ್ಥಿನಿ ಇದ್ದರು. ೧೯೬೬ರಲ್ಲಿ ಹೊಸ ಹಾಸ್ಟೆಲನ್ನು ಸಕಲ ಸೌಕರ್ಯಗಳೊಂದಿಗೆ ಆರಂಭಿಸಲಾಯಿತು. ಪ್ರಸ್ತುತ ಎಂ. ಎಡ್(M.Ed) ಹಾಗೂ ಪಿ.ಜಿ.ಡಿ.ಸಿ.ಇ . ವಿದ್ಯಾರ್ಥಿಗಳಿಗೂ ವಸತಿ ಸೌಲಭ್ಯವನ್ನು ವಿಸ್ತರಿಸಲಾಗಿದೆ. ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ ಹಾಸ್ಟೆಲನ್ನು ಬಿಟ್ಟು ಹೋಗುವಾಗ ವಿದ್ಯಾರ್ಥಿಗಳು ಇಲ್ಲಿ ಕಲಿತ ಕೆಲವು ಮೌಲ್ಯಗಳಾದ ಕಠಿಣ ಶ್ರಮ, ಕರ್ತವ್ಯ ನಿಷ್ಠೆ, ಪ್ರೀತಿ, ಸೇವೆ ಇತ್ಯಾದಿ ತಮ್ಮೊಂದಿಗೆ ಕೊಂಡೊಯ್ಯುತ್ತಾರೆ.[೮೪] ಅಂತೆಯೇ, ಪುತ್ತೂರು ತಾಲೂಕಿನ ಕುಂತೂರಿನಲ್ಲಿ ಸಿರೋ -ಮಲಂಕರ ಚರ್ಚ್ ಅಧೀನಕ್ಕೊಳಪಟ್ಟಿರುವ ಮಾರ್ ಇವಾನಿಯೋಸ್ ಕಾಲೇಜ್ ಆಫ್ ಎಜುಕೇಶನ್ ಎಂಬ ಶಿಕ್ಷಣ ಸಂಸ್ಥೆಯಿದ್ದು , ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯ ಒದಗಿಸಿ ನೆರವಾಗುತ್ತಿದ್ದಾರೆ.

#### ೪.೪.೨.೨. ಸೈಂಟ್ ಆ್ಯನ್ಸ್ ಶಿಕ್ಷಕ ತರಬೇತಿ ಹಾಸ್ಟೆಲ್, ಮಂಗಳೂರು

೧೯೬೦ರಲ್ಲಿ ಸೈಂಟ್ ಆ್ಯನ್ಸ್ ತರಬೇತಿ ಶಾಲೆಯ ಹಾಸ್ಟೆಲ್ ಸ್ಥಾಪನೆಯಾಗಿದೆ. ೧೯೭೫ರ ವರೆಗೆ, ತರಬೇತಿ ಶಾಲೆಯವರು ವಸತಿ ಜೀವನ ಕಡ್ಡಾಯವಾಗಿ ಮಾಡಬೇಕೆಂಬ ಇಲಾಖೆಯ ಸೂಚನೆ ಇತ್ತು. ಆದುದರಿಂದ, ಮೂಲ ತರಬೇತಿ ಶಾಲೆ ಮತ್ತು ಹಾಸ್ಟೆಲನ್ನು ಸಿಇಬಿಇಎಂಒ (CEBEMO) ನೆರವಿನಿಂದ ಸ್ಥಾಪಿಸಲಾಗಿದೆ. ೧೯೬೬ರಿಂದ ಎರಡು ರೀತಿಯ ವಿದ್ಯಾರ್ಥಿಗಳು ಹಾಸ್ಟೆಲಿನಲ್ಲಿ ವಸತಿ ಪಡೆಯುತ್ತಿದ್ದಾರೆ. ಆಡಳಿತ ಮಂಡಳಿಯ ಕೋಟಾದಲ್ಲಿ ಪ್ರವೇಶ ಪಡೆದವರು ಹಾಗೂ ಅರ್ಹತೆಗನುಗುಣವಾಗಿ ಸರ್ಕಾರದಿಂದ ಆಸನ (ಸೀಟ್) ಪಡೆದವರು. ಪ್ರಸ್ತುತ ವಸತಿ ನಿಲಯದ ಹೆಚ್ಚಿನ ವಿದ್ಯಾರ್ಥಿಗಳು ಕ್ರೈಸ್ತೇತರರು, ಏಕೆಂದರೆ ಆಡಳಿತ ಮಂಡಳಿಯ ಕೋಟಾದಡಿ ಬರುವ ಹೆಚ್ಚಿನ ಸ್ಥಳೀಯ ಕಥೋಲಿಕ ವಿದ್ಯಾರ್ಥಿಗಳು ಮತ್ತು ಧರ್ಮ ಭಗಿನಿಯರು ಹಾಸ್ಟೆಲಿನಲ್ಲಿ ಉಳಿದುಕೊಳ್ಳುವುದಿಲ್ಲ.[೮೫]

#### ೪.೪.೨.೩. ಯೇಸು ಪ್ರೇಮ್ ನಿಕೇತನ್ ಹಾಸ್ಟೆಲ್, ಮಂಗಳೂರು

ಸೈಂಟ್ ಆ್ಯಗ್ನೆಸ್ ಸ್ಪೆಷಲ್ ಸ್ಕೂಲ್ ಮತ್ತು ವೃತ್ತಿ ಶಿಕ್ಷಣ ಕೇಂದ್ರ ಸ್ಥಾಪನೆಯಾದ ಬಳಿಕ, ಅಗತ್ಯ ಕಂಡು ಬಂದಾಗ ಕೆಲವು ಮನೋವಿಕಲ ಮಕ್ಕಳಿಗೆ ಶಾಲೆಯಲ್ಲಿ ವಸತಿ ಕಲ್ಪಿಸಲಾಗುತ್ತದೆ. ೧೯೯೧ರಿಂದ

ಕೆಲವು ವಿದ್ಯಾರ್ಥಿಗಳನ್ನು ತಮ್ಮ ಕೇರ್‌ಟೇಕರರೊಂದಿಗೆ ಅತಿಥಿ ಕೋಣೆಯಲ್ಲಿ ಮತ್ತು ಸೈಂಟ್ ಆ್ಯಗ್ನೆಸ್ ವೃತ್ತಿ ಶಿಕ್ಷಣ ಕೇಂದ್ರದ ತರಗತಿ ಕೋಣೆಯಲ್ಲಿ ಇರಿಸಿಕೊಳ್ಳಲಾಗುತ್ತದೆ. ೧೯೯೪ರಲ್ಲಿ ಮಹಿಳಾ ಶಿಕ್ಷಕ ತರಬೇತಿ ಪಡೆಯುವವರಿಗೆ ವಸತಿ ವ್ಯವಸ್ಥೆ ನೀಡಲಾಗಿದೆ. ೨೦೦೦ ಇಸವಿಯಲ್ಲಿ ಕುವೈಟ್ ದೇಶದ, ಕುವೈಟ್ ಕೆನರಾ ವೆಲ್ಫೆರ್ ಅಸೋಶಿಯೇಷನ್ (KCWA) ನೆರವಿನಿಂದ ಹಾಸ್ಟೆಲ್‌ಲೊಂದನ್ನು ಕಟ್ಟಿಸಲಾಗಿದೆ. ಹಾಸ್ಟೆಲ್ ಕಟ್ಟಡವನ್ನು 'ಕಂಪ್ಯೂಟರ್ ಟ್ರೈನಿಂಗ್ ಸೆಂಟರ್' ಆಗಿ ಬಳಸಿಕೊಳ್ಳುವುದರೊಂದಿಗೆ ಕಂಪ್ಯೂಟರ್ ತರಬೇತಿ ಕೊಡುವ ಶಿಕ್ಷಕಿಯರಿಗೆ, ಕಂಪ್ಯೂಟರ್ ತರಬೇತಿ ಪಡೆಯುವವರಿಗೆ ಹಾಗೂ ಕೆಲವು ವಿಕಲಚೇತನ ಮಕ್ಕಳಿಗೆ ವಸತಿ ಸೌಲಭ್ಯ ನೀಡುವುದಕ್ಕಾಗಿಯೂ ಉಪಯೋಗಿಸಲಾಗುತ್ತಿದೆ. ಸ್ಪೆಷಲ್ ಬಿ.ಎಡ್ (B.Ed) ಕೋರ್ಸಿನ ಸಂಪರ್ಕ ಕಾರ್ಯಕ್ರಮಗಳಿಗೆ ಬರುವ ಅಭ್ಯರ್ಥಿಗಳಿಗೆ ಅವರ ಖರ್ಚಿನಲ್ಲಿ ವ್ಯವಸ್ಥೆ ಮಾಡಿ ನೆರವು ನೀಡಲಾಗುತ್ತದೆ.[೮೬]

### ೪.೪.೩. ತಾಂತ್ರಿಕ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳ ಹಾಸ್ಟೆಲ್

ಮಂಗಳೂರಿನ ಮೇರಿಹಿಲ್‌ನಲ್ಲಿ ವಿಜಯಮಾರಿ ತಾಂತ್ರಿಕ ಶಾಲೆಯೊಂದಿಗೆ, ವಿಜಯಮಾರಿ ಹಾಸ್ಟೆಲನ್ನು ೧೯೬೫ರಲ್ಲಿ ಆರಂಭಿಸಲಾಯಿತು. ಸಮಾಜದ ಆರ್ಥಿಕವಾಗಿ ಹಿಂದುಳಿದಿರುವ ವರ್ಗದಿಂದ ಬರುವ ಮಕ್ಕಳಿಗೆ ಶೀಘ್ರಲಿಪಿ, ಬೆರಳಚ್ಚು, ಕಂಪ್ಯೂಟರ್ ಸೈನ್ಸ್ ಹಾಗೂ ಕಸೂತಿ ಮಾತ್ರವಲ್ಲದೆ ಅಡುಗೆ, ತೋಟಗಾರಿಕೆ ಇತ್ಯಾದಿ ಗೃಹಕೃತ್ಯದ ಕೌಶಲ್ಯಗಳಲ್ಲಿ ತರಬೇತಿಗೆ ಅವಕಾಶ ಕೊಡುವ ಉದ್ದೇಶದಿಂದ ವಿಜಯಮಾರಿ ಸಂಸ್ಥೆಗಳನ್ನು ಆರಂಭಿಸಲಾಗಿದೆ. ಹೆಚ್ಚಿನ ಹುಡುಗಿಯರು ಎಸ್.ಎಸ್.ಎಲ್.ಸಿ. ಮುಗಿಸಿರುವವರಾಗಿದ್ದರೂ, ಕೆಲವರು ತಮ್ಮ ಪದವಿ ಪೂರ್ವ ಶಿಕ್ಷಣ ಮುಗಿಸಿದ ಬಳಿಕವೂ ಶಿಕ್ಷಣಕ್ಕಾಗಿ ಬರುತ್ತಾರೆ. ೨೦೦೬ನೇ ಇಸವಿಯಲ್ಲಿ ವಿಜಯಮಾರಿ ತಾಂತ್ರಿಕ ಸಂಸ್ಥೆಯನ್ನು ಸಮುದಾಯ ಕಾಲೇಜಾಗಿ ಉನ್ನತೀಕರಿಸಲಾಗಿದೆ, ಮಾತ್ರವಲ್ಲದೆ ಕಾಲೇಜಿಗೆ ಬರುವವರ ಸಂಖ್ಯೆಯಲ್ಲಿಯೂ ಹೆಚ್ಚಳ ಕಂಡುಬರುತ್ತಿದೆ. ಸಮುದಾಯ ಕಾಲೇಜಿನಲ್ಲಿ ಕಲಿಯುವ ಮಕ್ಕಳಿಗೆ ಕೆಲಸ ಸಿಗುವ ಅವಕಾಶಗಳು ಹೆಚ್ಚಿಸುವ ಉದ್ದೇಶದಿಂದ ಸಂಸ್ಥೆಯನ್ನು ಕೈಗಾರಿಕೆ (ಕಾರ್ಖಾನೆ)ಯೊಂದಿಗೆ ಸಂಯೋಜಿಸಲಾಗಿದೆ. ಆದುದರಿಂದ ಈ ದಿನಗಳಲ್ಲಿ ಹಾಸ್ಟೆಲ್‌ನಲ್ಲಿ ವಸತಿಗಾಗಿ ಹೆಚ್ಚಿನ ಬೇಡಿಕೆ ಉಂಟಾಗಿದೆ.[೮೭]

### ೪.೪.೪. ಉದ್ಯೋಗಸ್ಥ ಮಹಿಳೆಯರ ಹಾಸ್ಟೆಲ್

ಕೇರಳ ರಾಜ್ಯದ ಕಾಸರಗೋಡು ಒಂದು ಜಿಲ್ಲೆಯಾಗಿ ರೂಪುಗೊಂಡ ಬಳಿಕ, ಕಾಸರಗೋಡು ನಗರ ಕೇಂದ್ರ ಕಛೇರಿಯಾಗಿ, ಹೊಸ ಹುದ್ದೆಗಳಿಗೆ ನೇಮಕಗೊಂಡವರು ರಾಜ್ಯದ ಬೇರೆ ಬೇರೆ ಭಾಗಗಳಿಂದ ಬರತೊಡಗಿದರು. ಆದರೆ, ಯೋಗ್ಯವಾದ ವಸತಿ ವ್ಯವಸ್ಥೆ ಇರಲಿಲ್ಲ. ಮುಖ್ಯವಾಗಿ

ಕಥೋಲಿಕ ಮಹಿಳೆಯರಿಗೆ ಸುರಕ್ಷಿತ ವಸತಿ ದೊರೆಯದಿದ್ದಾಗ ಅವರು ಕಾನ್ವೆಂಟಿಗೆ ವಸತಿಗಾಗಿ ಮನವಿ ಮಾಡಿಕೊಂಡರು. ಆದುದರಿಂದ, ಇವರಿಗೆ ಊಟ, ವಸತಿ ಹಾಗೂ ರಕ್ಷಣೆ ಕೊಡುವ ಉದ್ದೇಶದಿಂದ ೧೯೫೭ರಲ್ಲಿ ಮಡೋನ್ನಾ ಉದ್ಯೋಗಸ್ಥ ಮಹಿಳೆಯರ ಹಾಸ್ಟೆಲ್ ಕಾಸರಗೋಡಿನಲ್ಲಿ ತಲೆ ಎತ್ತಿದೆ. ಈಗಾಗಲೇ ಶಾಲೆಯ ಶಿಕ್ಷಕರಿಗೆ ಮತ್ತು ಕೆಲವು ಕಛೇರಿ ಕೆಲಸಗಾರರಿಗೆ ಕಾನ್ವೆಂಟಿನ ಪಕ್ಕದಲ್ಲಿ ಹಾಸ್ಟೆಲ್ ಸೌಲಭ್ಯ ಒದಗಿಸಲಾಗಿದೆ. ಆದರೆ, ೧೯೭೩ರಲ್ಲಿ ದಕ್ಷಿಣ ಕೇರಳದ ಡಿ.ಇ.ಓ. (District Education Officer) ಇನ್ನೂ ಕೆಲವರಿಗೆ ವಸತಿ ಸೌಲಭ್ಯವನ್ನು ಒದಗಿಸಿಕೊಡಬೇಕೆಂದು ವಿನಂತಿಸಿಕೊಂಡಾಗ ಧರ್ಮಭಗಿನಿಯರು ಒಪ್ಪಿಕೊಂಡಿದ್ದಾರೆ. ಭ। ಟೆಸ್ಸಿ ಅಗಸ್ಟಿನ್ ಅವರು ೧೯೮೮ರ ತಮ್ಮ ಪತ್ರದಲ್ಲಿ ಈ ರೀತಿಯಲ್ಲಿ ಬರೆಯುತ್ತಾರೆ, " ಕಾಸರಗೋಡು, ಜಿಲ್ಲೆಯ ಕೇಂದ್ರ ಕಛೇರಿಯಾದ ಬಳಿಕ ಉದ್ಯೋಗಸ್ಥ ಮಹಿಳೆಯರ ವಸತಿಗೆ ಹಾಸ್ಟೆಲಿನ ಅಗತ್ಯ ತುಂಬಾ ಇದೆ. ಮುಸ್ಲಿಂ ಸಮುದಾಯದ ಪ್ರಾಬಲ್ಯ ಇರುವ ಪ್ರದೇಶದಲ್ಲಿರುವ ಏಕೈಕ ಕಾನ್ವೆಂಟ್ ಇದಾಗಿರುವುದರಿಂದ ಹಲವರು ಹಾಸ್ಟೆಲಿನಲ್ಲಿ ಪ್ರವೇಶವನ್ನು ಕೋರಿ ನಮ್ಮನ್ನು ಸಂಪರ್ಕಿಸುತ್ತಿದ್ದಾರೆ. ಅವರಿಗೆ ವಸತಿ ನೀಡಲು ನಮ್ಮಿಂದ ಸಾಧ್ಯವಾಗುತ್ತಿಲ್ಲ, ಕಾರಣ ನಮ್ಮ ಸಾಮರ್ಥ್ಯ ೧೦ ಜನರಿಗೆ ವಸತಿ ಕೊಡುವಷ್ಟು ಮಾತ್ರ. ..." [೮೮] ಮೇಲಿನ ಹೇಳಿಕೆಯಿಂದ ಸ್ಪಷ್ಟವಾಗಿ ತಿಳಿಯುವುದೇನೆಂದರೆ ಉದ್ಯೋಗಸ್ಥ ಮಹಿಳೆಯರಿಗೆ ಹಾಸ್ಟೆಲ್ ಒಂದು ಅತ್ಯಗತ್ಯವಾಗಿ ಬೇಕಿತೆಂಬುದು. ಹಾಸ್ಟೆಲಿಗೆ ಪ್ರವೇಶಾತಿಯನ್ನು ನೀಡುವಾಗ ಸರ್ಕಾರಿ ನೌಕರರಿಗೆ ಮೊದಲ ಆದ್ಯತೆ ನೀಡಲಾಗುತ್ತದೆ. ಪ್ರಸ್ತುತ ಒಂದು ಡೇ ಕೇರ್ ಸೆಂಟರನ್ನು ಸ್ಥಾಪಿಸಿ ಹಾಸ್ಟೆಲಿಗೆ ಜೋಡಿಸಲಾಗಿದೆ. ಈ ಡೇ ಕೇರ್ ಸೆಂಟರ್ ಉದ್ಯೋಗಸ್ಥ ಮಹಿಳೆಯರ ಮಕ್ಕಳ ಪಾಲನೆ-ಪೋಷಣೆ ಮಾಡುತ್ತದೆ.[೮೯]

### ೪.೫. ವಿಭಿನ್ನ ಸಾಮರ್ಥ್ಯದ ಸಂಸ್ಥೆಗಳು

ಒಂದು ಗೌರವಯುತವಾದ ಬದುಕನ್ನು ಸಾಗಿಸುವ ಹಕ್ಕು ಪ್ರತಿಯೊಬ್ಬರಿಗೂ ಇದ್ದೇ ಇರುತ್ತದೆ. ತನ್ನೆಲ್ಲ ನಾಗರಿಕರಿಗೂ, ಜೀವನಾಧಾರವಾದ ಸಂಪಾದನೆ ಮಾಡುತ್ತ ಸಂತೋಷಕರವಾಗಿ ಉದ್ದೇಶಪೂರಿತವಾದ ಜೀವನವನ್ನು ನಡೆಸಲು ಸಾಧ್ಯವಾಗುವಂಥ, ಒಂದು ವಾತಾವರಣವನ್ನು ಸೃಷ್ಟಿ ಮಾಡುವುದು ಸರಕಾರದ ಮತ್ತು ಸಮಾಜದ ಕರ್ತವ್ಯವಾಗಿದೆ. ಬುದ್ಧಿಮಾಂದ್ಯರ ಮತ್ತು ವಿಕಲ ಚೇತನರ ವಿಚಾರದಲ್ಲಂತೂ ಈ ಮಾತು ಇನ್ನಷ್ಟು ಸತ್ಯ. ಹುಟ್ಟಿನಿಂದಲೇ ಅವರು, ಸ್ವತಃ ತಾವು ಕಾರಣರಲ್ಲದೆ, ಆರ್ಜಿಸಿದ ಶಾರೀರಿಕ ಅಥವಾ ಮಾನಸಿಕ ಅಸಾಮರ್ಥ್ಯವು ಒಂದು ಉದ್ದೇಶಪೂರಿತ ಸಂತುಷ್ಟ ಜೀವನವನ್ನು ಸಾಗಿಸುವಲ್ಲಿ ಅವರಿಗೆ ಅಡಚಣೆಯನ್ನುಂಟು ಮಾಡಲಾಗದು. ಈ ಅಗತ್ಯವನ್ನು ಮನಗಂಡು ಆಧುನಿಕ ಸಮಾಜವು, ಇಂಥ ಶಾರೀರಿಕ ಮತ್ತು ಮಾನಸಿಕ ಊನತೆಯುಳ್ಳ ವ್ಯಕ್ತಿಗಳು ಸಂತೋಷದಿಂದ ಉದ್ದೇಶಯುತವಾದ ಜೀವನವನ್ನು ಇತರ ಸಾಮಾನ್ಯ ವ್ಯಕ್ತಿಗಳಂತೆಯೇ ನಡೆಸಲು ಸಾಧ್ಯವಾಗುವಂತೆ

ಮಾಡಲು ಪ್ರಯತ್ನಿಸಬೇಕು. ಇಂತಹ ಸೇವಾಕಾರ್ಯದಲ್ಲಿ ತೊಡಗಿಸಿಕೊಳ್ಳುವವರು ಬಹಳ ವಿರಳ. ಏಕೆಂದರೆ ಇದರಲ್ಲಿ ಯಾವುದೇ ಆರ್ಥಿಕ ಲಾಭಗಳಿರುವುದಿಲ್ಲ. ಬದಲಾಗಿ ತ್ಯಾಗ, ಪ್ರೀತಿ ಹಾಗೂ ತಾಳ್ಮೆ ಅತ್ಯಗತ್ಯವಾಗಿರುತ್ತದೆ. ಈ ಕ್ಷೇತ್ರದಲ್ಲಿಯೂ ಕೂಡಾ ಕ್ರೈಸ್ತ ಮಿಶನರಿಗಳು ಆದ್ಯರೆನಿಸಿ ಇತರರಿಗೆ ಮಾದರಿಯಾಗಿದ್ದಾರೆ ಮಾತ್ರವಲ್ಲ ಅನುಕರಣೀಯರೆನಿಸಿದ್ದಾರೆ. ಕ್ರೈಸ್ತ ಮಿಶನರಿಗಳು ಮತ್ತು ಶ್ರೀಸಾಮಾನ್ಯರು ನಡೆಸುತ್ತಿರುವ ಕೆಲವು ವಿಭಿನ್ನ ಸಾಮರ್ಥ್ಯದ ಸಂಸ್ಥೆಗಳು ಇಂತಿವೆ.

**೪.೫.೧. ಸೈಂಟ್ ಆ್ಯಗ್ನೆಸ್ ಸ್ಪೆಶಲ್ ಸ್ಕೂಲ್ (ಎಸ್.ಎ.ಎಸ್)**

೧೯೭೦ರಲ್ಲಿ ಭಗಿನಿ ಮರಿಯ ಜ್ಯೋತಿಯವರು ಸೈಂಟ್ ಆಗ್ನೇಸ್ ಸ್ಪೆಶಲ್ ಸ್ಕೂಲನ್ನು ಮಂಗಳೂರಿನ ಬೆಂದೂರಿನಲ್ಲಿ ಆರಂಭಿಸಿದ್ದಾರೆ. "ಮಮತೆಯಿಂದ ನಾವು ಬೆಳೆಯುತ್ತೇವೆ" ಎಂಬ ಉದ್ದೇಶದಿಂದ ಕೇವಲ ೫ ಮಕ್ಕಳೊಂದಿಗೆ ಪ್ರಾರಂಭವಾದ ಸಂಸ್ಥೆ ಈಗ ದೊಡ್ಡದಾಗಿ ಬೆಳೆದು ೩೦೦ ಮಕ್ಕಳು ಹಾಗೂ ಹಿರಿಯರು ಇಲ್ಲಿ ತರಬೇತಿ ಪಡೆಯುತ್ತಿದ್ದಾರೆ. ವಿಭಿನ್ನ ಸಾಮರ್ಥ್ಯದವರು ಇತರರಂತೆ ಭಾವನೆಗಳನ್ನು ಹೊಂದಿದ್ದಾರೆ ಹಾಗೂ ದೇವರ ಬೆಲೆಬಾಳುವ ಸೃಷ್ಟಿ ಎಂದು ಒಪ್ಪಿಕೊಳ್ಳುವ ಮುಖ್ಯ ತತ್ತ್ವ ಇದರಲ್ಲಿ ಅಡಗಿದೆ. ಅವರ ಪರಿಸ್ಥಿತಿ ಅರ್ಥೈಸಿಕೊಂಡು ಅವರೊಳಗಿನ ಪ್ರತಿಭೆಗಳ ಹಾಗೂ ವಿಭಿನ್ನ ತಿಳುವಳಿಕೆಯನ್ನು ಹುಡುಕಿ ಅವರಿಗೆ ವೃತ್ತಿಪರವಾಗಿ ತರಬೇತುಗೊಳಿಸಿ, ಕಾಳಜಿ ವಹಿಸುವ ಜವಾಬ್ದಾರಿ ಅದರಲ್ಲಿದೆ. ಎಸ್. ಎ.ಎಸ್. ಒಂದೇ ಸಂಸ್ಥೆ ಎಂದು ಹೇಳುವ ಬದಲು ವಿವಿಧ ತರಬೇತಿ ಕೇಂದ್ರಗಳ ಒಂದು ಗುಚ್ಛ ಎಂದರೆ ಹೆಚ್ಚು ಅರ್ಥಗರ್ಭಿತವಾಗಿರುತ್ತದೆ. ಇಲ್ಲಿ, ಬೇರೆ ಬೇರೆ ಹಂತದ ವಿಭಿನ್ನ ಸಾಮರ್ಥ್ಯದವರನ್ನು ಅವಲಂಭಿಸಿ ಪ್ರಾಥಮಿಕ ಪೂರ್ವ, ಪ್ರಾಥಮಿಕ, ಮಾಧ್ಯಮಿಕ, ವೃತ್ತಿಪೂರ್ವ ಹಾಗೂ ಗೃಹವಿದ್ಯಾ ವಿಭಾಗಗಳಲ್ಲಿ ತರಬೇತಿ ನೀಡುತ್ತಾರೆ. ವೃತ್ತಿ ತರಬೇತಿ ಕೇಂದ್ರದಲ್ಲಿ ೬೦ ಜನ ವಿವಿಧ ವೃತ್ತಿಗಳನ್ನು ಕಲಿತು, ಅವರ ಸಾಮರ್ಥ್ಯಕ್ಕೆ ತಕ್ಕಂತೆ ಅಲ್ಪ ಸ್ವಲ್ಪ ದುಡಿಯುತ್ತಾರೆ. ವೃತ್ತಿ ಕೇಂದ್ರದಲ್ಲಿ ಕಾಗದದ ಚೀಲಗಳು, ಬರೆಯುವ ಪುಸ್ತಕ, ಸ್ಮರಣಿಕೆಯಾಗಿ ಕೊಡಬಹುದಾದ ಸುಂದರ ವಸ್ತು, ಬಟ್ಟೆ, ಮರದ ಕೆತ್ತನೆ ಇತ್ಯಾದಿ ತಯಾರಿಸಲಾಗುತ್ತದೆ.

೧೯೭೭ರಿಂದ ಕಂಪ್ಯೂಟರ್ ತರಬೇತಿ ಕೇಂದ್ರವನ್ನು ಕುವೈತ್ ಕೆನರಾ ವೆಲ್ಫೇರ್ ಅಸೋಸಿಯೇಷನ್‌ರವರ ಆರ್ಥಿಕ ನೆರವಿನಿಂದ ಆರಂಭಿಸಲಾಗಿದೆ. ೧೯೯೨ರಲ್ಲಿ ಎಸ್.ಎ.ಎಸ್.ನಲ್ಲಿ ವಿಭಿನ್ನ ಸಾಮರ್ಥ್ಯದವರಿಗೆ ತರಬೇತಿ ನೀಡುವ ಶಿಕ್ಷಕ-ಶಿಕ್ಷಕಿಯರಿಗೆ ತರಬೇತಿ ನೀಡುವ ಶಿಕ್ಷಣ ಸಂಸ್ಥೆ ಆರಂಭಿಸಲಾಗಿದೆ. ಹಿಂದೆ ಒಂದು ವರ್ಷದ ವಿಭಿನ್ನ ಶಿಕ್ಷಕ ತರಬೇತಿ ಡಿಪ್ಲೊಮಾ ಇತ್ತು, ಅದು ೨೦೦೩ರಿಂದ ಎರಡು ವರ್ಷಗಳ ಡಿಪ್ಲೊಮಾ ಆಗಿ ಬದಲಾಯಿಸಲಾಗಿದೆ. ಇದುವರೆಗೆ ೩೧೦ ಮಂದಿ ಯಶಸ್ವಿಯಾಗಿ ಈ ಡಿಪ್ಲೊಮಾ ಶಿಕ್ಷಣ ಮುಗಿಸಿ ದೇಶಾದ್ಯಂತ ಹಾಗೂ ವಿದೇಶಗಳಲ್ಲಿ ವಿಭಿನ್ನ

ಸಾಮರ್ಥ್ಯದ ಮಕ್ಕಳ ತರಬೇತಿಯಲ್ಲಿ ತೊಡಗಿದ್ದಾರೆ. ಇಲ್ಲಿ ಸರ್ಕಾರಿ ಪ್ರಾಥಮಿಕ ಶಿಕ್ಷಕ-ಶಿಕ್ಷಕಿಯರಿಗೆ ೪೫ ದಿನಗಳ 'ಸಮಗ್ರ ಶಿಕ್ಷಣ' ತರಬೇತಿಯನ್ನೂ ನೀಡಲಾಗುತ್ತದೆ. ಜರ್ಮನಿ, ಇಂಗ್ಲೆಂಡ್, ಜಪಾನ್, ಇಟಲಿ ಮುಂತಾದ ದೇಶಗಳಿಂದ ಸ್ವಯಂ ಸೇವಕರು ಬಂದು ಇಲ್ಲಿ ಅಲ್ಪ ಅವಧಿಯ ಸೇವೆ ಸಲ್ಲಿಸಿ ಅಂತರರಾಷ್ಟ್ರೀಯ ಸಂಬಂಧವನ್ನು ಬಲಪಡಿಸುವುದರಲ್ಲಿ ನಿರತರಾಗಿದ್ದಾರೆ.

ಈ ಶಾಲೆಗೆ ಸರಕಾರದ ಸಮಾಜ ಕಲ್ಯಾಣ ಇಲಾಖೆಯಿಂದ 'ಕರ್ನಾಟಕ ರಾಜ್ಯ ಪ್ರಶಸ್ತಿ' ನೀಡಿ ಗೌರವಿಸಲಾಗಿದೆ. ಅಂತರರಾಷ್ಟ್ರೀಯ ಓರಿಯೆಂಟೇಶನ್ ಕೇಂದ್ರದವರು 'ಅವಾರ್ಡ್ ಆಫ್ ಎಪ್ರಿಸಿಯೇಶನ್' ನೀಡಿ ಗೌರವಿಸಿದ್ದಾರೆ. ಕರ್ನಾಟಕ ರಾಜ್ಯ ಅಂಗವಿಕಲ ಪರಿಷತ್ತಿನವರಿಂದ 'ಮಹತ್ವದ ಸೇವಾ ಪುರಸ್ಕಾರ' ಲಭಿಸಿದೆ. ಅಷ್ಟೇ ಅಲ್ಲದೆ, ಸುರತ್ಕಲ್, ಬೆಳ್ಮಣ್, ಪಾಂಬೂರ್, ಕಿನ್ನಿಗೋಳಿ, ಬೆಳಗಾಂ ಇತ್ಯಾದಿ ಸ್ಥಳಗಳಲ್ಲಿ ವಿಭಿನ್ನ ಸಾಮರ್ಥ್ಯದ ಮಕ್ಕಳಿಗಾಗಿ ಶಾಲೆಗಳನ್ನು ಆರಂಭಿಸಲು ಪ್ರೇರಣೆ ಇಲ್ಲಿಂದ ದೊರೆತ್ತಿರುವುದು ಹೆಮ್ಮೆಯ ವಿಷಯವಾಗಿದೆ.[೧೦]

**೪.೫.೨. ಆಶಾ ನಿಲಯ, ಉಡುಪಿ**

ಉಡುಪಿ ಡಾ. ಲೊಂಬಾರ್ಡ್ ಸ್ಮಾರಕ ಆಸ್ಪತ್ರೆಯ ವಠಾರದಲ್ಲಿ ಬುದ್ಧಿಮಾಂಧ್ಯ ಮಕ್ಕಳ ಪಾಲನೆ, ಶಿಕ್ಷಣ ಹಾಗೂ ಪುನರ್ವಸತಿ ಕಲ್ಪಿಸುವ ಉದ್ದೇಶಕ್ಕಾಗಿ 'ಆಶಾ ನಿಲಯ' ಎಂಬ ಸಂಸ್ಥೆ ೧೯೬೮ರಿಂದ ಕಾರ್ಯಾಚರಿಸುತ್ತಿದ್ದು, ಇಲ್ಲಿ ೨೦೦೮ರಲ್ಲಿ ೬೫ ಮಕ್ಕಳು ಪ್ರಯೋಜನ ಪಡೆಯುತ್ತಿದ್ದರು. ಆಶಾ ನಿಲಯದಲ್ಲಿ ಮಕ್ಕಳಿಗೆ ಉಚಿತ ಊಟ, ವಸತಿ, ಶಿಕ್ಷಣ, ಸ್ವ ಉದ್ಯೋಗ ತರಬೇತಿ, ಆರೋಗ್ಯ ಪಾಲನೆ, ಮಾನಸಿಕ ಬೆಳವಣಿಗೆಗೆ ಬೇಕಾದ ವೈದ್ಯಕೀಯ ಹಾಗೂ ಇತರ ನೆರವು ನೀಡಲಾಗುತ್ತದೆ. ಚರ್ಚಸ್ ಕೌನ್ಸಿಲ್ ಫಾರ್ ಚೈಲ್ಡ್ ಆಂಡ್ ಯೂತ್ ಕೇರ್ ಸಂಸ್ಥೆ ಹಾಗೂ ಸಾರ್ವಜನಿಕರ ಆರ್ಥಿಕ ನೆರವಿನಿಂದ ಸಂಸ್ಥೆಯನ್ನು ನಡೆಸಲಾಗುತ್ತದೆ.[೧೧] ಪ್ರಾರಂಭದಲ್ಲಿ ಆಶಾ ನಿಲಯದಲ್ಲಿ ೩೨ ಮಕ್ಕಳಿದ್ದರು. ಅವರಿಗೆ ನುರಿತ ಶಿಕ್ಷಕರಿಂದ ಬೇರೆ ಬೇರೆ ಕೌಶಲ್ಯಗಳನ್ನು ಕಲಿಸಿಕೊಡಲಾಗುತ್ತಿದೆ. ಆಶಾ ನಿಲಯದಲ್ಲಿರುವ ಹೆಚ್ಚಿನವರು ಅಂಗ ವೈಕಲ್ಯತೆ ಹೊಂದಿದ್ದು ಕೆಲವರು ಕಿವುಡುತನದಿಂದ ಬಳಲುತ್ತಿದ್ದವರೂ ಇದ್ದಾರೆ. ಮರ ಗೆಲಸ (ಪೀಠೋಪಕರಣ ತಯಾರಿ), ಲಾಂಡ್ರಿ, ಕರಕುಶಲ, ಮೇಣದ ಬತ್ತಿ ಮತ್ತು ಫಿನಾಯಿಲ್ ತಯಾರಿಸುವುದು ಮುಂತಾದ ಕೆಲವು ವೃತ್ತಿಗಳನ್ನು ಕಲಿಸಲಾಗುತ್ತದೆ. ೧೯೮೫ರ ಕೊನೆಯಲ್ಲಿ ೩೪ ಮಂದಿ ಆಶಾ ನಿಲಯದಲ್ಲಿ ತರಬೇತಿ ಪಡೆಯುತ್ತಿದ್ದರು. ಮಣಿಪಾಲದಲ್ಲಿ ಎಲ್ಲಾ ಮಕ್ಕಳ ಸಂಪೂರ್ಣ ಮಾನಸಿಕ ತಪಾಸಣೆ ನಡೆಸಲಾಗುತ್ತದೆ. ಡಾ. ಲೊಂಬಾರ್ಡ್ ಆಸ್ಪತ್ರೆಯ ಫಿಸಿಯೋಥೆರಪಿ ವಿಭಾಗದವರು ನಿರಂತರವಾಗಿ ಮಕ್ಕಳ ಆರೈಕೆಯಲ್ಲಿ ನೆರವಾಗುತ್ತಿದ್ದಾರೆ.[೧೨]

### ೪.೫.೩. ಮಾನವಿಕ, ಬೆಳ್ಮಣ್

ಫಾ। ಜಾನ್ ಫೆರ್ನಾಂಡಿಸ್ ಅವರು ಕಾರ್ಕಳ ತಾಲೂಕಿನ ಬೆಳ್ಮಣ್‌ನಲ್ಲಿ 'ಮಾನವಿಕ' ಎಂಬ ಹೆಸರಿನ ಬುದ್ಧಿಮಾಂದ್ಯ ಶಾಲೆಯನ್ನು ಆರಂಭಿಸಿದರು. ಆಸುಪಾಸಿನ ಮಕ್ಕಳಿಗೆ ಇದರಿಂದ ತುಂಬಾ ನೆರವಾಯಿತು ಮಾತ್ರವಲ್ಲದೆ ಅವರು ಗೌರವಯುತ ಜೀವನ ನಡೆಸಲು ದಾರಿ ಮಾಡಿಕೊಟ್ಟಿತು.[೯೩]

### ೪.೫.೪. ಬೆಥನಿ ಜೀವನ್ ಜ್ಯೋತಿ ಸ್ಪೆಶಲ್ ಸ್ಕೂಲ್ ಮರ್ದಾಳ (ಬಿ.ಜೆ.ಜೆ.ಎಸ್.)

ಫಾ। ಜಕಾರಿಯಸ್ ನಂತಿಯಾಟ್ ಅವರು ಪುತ್ತೂರು ತಾಲೂಕಿನ ಮರ್ದಾಳದಲ್ಲಿ ೨೦೦೭ರಲ್ಲಿ 'ಬೆಥನಿ ಜೀವನ್ ಜ್ಯೋತಿ ಸ್ಪೆಶಲ್ ಸ್ಕೂಲ್' ಅನ್ನು ಆರಂಭಿಸಿದರು. ಭ। ಆ್ಯಲೆನ್ ಮೇರಿ ಡಿ.ಎಂ.ಯವರು ಪ್ರಾಚಾರ್ಯರಾಗಿ ಮಕ್ಕಳ ತರಬೇತಿ ನೀಡುತ್ತಿದ್ದಾರೆ. ಪ್ರಸ್ತುತ ೭೮ ವಿಭಿನ್ನ ಸಾಮರ್ಥ್ಯದ ಮಕ್ಕಳು ಇಲ್ಲಿ ತರಬೇತಿ ಮತ್ತು ಆರೈಕೆಯನ್ನು ಪಡೆಯುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಿರೋ - ಮಲಂಕರ ವಿಧಾನವನ್ನು ಪಾಲಿಸುವ ಸಾಕಷ್ಟು ಮಲಯಾಳಿ ಕ್ರೈಸ್ತರಿದ್ದಾರೆ. ೨೦೧೧ರಲ್ಲಿ ಹೊಸ ಪುತ್ತೂರು ಧರ್ಮಪ್ರಾಂತ್ಯ ಆರಂಭವಾಗುವ ಮೊದಲು ಇವರ ಆಧ್ಯಾತ್ಮಿಕ ಬೇಡಿಕೆಗಳನ್ನು ಬೆಥನಿ ಆಶ್ರಮ ಸಭೆಯ ಧರ್ಮಗುರುಗಳು ಈಡೇರಿಸುತ್ತಿದ್ದರು. ಈ ಸಭೆಗೆ ಸೇರಿದ ಫಾ। ಜಕಾರಿಯಸ್ ನಂತಿಯಾಟ್ ಅವರು ಮಕ್ಕಳಿಗಾಗಿ ೧೩ ನರ್ಸರಿ ಶಾಲೆಗಳನ್ನು ಪ್ರಾರಂಭಿಸಿ ಅದನ್ನು ಅಂಗನವಾಡಿಯಾಗಿ ಪರಿವರ್ತಿಸಲು ಸರ್ಕಾರದ ಕೈಗೊಪ್ಪಿಸಿದ್ದಾರೆ. ಹಲವಾರು ವರ್ಷ ಆರೋಗ್ಯವಂತ ಮಕ್ಕಳಿಗಾಗಿ ಶ್ರಮಿಸಿದ ಅವರು ವಿಭಿನ್ನ ಸಾಮರ್ಥ್ಯದ ಮಕ್ಕಳಿಗಾಗಿ ಸ್ಕೂಲ್‌ನ್ನು ಆರಂಭಿಸಿದರು. ಕಡಬ ಸುತ್ತ ಮುತ್ತಲಿನ ೯ ಹಳ್ಳಿಗಳ ೭೮ ಮಕ್ಕಳು ಬಿ.ಜೆ.ಜೆ.ಎಸ್‌ನಲ್ಲಿ ತಾವೂ ದೇವರ ಸಾಮರ್ಥ್ಯವಂತ ಸೃಷ್ಟಿ ಎಂದು ರುಜುವಾತು ಪಡಿಸುತ್ತಿದ್ದಾರೆ. ಮಾನಸಿಕ ಸುಧಾರಣೆ, ಆರ್ಥಿಕ ಸಬಲತೆ, ಆತ್ಮಿಕ ಆರೈಕೆ, ಪುನರ್ವಸತಿ, ಆರೋಗ್ಯವಂತ ಸಾಮಾಜಿಕ ಸಂಬಂಧ, ನಾಗರಿಕ ಜವಾಬ್ದಾರಿ, ವ್ಯಕ್ತಿತ್ವ ವಿಕಸನ ಇತ್ಯಾದಿ ಕಲಿಸುವ ಉದ್ದೇಶಗಳನ್ನಿಟ್ಟು ಸಂಸ್ಥೆ ನಡೆಸುತ್ತಿದ್ದಾರೆ.[೯೪]

### ೪.೫.೫. ಮಾನಸ ಪುನರ್ವಸತಿ ಹಾಗೂ ತರಬೇತಿ ಕೇಂದ್ರ, ಪಾಂಬೂರು

ಪಾಂಬೂರಿನಲ್ಲಿ ಮಾನಸಿಕ ಅಸ್ವಸ್ಥ ಹಾಗೂ ವಿಭಿನ್ನ ಸಾಮರ್ಥ್ಯದ ಮಕ್ಕಳಿಗೆ ಶಿಕ್ಷಣ, ತರಬೇತಿ ಹಾಗೂ ಪುನರ್ವಸತಿ ನೀಡುವ ಕೇಂದ್ರ, 'ಮಾನಸ'ಇದ್ದು ೧೯೯೭ರಲ್ಲಿ ಇಲ್ಲಿ ತರಬೇತಿ ಪ್ರಾರಂಭವಾಗಿದೆ. ಇದಕ್ಕೂ ಮೊದಲು ಉಡುಪಿಯ ಶಂಕರಪುರದಲ್ಲಿ ಫಾ। ಜೆ.ಪಿ.ತಾವ್ರೊ ಅವರ ಸಹಕಾರದಲ್ಲಿ ಡಾ. ಎಡ್ವರ್ಡ್ ಲೋಬೋ ಅವರ ನಾಯಕತ್ವದಲ್ಲಿ ೧೯೯೧ರಲ್ಲಿ ಮಾನಸ ಶಾಲೆ ಆರಂಭಗೊಂಡಿತ್ತು ಹಾಗೂ ೧೯೯೨ರಲ್ಲಿ ಅಗಸ್ಟಿನ್ ಗೋಮ್ಸ್ ಅವರ ನಾಯಕತ್ವದಲ್ಲಿ ಶಿರ್ವಾದಲ್ಲಿ ಇನ್ನೊಂದು ಶಾಲೆ

ಪ್ರಾರಂಭ ಗೊಂಡಿತ್ತು. ಈ ಎರಡೂ ಶಾಲೆಗಳು ಮುಂದೆ ಪಾಂಬೂರಿನ ಮಾನಸ ಸಂಸ್ಥೆಯೊಂದಿಗೆ ವಿಲೀನಗೊಂಡಿವೆ. ಮಾನಸದಲ್ಲಿ ಆರು ವರ್ಷದಿಂದ ೧೮ ವರ್ಷ ಪ್ರಾಯದವರ ಮಾನಸಿಕ ಬೆಳವಣಿಗೆ ಕಡಿಮೆ ಇರುವ ಮಕ್ಕಳಿಗೆ ಪ್ರವೇಶಾತಿ ನೀಡಲಾಗುತ್ತದೆ. ಆರು ವರ್ಷದಿಂದ ೧೬ವರ್ಷದವರಿಗೆ ಪೂರ್ವ ಪ್ರಾಥಮಿಕ ಮುಗಿಸಿ ಮಾಧ್ಯಮಿಕದವರೆಗೆ ೭ ತರಗತಿಗಳಿದ್ದು ಓದುವುದು, ಬರೆಯುವುದು ಇತ್ಯಾದಿ ತರಬೇತಿಗಳನ್ನು ನೀಡಲಾಗುತ್ತದೆ. ಇತರರಿಗೆ ವೃತಿಪರ ತರಬೇತಿಗಳಾದ ಹೊಲಿಗೆ, ಲಕೋಟೆ, ಬರೆಯುವ ಪುಸ್ತಕ, ಮೇಣದ ಬತ್ತಿ, ಫಿನಾಯ್ಲ್ ತಯಾರಿ ಮಾಡುವುದು, ಗ್ರೀಟಿಂಗ್ಸ್ ಕಾರ್ಡ್ ಹಾಗೂ ಕ್ರಾಫ್ಟ್ ತಯಾರಿಕೆಯ ತರಬೇತಿ ಮತ್ತು ಕಂಪ್ಯೂಟರ್ ಶಿಕ್ಷಣ ಕೊಡಲಾಗುತ್ತಿದೆ. ಕೇಂದ್ರ ಸರ್ಕಾರ, ಜರ್ಮನ್ ಸಂಸ್ಥೆ, ಕಡಂದಲೆಯ ಸ್ವಾಮೀಜಿ, ಉಡುಪಿ ಮಠ, ಧರ್ಮಸ್ಥಳದ ಧರ್ಮಾಧಿಕಾರಿ, ಕೊಟ್ಟಾರ ಮೂಕಾಂಬಿಕಾ ದೇವಸ್ಥಾನ, ಮುಂತಾದವರು ಮಾನಸಕ್ಕೆ ಆರ್ಥಿಕ ನೆರವು ನೀಡುತ್ತಿದ್ದಾರೆ.[೯೫]

ಇಲ್ಲಿ ತರಬೇತಿ ಪಡೆದ ೨೨ ಮಕ್ಕಳು, ಬೇರೆ ಬೇರೆ ಸಂಸ್ಥೆಗಳಲ್ಲಿ ಕೆಲಸ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ೧೪ ವಿದ್ಯಾರ್ಥಿಗಳು ಸಾಮಾನ್ಯ ಶಾಲೆಗಳಲ್ಲಿ ಸೇರಿ ತಮ್ಮ ಶಿಕ್ಷಣವನ್ನು ಮುಂದುವರಿಸುತ್ತಿದ್ದಾರೆ. ಐದು ಮಕ್ಕಳು ವಿಶೇಷ ಒಲಿಂಪಿಕ್ಸ್‌ನಲ್ಲಿ ಭಾರತವನ್ನು ಪ್ರತಿನಿಧಿಸಿ ಪದಕ ಪಡೆದಿದ್ದಾರೆ. ಒಬ್ಬ ವಿದ್ಯಾರ್ಥಿ ಮುಂದಿನ ಒಲಿಂಪಿಕ್ಸ್‌ಗೆ ಆಯ್ಕೆಗೊಂಡು ತರಬೇತಿಯಲ್ಲಿ ನಿರತನಾಗಿದ್ದಾನೆ. ೧೯೯೯ರಲ್ಲಿ ಪ್ರಮೀಳಾ ಪಿಂಟೋ ಎಂಬ ೯ ವರ್ಷ ಪ್ರಾಯದ ವಿಭಿನ್ನ ಸಾಮರ್ಥ್ಯದ ಹುಡುಗಿ ಮಾನಸ ಸಂಸ್ಥೆಯನ್ನು ಸೇರಿದ್ದಾಗ ಪ್ರತಿಯೊಂದು ಅವಶ್ಯಕತೆಗಳನ್ನು ಪೂರೈಸಲು ಬೇರೆಯವರಿಗೆ ಅವಲಂಬಿಸಿಕೊಂಡಿರಬೇಕಿತ್ತು. ಆದರೆ, ಶಿಕ್ಷಕಿ ಶೈನಿಯವರ ತರಬೇತಿಯ ಫಲವಾಗಿ, ೨೦೧೧ರ ಗ್ರೀಸ್ ದೇಶದ ಅಥೆನ್ಸ್‌ನಲ್ಲಿ ನಡೆದ ಸ್ಕೇಟಿಂಗ್ ಸ್ಪರ್ಧೆಯಲ್ಲಿ ಚಿನ್ನದ ಪದಕ ಗಳಿಸಿದರು.[೯೬] ಶಿಕ್ಷಣ ಇಲಾಖೆಯ ಗಣತಿಯ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೫,೧೮೭ ಹಾಗೂ ಉಡುಪಿ ಜಿಲ್ಲೆಯಲ್ಲಿ ೪,೪೭೦ ವಿಭಿನ್ನ ಸಾಮರ್ಥ್ಯದ ಮಕ್ಕಳು ಇದ್ದಾರೆ. ಆದರೆ ಕೇವಲ ಶೇಕಡ ೨ರಷ್ಟು ಮಕ್ಕಳು ಮಾತ್ರ ಶಿಕ್ಷಣ ತರಬೇತಿ ಸಂಸ್ಥೆಗೆ ಸೇರ್ಪಡೆಗೊಳ್ಳುತ್ತಾರೆ.[೯೭] ಅಮೇರಿಕಾದ ಡೆಮೋಕ್ರಾಟಿಕ್ ನ್ಯಾಷನಲ್ ಕಮಿಟಿಯವರು ೧೯೮೦ರ ಆರಂಭದಲ್ಲಿ ಅಂಗವಿಕಲತೆ ಇರುವವರಿಗೆ ಅಂಗವಿಕಲರು ಅಥವಾ ವಿಕಲಾಂಗರು ಎಂದು ಕರೆಯುವ ಬದಲಿಗೆ 'ವಿಭಿನ್ನ ಸಾಮರ್ಥ್ಯ'ದವರು ಎಂದು ಕರೆಯುವುದು ಸೂಕ್ತ ಎಂದು ನಿರ್ಧರಿಸಿದರು.[೯೮]

**೪.೫.೬. ಸೈಂಟ್ ಮೇರಿಸ್ ಸ್ಪೆಶಲ್ ಸ್ಕೂಲ್, ಕಿನ್ನಿಗೋಳಿ**

ಫಾ। ಸ್ಟ್ಯಾನಿ ತಾವ್ರೋ ಅವರ ನೇತೃತ್ವದಲ್ಲಿ ೧೯೭೭ರಲ್ಲಿ ಕಿನ್ನಿಗೋಳಿಯ ಸೈಂಟ್ ಮೇರಿಸ್ ಸ್ಪೆಶಲ್ ಸ್ಕೂಲ್‌ಅನ್ನು ಸ್ಥಾಪಿಸಲಾಗಿದೆ. ಜೀವನ್ ಜ್ಯೋತಿ ಚಾರಿಟೇಬಲ್ ಟ್ರಸ್ಟ್‌ನ ಅಧೀನದಲ್ಲಿ ಮೇರಿಯ ಬಡ ಸಹೋದರಿಯರ ಸಭೆಯ ಭ। ಜೆಸಿಂತಾ ಲೋಬೋರವರು ಪ್ರಾಚಾರ್ಯರಾಗಿದ್ದು ಸಂಸ್ಥೆಯನ್ನು

ಮುನ್ನಡೆಸುತ್ತಿದ್ದಾರೆ. ಕೇವಲ ೮ ಮಕ್ಕಳೊಂದಿಗೆ ಪ್ರಾರಂಭವಾದ ಈ ಸಂಸ್ಥೆ ಈಗ ಹಲವಾರು ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಿದೆ. ಶಾಲೆಯಲ್ಲಿ ಸಾಬೂನು, ಫಿನಾಯ್ಲ್, ಚಿತ್ರಕಲೆ, ಹೊಲಿಗೆ, ಕಾಗದದ ಲಕೋಟೆ, ವಿವಿಧ ರೀತಿಯ ಹೂದಾನಿಗಳನ್ನು ಮಾಡಲು ಕಲಿಸಲಾಗುತ್ತದೆ.[೯೯]

**೪.೫.೭. ಕ್ರಿಸ್ತರಾಜ ನವಚೇತನ ಸ್ಪೆಶಲ್ ಸ್ಕೂಲ್, ವೇಣೂರು**

ಬೆಳ್ತಂಗಡಿ ತಾಲೂಕಿನ ವೇಣೂರಿನಲ್ಲಿ ೧೯೯೯ರಲ್ಲಿ ಅರ್ಸುಲಾಯ್ನ್ ಧರ್ಮಭಗಿನಿಯರು ಕ್ರಿಸ್ತರಾಜ ನವಚೇತನ ಸ್ಪೆಶಲ್ ಶಾಲೆಯನ್ನು ಸ್ಥಾಪಿಸಿದರು. ಪ್ರಸ್ತುತ ೫೧ ಮಕ್ಕಳು ಇಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ಈ ಶಾಲೆಯಲ್ಲಿ ಮುಖ್ಯೋಪಾಧ್ಯಾಯಿನಿ ಸಮೇತ ೫ ಮಂದಿ ವಿಶೇಷ ತರಬೇತಿ ಹೊಂದಿದ್ದ ಶಿಕ್ಷಕರು ಹಾಗೂ ಇಬ್ಬರು ಸಹಾಯಕರು ಮಕ್ಕಳ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ. ೧೮ ವರ್ಷ ಮೇಲ್ಪಟ್ಟ ಮಕ್ಕಳಿಗೆ ಮಲ್ಲಿಗೆ ಕೃಷಿ, ರಬ್ಬರ್ ಟ್ಯಾಪಿಂಗ್, ರಬ್ಬರ್ ಶೀಟ್ ತಯಾರಿ, ಹೂವು, ಗ್ರೀಟಿಂಗ್ ಕಾರ್ಡ್ ತಯಾರಿ ಮುಂತಾದುವುಗಳನ್ನು ಕಲಿಸಲಾಗುತ್ತಿದೆ. ಸಾಕಷ್ಟು ಪ್ರಾಥಮಿಕ ಶಾಲೆಗಳ ಶಿಕ್ಷಕರು ಇಲ್ಲಿಗೆ ಭೇಟಿಕೊಟ್ಟು ಇಲ್ಲಿಯ ಶಿಕ್ಷಣದ ಬಗ್ಗೆ ತರಬೇತಿ ಹೊಂದಿ, ತಮ್ಮ ಸಾಮಾನ್ಯ ಶಾಲೆಗಳಲ್ಲಿರುವ ವಿಭಿನ್ನ ಸಾಮರ್ಥ್ಯದ ಮಕ್ಕಳಿಗೆ ತರಬೇತಿ ನೀಡುತ್ತಾರೆ.[೧೦೦]

**೪.೫.೮. ಅರುಣೋದಯ ಸ್ಪೆಶಲ್ ಸ್ಕೂಲ್**

ಅರುಣೋದಯ ಸ್ಪೆಶಲ್ ಸ್ಕೂಲನ್ನು ೨೦೦೦ ಇಸವಿಯಲ್ಲಿ ಭ। ಡೊನಾಲ್ಡಾ ಪಾಯ್ಸ್‌ರವರು ಕಾರ್ಕಳದಲ್ಲಿ ಸ್ಥಾಪಿಸಿದರು. ಈ ಮೊದಲು ೨೦೦೦ ಇಸವಿಯಲ್ಲಿ ಮೂರು ಮಕ್ಕಳೊಂದಿಗೆ ಬೆಳ್ವಾಯಿಯಲ್ಲಿ ಸ್ಥಾಪನೆಯಾಗಿದ್ದ ವಿಭಿನ್ನ ಸಾಮರ್ಥ್ಯದ ಶಾಲೆ ಕಾರಣಾಂತರದಿಂದ ಕಾರ್ಕಳಕ್ಕೆ ವರ್ಗಾಯಿಸಬೇಕಾಯಿತು. ಭ। ಡೊನಾಲ್ಡಾರವರು ಇಬ್ಬರು ಸಮಾಜ ಸೇವಕರೊಡಗೂಡಿ ಜೀವನ್ ವೆಲ್ಫೇರ್ ಟ್ರಸ್ಟ್ (ರಿ) ಸ್ಥಾಪಿಸಿ, ಶಾಲೆಯನ್ನು ಪ್ರಾರಂಭದಲ್ಲಿ ಬಾಡಿಗೆ ಕಟ್ಟಡದಲ್ಲಿ ನಡೆಸುತ್ತಿದ್ದರು. ಪ್ರಸ್ತುತ ೬೦ ಮಕ್ಕಳನ್ನು ಹೊಂದಿರುವ ಈ ಸಂಸ್ಥೆ, ಸರಕಾರದ ಯಾವುದೇ ಅನುದಾನವಿಲ್ಲದೆ ನಡೆಯುತ್ತಿದೆ.[೧೦೧]

**೪.೫.೯. ಮರಿಯ ನಿಕೇತನ ಸ್ಪೆಶಲ್ ಸ್ಕೂಲ್**

ಬೆಳ್ತಂಗಡಿ ತಾಲೂಕಿನ ಮುಂಡಾಜೆಯಲ್ಲಿ, ಕಾರ್ಮೆಲ್ ಮಾತೆ ಸಭೆಯ ಧರ್ಮಭಗಿನಿಯರು 'ಮರಿಯ ನಿಕೇತನ್ ಸ್ಪೆಶಲ್ ಸ್ಕೂಲ್' ಅನ್ನು ೨೦೦೨ರಲ್ಲಿ ಸ್ಥಾಪಿಸಿದ್ದಾರೆ. ಶಾಲೆಯ ಉಸ್ತುವಾರಿಯನ್ನು ಸೈಂಟ್ ಆಗ್ನೆಸ್ ಸ್ಪೆಶಲ್ ಸ್ಕೂಲಿನಲ್ಲಿ ತರಬೇತಿ ಪಡೆದ ಭ। ರೆನಿ ಅವರು ನೋಡಿಕೊಳ್ಳುತ್ತಿದ್ದಾರೆ. ಪ್ರಸ್ತುತ ಎರಡು ಹೆಣ್ಣು ಹಾಗೂ ಐದು ಗಂಡು ಮಕ್ಕಳು ಇಲ್ಲಿ ತರಬೇತಿ ಪಡೆಯುತ್ತಿದ್ದಾರೆ. ಶಾಲೆಗೆ ಬರುವ ಮಕ್ಕಳು ಹೆಚ್ಚಿನವರು ಬಡವರಾಗಿರುವುದರಿಂದ ಅವರಿಗೆ ಉಚಿತ ಶಿಕ್ಷಣ ನೀಡಬೇಕಾದ ಅನಿವಾರ್ಯತೆ ಇದೆ.

ಶಾಲೆಯಲ್ಲಿರುವ ಹೆಚ್ಚಿನವರು ಆಸುಪಾಸಿನ ಗ್ರಾಮಗಳಿಂದ ಬಂದಿರುವ ಮಕ್ಕಳಾಗಿರುತ್ತಾರೆ. ಅವರಿಗೆ ಶಾಲೆಯಲ್ಲಿ ಓದು, ಬರಹ ಅಲ್ಲದೆ ತಮ್ಮ ಅಗತ್ಯದ ಕೆಲಸಗಳನ್ನು ತಾವೇ ಮಾಡಿಕೊಳ್ಳುವಂತೆ ತರಬೇತಿ ನೀಡಲಾಗುತ್ತದೆ.[೧೦೨]

## ೪.೬. ಹೆಚ್.ಐ.ವಿ. / ಏಡ್ಸ್ ಪೀಡಿತರ ಪುನರ್ವಸತಿ ಕೇಂದ್ರಗಳು

ಹೆಚ್.ಐ.ವಿ./ಏಡ್ಸ್‌ನಂತಹ ರೋಗಗಳು ಮನುಕುಲವನ್ನೇ ವಿನಾಶದ ಅಂಚಿಗೆ ಕೊಂಡೊಯ್ಯುತ್ತಿರುವ ಈ ಕಾಲಘಟ್ಟದಲ್ಲಿ ಆ ಮಾರಕ ರೋಗದ ಸೋಂಕಿಗೆ ತುತ್ತಾದವರ ಆರೈಕೆಗಾಗಿ ಕೆಲವು ಪುನರ್ವಸತಿ ಕೇಂದ್ರಗಳನ್ನು ಆರಂಭಿಸಲಾಗಿದೆ. ಇಂತಹ ರೋಗದ ಸೋಂಕಿರುವವರನ್ನು ನಮ್ಮ ಸಮಾಜ ತುಂಬಾ ತಾತ್ಸಾರದಿಂದ ಕಾಣುವುದಲ್ಲದೆ ಅವರ ಜೀವನ ತುಂಬಾ ಕಳವಳಕಾರಿಯಾಗಿರುವಂತೆ ಮಾಡುತ್ತದೆ. ಕೆಲವೊಮ್ಮೆ ತಮ್ಮದಲ್ಲದ ತಪ್ಪಿನಿಂದ ಆರ್ಜಿಸಿಕೊಂಡ ಈ ರೋಗದಿಂದ ಅದೆಷ್ಟೋ ಮಂದಿ ನರಳಿ ಯಾರೂ ದಿಕ್ಕಿಲ್ಲದೆ ಅನಾಥವಾಗಿ ಸಾಯುವ ಪ್ರಮೇಯ ಒದಗಿ ಬರುತ್ತದೆ. ಇಡೀ ವಿಶ್ವವೇ ಭಯ ಪಡುವ ಹೆಚ್.ಐ.ವಿ \ ಏಡ್ಸ್ ಸೋಂಕಿಗೆ ಒಳಗಾದವರ ಬದುಕಿಗೆ ಭರವಸೆ ನೀಡುವ ಹಾಗೂ ಸಾವು ಬದುಕಿನ ಜೊತೆ ಹೋರಾಡುವವರಿಗೆ ಕೊನೆಗಾಲದಲ್ಲಿ ನೆಮ್ಮದಿಯಿಂದ ಸಾಯಲು, ಅವರ ಅಂತ್ಯವನ್ನು ಆದಷ್ಟು ಸಂತೋಷದಾಯಕವಾಗಿರಿಸುವ ಸ್ಥಳ ಈ ಪುನರ್ವಸತಿ ಕೇಂದ್ರಗಳಾಗಿವೆ.[೧೦೩] ಮಂಗಳೂರಿನ ಗುರುಪುರದಲ್ಲಿ ಸ್ಥಾಪಿಸಿರುವ 'ಜೀವದಾನ್' ಹೆಚ್.ಐ.ವಿ./ ಏಡ್ಸ್ ಪುನರ್ವಸತಿ ಕೇಂದ್ರವನ್ನು ಡಾಟರ್ಸ್ ಆಫ್ ಸೈಂಟ್ ಕ್ಯಾಮಿಲಸ್ ಸಭೆಯವರೂ, 'ಸ್ನೇಹ ಸದನ್' ಗಂಡಸರ ಹೆಚ್.ಐ.ವಿ/ ಏಡ್ಸ್ ಪುನರ್ವಸತಿ ಕೇಂದ್ರವನ್ನು ದ ಆರ್ಡರ್ ಆಫ್ ಸೈಂಟ್ ಕ್ಯಾಮಿಲಸ್ ಸಭೆಯ ಧರ್ಮಗುರುಗಳು ನಡೆಸುತ್ತಿದ್ದಾರೆ. ಈ ಕೇಂದ್ರಗಳಲ್ಲಿ ಸೋಂಕಿತ ವ್ಯಕ್ತಿಗಳಿಗೆ ಔಷಧೋಪಚಾರಗಳೊಂದಿಗೆ ಆಪ್ತ ಸಮಾಲೋಚನೆ, ಮನೋರಂಜನೆ, ಅವರನ್ನು ಯಾವಾಗಲೂ ಕ್ರಿಯಾಶೀಲರನ್ನಾಗಿರಿಸಲು ಕೆಲವು ಕೌಶಲ್ಯಗಳನ್ನು ಕಲಿಸಲಾಗುತ್ತದೆ.[೧೦೪] ಇದೇ ರೀತಿ ಬೆಳ್ತಂಗಡಿ ತಾಲೂಕಿನ ಕಕ್ಕಿಂಜೆಯಲ್ಲಿ ಆರಂಭಿಸಿರುವ 'ನವಜೀವನ' ಹೆಚ್.ಐ.ವಿ/ ಏಡ್ಸ್ ಆರೈಕೆ ಮತ್ತು ನೆರವು ಕೇಂದ್ರದಲ್ಲಿಯೂ ಕೂಡಾ ರೋಗಿಗಳಿಗೆ ಉಚಿತ ಆಶ್ರಯ ನೀಡುವುದು ಮಾತ್ರವಲ್ಲದೆ ಸೇವಾ ವಿಸ್ತರಣಾ ಕಾರ್ಯದಲ್ಲೂ ತೊಡಗಿಸಿಕೊಂಡಿದ್ದಾರೆ. ಏಡ್ಸ್ ಹರಡುವಿಕೆಯನ್ನು ತಡೆಗಟ್ಟಲು ಜನರನ್ನು ಜಾಗೃತಗೊಳಿಸಲು ಪುತ್ತೂರು ತಾಲೂಕಿನ ಆರು ಪಂಚಾಯತುಗಳಲ್ಲಿ ನಿರಂತರ ಆರೋಗ್ಯ ಶಿಕ್ಷಣ ಜನಜಾಗೃತಿಯನ್ನು ನೀಡಲಾಗುತ್ತಿದೆ. ಹೆಚ್.ಐ.ವಿ. ಬಾಧಿತರ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುದಾನ, ಅವರ ಆರೋಗ್ಯ ಪರಿಪಾಲನೆಗೆ ಔಷಧಿ ಹಾಗೂ ಪೌಷ್ಟಿಕ ಆಹಾರವನ್ನು ನೀಡುವುದರ ಜೊತೆಗೆ ಆಪ್ತ ಸಮಾಲೋಚನೆಯನ್ನು ನೀಡಿ ಅವರ ಬದುಕನ್ನು ಪ್ರಕಾಶಿಸುವಂತೆ ಮಾಡುವ ಕೆಲಸವನ್ನು ಕೈಗೊಂಡು ಇದರ ಸರಿಯಾದ ಹಾಗೂ ಸಮರ್ಪಕವಾದ

ಅರಿವನ್ನು ಬೆಳೆಸುವುದಕ್ಕೋಸ್ಕರ ಅನೇಕ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಲಾಗಿದೆ.[೧೦೫] ಅಂತೆಯೇ ಜೂಡಿತ್ ಮಸ್ಕರೇನ್ಹಸ್‌ರವರು ಮಂಗಳೂರಿನಲ್ಲಿ ಏಡ್ಸ್ ರೋಗಿಗಳಿಗೆ ಪುನರ್ವಸತಿ ಕೇಂದ್ರವನ್ನು ನಡೆಸುತ್ತಿದ್ದಾರೆ.[೧೦೬]

## ೪.೭. ಸಹಕಾರಿ ಕ್ಷೇತ್ರದಲ್ಲಿ ಕ್ರೈಸ್ತರ ಕೊಡುಗೆ

ಆರ್ಥಿಕ ಕ್ಷೇತ್ರದಲ್ಲಿ ಬ್ಯಾಂಕಿಂಗ್ ಸೇವೆ ಪ್ರಮುಖವಾದುದ್ದು. ಬ್ಯಾಂಕಿಂಗ್ ಎಂದಾಕ್ಷಣ ಠೇವಣಿ ಇಡುವುದು ಮತ್ತು ಸಾಲ ಕೊಡುವುದು ಮಾತ್ರವಲ್ಲದೆ ಕೈಗಾರಿಕೆ, ವ್ಯವಸಾಯ, ವ್ಯಾಪಾರ ಮುಂತಾದ ಕ್ಷೇತ್ರಗಳಿಗೆ ಸಹಾಯ ಮಾಡಿ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯಲ್ಲಿ ಬ್ಯಾಂಕಿಂಗ್ ನೆರವಾಗುತ್ತದೆ. ಬ್ಯಾಂಕಿಂಗ್‌ನಲ್ಲಿ ಎರಡು ವಿಧ- ವಾಣಿಜ್ಯ ಮತ್ತು ಸಹಕಾರಿ ಬ್ಯಾಂಕುಗಳು, ಅಲ್ಲದೆ ಸಹಕಾರಿ ಸಂಘ, ಫೈನಾನ್ಶಿಯಲ್ ಕಾರ್ಪೋರೇಶನ್, ಚಿಟ್ ಫಂಡ್, ಮನಿಲೆಂಡರ್ಸ್ ಇತ್ಯಾದಿ ಹಣಕಾಸಿನ ವಹಿವಾಟವನ್ನು ನಡೆಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬ್ಯಾಂಕಿಂಗ್ ಸೇವೆ ೨೦ನೇ ಶತಮಾನದಲ್ಲಿ ಪ್ರಾರಂಭವಾಗಿದೆ. ಹಿಂದೆ ಆಧುನಿಕ-ವೈಜ್ಞಾನಿಕ ರೀತಿಯ ಬ್ಯಾಂಕಿಂಗ್ ಪದ್ಧತಿ ರೂಢಿಯಲ್ಲಿರಲಿಲ್ಲ. ಕಥೋಲಿಕ ಕ್ರೈಸ್ತರ ಪೂರ್ವಜರ ಆರ್ಥಿಕ ಸ್ಥಿತಿ ಅಷ್ಟೊಂದು ಉತ್ತಮವಾಗಿರಲಿಲ್ಲ. ಸಾವಿರದಲ್ಲಿ ಒಂದಿಬ್ಬರು ಆಸ್ತಿವಂತರು, ಶ್ರೀಮಂತರುಗಳು ಇದ್ದು ಗ್ರಾಮದ ಮುಖಂಡರೆನಿಸಿಕೊಳ್ಳುತ್ತಿದ್ದರು ಮತ್ತು ಜನರು ಸಹಾಯಕ್ಕಾಗಿ ಅವರಲ್ಲಿ ಅಂಗಲಾಚಬೇಕಿತ್ತು. ಜಮೀನ್ದಾರರು ಮತ್ತು ಶ್ರೀಮಂತರು ತಮ್ಮ ಧನಬಲದ ನೆರವಿನಿಂದ ಜನರನ್ನು ಗುಲಾಮರಂತೆ ತಮ್ಮ ಕಪಿಮುಷ್ಟಿಯಲ್ಲಿ ಇಟ್ಟುಕೊಂಡಿದ್ದರು.

೨೦ನೇ ಶತಮಾನದವರೆಗೆ ಜನರು ತಮ್ಮ ಉಳಿಕೆಯನ್ನು ಮನೆಯಲ್ಲಿಯೇ ಕೂಡಿಸಿ ಬಚ್ಚಿಡುವ ಅಥವಾ 'ಕುರಿ ಫಂಡ್' ಎಂಬ ಹಣ ಕೂಡಿಡುವ ಪದ್ಧತಿ ರೂಢಿಯಲ್ಲಿತ್ತು. ಆ ಪದ್ಧತಿಯಲ್ಲಿ ಸದಸ್ಯರು ಒಟ್ಟು ಸೇರಿ ಸಣ್ಣ ಮಟ್ಟದಲ್ಲಿ ಹಣ ಸಂಗ್ರಹಿಸಿ ಸದಸ್ಯರ ಅವಶ್ಯಕತೆಗನುಗುಣವಾಗಿ ಸ್ವಲ್ಪ ಬಡ್ಡಿ ದರದಲ್ಲಿ ಸಾಲವನ್ನು ನೀಡಿ ಕಂತುಗಳಲ್ಲಿ ಅದನ್ನು ಹಿಂಪಡೆಯಲಾಗುತ್ತಿತ್ತು. ಕೃಷಿಯಿಂದ ಬರುವ ಆದಾಯ ತುಂಬಾ ಕಡಿಮೆಯಾದುದರಿಂದ ಮಳೆಗಾಲದಲ್ಲಿ ಜೀವನ ನಡೆಸಲು ತ್ರಾಸದಾಯಕವಾಗಿ, ಅನಿವಾರ್ಯವಾಗಿ ಸಾಲ ಪಡೆಯಬೇಕಾದ ಪರಿಸ್ಥಿತಿ ನಿರ್ಮಾಣವಾಗುತ್ತಿತ್ತು. ಆ ಪರಿಸ್ಥಿತಿಯ ಸಂಪೂರ್ಣ ಲಾಭ ಪಡೆದು ಧನಿಕರು ಮತ್ತು ಲೇವಾದೇವಿಗಾರರು ಸಾಲ ಕೊಡಲು ಕಾತುರದಿಂದ ಕಾಯುತ್ತಿದ್ದರು. ಸಾಲ ಪಡೆದು ಶಾಶ್ವತ ಸ್ವಾತಂತ್ರ್ಯ ಕಳೆದುಕೊಳ್ಳುವ ಭೀತಿ ಇದ್ದುದರಿಂದ ಜನ ಸ್ವಲ್ಪ ಹಿಂದೇಟು ಹಾಕುತ್ತಿದ್ದರಾದರೂ, ಅನಿವಾರ್ಯವಾಗಿ ಸಾಲ ಪಡೆದುಕೊಳ್ಳಬೇಕಾಗಿತ್ತು.

ಅಂತೆಯೇ, 'ವೊಲಿ' ಎಂಬ ಪದ್ಧತಿಯೊಂದು ರೂಢಿಯಲ್ಲಿದ್ದು, ಅದರ ಪ್ರಕಾರ ಒಂದು ಮುಡಿ ಅಕ್ಕಿ ಕೊಂಡರೆ ಕೊಯ್ಲಿನ ನಂತರ ಒಂದು ಕಳಸಿಗೆ ಭತ್ತ ಸೇರಿ ಪಡೆದ ಮುಡಿ ಅಕ್ಕಿಯನ್ನು ಹಿಂದಿರುಗಿಸಬೇಕಿತ್ತು. ಈ ಎಲ್ಲಾ ವ್ಯವಹಾರವೂ ಬಾಯಿ ಮಾತಿನಲ್ಲೇ ನಡೆಯುತ್ತಿದ್ದುದರಿಂದ ಅದಕ್ಕೆ ಯಾವುದೇ ಬರವಣಿಗೆಯ ರೂಪದಲ್ಲಿ ಆಧಾರಗಳಿರುತ್ತಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಹಣದ ವಿಚಾರದಲ್ಲಿ ಸಾಕಷ್ಟು ಮೋಸ ನಡೆಯುತ್ತಿತ್ತು. ಈ ರೀತಿಯಲ್ಲಿ ಬ್ಯಾಂಕಿಂಗ್ ಸೇವೆ ಅಭಿವೃದ್ಧಿಯಾಗುವ ಪೂರ್ವದಲ್ಲಿ ಕೃಷಿಕರ ಮತ್ತು ಕಾರ್ಮಿಕರ ಸ್ಥಿತಿ ಚಿಂತಾಜನಕವಾಗಿತ್ತು. ಲೇವಾದೇವಿಗಾರರ ಮತ್ತು ಭೂಮಾಲಿಕರ ಹೊರತಾಗಿ ಇತರರ ಆರ್ಥಿಕ ಪರಿಸ್ಥಿತಿ ಉತ್ತಮವಾಗಿರಲಿಲ್ಲ. ಬ್ಯಾಂಕಿಂಗ್ ಸೇವೆ ಇಲ್ಲದ ಆ ಕಾಲದಲ್ಲಿ ಕೃಷಿ ಉತ್ಪಾದನೆಯನ್ನು ಹೆಚ್ಚಿಸುವ ಉದ್ದೇಶದಿಂದ ಸರಕಾರ ತಕ್ಕಾವಿ ಸಾಲ ಯೋಜನೆಯನ್ನು ಜಾರಿಗೆ ತಂದಿತ್ತು. ಉತ್ಪಾದನೆ ಹೆಚ್ಚಳದ ಭರವಸೆ ಮತ್ತು ಜಮೀನನ್ನು ಭದ್ರತೆಯಾಗಿ ನೀಡುವವರಿಗೆ ಬಿತ್ತನೆ ಬೀಜ, ಗೊಬ್ಬರ, ಕೃಷಿ ಸಲಕರಣೆಯ ಖರೀದಿಗಾಗಿ ತಕ್ಕಾವಿ ಸಾಲ ಮಂಜೂರಾಗುತ್ತಿತ್ತು. ಆದರೆ, ಸರ್ಕಾರದ ಈ ಯೋಜನೆಗಳಿಂದ ಜನ ಸಾಮಾನ್ಯರ ಆರ್ಥಿಕ ಪರಿಸ್ಥಿತಿಯಲ್ಲಿ ಹೆಚ್ಚಿನ ಸುಧಾರಣೆ ಆಗಲಿಲ್ಲ. ಕೃಷಿಕರ ಮತ್ತು ಕೃಷಿ ಕಾರ್ಮಿಕರ ಆರ್ಥಿಕ ಪರಿಸ್ಥಿತಿ ಹೀಗಿರುವಾಗ ವ್ಯಾಪಾರ ವಹಿವಾಟು ನಡೆಸುವವರ ಸ್ಥಿತಿ ಇದಕ್ಕಿಂತ ಹೆಚ್ಚೇನೂ ಭಿನ್ನವಾಗಿರಲಿಲ್ಲ. ವ್ಯಾಪಾರಸ್ಥರು ಹೆಚ್ಚಿನವರು 'ಮುಲ್ತಾನಿ'ಗಳಿಂದ ಅಧಿಕ ಬಡ್ಡಿಗೆ ಸಾಲ ಪಡೆದು ವ್ಯವಹಾರ ನಡೆಸುತ್ತಿದ್ದರು. ಆದರೆ ಮಧ್ಯಮ ವರ್ಗದವರಿಗಾಗಿ ಸುಲಭವಾಗಿ ಕೈಗೆಟಕುವ ಯಾವೊಂದು ವ್ಯವಸ್ಥೆಯೂ ಇರಲಿಲ್ಲ. [೧೦೭]

**೪.೭.೧. ಮಂಗಳೂರು ಕಥೋಲಿಕ್ ಕೋ-ಅಪರೇಟಿವ್ ಬ್ಯಾಂಕ್**

ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾಂಕಿಂಗ್ ಚಟುವಟಿಕೆಗಳಿಗೆ ಮತ್ತು ಸ್ವದೇಶಿ ಚಳುವಳಿಗೆ ನಿಕಟ ಸಂಬಂಧ ಇತ್ತು. ಸ್ವದೇಶಿ ಅಭಿಮಾನ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಆಸಕ್ತಿ ಮೂಡಿಸಿ, ೧೯೦೬ರಲ್ಲಿ ಕೆನರಾ ಬ್ಯಾಂಕಿಂಗ್ ಕಾರ್ಪೋರೇಷನ್ ಮತ್ತು ಕೆನರಾ ಬ್ಯಾಂಕ್ ಎಂಬ ಎರಡು ಬ್ಯಾಂಕುಗಳ ಸ್ಥಾಪನೆಗೆ ನಾಂದಿಯಾಯಿತು. ೧೯೦೪ರ ಕೋ- ಅಪರೇಟಿವ್ ಕ್ರೆಡಿಟ್ ಸೊಸೈಟಿ ಆಕ್ಟ್‌ನ ಪ್ರಕಾರ ಪುತ್ತೂರಿನಲ್ಲಿ ೧೯೦೬ರಲ್ಲಿ ಮೊಳಹಳ್ಳಿ ಶಿವರಾಯರು ಕ್ರೆಡಿಟ್ ಕೊ-ಅಪರೇಟಿವ್ ಸೊಸೈಟಿಯನ್ನು ಸ್ಥಾಪಿಸಿದರು. ೧೯೧೩ರಲ್ಲಿ ಸೌತ್ ಕೆನರಾ ಸೆಂಟ್ರಲ್ ಕೋ-ಅಪರೇಟಿಪ್ ಬ್ಯಾಂಕ್ ಎಂದು ಪುನರ್ನಾಮಕರಣಗೊಂಡು, ೧೯೨೭ರಲ್ಲಿ ಬ್ಯಾಂಕಿನ ಪ್ರಧಾನ ಕಛೇರಿಯನ್ನು ಮಂಗಳೂರಿಗೆ ಸ್ಥಳಾಂತರಿಸಲಾಯಿತು. ಈ ಜಿಲ್ಲೆಯಲ್ಲಿ ಸಹಕಾರಿ ತತ್ವವನ್ನು ಬುನಾದಿಯನ್ನಾಗಿಸಿ ಜನರಿಗೆ ಆರ್ಥಿಕ ಸೌಕರ್ಯಗಳನ್ನು ಒದಗಿಸಿಕೊಟ್ಟ ಮೊಳಹಳ್ಳಿ ಶಿವರಾಯರಿಗೆ 'ಸಹಕಾರಿ ಸಂಸ್ಥೆಗಳ ಪಿತಾಮಹಾ' ಎಂಬ ಬಿರುದಿದೆ.[೧೦೮] ಮುತ್ತೂರಿನಲ್ಲಿ ಮೊಳಹಳ್ಳಿ ಶಿವರಾಯರು ಸಹಕಾರಿ ಸೊಸೈಟಿ ಬ್ಯಾಂಕಿಂಗ್ ಕಾರ್ಯಕ್ರಮಗಳನ್ನು ಆಯೋಜಿಸುತ್ತಿರುವಾಗಲೇ

ಮಂಗಳೂರಿನಲ್ಲಿಯೂ ಈ ವಿಚಾರದಲ್ಲಿ ಅರಿವು ಮೂಡಲಾರಂಭಿಸಿತು. ಮದ್ರಾಸ್ ಪ್ರಾಂತ್ಯದ ಸಹಕಾರ ಸಂಘಗಳ ನಿಬಂಧಕರಾಗಿದ್ದ ಎಲ್.ಡಿ. ಕಣ್ಣಸ್ವಾಮಿ ಪಿಳ್ಳೆ ಎಂಬ ಕಥೋಲಿಕರೊಬ್ಬರು ೧೯೧೨ರಲ್ಲಿ ಮಂಗಳೂರಿನಲ್ಲಿ ಸಹಕಾರಿ ಕ್ಷೇತ್ರದ ಬಗ್ಗೆ ಜಾಗೃತಿ ಮೂಡಿಸುತ್ತಿದ್ದರು. ಇವರ ಕರೆಗೆ ಓಗೊಟ್ಟು ೬೭ ಮಂದಿ ಮಹನೀಯರು ಒಟ್ಟು ಸೇರಿ ೮ ಮೇ ೧೯೧೨ರಲ್ಲಿ ಮಂಗಳೂರು ಕಥೋಲಿಕ್ ಕೋ-ಅಪರೇಟಿವ್ ಸೊಸೈಟಿ, ನೋಂದಾವಣೆಗೊಳ್ಳುವುದರೊಂದಿಗೆ ಆಸ್ತಿತ್ವಕ್ಕೆ ಬಂತು. ಪಿ.ಎಫ್.ಎಕ್ಸ್. ಸಲ್ಡಾನ್ಹಾ ಅದರ ಸ್ಥಾಪಕ ಅಧ್ಯಕ್ಷರಾದರು. ಸೈಮನ್ ಆಲ್ವಾರಿಸ್ ಉಪಾಧ್ಯಕ್ಷರಾದರೆ, ಜೆ.ಎಮ್. ಕಾಸ್ತಲಿನೊ ಕಾರ್ಯದರ್ಶಿ ಹಾಗೂ ಖಜಾಂಚಿಯಾಗಿ ನೇಮಕಗೊಂಡರು.[೧೦೯]

೧೯೧೨ರಲ್ಲಿ ಆ ಸಹಕಾರಿ ಸಂಸ್ಥೆಯು 'ಕಥೋಲಿಕ್ ಸೆಂಟರ್' ಎಂದು ಇಂದು ಕರೆಯಲ್ಪಡುವ 'ಕಥೋಲಿಕ್ ಯೂನಿಯನ್ ಕ್ಲಬ್ಬಿ'ನಲ್ಲಿ ಕಾರ್ಯಾಚರಿಸತೊಡಗಿತು. ಸಂಸ್ಥಾಪಕ ಪಿತೃಗಳ ಸ್ವಂತ ದುಡ್ಡಿನ ಬಲದಲ್ಲಿ ನಡೆಯುತ್ತಿದ್ದ ಈ ಸಂಘದ ಪ್ರಾರಂಭದ ಬಂಡವಾಳ ಬರೇ ರೂಪಾಯಿ ಹತ್ತು ಸಾವಿರ. ಕರಾವಳಿ ಕರ್ನಾಟಕದ ಅದೆಷ್ಟೋ ಕುಟುಂಬಗಳು ತಮ್ಮ ಮನೆಯನ್ನು ಕಟ್ಟಲು, ಅನಕ್ಷರಸ್ಥ ನಿರುದ್ಯೋಗಿ ಯುವಜನರು ಸ್ವಂತ ವಾಹನ ಖರೀದಿಸಲು, ದುಡಿದು ಬದುಕು ಕಟ್ಟಲು, ಮನೆಯ ಅಗತ್ಯಗಳಿಗಾಗಿ ಗೃಹೋಪಯೋಗಿ ವಸ್ತುಗಳನ್ನು ಖರೀದಿಸಲು, ಸ್ವಂತ ಕೈಗಾರಿಕೆಗಳನ್ನು ಆರಂಭಿಸಲು ಮತ್ತು ನಡೆಸಲು ಸಂಸ್ಥೆಯು ಸಾಲ ಸೌಲಭ್ಯ ನೀಡಿದೆ. ಮಂಗಳೂರು ಕಥೋಲಿಕ ಸಹಕಾರಿ ಬ್ಯಾಂಕ್ ಗ್ರಾಹಕರಿಗೆ ಉತ್ತಮ ಸೇವೆಯನ್ನು ಒದಗಿಸುವ ಉದ್ದೇಶದಿಂದ ಬ್ಯಾಂಕಿನ ಶಾಖೆಗಳನ್ನು ಅಶೋಕನಗರ, ಕಂಕನಾಡಿ, ಕುಲಶೇಖರ, ಮೋರ್ಗನ್ಸ್ ಗೇಟ್, ಮೂಡಬಿದ್ರೆ, ಶಿರ್ವಾ, ಕಿನ್ನಿಗೋಳಿ, ಬಜ್ಪೆ, ಸುರತ್ಕಲ್, ಉಳ್ಳಾಲ, ಉಡುಪಿ, ಕುಂದಾಪುರ, ಬಿಸಿ.ರೋಡ್, ಪುತ್ತೂರು ಮತ್ತು ಕಾರ್ಕಳದಲ್ಲಿ ಆರಂಭಿಸಿದೆ. ಬ್ಯಾಂಕಿನ ಶತಮಾನೋತ್ಸವ ವರ್ಷಾಚರಣೆಯ ಅಂಗವಾಗಿ "ಸ್ವಂತ್" ಎಂಬ ಸಾಲ ಯೋಜನೆಯನ್ನು ಸ್ವಂತ ವಾಹನ ಹೊಂದಿ ಬದುಕು ಕಟ್ಟಲು ಆಶಿಸುವ ಗ್ರಾಹಕರಿಗಾಗಿ ಹಮ್ಮಿಕೊಂಡಿದೆ.[೧೧೦]

**೪.೭.೨. ಮಂಗಳೂರು ಪ್ರೊಟೆಸ್ಟಂಟ್ ಕ್ರಿಶ್ಚನ್ ಸಹಕಾರ ಸಂಘ**

೧೯೧೮ರಲ್ಲಿ ಮಂಗಳೂರು ಪ್ರೊಟೆಸ್ಟೆಂಟ್ ಕ್ರಿಶ್ಚಿಯನ್ ಕೋ-ಅಪರೇಟಿವ್ ಸೊಸೈಟಿಯನ್ನು ಸದಸ್ಯರ ಅಗತ್ಯಗಳ ಪೂರೈಕೆಗಾಗಿ, ಅಂದರೆ ಮನೆಗಳನ್ನು ಕಟ್ಟಲು, ಅಥವಾ ತಮ್ಮ ಸ್ವಂತ ಕೈಗಾರಿಕೆಯನ್ನು ಪ್ರಾರಂಭಿಸಲು ಸ್ಥಾಪಿಸಲಾಗಿದೆ.[೧೧೧] ಮೊದಲನೇ ಮಹಾಯುದ್ಧದ ಸಮಯದಲ್ಲಿ ಜಿಲ್ಲೆಯಲ್ಲಿದ್ದ ಬಾಸೆಲ್ ಮಿಶನ್ನಿನ ಜರ್ಮನ್ ಮಿಶನರಿಗಳು ತಮ್ಮ ಅಧೀನದಲ್ಲಿದ್ದ ಇಲ್ಲಿಯ ಕಾರ್ಯಕ್ಷೇತ್ರಗಳನ್ನು ಬಿಟ್ಟು ಸ್ವದೇಶಕ್ಕೆ ತೆರಳುವ ನಿರ್ಬಂಧಕ್ಕೊಳಗಾದ್ದರಿಂದ, ಅವರಿಂದ ಸ್ಥಾಪಿತವಾದ ಸಭೆಗಳು ಆ ಕಾಲದಲ್ಲಿ ಅವರಿಂದ ಹೊಂದುತ್ತಿದ್ದ ಸಹಾಯವನ್ನೂ, ನಾಯಕತ್ವವನ್ನೂ ಕಳೆದುಕೊಂಡವು. ಆದ್ಯ ಮಿಶನರಿಗಳು ಸ್ಥಳೀಯ

ಕ್ರೈಸ್ತರಿಗೆ ಪ್ರಭು ಯೇಸುವಿನ ಸುವಾರ್ತೆಯನ್ನು ತಂದು ಕೊಟ್ಟದ್ದು ಮಾತ್ರವಲ್ಲದೆ, ಸಾಮಾಜಿಕ ಮತ್ತು ಆರ್ಥಿಕ ವಿಷಯಗಳಲ್ಲಿ ಮಿಶನ್ ಕ್ರೈಸ್ತರಿಗೆ ಆಸರೆಯಾಗಿರುತ್ತಿದ್ದರು. ಆದರೆ ಯುದ್ಧದಿಂದ ಉಂಟಾದ ಪರಿಸ್ಥಿತಿಯಿಂದ ಇದೆಲ್ಲವೂ ಮಾರ್ಪಾಟಾಗಿ ಮಿಶನ್ ಕ್ರೈಸ್ತರು ಸಹಾಯಕ್ಕಾಗಿ ಹೊಸ ದಾರಿಯನ್ನು ಕಂಡು ಹಿಡಿಯುವುದೂ, ಸ್ವಾವಲಂಬನವನ್ನು ಕಲಿಯುವುದೂ ಅವಶ್ಯವೆನಿಸಿತು. ಮಂಗಳೂರಿನಲ್ಲಿರುವ ಪ್ರೊಟೆಸ್ಟೆಂಟ್ ಕ್ರೈಸ್ತರಲ್ಲಿ ಅನೇಕರು ಹಂಚಿನ, ಕಬ್ಬಿಣದ, ನೇಯುವ ಮತ್ತು ಇನ್ನಿತರ ಕಾರ್ಖಾನೆಗಳಲ್ಲಿ ಕೆಲಸ ಮಾಡುವ ದಿನಕೂಲಿಯವರು. ಇನ್ನು ಅನೇಕರು ಉಪದೇಶಕ, ಉಪಾಧ್ಯಾಯ ಮತ್ತು ಗುಮಾಸ್ತ ಮೊದಲಾದ ಕೆಲಸಗಳನ್ನು ಮಾಡುತ್ತಿದ್ದರು. ಸಾಹುಕಾರರೂ, ಜಮೀನುದಾರರೂ ಮತ್ತು ಶ್ರೀಮಂತರೂ ಬಾಸೆಲ್ ಮಿಶನ್ ಕ್ರೈಸ್ತರಲ್ಲಿ ವಿರಳ. ಹೀಗಿರುವಾಗ, ಮಂಗಳೂರಿನ ಮಿಶನ್ ಕ್ರೈಸ್ತರಲ್ಲಿ ಅನೇಕರಿಗೆ ಸಹಕಾರ ಸಂಘವೊಂದನ್ನು ಸ್ಥಾಪಿಸಬೇಕೆಂಬ ಬಯಕೆ ಉಂಟಾಯಿತು.[೧೧೨]

ಹೀಗಿರುವಾಗ ೨೬ ಆಗಸ್ಟ್ ೧೯೧೭ರಂದು ಜೆ.ಪಿ. ಕಾರಟ್ ಮತ್ತು ೧೯ ಮಂದಿ ಇತರರು ಒಂದುಗೂಡಿ, ಚರ್ಚಿಸಿ ಮಂಗಳೂರಿನ ಪ್ರೊಟೆಸ್ಟೆಂಟ್ ಕ್ರೈಸ್ತರ ಹಿತಕ್ಕಾಗಿ ಸಹಕಾರ ಸಂಘವನ್ನು ಸ್ಥಾಪಿಸಬೇಕೆಂಬ ನಿರ್ಧಾರ ಮಾಡಿದರು. ಸಹಕಾರ ಸಂಘಗಳ ತಪಾಸಣಾಧಿಕಾರಿಯವರ ಪ್ರೋತ್ಸಾಹದಿಂದ ೨೨ ಮೇ ೧೯೧೮ರಲ್ಲಿ ಸಂಘ ಅಸ್ತಿತ್ವಕ್ಕೆ ಬಂತು. ಸಂಘ ಸ್ಥಾಪನೆಯಾದಾಗ ಸಂಘದಲ್ಲಿ ಕೇವಲ ೩೧ ಮಂದಿ ಸದಸ್ಯರಿದ್ದರು ಮತ್ತು ಅವತ್ತಿನ ಪಾಲು ಬಂಡವಾಳ ರೂಪಾಯಿ ೧೧೫.[೧೧೩]

ಸಂಘದ ಸದಸ್ಯರಿಗೆ ಮತ್ತು ಅವರ ಕುಟುಂಬದವರಿಗೆ ಕೆಲಸವನ್ನು ಒದಗಿಸಿಕೊಟ್ಟು ಕೈಲಾದ ಮಟ್ಟಿಗೆ ನಿರುದ್ಯೋಗವನ್ನು ಕಡಿಮೆ ಮಾಡಬೇಕೆಂಬ ಉದ್ದೇಶದಿಂದ ೧೯೩೩ರಲ್ಲಿ ಕೈಗಾರಿಕಾ ಶಾಖೆಯನ್ನು ತೆರೆಯಲಾಗಿದೆ. ಬಾಸೆಲ್ ಕ್ರೈಸ್ತರು ಹೊಲಿಗೆಯಲ್ಲಿ ಹಾಗೂ ಬನಿಯನ್ ತಯಾರಿಯಲ್ಲಿ ಅನುಭವ ಇರುವರೆಂಬ ಕಾರಣಕ್ಕಾಗಿ ಹೊಸ್ಯೆರಿ ವಿಭಾಗವನ್ನು ತೆರೆಯಲಾಯಿತು. ಯುದ್ಧದ ಪರಿಣಾಮವಾಗಿ ಅವಶ್ಯವಾದ ವಸ್ತುಗಳೂ, ಯಂತ್ರೋಪಕರಣಗಳೂ ಲಭಿಸಲಿಲ್ಲ. ಆದುದರಿಂದ ಸ್ವಲ್ಪ ಮಟ್ಟಿನ ನಷ್ಟವುಂಟಾಯಿತು.[೧೧೪] ಕೈಗಾರಿಕಾ ಶಾಖೆಯಲ್ಲಿ ೩೩ ಸ್ತ್ರೀ ಪುರುಷ ಕೆಲಸಗಾರರು ದುಡಿಯುತ್ತಿದ್ದರು. ಕೈಗಾರಿಕಾ ಶಾಖೆಯನ್ನು ಮದ್ರಾಸಿನ ಹ್ಯಾಂಡ್‌ಲೂಮ್ ವೀವರ್ಸ್ ಪ್ರೊವಿನ್ಸಿಯಲ್ ಕೊ-ಅಪರೇಟಿವ್ ಸೊಸೈಟಿಗೆ ಸಂಯೋಜಿಸಿರುವುದರಿಂದ ಸೊಸೈಟಿಯವರು ನೂಲು ಮತ್ತು ಇತರ ಸಾಮಾಗ್ರಿಗಳನ್ನು ಒದಗಿಸಿ ಕೊಡುತ್ತಿದ್ದರು.[೧೧೫] ಆದರೆ ಕೆಲ ವರ್ಷಗಳ ನಂತರ ಇದನ್ನು ಮುಚ್ಚಲಾಗಿದೆ. ಈ ಉದ್ದಿಮೆಯ ಘಟಕ ಮುಚ್ಚಿದ ಮೂರು ವರ್ಷಗಳ ನಂತರ ಇನ್ನೊಂದು ಇದೇ ರೀತಿಯ ಉದ್ದಿಮೆ ಅಸ್ತಿತ್ವಕ್ಕೆ ಬಂತು. ೧೯೫೭ರಲ್ಲಿ ಪ್ರಾರಂಭವಾದ ಆ ಉದ್ದಿಮೆಯ ಹೆಸರು ' ಬಲ್ಮಠ ಕೈಗಾರಿಕಾ ಕಾರ್ಮಿಕರ ಸಹಕಾರಿ ಸೊಸೈಟಿ' ಅದು ೧೯೬೧ರಿಂದ ಕಾರ್ಯಾರಂಭ ಮಾಡಿದೆ.[೧೧೬] ಸಂಘದ ಸದಸ್ಯರಲ್ಲಿ ಮಿತ ವ್ಯಯದ

ಅಭ್ಯಾಸವನ್ನು ಬೇರೂರಿಸಬೇಕೆಂಬ ಉದ್ದೇಶದಿಂದ ಪ್ರೊವಿಡೆಂಟ್ ಠೇವಣಾತಿಯನ್ನು ತೆರೆಯಲಾಗಿದೆ. ಸಂಘದ ಸರ್ವಜನೋಪಕಾರ ನಿಧಿಯ ಧ್ಯೇಯಕ್ಕನುಗುಣವಾಗಿ, ವರ್ಷಂಪ್ರತಿ ವಿದ್ಯಾರ್ಥಿಗಳಿಗೆ ಪರೀಕ್ಷೆ ನಡೆಸಿ ವಿದ್ಯಾರ್ಥಿವೇತನ ವಿತರಿಸಲಾಗುತ್ತಿದೆ. ಯುದ್ಧ ಸಮಯದಲ್ಲಿ ಸರ್ಕಾರಕ್ಕೆ ಆರ್ಥಿಕ ನೆರವು ನೀಡುವ ಉದ್ದೇಶದಿಂದ ಯುದ್ಧ ನಿಧಿಗೆ ವಂತಿಗೆ ನೀಡಲಾಗಿದೆ. ಸಂಘವು ಸದಸ್ಯರನ್ನು ನಿರ್ದಯಿ ಬಡ್ಡಿಗಾರರ ಬಲೆಯೊಳಗಿಂದ, ಸಾಲಗಾರರ ದವಡೆಯೊಳಗಿಂದ ರಕ್ಷಿಸಿದೆ; ಸಾಮಾಜಿಕ ಆರ್ಥಿಕ ವಿಷಯಗಳಲ್ಲಿ ತಮ್ಮ ಕರ್ತವ್ಯಗಳನ್ನು ಸ್ವಾಭಿಮಾನದಿಂದಲೂ ಗೌರವದಿಂದಲೂ ಸಾಗಿಸುವಂತೆ ಹಲವರಿಗೆ ಸೌಕರ್ಯಗಳನ್ನು ಒದಗಿಸಿಕೊಟ್ಟಿದೆ. ಮಿತವ್ಯಯದ ಅಭ್ಯಾಸದಲ್ಲಿಯೂ ಆರ್ಥಿಕ ಶಿಕ್ಷಣದಲ್ಲಿಯೂ ಅನೇಕರಿಗೆ ಸಹಾಯ ಮಾಡಿದೆ.[೧೧೭]

**೪.೮.೩.ಕುಂದಾಪುರ ರೋಜರಿ ಕ್ರೆಡಿಟ್ ಕೋ- ಅಪರೇಟಿವ್ ಸೊಸೈಟಿ**

೧೯೩ರಲ್ಲಿ ಕುಂದಾಪುರ ರೋಜರಿ ಕ್ರೆಡಿಟ್ ಕೊ-ಅಪರೇಟಿವ್ ಸೊಸೈಟಿಯನ್ನು ಅಲ್ಫ್ರೆಡ್ ಲೋಬೊರವರು ಆರಂಭಿಸಿದರು. ಇದರಿಂದ ಪ್ರಭಾವಿತರಾದ ಕಥೋಲಿಕ್ ಸಭೆ ಸದಸ್ಯರು ಸಹಕಾರಿ ಸಂಘಗಳ ಸ್ಥಾಪನೆಗೆ ಒಲವು ತೋರಿದರು. ಆ ಕಾಲದಲ್ಲಿ ಕೊಲ್ಲಿ ಯುದ್ದದ ಪರಿಣಾಮವಾಗಿ ಅಸಂಖ್ಯಾತ ಅಲ್ಪಸಂಖ್ಯಾತರು ಕೊಲ್ಲಿ ರಾಷ್ಟ್ರವನ್ನು ತೊರೆದು ಸ್ವದೇಶಕ್ಕೆ ಹಿಂದಿರುಗಿ, ನಿರುದ್ಯೋಗಿ ನಿರಾಶ್ರಿತರಾಗಿದ್ದರು. ಇವರ ನೆರವಿಗೆ ಧಾವಿಸಿದ ಸಭೆಯ ಸದಸ್ಯರು ಕೊಲ್ಲಿ ರಾಷ್ಟ್ರಗಳಿಂದ ಸಂಕಷ್ಟಕ್ಕೊಳಗಾಗಿ ಮರಳುತ್ತಿರುವವರಿಗೆ ಸೂಕ್ತ ಮಾರ್ಗದರ್ಶನ ನೀಡಿ ಆಧರಿಸಿದರು. ಹೀಗೆ ಕಾರ್ಯೋನ್ಮುಖರಾದ ಕಥೋಲಿಕ ಸಭೆಯವರು ೧೯೭ರಲ್ಲಿ ಬ್ರಹ್ಮಾವರ ಕಥೋಲಿಕ ಕ್ರೆಡಿಟ್ ಕೋ- ಅಪರೇಟಿವ್ ಸೊಸೈಟಿಯನ್ನು ಸ್ಥಾಪಿಸಿದರು. ಉಡುಪಿಯಲ್ಲಿ ಡೆನಿಸ್ ಡಿಸಿಲ್ವಾರವರ ನೇತೃತ್ವದಲ್ಲಿ ಉಡುಪಿ ಕಥೋಲಿಕ್ ಕ್ರೆಡಿಟ್ ಕೋ-ಅಪರೇಟಿವ್ ಸೊಸೈಟಿ ಇದೇ ಸಮಯದಲ್ಲಿ ಅಸ್ತಿತ್ವಕ್ಕೆ ಬಂತು. ಮುಂದೆ ಬಂಟ್ವಾಳ, ಬೆಳ್ತಂಗಡಿ, ಪುತ್ತೂರು ಮುಂತಾದ ಕಡೆಗಳಲ್ಲಿ ಸಹಕಾರಿ ಸಂಘಗಳು ಸ್ಥಾಪನೆಯಾದವು. ಸಹಕಾರಿ ಸಂಘಗಳು ಜನ್ಮ ತಳೆದು ಜನೋಪಕಾರಿ ಕಾರ್ಯಗಳನ್ನು ನಡೆಸುತ್ತಿವೆಯಾದರೆ ಇದಕ್ಕೆ ಮೂಲ ಪ್ರೇರಣೆ ಕಥೋಲಿಕ ಸಭೆಯವರಿಂದ ದೊರೆತಿದೆ.[೧೧೮]

ಇದೇ ರೀತಿಯಲ್ಲಿ ಸೈಂಟ್ ಅಲೋಶಿಯಸ್ ಕಾಲೇಜಿನಲ್ಲಿ ಕ್ಷೇಮಾಭಿವೃದ್ಧಿಗಾಗಿ ಮೂರು ಸಹಕಾರಿ ಸಂಘಗಳಿವೆ. ಕಾಲೇಜಿನ 'ದ ಕಾಲೇಜ್ ಕೋ-ಅಪರೇಟಿವ್ ಸ್ಟೋರ್ಸ್ ಲಿಮಿಟೆಡ್' ೧೯೬೧ರಲ್ಲಿ ಸ್ಥಾಪಿತವಾಗಿದೆ. ಕಾಲೇಜಿನ ವಿದ್ಯಾರ್ಥಿಗಳಿಗೆ ಅತ್ಯಲ್ಪ ದರದಲ್ಲಿ ಪಠ್ಯಪುಸ್ತಕ, ಬರೆಯುವ ಪುಸ್ತಕ ಮತ್ತಿತರ ಅಗತ್ಯದ ವಸ್ತುಗಳನ್ನು ಪೂರೈಸುವಲ್ಲಿ ಸಹಾಯಕವಾಗಿದೆ. ಉಳಿತಾಯ ಪ್ರಜ್ಞೆ, ಸ್ವ-ಸಹಾಯ ಮತ್ತು ಸಹಕಾರಿ ಸಿದ್ಧಾಂತಗಳನ್ನು ಉತ್ತೇಜಿಸುವುದು ಈ ಸಂಘದ ಮುಖ್ಯ ಉದ್ದೇಶವಾಗಿದೆ. ೧೯೮೪ರಲ್ಲಿ

ಸ್ಥಾಪನೆಗೊಂಡ 'ದ ಅಲೋಶಿಯನ್ ಹೌಸಿಂಗ್ ಸೊಸೈಟಿ'ಯು ಅಧ್ಯಾಪಕ ವೃಂದದವರಿಂದ ಸದಸ್ಯತ್ವವನ್ನು ಪಡೆದು ಸ್ಥಾಪಿತವಾಗಿರುವ ಸೊಸೈಟಿಯಾಗಿದೆ. 'ದ ಕ್ರೆಡಿಟ್ ಸೊಸೈಟಿ' ತುರ್ತು ಅವಶ್ಯಕತೆಗಳಿಗಾಗಿ ನ್ಯಾಯೋಚಿತ ದರದಲ್ಲಿ ಸಾಲ ಒದಗಿಸುತ್ತದೆ. [೧೧೯] ಇದೇ ರೀತಿ ೨೦೦೭ರಲ್ಲಿ ಪುತ್ತೂರಿನಲ್ಲಿ ಡಾ. ಪೀಟರ್ ವಿಲ್ಸನ್ ಪ್ರಭಾಕರ್‌ರವರ ನೇತೃತ್ವದಲ್ಲಿ "ಪ್ರೊಟೆಸ್ಟೆಂಟ್ ಕ್ರೈಸ್ತ ಸಮುದಾಯ ಸಹಕಾರ ಸಂಘ" ಎಂಬ ಸಹಕಾರ ಸಂಘವನ್ನು ಸ್ಥಾಪಿಸಲಾಗಿದ್ದು, ಅದು ಸ್ಥಳೀಯ ಕ್ರೈಸ್ತರು ಮತ್ತು ಕ್ರೈಸೇತರ ಅಭಿವೃದ್ಧಿಯಲ್ಲಿ ಭಾಗಿಯಾಗಿದೆ.

## ೪.೮. ಅಭಿವೃದ್ಧಿ ಮತ್ತು ಶಾಂತಿಗಾಗಿ ಕೆನರಾ ಸಂಘಟನೆ

ಸಿ.ಒ.ಡಿ.ಪಿ. ಸಮಾಜದ ಅಭಿವೃದ್ಧಿಗಾಗಿ ಮಂಗಳೂರು ಧರ್ಮಪ್ರಾಂತ್ಯದಲ್ಲಿ ಚರ್ಚಿನ ಅಧೀನದಲ್ಲಿರುವ ಒಂದು ಸಂಸ್ಥೆ. ಕಥೋಲಿಕ ಧರ್ಮಪಾಂತ್ಯದಲ್ಲಿ ಸಮಾಜಸೇವೆಯ ಚಟುವಟಿಕೆಗಳನ್ನು ಸುವ್ಯವಸ್ಥಿತ ರೀತಿಯಲ್ಲಿ ನಡೆಸಿಕೊಂಡು ಬರಲು ಮತ್ತು ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನೂ, ಯೋಜನೆಗಳನ್ನೂ ರೂಪಿಸಿ ಕಾರ್ಯಗತಗೊಳಿಸಲು ಕಾರಿತಾಸ್, ಇಂಡಿಯಾ – ಮ್ಯಾಂಗಲೂರ್ ಯೂನಿಟ್ ಮತ್ತು ಕೆನರಾ ಓರ್ಗನೈಜೇಶನ್ ಫಾರ್ ಡೆವಲಪ್ಮೆಂಟ್ ಆಂಡ್ ಪೀಸ್ ಎಂಬ ಎರಡು ಸಂಸ್ಥೆಗಳಿವೆ. ಈ ಸಂಸ್ಥೆಗಳು ಮಾಡಿದ ಅಗಾಧ ಸಮಾಜಸೇವಾ ಕಾರ್ಯಗಳು ಇಂತಿವೆ-

- ಸುರತ್ಕಲ್ಲಿನ ಬಳಿ ಮುಕ್ಕಾದ ಯಾಂತ್ರೀಕೃತ ದೋಣಿಗಳ ಮೂಲಕ ಮೀನು ಹಿಡಿಯುವ ಯೋಜನೆ (ಮೆಕ್ಯಾನಿಕಲ್ ಫಿಶ್ಶಿಂಗ್ ಸ್ಕೀಮ್).
- ಸಾಸ್ತಾನಿನ ಮತ್ತು ಬ್ರಹ್ಮಾವರದ ಕುಟುಂಬಗಳಿಗೆ ಒಂದು ದೋಣಿ ಯೋಜನೆ ( ಬೋಟ್ – ಎ ಫ್ಯಾಮಿಲಿ ಸ್ಕೀಮ್) .
- ಕಾಟಿಪಳ್ಳದಲ್ಲಿ ಪುನರ್ವಸತಿ ಯೋಜನೆ (ರಿ-ಸೆಟಲ್‌ಮೆಂಟ್ ಆಫ್ ಫ್ಯಾಮಿಲೀಸ್).
- ರಾಣಿಪುರದ ಬಳಿ ನೇತ್ರಾವತಿ ನದಿ ದಂಡೆಯಲ್ಲಿರುವ ಕುದ್ರುವಿನಲ್ಲಿ ನೂರಾರು ಕುಟುಂಬಗಳ ಪುನರ್ವಸತಿ ಯೋಜನೆ.
- ಬೊಂದೇಲಿನಲ್ಲಿ ವಿಜಯಮಾರಿ ಟೆಕ್ನಿಕಲ್ ಇನ್ಸ್‌ಟಿಟ್ಯೂಟ್‌ನಲ್ಲಿ ಹಳ್ಳಿಯ ಹುಡುಗಿಯರು ವೃತ್ತಿಗಳನ್ನು ಕಲಿಯಲು ನೆರವು ನೀಡುವ ಯೋಜನೆ.
- ಪದೀಲಿನ ಕಪಿತಾನಿಯೋ ಸಂಸ್ಥೆಯಲ್ಲಿ ನಗರದ ಬಡ ಹುಡುಗಿಯರು ಕಲಿಯುವಾಗ ಸಂಪಾದನೆ ಮಾಡುವ ಕಾರ್ಯಕ್ರಮ (ಅರ್ಬನ್ ಗರ್ಲ್ಸ್ ಲರ್ನ್ ಆಂಡ್ ಅರ್ನ್) .

- ಬೆಂದೂರು, ಕಾಸಿಯಾ, ಕಾಟಿಪಳ್ಳ, ಬೋಳಾರು ಕೇಂದ್ರಗಳಲ್ಲಿ ತಾಯಿ ಮಗುವಿನ ಆರೈಕೆ ಯೋಜನೆ.
- ಕಿನ್ನಿಗೋಳಿಯಲ್ಲಿ ಆರೋಗ್ಯ ವಿಸ್ತರಣಾ ಯೋಜನೆ .
- ಅರ್ವಾ, ಪರಪ್ಪಾಡಿ ಮತ್ತು ಬೆಳ್ತಂಗಡಿಯಲ್ಲಿ 'ದುಡಿಮೆಗೆ ಆಹಾರ' (ಫುಡ್ ಫಾರ್ ವರ್ಕ್ ಪ್ರೋಗಾಂ).
- ತಾಕೊಡೆಯಲ್ಲಿ ಅಡಿಕೆ ಅಭಿವೃದ್ಧಿ ಮತ್ತು ಹಾಲು ಉತ್ಪಾದನೆ ಯೋಜನೆ .
- ಬೆಳ್ತಂಗಡಿ ಪ್ಯಾಕೇಜ್ ಪ್ರೋಗ್ರಾಂ.

ಕಾರಿತಾಸ್ - ಇಂಡಿಯಾ, ಮಂಗಳೂರು ಶಾಖೆ ಮತ್ತು ಕೆನರಾ ಓರ್ಗನೈಜೇಶನ್ ಫಾರ್ ಡೆವ್ಲಪ್‌ಮೆಂಟ್ ಎಂಡ್ ಫೀಸ್(C.O.D.P), ಈ ಸಂಸ್ಥೆಗಳು ದಕ್ಷಿಣ ಕನ್ನಡ ಜಿಲ್ಲೆಯ ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಹಿಂದುಳಿದವರ ಏಳಿಗೆಗಾಗಿ ಕೈಗೊಂಡಿರುವ ಕಾರ್ಯಕ್ರಮವನ್ನು ಬೆಳ್ತಂಗಡಿ ಪ್ಯಾಕೇಜ್ ಪ್ರೋಗ್ರಾಂ ಎಂದು ಹೆಸರಿಸಲಾಗಿದೆ. ಈ ಯೋಜನೆಯ ಮುಖ್ಯ ಉದ್ದೇಶ ಜನರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ , ನೈತಿಕ ಮತ್ತು ಸಾಂಸ್ಕೃತಿಕ ಅಥವಾ ಸಮಗ್ರ ಅಭಿವೃದ್ಧಿ. ಮಿಸೆರಿಯೋರ್ ಸಂಸ್ಥೆ, ಇಂಡೋ ಜರ್ಮನ್ ಸೋಶಿಯಲ್ ಸರ್ವಿಸ್ ಸೊಸೈಟಿ, ಅಪ್ರೊ ಸಂಸ್ಥೆ, ಇಂಡಿಯನ್ ಸೋಶಿಯಲ್ ಇನ್ಸ್ ಟಿಟ್ಯೂಟ್ ಮುಂತಾದುವುಗಳು ಈ ಯೋಜನೆಗೆ ಸೂಕ್ತ ಮಾರ್ಗದರ್ಶನ ಮತ್ತು ಸಹಾಯಧನದ ನೆರವನ್ನು ನೀಡುತ್ತಿವೆ. ಸಹಕಾರ ಭಾವನೆ ಬೆಳೆಸುವುದು, ಸ್ವಾವಲಂಬಿ ಗುಣ ವೃದ್ಧಿಸುವುದು, ಪ್ರಾಕೃತಿಕ ಹಾಗೂ ಭೌತಿಕ ಸಂಪನ್ಮೂಲಗಳ ಸದುಪಯೋಗ, ಸಮಸ್ಯೆಗಳಿಗೆ ಸ್ವಪ್ರಯತ್ನದ ಪರಿಹಾರ ಹುಡುಕುವುದು ಈ ಯೋಜನೆಯ ಮೂಲ ತತ್ತ್ವ. ಈ ಪ್ಯಾಕೇಜ್ ಪ್ರೋಗ್ರಾಮಿನ ಅಂತಿಮ ಗುರಿ ಅಧಿಕ ಆಹಾರ ಉತ್ಪಾದನೆ ಮತ್ತು ಆದಷ್ಟು ಹೆಚ್ಚು ಜನರಿಗೆ ಕೆಲಸ ದೊರಕಿಸಿ ಕೊಡುವುದು.[೧೨೦] ಬೆಳ್ತಂಗಡಿ ಪ್ಯಾಕೇಜ್ ಪ್ರೋಗ್ರಾಂ ಯೋಜನೆಯ ಮೇರೆಗೆ ಅಳದಂಗಡಿ ಮತ್ತು ಬೆಳ್ತಂಗಡಿಯನ್ನು ಕೇಂದ್ರಗಳನ್ನಾಗಿ ಮಾಡಲಾಗಿದೆ. ಈ ಕೇಂದ್ರಗಳ ಆಸುಪಾಸಿನ ಹಳ್ಳಿಗಳಾದ ವಗ್ಗ, ಇಂದು ಬೆಟ್ಟು, ಮಡಂತ್ಯಾರು, ವೇಣೂರು, ಉಜಿರೆ, ನಾರಾವಿ, ಬದ್ಯಾರ್, ಬೆಳ್ತಂಗಡಿ ಇತ್ಯಾದಿ ಪ್ರದೇಶಗಳಲ್ಲಿ ರೈತ ಸಂಘಗಳು ಮತ್ತು ಮಹಿಳಾ ಮಂಡಲಗಳು ಹುಟ್ಟಿಕೊಂಡಿವೆ.. ಅಧಿಕ ಆಹಾರ ಉತ್ಪಾದನೆ ಯೋಜನೆಯನ್ವಯ ತ್ರಾಸಿ, ಬೆಳ್ಮಣ್, ನಾರಾವಿ, ಬ್ರಹ್ಮಾವರ, ಕಾಟಿಪಳ್ಳ, ಮಿಯಾರ್, ಕಾರ್ಕಳ, ಅಜೆಕಾರ್, ಬಂಟ್ವಾಳ, ವಗ್ಗ ತಾಕೋಡೆ, ಕರಾಡಿ, ಮುಂತಾದ ಪ್ರದೇಶಗಳಲ್ಲಿ ರೈತರಿಗೆ ಸಣ್ಣ ನೀರಾವರಿ ಯೋಜನೆಗಳಿಗೆ , ಹೊಲ ಸಮತಟ್ಟು ಮಾಡಲು ಮತ್ತಿತರ ಅಭಿವೃದ್ಧಿ ಕೆಲಸಗಳನ್ನು ಕೈಗೊಳ್ಳಲು ಕಾರಿತಾಸ್ ಮತ್ತು ಸಿ.ಓ.ಡಿ.ಪಿ. ಸಂಸ್ಥೆಯವರು ಆರ್ಥಿಕ ನೆರವು ನೀಡಿದ್ದಾರೆ. ಹಾಲು ಉತ್ಪಾದನೆ ಯೋಜನೆಯ ಪ್ರಯೋಜನವನ್ನು

ಪೆರ್ಮುದೆ, ಕಾರ್ಕಳ, ಕರಾಡಿ, ತಾಕೋಡೆ, ವಗ್ಗ ಮುಂತಾದ ಹಳ್ಳಿಗಳ ರೈತರು ಪಡೆದಿದ್ದಾರೆ. ಅವರಿಗೆ ಬಡ್ಡಿರಹಿತ ಸಾಲವನ್ನು ನೀಡಿ ಅವರು ಹಸು ಅಥವಾ ಎಮ್ಮೆಗಳನ್ನು ಖರೀದಿಸಿ ಹಾಲು ಮಾರಲು ಸಹಕಾರಿ ಸಂಘಗಳ ಮೂಲಕ ವ್ಯವಸ್ಥೆ ಮಾಡಲಾಗಿದೆ. ಅವರು ಆಧುನಿಕ ವಿಧಾನಗಳನ್ನು ಬಳಸಲು ಸಾಧ್ಯವಾಗುವಂತೆ ಯೋಗ್ಯ ತರಬೇತಿಯನ್ನು ನೀಡಲಾಗಿದೆ.[೧೨೧]

೧೯೭೪ನೇ ಜುಲೈ ತಿಂಗಳಲ್ಲಿ ಬಂದ ಭೀಕರ ನೆರೆಯಿಂದಾಗಿ ಜಿಲ್ಲೆಯಾದ್ಯಂತ ಸಾವಿರಾರು ಕುಟುಂಬಗಳು ನಿರಾಶ್ರಿತರಾಗಿ ಸಂಕಷ್ಟಕ್ಕೀಡಾದಾಗ ಮಂಗಳೂರು ಕಥೋಲಿಕ ಕ್ರೈಸ್ತ ಧರ್ಮಪ್ರಾಂತ್ಯದ ವತಿಯಿಂದ ನೂರಾರು ಕುಟುಂಬಗಳಿಗೆ ಆರ್ಥಿಕ ನೆರವನ್ನು ನೀಡಲಾಗಿದೆ. ಕಾರಿತಾಸ್ ಸಂಸ್ಥೆಯವರು ಸೈಂಟ್ ಜೋಸೆಫ್ಸ್ ಸೆಮಿನರಿಯ ಶ್ರಮದಾನ ಸಂಘದ ಮುಖಾಂತರ ನೆರೆ ನಿರಾಶ್ರಿತರಿಗೆ ಮನೆಗಳನ್ನು ಕಟ್ಟಿಕೊಡಲು ಯೋಜನೆಯೊಂದನ್ನು ಸಿದ್ಧಪಡಿಸಿ ಕಾರ್ಯರೂಪಕ್ಕೆ ತಂದರು. ಈ ಯೋಜನೆಗೆ 'ಕಥೋಲಿಕ್ ರಿಲೀಫ್ ಸರ್ವಿಸಸ್' ನ್ಯೂಯಾರ್ಕ್ ಎಂಬ ಸಂಸ್ಥೆಯ ನೆರವಿನಿಂದ ಆರ್ಥಿಕ ನೆರವನ್ನು ಪಡೆದು ಮಂಗಳೂರು ತಾಲೂಕಿನ ಜಪ್ಪಿನ ಮೊಗರು, ಎಕ್ಕೂರು, ವೀರನಗರ, ಜಲ್ಲಿಗುಡ್ಡ, ಬಜಾಲ್, ನಂತೂರು, ಪಡ್ಡೆಗುಡ್ಡ, ಪಾವೂರು, ಉಳ್ಳ ಮತ್ತಿತರ ಕಡೆಗಳಲ್ಲಿ ೨೦೦ ಮನೆಗಳನ್ನು ಕಟ್ಟಿಸಿದರು. ಪರವೂರುಗಳಿಂದ ಆರ್ಥಿಕ ನೆರವನ್ನು ತಂದು ಇಲ್ಲಿ ಅರ್ಹರಾದವರಿಗೆ ಯೋಗ್ಯ ರೀತಿಯಲ್ಲಿ ಹಂಚಿಕೊಡಲು ಜಿಲ್ಲೆಯ ಬೇರೆ ಬೇರೆ ವರ್ಗದ ಜನರ ಪ್ರತಿನಿಧಿಗಳಿರುವ ಸಿ.ಓ.ಡಿ.ಪಿ. ಕಾರ್ಯಪ್ರವೃತ್ತವಾಗಿದೆ. ಅಲ್ಲದೆ ನೆರೆಗೆ ತುತ್ತಾಗಿ ತಮ್ಮ ಮನೆ ಮಾರು ಕಳೆದುಕೊಂಡ ನಿರಾಶ್ರಿತರಿಗೆ ಪುನರ್ವಸತಿ ಒದಗಿಸಲು ನೇತ್ರಾವತಿ ನದಿಯ ಪಕ್ಕದಲ್ಲಿ ಹರೇಕಳ ಎಂಬಲ್ಲಿ ಚರ್ಚ್ ಆಫ್ ಸೌತ್ ಇಂಡಿಯಾದ ಪ್ರೊಟೆಸ್ಟೆಂಟ್ ಕ್ರೈಸ್ತರೂ ಸಹ ಶ್ರಮಿಸಿದ್ದಾರೆ. ಹಳ್ಳಿಯ ಬಡಜನರಿಗೆ ಬಟ್ಟೆ ಬರೆ ಮತ್ತು ದಿನಬಳಕೆಯ ಅವಶ್ಯಕ ವಸ್ತುಗಳನ್ನು ಒದಗಿಸಿ, ೪೦ ಹೊಸ ಮನೆಗಳ ರಸ್ತೆ, ಬಾವಿ ಮುಂತಾದುಗಳನ್ನು ನಿರ್ಮಿಸಿ ಕೊಟ್ಟಿದ್ದಾರೆ.[೧೨೨]

ಸ್ವ-ಸಾಮರ್ಥ್ಯದಿಂದ ಆದಾಯ ಸೃಷ್ಟಿಸಲು ಕಲಿಸುವುದು, ಕುಡಿಯುವ ನೀರಿನ ಬಾವಿಗಳನ್ನು ತೋಡುವುದು, ಆಶ್ರಯ ಮನೆ ಯೋಜನೆ, ಕೃಷಿ ಶಾಲೆಗಳು, ಗ್ರಾಮೀಣ ಸ್ವ-ಸಹಾಯ ಯೋಜನೆ (RUSEMP), ಉನ್ನತ ಶಿಕ್ಷಣಕ್ಕೆ ಧನಸಹಾಯ, ಬಾಲ ಕಾರ್ಮಿಕರಾಗುವ ವಿದ್ಯಾರ್ಥಿಗಳಿಗೆ ಶಿಕ್ಷಣ, ಅನಾಥ ಮಕ್ಕಳ ಪುನರ್ವಸತಿ, ಆಸ್ಪತ್ರೆಯ ವೈದ್ಯಕೀಯ ನೆರವು ಇತ್ಯಾದಿ.[೧೨೩] ಸಮಾಜ ಸೇವಾ ಕಾರ್ಯಕ್ರಮಗಳನ್ನು ಇತ್ತೀಚಿನ ದಿನಗಳಲ್ಲಿ ಸಿ.ಒ.ಡಿ.ಪಿ ಆಶ್ರಯದಲ್ಲಿ ನಡೆಸಲಾಗುತ್ತಿದೆ.

## ೪.೯. ಉದಯ ಸಮಾಜ ಸೇವಾ ಸಂಸ್ಥೆ, ಬೆಳ್ತಂಗಡಿ

ದ.ಕ. ರೂರಲ್ ಡೆವಲಪ್‌ಮೆಂಟ್ ಸೊಸೈಟಿಯು ಉದಯಸಮಾಜ ಸೇವಾ ಸಂಸ್ಥೆ ಎಂಬ ಹೆಸರಿನಲ್ಲಿ ೧೯೮೩ರಲ್ಲಿ ಬೆಳ್ತಂಗಡಿಯಲ್ಲಿ ಸ್ಥಾಪನೆಯಾಗಿದೆ. ಈ ಸಂಸ್ಥೆಯು ದಕ್ಷಿಣ ಕನ್ನಡ, ಉಡುಪಿ ಹಾಗೂ ಕೊಡಗು ಜಿಲ್ಲೆಗಳಲ್ಲಿ ಯಾವುದೇ ಭೇದ ಭಾವವಿಲ್ಲದೆ ಗ್ರಾಮೀಣ ಪ್ರದೇಶಗಳಲ್ಲಿರುವ ಎಲ್ಲಾ ದುರ್ಬಲ ವರ್ಗಗಳ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ಪರಿಸರ ಸಂಬಂಧಿ ಕ್ಷೇತ್ರಗಳಲ್ಲಿನ ಸರ್ವತೋಮುಖ ಅಭಿವೃದ್ಧಿಗೆ ಮಹತ್ತರವಾದ ಕೊಡುಗೆಯನ್ನು ನೀಡಿದೆ. ಪ್ರೀತಿ, ನ್ಯಾಯ, ಸಮಾನತೆ ಹಾಗೂ ಮಾನವೀಯ ಘನತೆಯನ್ನು ಆಧರಿಸಿದ ಉತ್ತಮ ಸಮಾಜವೊಂದರ ನಿರ್ಮಾಣ ಸಂಸ್ಥೆಯ ಗುರಿಯಾಗಿದೆ. ಕುಟುಂಬಗಳನ್ನು ಆಯ್ಕೆ ಮಾಡುವಾಗ ವಿಧವೆಯರು, ಭಗ್ನ ಕುಟುಂಬಗಳು, ಹೆಣ್ಮಕ್ಕಳ ಶಿಕ್ಷಣಕ್ಕೆ ಆದ್ಯತೆ ನೀಡಲಾಗುತ್ತದೆ. ಸಂಸ್ಥೆಯ ಉತ್ತೇಜನದ ಫಲವಾಗಿ ಅನೇಕ ಕುಟುಂಬಗಳು ಹಾಲು ಉತ್ಪಾದನೆ, ಬಾಳೆ ಕೃಷಿ, ತರಕಾರಿ ಬೆಳೆ, ಸಣ್ಣ ಅಂಗಡಿಗಳು, ಆಡು ಸಾಕಾಣಿಕೆ, ಹಂದಿ ಸಾಕಾಣಿಕೆ, ಕೋಳಿ ಸಾಕಾಣಿಕೆ, ಗೃಹ ಉದ್ಯಮಗಳು ಇತ್ಯಾದಿಗಳ ಮೂಲಕ ತಮ್ಮ ಆದಾಯವನ್ನು ಹೆಚ್ಚಿಸಿಕೊಂಡಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲಿ ಆರ್ಥಿಕ ದುಸ್ಥಿತಿ, ಪಾಲಕರ ಅಕಾಲಿಕ ಮರಣ, ರೋಗರುಜಿನಗಳು, ಶಾಲೆಗಿರುವ ದೂರ, ಹೆಮ್ಮಕ್ಕಳಿಗಿರುವ ಅಭದ್ರತೆ ಮುಂತಾದ ಸಮಸ್ಯೆಗಳಿಂದಾಗಿ ಪರಿಶಿಷ್ಟ ಜಾತಿ, ಪಂಗಡ, ಮತ್ತು ಅಲ್ಪ ಸಂಖ್ಯಾತ ವರ್ಗಗಳಲ್ಲಿ ೮ನೇ ತರಗತಿಯ ನಂತರ ಶಾಲೆ ತೊರೆದ ಮಕ್ಕಳ ಸಂಖ್ಯೆ ಹೆಚ್ಚಿವೆ. ಆದುದರಿಂದ ಪುತ್ತೂರು ತಾಲೂಕಿನ ೬ ಪಂಚಾಯತ್ ವ್ಯಾಪ್ತಿಗೊಳಪಟ್ಟ ಶಾಲೆ ತ್ಯಜಿಸಿದ ಮಕ್ಕಳಿಗೆ ಕರ್ನಾಟದ ಮುಕ್ತ ವಿದ್ಯಾಲಯದ ೧೦ನೇ ತರಗತಿಯ ಪರೀಕ್ಷೆಗೆ ತಯಾರಾಗಲು ಸಂಸ್ಥೆ ಅಧ್ಯಾಪಕರ ಮೂಲಕ ತರಬೇತಿ ನೀಡುತ್ತಿದೆ ಮತ್ತು ಆರ್ಥಿಕ ಸಹಾಯವನ್ನು ಒದಗಿಸುತ್ತಿದೆ. ವಯಸ್ಕರ ಶಿಕ್ಷಣದ ಮುಖಾಂತರ ಓದು ಬರಹ ತಿಳಿಯದವರಿಗೆ ಅಕ್ಷರ ಅಭ್ಯಾಸವನ್ನು ಮಾಡಿಸಿ ಅವರ ಬೆಳವಣಿಗೆಗೆ ಮಾರ್ಗದರ್ಶಿಯಾಗಿದೆ. ಹಂಚಿಹೋದ, ಶೋಷಿತ, ಒಂಟಿಯಾದ ವಿವಿಧ ವರ್ಗದ ಮಹಿಳೆಯರಿಗೆ ತಮ್ಮ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಪ್ರಗತಿಗೆ ಸ್ವ-ಸಹಾಯ ಸಂಘಗಳನ್ನು ರಚಿಸಿ ಅವುಗಳ ಮುಖಾಂತರ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗೆ ಪ್ರಯತ್ನಿಸುತ್ತಿದೆ.

ಸ್ಥಳೀಯ ಗ್ರಾಮಗಳಲ್ಲಿ ರೈತ ಸಂಘಗಳನ್ನು ಮತ್ತು ಒಕ್ಕೂಟಗಳನ್ನು ರಚಿಸಿ, ಶೋಷಿತ ರೈತರನ್ನು ಸಂಘಟಿಸುವಲ್ಲಿ ಮತ್ತು ಸಾಂಪ್ರದಾಯಿಕ ಕೃಷಿ ಪದ್ಧತಿಯನ್ನು ಪುನರುಜ್ಜೀವನಗೊಳಿಸುವಲ್ಲಿ ಸಂಘ ಯಶಸ್ವಿಯಾಗಿದೆ. ಮಾನವ ಮತ್ತು ಪರಿಸರದ ನಡುವೆ ಬಾಂಧವ್ಯವನ್ನು ಬೆಳೆಸುವಲ್ಲಿ ಸಂಸ್ಥೆ ಬಹಳವಾಗಿ ಪ್ರಯತ್ನಿಸುತ್ತಿದೆ. ಗಿಡ ನೆಡುಪಿಕೆ, ಸವಕಳಿ ತಡೆಗಟ್ಟುಪಿಕೆ, ಮಳೆ ನೀರು ಕೊಯ್ಲು, ರಾಸಾಯನಿಕ

ಗೊಬ್ಬರಗಳ ಬಳಕೆಯ ತಡೆ ಮತ್ತು ಜೈವಿಕ ಗೊಬ್ಬರಗಳ ತಯಾರಿಸುವಿಕೆ ಮತ್ತು ಬಳಕೆ, ಮಳೆ ನೀರಿನ ಮರುಪೂರಣ, ಕಿಂಡಿ ಅಣೆಕಟ್ಟುಗಳ ನಿರ್ಮಾಣ, ಇಂಗು ಗುಂಡಿ ನಿರ್ಮಾಣ ಮೊದಲಾದ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುತ್ತಿದೆ. ದಕ್ಷಿಣ ಕನ್ನಡ, ಉಡುಪಿ ಹಾಗೂ ಕೊಡಗು ಜಿಲ್ಲೆಗಳಲ್ಲಿ ವ್ಯಾಪಿಸಿರುವ ನೂರಾರು ಸಂಘಗಳು ಸಣ್ಣ ಉಳಿತಾಯವನ್ನು ಮಾಡಿ ಅದರ ಬಡ್ಡಿ ಹಣದಿಂದ ಸದಸ್ಯರಿಗೆ, ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಲು ಸಾಲ ಪಾವತಿಸುವ ಯೋಜನೆ ಮತ್ತು ಸಹಾಯಧನವನ್ನು ನೀಡಲಾಗುತ್ತಿದೆ. ಇದು ಸದಸ್ಯರಲ್ಲಿ ಉಳಿತಾಯದ ಅಭ್ಯಾಸವನ್ನು, ಸ್ವಾವಲಂಬನೆಯನ್ನು ಪರಸ್ಪರ ಸಹಕಾರವನ್ನು ವೃದ್ಧಿಸುತ್ತಿದೆ. ಆರ್ಥಿಕ ಮುಗ್ಗಟ್ಟಿನಿಂದಾಗಿ ಮದುವೆಗೆ ಅಡ್ಡಿಯಾಗಿರುವ ಬಡ ಹೆಣ್ಮಕ್ಕಳ ಸಹಾಯಕ್ಕಾಗಿ ವಿವಾಹ ನಿಧಿಯನ್ನೂ ಸ್ಥಾಪಿಸಿದೆ.[೧೨೪]

## ೪.೧೦. ಅಮಲು ಸೇವನೆಯ ವಿರುದ್ಧ ಹೋರಾಟ

ಕ್ರೈಸ್ತರಲ್ಲಿ ಮದ್ಯ ತಯಾರಿಕೆ ವಸಾಹತು ಅವಧಿಯಲ್ಲಿಯೇ ನೆಲೆನಿಂತಿತ್ತು. ಈ ಪದ್ಧತಿ ನಿಧಾನವಾಗಿ ಆಚರಣೆಯಾಯಿತು. ಹಬ್ಬಗಳಲ್ಲಿ ಮತ್ತು ಮದುವೆಯಂತಹ ಸಮಾರಂಭಗಳಲ್ಲಿ ಮದ್ಯದ ಹಂಚಿಕೆ ಸ್ವೀಕೃತ ಸಂಪ್ರದಾಯವಾಯಿತು. ಇದಲ್ಲದೆ ಗೇರುಹಣ್ಣಿನ ಮದ್ಯದಲ್ಲಿ ವೈದ್ಯಕೀಯ ಅಂಶಗಳಿದ್ದು ಅದರ ಸೇವನೆಯಿಂದ ಆರೋಗ್ಯಕ್ಕೆ ಲಾಭಕರವೆನ್ನುವ ನಂಬಿಕೆ ಜನರಲ್ಲಿ ಮನೆಮಾಡಿತ್ತು. ಕಾರ್ಯಕ್ರಮಗಳಲ್ಲಿ ಮತ್ತು ಹಬ್ಬ ಹರಿದಿನಗಳಲ್ಲಿ ಸುಲಭವಾಗಿ ದೊರೆಯುವ ಮದ್ಯ ಮತ್ತು ಅದರ ತಯಾರಿಕೆಯಲ್ಲಿ ಕೆಲವು ಕ್ರೈಸ್ತ ಕುಟುಂಬಗಳು ತೊಡಗಿಕೊಂಡಿರುವುದು ಮದ್ಯಸೇವನೆಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿತು. ಮದ್ಯಪಾನ ಸಮಸ್ಯೆಯಾಗಿ ಪರಿಣಮಿಸಿತು ಮತ್ತು ಅದರಿಂದಾಗಿ ಒಂದು ವರ್ಗದವರು ಬಡತನವನ್ನು ಅನುಭವಿಸುವಂತಾಯಿತು. ಇದರ ಫಲವಾಗಿ ಈ ರೀತಿಯ ಕುಟುಂಬದ ಮಹಿಳೆಯರು ಮತ್ತು ಮಕ್ಕಳು ಹೊಟ್ಟೆಪಾಡಿಗಾಗಿ ವಲಸೆ ಹೋಗುವಂತಾಯಿತು. ಆದರೆ ಮುಖ್ಯವಾಗಿ ಸ್ವಾತಂತ್ರ್ಯೋತ್ತರ ಅವಧಿಯ ಶಿಕ್ಷಣ ಪ್ರಸಾರವು ಮದ್ಯಪಾನ ಇಳಿಮುಖವಾಗಲು ಕಾರಣವಾಯಿತು,[೧೨೫] ಕ್ರೈಸ್ತ ಸಮುದಾಯದ ಕೆಲವರಲ್ಲಿದ್ದಂತಹ ಮದ್ಯಪಾನವು ಕುಟುಂಬಗಳನ್ನು ಕಷ್ಟಕ್ಕೆ ಈಡು ಮಾಡುತ್ತಿದ್ದ ಒಂದು ಕೆಡುಕಾಗಿದೆ. ಸ್ಥಳೀಯವಾಗಿ ತಯಾರಿಸಿದ ಮದ್ಯವನ್ನು ಅಥವಾ ಕೆಲವು ಸಂಧರ್ಭಗಳಲ್ಲಿ ಗೇರುಹಣ್ಣಿನ ಫೆನ್ನಿಯನ್ನು ಹಬ್ಬಗಳಲ್ಲಿ ಮತ್ತು ಇತರ ಸಮಾರಂಭಗಳಲ್ಲಿ ನೀಡುವುದು ಕ್ರೈಸ್ತರಲ್ಲಿ ಸ್ವೀಕೃತ ಸಂಪ್ರದಾಯವಾಗಿದೆ. ಕಾರ್ಯಕ್ರಮಗಳಲ್ಲಿ ಮತ್ತು ಹಬ್ಬಗಳಲ್ಲಿ ಧಾರಾಳವಾಗಿ ದೊರೆಯುತ್ತಿದ್ದ ಈ ಮದ್ಯಗಳಿಂದಾಗಿ ಕೆಲವು ಸಂದರ್ಭಗಳಲ್ಲಿ ಇದರ ಬಳಕೆ ಮಿತಿಮೀರಿ, ಕೆಲವರು ಮದ್ಯವ್ಯಸನಕ್ಕೆ ಬಲಿಯಾಗಿದ್ದುಂಟು. ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಕ್ರೈಸ್ತರಿಗೆ ಮಿತಾಚಾರದ ಸಾಹಿತ್ಯವನ್ನು ಹಂಚಲಾಯಿತು. ೧೯೨೦ರಲ್ಲಿ ಯೇಸುಸಭೆಯ ಫಾ. ಮ್ಯಾನುವೆಲ್ ಕೊಯಿಲೊ ಅವರು ಮದ್ಯಪಾನದ ವಿರುದ್ಧ ಹೋರಾಟವನ್ನು

ನಡೆಸಲು ಮಿತಾಚಾರ ಸೊಸೈಟಿಯನ್ನು ಸ್ಥಾಪಿಸಿದ್ದಾರೆ. ಆದರೆ ಮದ್ಯಪಾನದ ಸಮಸ್ಯೆ ಎಷ್ಟು ಮಿತಿಮೀರಿತ್ತೆಂದರೆ, ೧೯೪೫ರಲ್ಲಿ ರಾಕ್ಣೊ ಪತ್ರಿಕೆಯ ಸಂಪಾದಕರು ಮದ್ಯಪಾನವನ್ನು ಕೊನೆಗಾಣಿಸುವಂತೆ ಕರೆ ನೀಡಿದ್ದಾರೆ. ಈ ಕೆಡುಕಿನ ವಿರುದ್ಧ ೧೯೫೫ರಲ್ಲಿ ಕಾಪುಚಿನ್ ಧರ್ಮಗುರುಗಳು ತಮ್ಮ ಹೋರಾಟವನ್ನು ಮುಂದುವರಿಸಿದ್ದಾರೆ. ಹೀಗೆ ಮದ್ಯಪಾನವುಕ್ರೈಸ್ತ ಸಮುದಾಯದ ಕೆಲವರನ್ನು ಬಡತನಕ್ಕೆ ತಳ್ಳಿದೆ.[೧೨೬]

ಕೆನರಾ ಕ್ರೈಸ್ತರನ್ನು ಬಹಳವಾಗಿ ಬಾಧಿಸುತ್ತಿದ್ದ ಕುಡಿತದ ಚಟವನ್ನು, ಬಲು ದೊಡ್ಡ ಕೆಡುಕೆಂದು, ಮಿಶನರಿಗಳು ಕೀಳಾಗಿ ಪರಿಗಣಿಸಿದರು. ಕುಡಿತವು, ವಿವೇಚನಾಶಕ್ತಿಯನ್ನು ಕುಗ್ಗಿಸುವುದಲ್ಲದೆ ಬಡತನ ಮತ್ತು ಸಾಲಕ್ಕೆ ಕಾರಣವೂ ಆಗಿತ್ತು. ಈ ಕೆಡುಕಿನ ವಿರುದ್ಧ ಹೋರಾಡಲೆಂದು, ೧೮೮೪ರಲ್ಲಿ ಬಲ್ಮಠ ಸಭೆಯವರು 'ಬ್ಲೂ ರಿಬ್ಬನ್ ಆರ್ಮಿ' ಅಥವಾ 'ನೀಲ ನಾಡೆಯ ಸೈನ್ಯ' ಎಂಬ ಮದ್ಯವರ್ಜನ ಸಂಘವನ್ನು ಸ್ಥಾಪಿಸಿದರು. ಸಂಘದ ಸದಸ್ಯರು ಮುಂದುಗಡೆ ಅಂಗಿಗೆ ನೀಲನಾಡೆಯ ತುಂಡು ಹಚ್ಚಿಕೊಳ್ಳುತ್ತಿದ್ದರು. ಆದ್ದರಿಂದ, ಸಂಘಕ್ಕೆ 'ನೀಲನಾಡೆಯ ಸೈನ್ಯ'ವೆಂದು ಕರೆಯುತ್ತಾರೆ.[೧೨೭] ಆ ಶಾಖೆಯ ಪ್ರಧಾನ ಉದ್ದೇಶವೇನೆಂದರೆ ಕುಡಿತದ ಚಟವನ್ನು ನಿರ್ಮೂಲನ ಮಾಡುವುದು; ಆ ಮೂಲಕವಾಗಿ ಬಲ್ಮಠ ಸಭೆಯವರಿಗೆ ಅಂಟಿಕೊಂಡಿದ್ದ 'ಕುಡುಕ ಕ್ರೈಸ್ತ'ರೆಂಬ ಅಪಖ್ಯಾತಿಯನ್ನು ಹೋಗಲಾಡಿಸುವುದು.[೧೨೮]

೧೯೦೨ರಲ್ಲಿ ಮದ್ರಾಸಿನಲ್ಲಿ ನಡೆದ ಭಾರತೀಯ ಮಿಶನರಿಗಳ ನಾಲ್ಕನೆಯ ದಶಮಾನೋತ್ಸವ ಸಮ್ಮೇಳನದ ವರದಿಯಲ್ಲಿ ಹೀಗೆ ಹೇಳಲಾಗಿದೆ "ಭಾರತದ ಕೆಲವು ಜಿಲ್ಲೆಗಳಲ್ಲಿನ ಮತ್ತು ಸಿಂಹಳದ ಹೆಚ್ಚು ಕಮ್ಮಿ ಎಲ್ಲಾ ಸಭೆಗಳಲ್ಲೂ ಜಾತಿಪದ್ಧತಿ, ಸಾಲ ಮತ್ತು ಮದ್ಯವ್ಯಸನ, ಎಂಬ ಮೂರು ದೊಡ್ಡ ಕೆಡುಕುಗಳು ಮನೆಮಾಡಿವೆ. ಇವುಗಳು ಕ್ರೈಸ್ತ ಧರ್ಮ ಪ್ರಸಾರಣೆಗೆ ಬಲು ದೊಡ್ಡ ತೊಡಕುಗಳಾಗಿವೆ. ಸಭೆಗಳು ತಮ್ಮ ಉನ್ನತ ವೃತ್ತಿಯನ್ನು ಪರಿಪೂರ್ಣಗೊಳಿಸುವುದಕ್ಕೆ ಮೊದಲು ಆ ಕೆಡುಕುಗಳನ್ನು ಕಿತ್ತೊಗೆಯಬೇಕು.ಬಾಸೆಲ್ ಮಿಶನ್‌ನಲ್ಲಿ ಮಿಶನರಿಗಳಿಗೆ ಜಾತೀಯತೆಯ ಸಮಸ್ಯೆಯೇ ಇಲ್ಲ. ಆದರೆ ಉಳಿದೆರಡು ಕೆಡುಕುಗಳಾದ ಸಾಲ ಮತ್ತು ಮದ್ಯವ್ಯಸನ ವಿಷಯದಲ್ಲಿ ಮಿಶನರಿಗಳಲ್ಲಿ ಅಪರಾಧಿ ಪ್ರಜ್ಞೆ ಇದ್ದೇ ಇದೆ. ಬಾಸೆಲ್ ಮಿಶನ್‌ನ ಬಹುಮಂದಿ ಉಪದೇಶಿಗಳು, ಪಾದ್ರಿಗಳು, ಪ್ರೆಸ್‌ಬೈಟರ್ಸ್, ಉನ್ನತ ಶ್ರೇಣಿಯ ಶಾಲಾ ಅಧ್ಯಾಪಕರು ಮತ್ತು ಬಾಸೆಲ್ ಮಿಶನ್ ಸಂಸ್ಥೆಗಳಿಗೆ ಸೇರಿದ ಚೆನ್ನಾಗಿ ವೇತನ ಪಡೆಯುವ ಗುಮಾಸ್ತರು- ಇವರೆಲ್ಲರೂ ಬಲು ದೊಡ್ಡ ಪ್ರಮಾಣದಲ್ಲಿ ಸಾಲದ ಸುಳಿಯೊಳಗೆ ಸಿಲುಕಿದವರೇ ಆಗಿದ್ದಾರೆ.[೧೨೯] ಕೆಲವರು ದುಂದುವೆಚ್ಚ ಮಾಡಿ ಆಡಂಬರದಿಂದ ಜೀವಿಸುವುದು, ಕೆಲವು ಸಲ, ಯೂರೋಪಿಯನ್ನರ ಅಂಧಾನುಕರಣೆಯ ಫಲವಾಗಿದೆ. ಬಡ ಮಿಶನ್ ಕ್ರೈಸ್ತರಿಗೆ ಕಷ್ಟ ಕಾಲದಲ್ಲಿ ನೆರವು ನೀಡುವ ಉದ್ದೇಶದಿಂದ ಮುಖ್ಯವಾಗಿ ಕುಟುಂಬದ ಯಜಮಾನ

ತೀರಿಕೊಂಡ ಸಂದರ್ಭದಲ್ಲಿ ಆ ವ್ಯಕ್ತಿಯ ವಿಧವೆ ಪತ್ನಿ ಮತ್ತು ನಿರ್ಗತಿಕ ಮಕ್ಕಳ ನೆರವಿಗಾಗಿ ೧೮೮೩-೧೮೮೮ರ ಸಮಯದಲ್ಲಿ 'ಕೆನರಾ ಕ್ರಿಶ್ಚಿಯನ್ ಫ್ಯಾಮಿಲಿ ಪ್ರೊವಿಡೆಂಟ್ ಫಂಡ್' ಸ್ಥಾಪಿಸಲಾಗಿದೆ.

ಮಿಶನ್ನಿನ ಹೆಚ್ಚಿನ ಮದ್ಯವ್ಯಸನಿಗಳು ಒಂದು ಮಿತಿಯಲ್ಲಿ ಗೌಪ್ಯತೆಯಿಂದ ಮದ್ಯ ಸೇವಿಸುವ ಅಭ್ಯಾಸವನ್ನು ಹೊಂದಿರುತ್ತಾರೆ. ಸಭೆಯ ಕಟ್ಟುನಿಟ್ಟಾದ ಶಿಸ್ತಿನ ಕಾರಣದಿಂದಾಗಿ ಮದ್ಯಪಾನಿಗಳು ತಮ್ಮ ಚಟವನ್ನು ಯಾರೂ ಕಾಣದಂತೆ ಅಥವಾ ತಾವು ಎಲ್ಲಿಯೂ ಸಿಕ್ಕಿ ಹಾಕಿಕೊಳ್ಳದಂತೆ ಜಾಗರೂಕತೆ ವಹಿಸುತ್ತಾರೆ. ಆದರೆ ಈ ರೀತಿಯ ಸುಧಾರಿತ ಮದ್ಯಪಾನಿಗಳೇ ಸಭೆಗೆ ನಿಜವಾದ ಅಪಾಯಕಾರಿಗಳಾಗಿದ್ದಾರೆ. ಏಕೆಂದರೆ, ಅವರು ಈಗಲೂ ತಾವು ಗೌರವಾನ್ವಿತ, ಸಭ್ಯ ನಾಗರಿಕರಂತೆ ಕಾಣಿಸಿಕೊಳ್ಳುತ್ತಾರಲ್ಲದೆ ಇತರರಿಂದ, ಕುಡುಕರ ಸಾಲಿನಲ್ಲಿ ಗುರುತಿಸಿಕೊಳ್ಳಲು ಬಯಸುವುದಿಲ್ಲ. ಹೆಚ್ಚಿನ ಸಭೆಗಳಲ್ಲಿ ಮದ್ಯವ್ಯಸನವನ್ನು ತಡೆಗಟ್ಟಲು, ಮಧ್ಯವರ್ಜನ ಸಂಘಗಳನ್ನು ಸ್ಥಾಪಿಸುವುದರ ಮೂಲಕ ಪ್ರಯತ್ನಗಳನ್ನು ಮಾಡಲಾಗುತ್ತಿದೆ.[೧೩೦] ಇತ್ತೀಚಿನ ದಿನಗಳಲ್ಲಿ ಎಲ್ಲಾ ಕಡೆ ಕೇಳಿ ಬರುತ್ತಿರುವ ಮದ್ಯಪಾನ ನಿಷೇಧ, ಧೂಮಪಾನ ನಿಷೇಧಗಳಂತಹ ಚಳುವಳಿಗಳು ಯಾವುದೇ ಆಡಂಬರಗಳಿಲ್ಲದೆ ೧೯ನೇ ಶತಮಾನದ ಕಡೆಯ ದಶಕಗಳಲ್ಲಿಯೇ ಆರಂಭಿಸಿ ನಿರಂತರವಾಗಿ ಕುಡಿತದ ಕೆಡುಕುಗಳ ವಿರುದ್ಧ ಹೋರಾಟ ನಡೆಸುತ್ತ ಬಂದಿರುವ ಕ್ರೈಸ್ತ ಸಂಘಟನೆಗಳು ಅದನ್ನು ಇಂದಿಗೂ ತಮ್ಮ ಸಭೆಗಳಲ್ಲಿ, ಶಾಲೆಗಳಲ್ಲಿ, ಆಸ್ಪತ್ರೆಗಳಲ್ಲಿ, ಕೈಗಾರಿಕೆಗಳಲ್ಲಿ ಚಾಚೂ ತಪ್ಪದೆ ಮುಂದುವರಿಸಿಕೊಂಡು ಬರುತ್ತಿವೆ. ಮದ್ಯವರ್ಜನ ಕಾರ್ಯದಲ್ಲಿ ಮಿಶನ್ ಸಾಕಷ್ಟು ಯಶಸ್ಸನ್ನು ಕಂಡಿದೆ. ಮಿಸ್ಟರ್ ರಿತ್ತರ್‌ರವರು ಮದ್ಯವ್ಯಸನದಲ್ಲಿ ಕಂಡು ಬಂದಿರುವ ಇಳಿಕೆಯನ್ನು ಉಲ್ಲೇಖಿಸಿ, ಇದಕ್ಕೆ ಮದ್ಯವರ್ಜನ ಸಂಘಗಳ (Temperance Association) ಚಟುವಟಿಕೆಯೇ ಕಾರಣ ಎನ್ನುತ್ತಾರೆ.[೧೩೧]

### ೪.೧೦.೧. ಪ್ರಜ್ಞಾ ಕೇಂದ್ರದ ಸೇವಾ ಕಾರ್ಯಕ್ರಮಗಳು

'ಪ್ರಜ್ಞಾ' ಆಪ್ತ ಸಮಾಲೋಚನಾ ಕೇಂದ್ರವನ್ನು ೧೬ ಏಪ್ರಿಲ್ ೧೯೮೭ರಲ್ಲಿ ಮಂಗಳೂರಿನ ಕಂಕನಾಡಿಯಲ್ಲಿ ಹಿಲ್ಡಾ ರಾಯಪ್ಪನ್‌ರವರು ಸ್ಥಾಪಿಸಿದರು. ಮಾನವೀಯತೆಯಿಂದ ಸೇವೆ ಮಾಡಲು ವಿಶೇಷವಾಗಿ ಮಹಿಳೆಯರು ಮತ್ತು ಮಕ್ಕಳು ಮಾನಸಿಕ ದುಃಖ ಮತ್ತು ಇತರ ಸಮಸ್ಯೆಗಳಿಂದ ಹೊರಬರಲು ಮತ್ತು ಅವುಗಳನ್ನು ಧೈರ್ಯವಾಗಿ ಎದುರಿಸಲು ಸಹಾಯ ಮಾಡಲು ಈ ಸಂಘ ಉದಯಿಸಿತು. ಕುಟುಂಬ ಜೀವನದ ಒತ್ತಡದಿಂದ ಬಳಲುತ್ತಿದ್ದವರಿಗೆ, ಆರ್ಥಿಕವಾಗಿ ಹಿಂದುಳಿದವರಿಗೆ, ನಿರುದ್ಯೋಗಿಗಳಿಗೆ, ಮದ್ಯವ್ಯಸನಿಗಳಿಗೆ ಮತ್ತು ಕುಟುಂಬಗಳಲ್ಲಿ ಆಂತರಿಕ ಸಂಬಂಧ ಮುರಿದು ಬಿದ್ದವರಿಗೆ, ಒತ್ತಡದಿಂದ ಜೀವನ ನಡೆಸಲು ಕಷ್ಟವಾದವರಿಗೆ ಯಾವುದೇ ಶುಲ್ಕವಿಲ್ಲದೆ ಸಹಾಯ ಮಾಡಲು ಪ್ರಜ್ಞಾ ಕೇಂದ್ರ ಸ್ಥಾಪನೆಯಾಗಿದೆ. ಈ ಕೇಂದ್ರವು ಭಾವನಾತ್ಮಕ ಮತ್ತು ವಿವಿಧ ಮಾನಸಿಕ

ತೊಂದರೆಯಿಂದ ನರಳುವವರಿಗೆ ವೈಯಕ್ತಿಕವಾಗಿ ಮತ್ತು ಅವರ ಕುಟುಂಬದವರಿಗೆ ಆಪ್ತ ಸಮಾಲೋಚನೆ ಮತ್ತು ಸಂರಕ್ಷಣಾ ಸೇವೆಯನ್ನು ಒದಗಿಸುತ್ತದೆ. ಇದರ ಮುಖ್ಯ ಸೇವೆ ಕುಟುಂಬಗಳಲ್ಲಿ ಮುರಿಯಲ್ಪಟ್ಟಿರುವ ಸಂಬಂಧವನ್ನು ಪುನರ್‌ಸ್ಥಾಪಿಸುವುದು ಮತ್ತು ಕಡಿದುಹೋದ ಮಾನವ ಸಂಬಂಧವನ್ನು ಜೋಡಿಸುವುದು ಹಾಗೂ ಇದಕ್ಕೆ ಬೇಕಾದ ನುರಿತ ಮನೋವೈದ್ಯರುಗಳಿಂದ ಚಿಕಿತ್ಸೆ, ಕಾನೂನು ಸಲಹೆಯನ್ನು ಪ್ರಜ್ಞಾ ಕೇಂದ್ರ ನೀಡುತ್ತದೆ. ಈ ಕೇಂದ್ರವು ಕುಟುಂಬಕ್ಕೆ ಸಂಬಂಧಪಟ್ಟ ವಿವಿಧ ವ್ಯಾಜ್ಯಗಳನ್ನು, ಸಾಮಾಜಿಕ ಪಿಡುಗುಗಳನ್ನು ಹೊರಗೆಳೆಯುತ್ತದೆ.

ಲೈಂಗಿಕ ಅನ್ಯಾಯದಿಂದ ಸಾಮಾಜಿಕವಾಗಿ, ಭಾವನಾತ್ಮಕವಾಗಿ, ಮಾನಸಿಕವಾಗಿ ನೊಂದಿರುವ ಮಹಿಳೆಯರಿಗೆ ವೈಯಕ್ತಿಕ ಸಮಾಲೋಚನೆ ಒದಗಿಸುತ್ತದೆ. ಮದ್ಯವ್ಯಸನಿಗಳಿಗೆ ಮತ್ತು ಮಾದಕ ವ್ಯಸನಿಗಳಿಗೆ ಚಿಕಿತ್ಸೆ ಮತ್ತು ಪುನಶ್ಚೇತನಗೊಳ್ಳಲು ಸೇವೆ ಮತ್ತು ಅವರ ಕುಟುಂಬದವರಿಗೂ ಆಪ್ತ ಸಮಾಲೋಚನೆ ಏರ್ಪಡಿಸುತ್ತದೆ. ಸಾರ್ವಜನಿಕರಿಗೆ ಶಿಕ್ಷಣ, ಸಾಮಾಜಿಕ ಜಾಗೃತಿ, ಮದ್ಯವ್ಯಸನಿಗಳಾಗಿರುವವರಿಗೆ ವೈಯಕ್ತಿಕ ಮತ್ತು ಕುಟುಂಬದವರಿಗೆ ಸಾಮೂಹಿಕ ಶಿಕ್ಷಣ ನೀಡುತ್ತದೆ. ಕಾನೂನುಬದ್ಧ ನೆರವು ಮತ್ತು ಸಲಹಾ ಸೇವೆ ವೈಯಕ್ತಿಕವಾಗಿ ಮತ್ತು ಕುಟುಂಬಗಳಿಗೆ ಅದರಲ್ಲೂ ವಿಶೇಷವಾಗಿ ನೀಚ ಕೃತ್ಯಗಳಿಂದ ಮತ್ತು ಅನ್ಯಾಯಕ್ಕೊಳಗಾದ ಮಹಿಳೆಯರಿಗೆ ಒದಗಿಸುತ್ತದೆ. ಮಾನವ ಸಂಪನ್ಮೂಲ ಬೆಳವಣಿಗೆ ಮತ್ತು ಉದ್ಯೋಗ ಕೌಶಲ್ಯ ತರಬೇತಿ ಒದಗಿಸುತ್ತದೆ. ಮಹಿಳೆಯರ ಸಮಸ್ಯೆಗಳನ್ನು ಅಧ್ಯಯನ ಮಾಡಿ ಅವುಗಳಿಗೆ ಪರ್ಯಾಯ ವ್ಯವಸ್ಥೆ ನೀಡುತ್ತದೆ. ಮಹಿಳೆಯರ ಸಬಲೀಕರಣಕ್ಕೆ ಅಗತ್ಯವಾದ ಕಾರ್ಯಕ್ರಮಗಳ ಸಂಯೋಜನೆಯನ್ನೂ ಕೈಗೊಳ್ಳುತ್ತಿದೆ.[೧೩೨]

ಇಂದಿನ ದಿನಗಳಲ್ಲಿ ಯುವ ಪೀಳಿಗೆಯವರಲ್ಲಿ ಹೆಚ್ಚಾಗಿ ಕಂಡು ಬರುವ ಮಾನಸಿಕ ಖಿನ್ನತೆ ಮತ್ತು ಕೌಟುಂಬಿಕ ಜೀವನದಲ್ಲಿ ಹೊಂದಾಣಿಕೆ ಇಲ್ಲದೆ ಹೆಚ್ಚು ಹೆಚ್ಚು ವಿವಾಹ ವಿಚ್ಛೇದನಗಳು ನಡೆಯುತ್ತಿರುವುದು ಚಿಂತೆಗೀಡು ಮಾಡುವ ಸಂಗತಿಯಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಪ್ರಜ್ಞಾ ಕೇಂದ್ರ ಅಂಥವರಿಗೆ ಸೂಕ್ತ ಸಲಹೆ, ಸೂಚನೆ ನೀಡುವುದರೊಂದಿಗೆ ಪತಿ-ಪತ್ನಿಯರಲ್ಲಿ ವಿಶ್ವಾಸ ಮೂಡಿಸುವ, ಯುವಕ-ಯುವತಿಯರಿಗೆ ಧೈರ್ಯ ತುಂಬಿ ಮುನ್ನಡೆಸುವ ಮಹತ್ವದ ಕಾರ್ಯವನ್ನು ಕೈಗೊಂಡಿದೆ. ಇಂದಿನ ಮಕ್ಕಳೇ ಮುಂದಿನ ದೇಶದ ಪ್ರಜೆಗಳಾಗಿರುವುದರಿಂದ ಅವರನ್ನು ಸರಿ ದಾರಿಯಲ್ಲಿ ಮುನ್ನಡೆಸುವ ಜವಾಬ್ದಾರಿ ನಮ್ಮೆಲ್ಲರದಾಗಿದ್ದರೂ ಪ್ರಜ್ಞಾಕೇಂದ್ರವು ಇದನ್ನು ಯಾವುದೇ ಸುದ್ದಿ ಇಲ್ಲದೆ ನಿರಂತರವಾಗಿ ನಡೆಸಿಕೊಂಡು ಬರುತ್ತಿದೆ.

### ೪.೧೦.೨. 'ಲಿಂಕ್' ಮದ್ಯವರ್ಜನ ಸಂಘ

ಮಂಗಳೂರಿನ ಬೋಳಾರ ಎಂಬಲ್ಲಿ 'ಲಿಂಕ್'ಅಮಲು ಚಿಕಿತ್ಸಾ ಮತ್ತು ಸಲಹಾ ಕೇಂದ್ರವನ್ನು ೧೯೯೧ರಲ್ಲಿ ಟಿ.ಎಸ್. ತೋಮಸ್‌ರವರು ಸ್ಥಾಪಿಸಿದರು. 'ಲಿಂಕ್ ಆ್ಯಂಟಿ ಎಡಿಕ್ಷನ್ ಸಿಟಿಜನ್ಸ್ ಕಮಿಟಿ', ಸಂಸ್ಥೆಯ ಅಭಿವೃದ್ಧಿಗೆ ಮತ್ತು ಉತ್ತಮ ಸೇವೆಗೆ ಕಾರಣವಾಗಿದೆ. ಲಿಂಕ್ ಸಂಸ್ಥೆಯು, ಕೇಂದ್ರ ಸರಕಾರದ ಸಮಾಜ ಕಲ್ಯಾಣ ಮಂತ್ರಾಲಯದಿಂದ ಮಾನ್ಯತೆ ಮತ್ತು ಅನುದಾನ ಪಡೆದು, ಅಮಲು ವ್ಯಸನವನ್ನು ತಡೆಗಟ್ಟುವಲ್ಲಿ ಮತ್ತು ವ್ಯಸನಿಗಳಿಗೆ ಚಿಕಿತ್ಸೆ ನೀಡುವಲ್ಲಿ ಮಹತ್ವದ ಸೇವೆಯನ್ನು ಸಮಾಜಕ್ಕೆ ನೀಡಿದೆ. ಸಂಘದ ಸೇವೆಯನ್ನು ಪರಿಗಣಿಸಿ ಭಾರತೀಯ ಮನಃಶಾಸ್ತ್ರ ಸಂಸ್ಥೆಯು ಪ್ರತಿಷ್ಠಿತ 'ಸ್ಪಂದನಾ ಪ್ರಶಸ್ತಿ'ಯನ್ನು ಸಂಸ್ಥೆಗೆ ನೀಡಿ ಗೌರವಿಸಿದೆ. ಸಂಸ್ಥೆಯು ಅಮಲು ವ್ಯಸನದ ಬಗ್ಗೆ ಜಾಗೃತಿ ಮೂಡಿಸಿ, ಶಾಲಾ ಕಾಲೇಜು ವಿದ್ಯಾರ್ಥಿಗಳಲ್ಲಿ, ಯುವ ಸಂಘಟನೆಗಳಿಗೆ, ಗ್ರಾಮೀಣ ಜನರಿಗೆ ವಿಶೇಷವಾಗಿ ಯುವಜನತೆ ಅಮಲು ಪದಾರ್ಥಗಳಿಗೆ ಬಲಿ ಬೀಳದಂತೆ ಎಚ್ಚರಿಕೆ ನೀಡುತ್ತಿದೆ. ಅಲ್ಲದೆ ಲಿಂಕ್ ಸಂಸ್ಥೆಯು ಬೋಳಾರದಲ್ಲಿ ೨೦ ಹಾಸಿಗೆಯ ಚಿಕಿತ್ಸಾ ಕೇಂದ್ರದ ಮೂಲಕ ಮದ್ಯಪಾನ, ಮಾದಕ ದ್ರವ್ಯಗಳಿಗೆ ಬಲಿಯಾದ ಜನರಿಗೆ ಚಿಕಿತ್ಸೆಯನ್ನು ನೀಡುತ್ತಿದೆ. ಸಮುದಾಯಗಳಲ್ಲಿ ಮದ್ಯವರ್ಜನ ಶಿಬಿರಗಳನ್ನು ಏರ್ಪಡಿಸಿ ಆರ್ಥಿಕವಾಗಿ ದುರ್ಬಲರಾದ ವ್ಯಸನಿಗಳಿಗೆ ಅತ್ಯಂತ ಕಡಿಮೆ ವೆಚ್ಚದಲ್ಲಿ ಹಾಗೂ ಉಚಿತ ರೀತಿಯಲ್ಲಿ ಈ ವ್ಯಸನದಿಂದ ಮುಕ್ತಗೊಂಡು ಉತ್ತಮ ಜೀವನ ನಡೆಸಲು ಈ ಶಿಬಿರವು ಸಹಾಯಕವಾಗಿದೆ.[೧೩೩]

### ೪.೧೦.೩. ಫಾ। ಪತ್ರಾವೊ ಡಿ- ಎಡಿಕ್ಷನ್ ಸೆಂಟರ್

ಪುತ್ತೂರಿನ ಫಾ। ಪತ್ರಾವೊ ಆಸ್ಪತ್ರೆಯಲ್ಲಿ ಮದ್ಯಪಾನ ಮತ್ತು ಮಾದಕ ವಸ್ತುಗಳ ವ್ಯಸನಿಗಳಿಗಾಗಿ ಭ। ಬರ್ನಾರ್ಡಿನ್‌ರವರ ನೇತೃತ್ವದಲ್ಲಿ ಮದ್ಯವರ್ಜನ ಕೇಂದ್ರವನ್ನು ೧೯೮೯ರಲ್ಲಿ ಆರಂಭಿಸಲಾಗಿದೆ. ಮದ್ಯಪಾನ ವ್ಯಸನಿಗಳ ಕಲ್ಯಾಣಕ್ಕಾಗಿ ಸ್ಥಾಪಿಸಲ್ಪಟ್ಟಿರುವ ಕಾಂಟಾವ್ಸ್ ಇನ್ನೊವೇಟಿವ್ ಪ್ರೊಜೆಕ್ಟ್‌ನವರು ಫಾ। ಪತ್ರಾವೊ ಆಸ್ಪತ್ರೆಯ ಸಹಯೋಗದೊಂದಿಗೆ ಕಳೆದ ೨೨ ವರ್ಷಗಳಿಂದ ಕಾರ್ಯಾಚರಿಸುತ್ತಿದ್ದು ಪ್ರತೀ ವರ್ಷ ೨೫೦-೩೦೦ ಮದ್ಯವ್ಯಸನಿಗಳ ಆರೈಕೆ ಮಾಡಿ ಹೆಚ್ಚು ಕಡಿಮೆ ೭೦% ಯಶಸ್ಸಿನೊಂದಿಗೆ ಯುವಕರನ್ನು ಮುಖ್ಯವಾಹಿನಿಗೆ ತರುವ ಕಾರ್ಯವನ್ನು ಮಾಡಿದೆ. ಮದ್ಯವ್ಯಸನ ಸಮಸ್ಯೆ ಗಾಢವಾಗಿರುವ ವಿಶಾಲವಾದ ಪುತ್ತೂರು ತಾಲೂಕಿನಲ್ಲಿ, ೬೮ ಗ್ರಾಮಗಳಿದ್ದು, ಅವರೆಲ್ಲರನ್ನೂ ತಲುಪುವುದು ಕಷ್ಟಸಾಧ್ಯವಾಗಿದೆ, ಆದುದರಿಂದ ಪ್ರಾಯೋಗಿಕವಾಗಿ ೮ ಗ್ರಾಮಗಳನ್ನು ಆಯ್ದು ಫಾ। ಪತ್ರಾವೊ ಮದ್ಯವರ್ಜನ ಕೇಂದ್ರ ಕಾರ್ಯಾಚರಿಸುತ್ತಿದೆ.[೧೩೪] ಅಲ್ಲದೇ, ಕಲ್ಯಾಣಪುರದ ಗೊರಟ್ಟಿ ಆಸ್ಪತ್ರೆಯಲ್ಲಿಯೂ ಮದ್ಯವರ್ಜನ ಕೇಂದ್ರವನ್ನು ತೆರೆದು ಮದ್ಯವ್ಯಸನವನ್ನು ತಡೆಗಟ್ಟುವ ಪ್ರಯತ್ನವನ್ನು ಮಾಡಲಾಗುತ್ತಿದೆ.

ಹೀಗೆ ಹಲವಾರು ಮದ್ಯವರ್ಜನ ಸಂಘಗಳು ಕುಡಿತದ ಚಟಕ್ಕೆ ಬಲಿಯಾಗಿರುವವರನ್ನು ಕುಡಿತದ ದಾಸ್ಯದಿಂದ ಬಿಡಿಸಿ ಮುಖ್ಯವಾಹಿನಿಗೆ ತರುವ ಪ್ರಯತ್ನವನ್ನು ಮಾಡುತ್ತಿವೆ. ಪರಿಣಾಮವಾಗಿ ಅದೆಷ್ಟೋ ಕುಟುಂಬಗಳು ನೆಮ್ಮದಿಯ ನಿಟ್ಟುಸಿರು ಬಿಡುವಂತಾಗಿದೆ. ಅಮಲು ಸೇವನೆಯಿಂದ ಸುಖ, ಶಾಂತಿ, ನೆಮ್ಮದಿ, ಕಳೆದುಕೊಂಡವರು, ಅವಮರ್ಯಾದೆ ಅನುಭವಿಸುತ್ತಿದ್ದವರು, ಒಡೆದ ಕುಟುಂಬಗಳು ಅದರಿಂದ ಹೊರಬರಲು ಹಪಹಪಿಸುತ್ತಿದ್ದವು. ಮದ್ಯಪಾನ ಒಂದು ರೋಗ ಎಂಬುದನ್ನರಿತು ಅದಕ್ಕೆ ಸೂಕ್ತ ಸಮಾಲೋಚನೆ, ಔಷಧ ನೀಡುವ ಮೂಲಕ ಅವರನ್ನೂ ನಮ್ಮವರಲ್ಲಿ ಒಬ್ಬರನ್ನಾಗಿ ಸ್ವೀಕರಿಸುವುದರೊಂದಿಗೆ ಈ ಕೆಡುಕಿನಿಂದ ಹೊರಬರಲು ಸಾಧ್ಯ ಎಂಬುದನ್ನು ಮದ್ಯವರ್ಜನ ಸಂಘಗಳು ನಿರ್ವಹಿಸಿ ಜಗಜ್ಜಾಹೀರುಗೊಳಿಸಿವೆ.

## ೪.೧೧. ಜಾತಿ ವ್ಯವಸ್ಥೆ

ಕಥೋಲಿಕರಲ್ಲಿ ಜಾತಿ ಪದ್ಧತಿಯನ್ನು ಹೊರಗಿನವರ ಕಣ್ಣಿಗೆ ಗೋಚರಿಸದ ರೀತಿಯಿಂದ ೧೯ನೇ ಶತಮಾನದ ಕೊನೆಯವರೆಗೆ ಬಹಳ ಎಚ್ಚರಿಕೆಯಿಂದ ಅನುಸರಿಸಲಾಗುತ್ತಿತ್ತು. ಆದರೆ ಇಪ್ಪತ್ತನೆಯ ಶತಮಾನ ಕೊನೆಗೊಳ್ಳುವಷ್ಟರಲ್ಲಿ ಬಹುತೇಕವಾಗಿ ಜಾತಿ ಪದ್ಧತಿ ಮತ್ತು ಅದರ ಅನುಸರಣೆಗಳು ಬಹಳ ಶೀಘ್ರಗತಿಯಿಂದ ಮಾಯವಾಗತೊಡಗಿದವು. ವಲಸೆ ಹೋಗಿರುವವರಲ್ಲಿ ವಿದ್ಯಾವಂತ ಯುವಜನರು ಅಪಾರ ಸಂಖ್ಯೆಯಲ್ಲಿ ಇರುವುದು ಇದಕ್ಕೆ ಒಂದು ಕಾರಣವಾಗಿದೆ.[೧೩೫] ಭಾರತದಲ್ಲಿ ರೋಮನ್ ಕಥೋಲಿಕ ಮಿಶನ್‌ಗಳು ಪ್ರಾರಂಭದಿಂದಲೇ ಜಾತಿ ವ್ಯವಸ್ಥೆಯನ್ನು ಭಾರತೀಯ ಸಮಾಜದ ಸಾಮಾಜಿಕ ರಚನೆಯೆಂದು ಪರಿಗಣಿಸಿವೆ. ಈ ರಚನೆಯ ಒಳಗೆ ಇಡೀ ಜಾತಿ ಗುಂಪುಗಳ ಜನರನ್ನು ಸಾಮಾಜಿಕ ಸನ್ನಿವೇಶದಿಂದ ಬೇರ್ಪಡಿಲಾಗಿದೆ ಎಂಬ ಮತ ಪ್ರಸಾರೀಕರಣವನ್ನು ಅವರು ಸಾಬೀತು ಪಡಿಸಿದ್ದಾರೆ. ಆದುದರಿಂದ ಸಾಮಾನ್ಯ ನೆಲೆಯಲ್ಲಿ ಕ್ರೈಸ್ತ ಧರ್ಮವನ್ನು ಮತ್ತು ವೈಯಕ್ತಿಕ ನೆಲೆಯಲ್ಲಿ ಕ್ರೈಸ್ತರನ್ನು ಜಾತಿ ವ್ಯವಸ್ಥೆಗೆ ಆತಂಕಕಾರಿಯಾಗಿ ಅಥವಾ ಶಕ್ತಿಗುಂದಿಸುವವರಾಗಿ ಕಾಣಲಾಗದು. ಜಾತಿಯ ತತ್ವಗಳಿಗೆ ಅವಕಾಶವನ್ನು ಒದಗಿಸುವ ರೀತಿಯಿಂದ ಅದರೊಳಗೇ ಇದ್ದು ಅವರು ಕಾರ್ಯ ನಿರ್ವಹಿಸಿದ್ದಾರೆ. ಶುಭ ಸಂದೇಶವು (ಬೈಬಲ್) ಸಾಮಾನ್ಯವಾಗಿ ಸರ್ವ ಸಮಾನತೆಯ ಮೌಲ್ಯಗಳನ್ನು ಬೆಂಬಲಿಸುತ್ತದೆ ಮತ್ತು ಭಾರತದಲ್ಲಿ ಚಲಾವಣೆಯಲ್ಲಿರುವ ಜಾತಿ ನಿಯಮವನ್ನು ಅದು ಗುರುತಿಸುವುದಾಗಲೀ ಅಥವಾ ಸ್ವೀಕರಿಸುವುದಾಗಲೀ ಮಾಡುವುದಿಲ್ಲ. ಬೈಬಲ್ ಕ್ರೈಸ್ತ ಧರ್ಮದ ಪ್ರಜ್ಞೆಯನ್ನು ಅಂದರೆ ದೇವರಲ್ಲಿ ಪಿತೃತ್ವ ಮತ್ತು ಇತರ ಕ್ರೈಸ್ತರಲ್ಲಿ ಭ್ರಾತೃತ್ವದ ಸಮಾನತೆಯ ಆದರ್ಶವನ್ನು ಒತ್ತಿ ಹೇಳಿ ಅದಕ್ಕೆ ಪ್ರಚಾರ ನೀಡುತ್ತದೆ. 'ಒಬ್ಬರನೊಬ್ಬರು ಪ್ರೀತಿಸುವ' ಸಂದೇಶವು ಬೈಬಲ್ಲಿನ ವಿವಿಧ ವಾಕ್ಯಗಳಲ್ಲಿ ವ್ಯಾಪಿಸಿಕೊಂಡಿದೆ. ನಂತರದ ಕ್ರೈಸ್ತ ಬರವಣಿಗೆಯಲ್ಲಿ ( ಕೊರಿಂಥಿಯನ್ಸ್ : ೧) ಕೂಡಾ ಈ

ಒಂದುಗೂಡುವಿಕೆ ಮತ್ತು ಒಗ್ಗಟ್ಟನ್ನು ಎತ್ತಿ ಹಿಡಿಯಲಾಗಿದೆ. ಒಬ್ಬರು ಇನ್ನೊಬ್ಬರನ್ನು ಪ್ರೀತಿಸುವ ಬಾಧ್ಯತೆಯನ್ನು ಕಲಿಸಲಾಗಿದೆ. (ರೋಮನ್ಸ್ : ೧೩) ಒಟ್ಟಾರೆ ಹೇಳುವುದಾದರೆ ಕ್ರೈಸ್ತ ಬೋಧನೆಯು ಯಾವುದೇ ರೀತಿಯ ಅಸಮಾನತೆ ಅಥವಾ ಭೇದ ಭಾವ ಅದರಲ್ಲಿಯೂ ವಿಶೇಷವಾಗಿ ಜನಾಂಗೀಯ ಮೂಲದ ಕುರಿತು ವ್ಯತ್ಯಾಸಗಳನ್ನು ಸಮರ್ಥಿಸುವುದಿಲ್ಲ. ಆದರೆ ಭಾರತಕ್ಕೆ ಸಂಬಂಧಿಸಿದಂತೆ ಕ್ರೈಸ್ತ ಧರ್ಮದ ಸರ್ವಸಮಾನತೆಯ ವಿಚಾರವು ಕ್ರೈಸ್ತ ಧರ್ಮ ಸ್ವೀಕರಿಸಿದವರ ಬದುಕಿನಲ್ಲಿ ತಕ್ಷಣದ ಪರಿಣಾಮವನ್ನು ಬೀರಿದಂತೆ ಗೋಚರಿಸುವುದಿಲ್ಲ. ಕ್ರೈಸ್ತರಲ್ಲಿ ಜಾತಿಯ ಹಾಗಿನ ಗುಂಪುಗಳನ್ನು ಗಮನಿಸುತ್ತಿದ್ದರೆ ಜನಾಂಗೀಯ ಗುರುತಿಸುವಿಕೆಯು ಸಮಾನತೆಯ ಆದರ್ಶವನ್ನು ಹಿಂದೆ ತಳ್ಳಿದಂತೆ ಕಂಡು ಬರುತ್ತದೆ. ಆದುದರಿಂದ ಸಾಮಾಜಿಕ ಬದುಕಿನ ಜಾತಿ ಪದ್ಧತಿಯು ಕ್ರೈಸ್ತರಲ್ಲಿ ಅವರ ಮತಾಂತರದ ನಂತರವೂ ಮುಂದುವರಿದಿದೆ.

ಕರಾವಳಿ ಕರ್ನಾಟಕದಲ್ಲಿ ಕೊಂಕಣಿ ಭಾಷೆಯನ್ನಾಡುವ ರೋಮನ್ ಕಥೋಲಿಕರನ್ನು ಒಂದೇ ಜಾತಿ ಅಥವಾ ಜಾತಿ ಗುಂಪಾಗಿ ನೋಡಲಾಗುತ್ತದೆ. ಆದರೆ ನಿಜವಾಗಿಯೂ ಅವರು ಅಖಂಡ ಗುಂಪಿನವರಲ್ಲ. ಅವರಲ್ಲಿ ಆಂತರಿಕ ವಿಭಾಗಗಳು ಇದ್ದು, ಅವರು ಅದನ್ನು ಕೊಂಕಣಿಯಲ್ಲಿ 'ಜಾತ್' (ಜಾತಿ) ಅಥವಾ 'ಕುಳಿ' (ಕುಲ) ಎಂದು ಕರೆಯುತ್ತಾರೆ. ಆದುದರಿಂದ ಅವರನ್ನು ಒಂದೇ ಜಾತಿಯಾಗಿ ಪರಿಗಣಿಸಿದರೂ ಕೂಡಾ ಕರಾವಳಿ ಕರ್ನಾಟಕದ ಎಲ್ಲಾ ರೋಮನ್ ಕ್ರೈಸ್ತರು ಜನಾಂಗೀಯ ಭಾವನೆಗೆ ಸಂಬಂಧಿಸಿದಂತೆ ಒಂದು ಅಖಂಡ ಗುಂಪಿನವರಾಗಿ ಇರುವುದಿಲ್ಲ. ಇದರ ಬದಲಿಗೆ ಅವರು ಗೋವಾದಲ್ಲಿ ಕ್ರೈಸ್ತ ಮತ ಸ್ವೀಕರಿಸುವ ಮೊದಲು ಹೊಂದಿದ್ದ ಅದೇ ಜಾತಿ ರೀತಿಯ ವಿಭಾಗಗಳನ್ನು ಉಳಿಸಿಕೊಂಡಿದ್ದಾರೆ. ಕರಾವಳಿ ಕರ್ನಾಟಕದ ಪ್ರಾರಂಭದ ಕ್ರೈಸ್ತರೆಂದರೆ ಹದಿನಾರನೇ ಶತಮಾನದಲ್ಲಿ ಗೋವಾ ಪ್ರದೇಶದಲ್ಲಿ ಕ್ರೈಸ್ತ ಮತ ಸ್ವೀಕರಿಸಿದ ಉಚ್ಚ ಜಾತಿಯ ಕೊಂಕಣಿ ಸಾರಸ್ವತ ಮತ್ತು ಶೆಣ್ವಿ ಬ್ರಾಹ್ಮಣರು ಮತ್ತು ವೈಶ್ಯ ಸಮುದಾಯದವರು. ನಂತರ ಕೆನರಾದಲ್ಲಿ ಕ್ರೈಸ್ತಮತ ಸ್ವೀಕರಿಸಿದವರಲ್ಲಿ ಬೇರೆ ಜಾತಿಯವರು ಕೂಡಾ ಇದ್ದಾರೆ. ಅನೇಕ ಬಾರಿ ಕ್ರೈಸ್ತ ಮತ ಸ್ವೀಕಾರ ಪ್ರಕ್ರಿಯೆಯು ಸಾಮೂಹಿಕ ಚಳುವಳಿಯ ರೂಪದಾಗಿತ್ತು. ಆದರೆ ಹದಿನಾರನೆಯ ಶತಮಾನದಲ್ಲಿ ಗೋವೆಯಲ್ಲಿ ನಡೆದ ಬಲಾತ್ಕಾರದ ಮತಾಂತರದಲ್ಲಿ ಇದ್ದಂತಹ ಅಂಶಗಳು ಇಲ್ಲಿ ಇರಲಿಲ್ಲ. ಕರಾವಳಿ ಕರ್ನಾಟಕದ ಕ್ರೈಸ್ತರಲ್ಲಿರುವ ಪ್ರಮುಖ ಜಾತ್‌ಗಳೆಂದರೆ ಬಾಮೊಣ್, ಚರೋಡಿ, ಸುದಿರ್ ಮತ್ತು ಗೌಡಿ. ಇನ್ನು ಕೆಲವು ಉಪಜಾತಿಗಳು ಇದ್ದರೂ ಇವುಗಳನ್ನು ಮುಖ್ಯ ೪ ಗುಂಪುಗಳಿಗೆ ಸೇರಿಸಬಹುದು.[೧೩೬] ಹದಿನೇಳನೆಯ ಶತಮಾನದಲ್ಲಿ ಮಧುರೆಯಲ್ಲಿ ತಮ್ಮ ಕಾರ್ಯ ನಡೆಸುತ್ತಿದ್ದ ಯೇಸುಸಭೆಯ ಧರ್ಮಗುರುಗಳಾದ ರಾಬರ್ಟ್ ಡಿ ನೊಬಿಲಿ, ಹಿಂದೂ ಬ್ರಾಹ್ಮಣರ ಸ್ವೀಕೃತಿಯನ್ನು ಪಡೆಯುವುದಕ್ಕಾಗಿ ಜಾತಿ ಭೇದವನ್ನು

ಸಹಿಸಿಕೊಂಡಿದ್ದಾರೆ. ಇವರಲ್ಲಿ ಅನೇಕ ಮಂದಿ ಕ್ರೈಸ್ತಮತ ಸ್ವೀಕರಿಸಲು ಇದುವೇ ಕಾರಣ.[೧೩೭] ಕ್ರೈಸ್ತರಿಗೆ ಸಂಬಂಧಿಸಿದಂತೆ ರೋಮನ್ ಕಥೋಲಿಕ ಪಂಗಡಕ್ಕೆ ನಡೆದ ಮತಾಂತರವು ಜಾತಿ ವ್ಯವಸ್ಥೆಯನ್ನು ತೆಗೆದು ಹಾಕಿಲ್ಲ. ಇವತ್ತಿಗೂ ಕ್ರೈಸ್ತ ಸಮುದಾಯ ತನ್ನ ವಿಭಿನ್ನ ಜಾತಿ ರೀತಿಯ ಗುಂಪುಗಳೊಂದಿಗೆ ವ್ಯತ್ಯಾಸಗಳನ್ನು ಆಧರಿಸಿದ ಪ್ರಾಚೀನ ಕಾಲದ ಹಳೆ ಪದ್ಧತಿಗಳಿಗೆ ಅಂಟಿಕೊಂಡಿರುವ ಪ್ರಯತ್ನಗಳನ್ನು ನಡೆಸುತ್ತಿದೆ.

ಕ್ರೈಸ್ತರಲ್ಲಿರುವ ಜಾತಿಯ ಪ್ರಮುಖ ಲಕ್ಷಣವೆಂದರೆ ಹಿಂದೂಗಳಲ್ಲಿ ಇರುವಂತೆ ಇಲ್ಲಿ ಜಾತಿ ಮತ್ತು ವೃತ್ತಿಯ ನಡುವೆ ಯಾವುದೇ ಸಂಬಂಧ ಇಲ್ಲ. ಕೆಲವು ಜಾತಿಗಳು ತಮ್ಮ ಪಾರಂಪರಿಕ ವೃತ್ತಿಗಳನ್ನು ಮುಂದುವರಿಸುತ್ತಿವೆಯಾದರೂ, ವಿಶಿಷ್ಟ ಜಾತಿಯ ಗುಂಪಿಗೆ ನಿರ್ದಿಷ್ಟ ವೃತ್ತಿಯನ್ನು ಕ್ರೈಸ್ತ ಧರ್ಮ ಸ್ವೀಕಾರದ ನಂತರ ನೀಡಲಾಗಿಲ್ಲ. ಉದಾಹರಣೆಗೆ ಕ್ರೈಸ್ತ ಬಾಮೊಣ್ ಪುರೋಹಿತ ಜಾತಿಯನ್ನು ಮಾತ್ರ ಒಳಗೊಂಡಿರುವುದಿಲ್ಲ. ಏಕೆಂದರೆ ಕ್ರೈಸ್ತರಲ್ಲಿ ಪುರೋಹಿತನವು 'ಉದ್ಯೋಗ' ಅಥವಾ 'ಕರೆ'ಯಾಗಿದೆ. ಕೃಷಿಕರು, ಕೃಷಿ ಕಾರ್ಮಿಕರು, ವ್ಯಾಪಾರಿಗಳು, ಮೇಸ್ತ್ರಿಗಳು ಮತ್ತು ಅಡುಗೆಯವರಲ್ಲಿ ಕೂಡಾ ಬಾಮೊಣ್ ಇರುತ್ತಾರೆ.[೧೩೮]

### ೪.೧೧.೧. ಪ್ರಮುಖ ಜಾತಿ ಗುಂಪುಗಳು

#### ೪.೧೧.೧.೧. ಬಾಮೊಣ್

ಸಾಮಾನ್ಯವಾಗಿ ಬಾಮೊಣರನ್ನು ಹಿಂದೂ ಧರ್ಮದಿಂದ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ ಬ್ರಾಹ್ಮಣ ಸಮುದಾಯದ ಮತಾಂತರಿಗಳೆಂದು ಒಪ್ಪಿಕೊಳ್ಳಲಾಗುತ್ತದೆ. ಕರಾವಳಿ ಕರ್ನಾಟಕದ (ಕೆನರಾ) ಬಾಮೊಣರು ಗೋವಾ ಮೂಲದ ಉಚ್ಚ ಜಾತಿಯ ಸಾರಸ್ವತ ಮತ್ತು ಶೆಣ್ವಿ ಸಮುದಾಯದಿಂದ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡು, ಯುದ್ಧ, ಇಂಕ್ವಿಜೀಷನ್ (ಧರ್ಮವಿಚಾರಣೆ) ಬರಗಾಲಗಳಂತಹ ಅನೇಕ ಕಾರಣಗಳಿಗಾಗಿ ಕೆನರಾ ಜಿಲ್ಲೆಗೆ ವಲಸೆ ಬಂದಿದ್ದಾರೆ. ಇವರಲ್ಲಿ ಕೆಲವರು ತಮ್ಮ ಹಿಂದಿನ ಅಡ್ಡ ಹೆಸರುಗಳಾದ ಪ್ರಭು, ಪೈ, ಕಾಮತ್, ನಾಯಕ್, ಶೆಣೈ ಇತ್ಯಾದಿಗಳನ್ನು ಇನ್ನೂ ಉಳಿಸಿಕೊಂಡಿದ್ದಾರೆ. ಸಾಂಪ್ರದಾಯಿಕವಾಗಿ ಬಾಮೊಣರು ಬೇರೆಯವರಿಂದ ಆಹಾರವನ್ನು ಸ್ವೀಕರಿಸುವುದಿಲ್ಲ ಮತ್ತು ಜಾತಿಯಲ್ಲಿಯೇ ಮದುವೆ ಮಾಡಿಕೊಡುವ ಪದ್ಧತಿಯನ್ನು ಕಟ್ಟುನಿಟ್ಟಿನಿಂದ ಪಾಲಿಸುತ್ತಾರೆ. ಮದುವೆಯಂತಹ ವಿಶೇಷ ಸಂದರ್ಭಗಳಲ್ಲಿ ಬಾಮೊಣರೊಂದಿಗೆ ಕೆಳಜಾತಿಯ ಕ್ರೈಸ್ತರಿಗೆ ಕೂಡಾ ಊಟ ನೀಡಲಾಗುತ್ತದೆ. ಒಂದೇ ಪಂಕ್ತಿಯಲ್ಲಲ್ಲ, ಜಾತಿ ವಿಭಿನ್ನತೆಯನ್ನು ತೋರುವ ಅಡ್ಡ ಪಂಕ್ತಿಯಲ್ಲಿ.

### ೪.೧೧.೧.೨. ಚರೊಡಿ

ಸಾಮಾನ್ಯವಾಗಿ ಚರೋಡಿಗಳನ್ನು ಹಿಂದೂ ಕ್ಷತ್ರಿಯ ಜಾತಿಯಿಂದ ಮತಾಂತರ ಹೊಂದಿವರೆಂದು ನಂಬಲಾಗುತ್ತದೆ. ಈ ವಾದದ ಕುರಿತು ಸ್ಪಷ್ಟ ಒಪ್ಪಿಗೆ ಇಲ್ಲ. ಕೆಲವು ವಿದ್ವಾಂಸರ ಅಭಿಪ್ರಾಯದ ಪ್ರಕಾರ ಇವರು ಕೂಡಾ ಮೂಲತಃ ಬ್ರಾಹ್ಮಣ ಸಮುದಾಯದವರಾಗಿದ್ದು, ಮಹಾರಾಷ್ಟ್ರದ 'ಕರಾಡ್' ಪ್ರದೇಶದವರದ್ದರಿಂದ ಇವರನ್ನು 'ಕರಾಡಿ'ಗಳೆಂದು ಸಂಬೋಧಿಸುತ್ತಿದ್ದರು. ಆದರೆ ಪೋರ್ಚುಗೀಸರು ಅವರನ್ನು 'ಚರಾಡಿ'ಗಳೆಂದು ಕರೆಯುತ್ತಿದ್ದರು ಏಕೆಂದರೆ ಪೋರ್ಚುಗೀಸ್ ಭಾಷೆಯಲ್ಲಿ 'ಕ' ಅಕ್ಷರದ ಬಳಕೆ ಇಲ್ಲ, ಆದುದರಿಂದ 'ಕ'ದ ಬದಲು 'ಚ' ಬಳಕೆಯಾಗಿ 'ಚರಾಡಿ' ಅಥವಾ 'ಚರೊಡಿ'ಯಾಗಿದೆ.

### ೧.೧೨.೧.೩. ಸುದಿರ್

ಸುದಿರ್‌ಗಳು, ಬಾಮೊಣ್ ಮತ್ತು ಚರೊಡಿಗಳಿಗೆ ಹೋಲಿಸಿದರೆ ಕೆಳ ಸಮಾಜೋ –ಆರ್ಥಿಕ ಮಟ್ಟವನ್ನು ಹೊಂದಿದ್ದಾರೆ. ಸುದಿರ್‌ಗಳು ಸೇವಾ ವೃತ್ತಿಯಲ್ಲಿ ಕಾರ್ಮಿಕರು, ಕೃಷಿ ಕಾರ್ಮಿಕರು ಮತ್ತು ಕುಶಲಕರ್ಮಿಗಳಾಗಿರುತ್ತಾರೆ. ವೃತ್ತಿಯನ್ನು ಅನುಸರಿಸಿ ಇವರಲ್ಲಿ ಸೊನಾರ್ (ಅಕ್ಕಸಾಲಿಗ), ಕಮಾರ್ (ಕಮ್ಮಾರ), ಸುತರ್ (ಬಡಗಿ), ಕುಂಬಾರ್ (ಕುಂಬಾರ), ಗಾಣೆಕಾರ( ಗಾಣಿಗ), ಮಹಲಿ (ಕ್ಷೌರಿಕ), ಖಾರ್ವಿ (ಬೆಸ್ತ), ಮೊಡ್ವಾಳ್ (ಮಡಿವಾಳ) ಮುಂತಾದ ಉಪ ಗುಂಪುಗಳಿವೆ.

### ೧.೧೨.೧.೪. ಗೌಡಿ

ದಕ್ಷಿಣ ಕನ್ನಡದಲ್ಲಿ ಸಾಮಾನ್ಯವಾಗಿ ಸಾಂಸ್ಕೃತಿಕವಾಗಿ ಮತ್ತು ವೃತ್ತಿಪರವಾಗಿ ಕೆಳ ಸಮಾಜೋ-ಆರ್ಥಿಕ ಮಟ್ಟವನ್ನು ಹೊಂದಿರುವ ಗೌಡಿಗಳು ನದಿ ದಡದಲ್ಲಿ ಅಥವಾ ಸಮುದ್ರ ಕಿನಾರೆಯಲ್ಲಿ ವಾಸಿಸುತ್ತಾರೆ. ಇವರು ಮೂಲತಃ ಮೀನುಗಾರ ಸಮುದಾಯದವರು ಎಂದು ನಂಬಲಾಗುತ್ತದೆ.

### ೧.೧೨.೧.೫. ನವಕ್ರೈಸ್ತರು

ಈ ನಾಲ್ಕು ಪಂಗಡಗಳನ್ನು ಬಿಟ್ಟು, ವಿಭಿನ್ನ ಕಾರಣಗಳಿಗಾಗಿ 'ನೊವೆ ಕ್ರಿಸ್ತಾಂವ್' ಅರ್ಥಾತ್ 'ನವಕ್ರೈಸ್ತರು' ಎಂಬ ಪಂಗಡವೊಂದಿದೆ. ಇವರು ೨೦ನೇ ಶತಮಾನದ ಪ್ರಾರಂಭದ ದಶಕಗಳಲ್ಲಿ ಮತ್ತು ಆಮೇಲೆ ಕ್ರೈಸ್ತ ಧರ್ಮ ಸ್ವೀಕರಿಸಿದ ಕ್ರೈಸ್ತರು. ಇವರಲ್ಲಿ ಸಾಮಾನ್ಯವಾಗಿ ಹರಿಜನರು, ಕೊರಗರು ಮತ್ತು ಬುಡಕಟ್ಟು ಜನರು ಸೇರಿದ್ದಾರೆ. ಕ್ರೈಸ್ತಮತ ಸ್ವೀಕಾರದ ನಂತರ ಇವರನ್ನು ಮುಖ್ಯವಾಹಿನಿಯಲ್ಲಿ ಅಂದರೆ ಸಾಂಸ್ಕೃತಿಕವಾಗಿ ಪ್ರಬಲವಾಗಿರುವ ಜಾತಿಯನ್ನೊಳಗೊಂಡ ಚರ್ಚಿನಲ್ಲಿ ಸೇರಿಸಿಕೊಳ್ಳುವುದು

ಕಷ್ಟದಾಯಕವಾಯಿತು. ಇದೇ ವೇಳೆ ಅವರ ಜನರಿಗೆ ಅಥವಾ ಮತಾಂತರ ಹೊಂದದ ಅವರ ಜಾತಿಯವರಿಗೆ ಅವರನ್ನು ಸೇರಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಆದುದರಿಂದ ಇವರಿಗಾಗಿಯೇ ಹೊಸ ವಾಸಸ್ಥಾನಗಳನ್ನು ಅಥವಾ ಕಾಲೋನಿ ನಿರ್ಮಿಸಿ ಅವರ ಪುನರ್ವಸತೀಕರಣ ನಡೆಸಬೇಕಾಗಿ ಬಂತು. ಇಂತಹ ಕಾಲೋನಿಗಳನ್ನು ನಾರಾವಿ, ಅರ್ವಾ, ಅಲಂಗಾರ್, ಬದ್ಯಾರ್, ಬೆಳ್ತಂಗಡಿ, ಮಡಂತ್ಯಾರು, ಪಾವೂರು, ಮಂಜೇಶ್ವರ, ಜೆಪ್ಪು ಮತ್ತು ಇತರ ಪ್ರದೇಶಗಳಲ್ಲಿ ಈಗಲೂ ಕಾಣುತ್ತೇವೆ. ನವಕ್ರೈಸ್ತರು ಕೆಲವು ತೊಂದರೆಗಳನ್ನು ಎದುರಿಸಿದ್ದಾರೆ. ಜಾತಿ ವ್ಯವಸ್ಥೆಯಿಂದಾಗಿ, ಓರ್ವ ಕ್ರೈಸ್ತ ಧರ್ಮ ಸ್ವೀಕರಿಸಿದ ಬಳಿಕ ಸಾಮಾಜಿಕವಾಗಿ ಜಾತಿಯಿಂದ ಬಹಿಷ್ಕೃತನಾಗುತ್ತಾನೆ. ಅವನು ತನ್ನ ಜಾತಿಯಲ್ಲಿ ಮದುವೆಯಾಗುವಂತಿಲ್ಲ. ಅವರ ಯಾವುದೇ ಸಾಮಾಜಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತಿಲ್ಲ. ಎರಡನೆಯದಾಗಿ ಅವಜ್ಞೆಯಿಂದ ಮತ್ತು ಇತರ ಉದ್ದೇಶಗಳಿಂದ, ಈ ಮತಾಂತರಿಗಳ ಕುರಿತು ಇತರ ಕ್ರೈಸ್ತರು ಪೂರ್ವಾಗ್ರಹಗಳನ್ನು ಹೊಂದಿದ್ದಾರೆ. ಅವರು ಮತಾಂತರಿಗಳನ್ನು ಸಾಮಾಜಿಕ ಸ್ಥಿತಿಯಲ್ಲಿ ಕೆಳಗಿನವರಾಗಿ ಪರಿಗಣಿಸಿದ್ದಾರೆ. ಆದ್ದರಿಂದ ಅವರೊಂದಿಗೆ ಮುಕ್ತವಾಗಿ ಬೆರೆಯುವುದಿಲ್ಲ. ಅವರೊಂದಿಗೆ ಮದುವೆ ಸಂಬಂಧವನ್ನು ನಡೆಸಲು ಇಷ್ಟಪಡುವುದಿಲ್ಲ. ಇದರ ಪರಿಣಾಮವಾಗಿ ಕ್ರೈಸ್ತ ಮತ ಸ್ವೀಕರಿಸಿದವರು ಇತರ ಕ್ರೈಸ್ತರೊಂದಿಗೆ ಬೆರೆಯಲು ಮತ್ತು ತಮ್ಮ ಹಿಂದಿನ ಜಾತಿ ಜನರೊಂದಿಗೆ ಸೇರಲು ನಾಚಿಕೆ ಪಡುತ್ತಾರೆ. ಈ ಬಡ ಕ್ರೈಸ್ತ ಮತ ಸ್ವೀಕರಿಸಿದರು ತಮ್ಮ ಹಿಂದಿನ ಆದಾಯ ಮೂಲಗಳನ್ನು ಕೂಡಾ ಕಳೆದುಕೊಂಡಿದ್ದಾರೆ. ಇನ್ನೊಂದು ದಿಕ್ಕಿನಲ್ಲಿ ನವಕ್ರೈಸ್ತರ ಆಧ್ಯಾತ್ಮಿಕ ಮತ್ತು ನೈತಿಕ ಸ್ಥಿತಿಯೂ ಬಹಳ ಕೆಳಸ್ತರದಲ್ಲಿದೆ. ಜಾತಿ ವ್ಯತ್ಯಾಸಗಳಿಂದಾಗಿ ಕರಾವಳಿ ಕರ್ನಾಟಕದ ಕ್ರೈಸ್ತ ಸಮುದಾಯವನ್ನು ಅಖಂಡವೆಂದು ಪರಿಗಣಿಸಲು ಸಾಧ್ಯವಿಲ್ಲ.[೧೩೯] ೧೯ನೇ ಶತಮಾನದ ಕೊನೆಯವರೆಗೆ ಕ್ರೈಸ್ತರೂ ಇನ್ನೂ ಈ ಜಾತಿ ವ್ಯವಸ್ಥೆಯನ್ನು ಅನುಸರಿಸಿದಂತೆ ಕಂಡು ಬರುತ್ತದೆ. ಯೇಸು ಸಭೆಯ ಫಾ। ದೇವದತ್ತಾ ಕಾಮತ್‌ರವರು ೧೯ನೇ ಶತಮಾನದ ಪದ್ರಾವದೊ - ಪ್ರೊಪಗಾಂಡ ಸಂಘರ್ಷಕ್ಕೆ ಅವರಲ್ಲಿ ಹಿಂದಿದ್ದ ಜಾತಿ ವೈಷಮ್ಯವನ್ನು ಕಾರಣವಾಗಿಸಿದ್ದಾರೆ.[೧೪೦] ಈ ಪ್ರತಿಭಟನೆಯನ್ನು ಬೆಂಬಲಿಸಿದವರಲ್ಲಿ ವ್ಯಾಪಕವಾಗಿದ್ದವರು ಬಾಮೊಣ್ ಮತ್ತು ಚಾರೊಡಿಗಳೆಂದು ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ೧೯ನೇ ಶತಮಾನ ಕೊನೆಗೊಳ್ಳುವಷ್ಟರಲ್ಲಿ ಜಾತಿ ಭೇದಗಳು ನಿಧಾನವಾಗಿ ಮಾಯವಾಗತೊಡಗಿದವು ಮತ್ತು ಬಾಮೊಣರನ್ನು ಹೊರತುಪಡಿಸಿ ಉಳಿದವರಲ್ಲಿ ಮದುವೆ ಸಂಬಂಧಗಳು ನಡೆಯತೊಡಗಿದವು. ಇದು ನಿಧಾನವಾಗಿ ಮಾಯವಾದುದಕ್ಕೆ ಕ್ರೈಸ್ತ ಮತದ ನಿಯಮಗಳು, ದಿವ್ಯ ಬಲಿಪೂಜೆ ಮತ್ತು ಮತ ಸಂಸ್ಕಾರ ನೀಡುವಲ್ಲಿ ಜಾತಿ ಭೇದದ ನಿರಾಕರಣೆ ಇತ್ಯಾದಿಗಳು ಕಾರಣಗಳಾಗಿವೆ. ಜಾತಿಯನ್ನು ಆಧರಿಸಿದ ಬಹಳ ಹಿಂದಿನ ಕಾಲದ ತಾರತಮ್ಯದ ಪದ್ಧತಿಗಳಿಗೆ ಇಂದು ಬಹಿರಂಗವಾಗಿ ಒತ್ತು ನೀಡಲಾಗುತ್ತಿಲ್ಲ. ಜಾತಿಯು ಆಹಾರ ಪದ್ಧತಿಗಳು, ಉಡುಪಿನ ವಿನ್ಯಾಸಗಳು, ಧಾರ್ಮಿಕ ಅಥವಾ ಆಚರಣೆಯ

ಪ್ರಾಮುಖ್ಯತೆ ಇತ್ಯಾದಿ ಲಕ್ಷಣಗಳಲ್ಲಿ ವ್ಯಕ್ತಗೊಳ್ಳುವುದಿಲ್ಲ. ಆದರೆ ಬೇರೆ ಕೆಲವು ವಿಚಾರಗಳಲ್ಲಿ ಅಂದರೆ ಅಂತರ್ಜಾತಿ ವಿವಾಹಗಳು, ಉಪಭಾಷೆ, ಕುಟುಂಬ ನಿಯಮಗಳು ಇತ್ಯಾದಿಗಳಲ್ಲಿ ವ್ಯಕ್ತಗೊಳ್ಳುತ್ತದೆ. ಆದುದರಿಂದ ಸಾಮಾಜಿಕ, ಆರ್ಥಿಕ, ತಾತ್ವಿಕ ಮತ್ತು ರಚನಾತ್ಮಕ ಬದಲಾವಣೆಗಳ ಹೊರತಾಗಿಯೂ ಜನಾಂಗೀಯ ಗುರುತಿಸುವಿಕೆ, ಜನಾಂಗೀಯ ಭಾವನೆ, ಜನಾಂಗೀಯ ಪ್ರಜ್ಞೆ ಅಥವಾ ಜನಾಂಗೀಯ ಒಗ್ಗಟ್ಟು ಇನ್ನೂ ಉಳಿದಿದೆ.

### ೪.೧೨. ಕಥೋಲಿಕ ಮಿಶನ್ನಿನಿಂದ ಉಪೇಕ್ಷಿಸಲ್ಪಟ್ಟವರ ಸೇವೆ

ಯೇಸುಸಭೆಯ ಆದ್ಯ ಮಿಶನರಿಗಳು ದಕ್ಷಿಣ ಕನ್ನಡದಲ್ಲಿ ಕೆಳವರ್ಗದವರು ಅಥವಾ ಜಾತಿ ಭ್ರಷ್ಟರು ಎಂದು ಪರಿಗಣಿಸಲ್ಪಡುತ್ತಿದ್ದ ಪರಾಯ ಹಾಗೂ ಕೊರಗರ ಏಳಿಗೆಗಾಗಿ ಶ್ರಮಿಸಿದರು. ಯೇಸು ಸಭೆಯ ಧರ್ಮಗುರುಗಳು ಕೇವಲ ಸ್ಥಿತಿವಂತ ಮೇಲ್ವರ್ಗದವರಿಗಾಗಿ ಮಾತ್ರ ದುಡಿದು ಸುಮ್ಮನಾಗಲಿಲ್ಲ. ಏಕೆಂದರೆ ಯೇಸುಸಭೆಯವರನ್ನು ಮಂಗಳೂರಿಗೆ ಕರೆಯಿಸಿದ್ದು ಉನ್ನತ ಶಿಕ್ಷಣವನ್ನು ಜನರಿಗೆ ಕೊಡಲು. ದಕ್ಷಿಣ ಕನ್ನಡದಲ್ಲಿ ಧಾರ್ಮಿಕ ಕಾರ್ಯಗಳೊಂದಿಗೆ ಪ್ರೀತಿಯಿಂದ ವಂಚಿತರಾದವರಿಗೆ ಹಾಗೂ ಉಪೇಕ್ಷಿಸಲ್ಪಟ್ಟವರ ಉದ್ಧಾರಕ್ಕಾಗಿ ಫಾ। ಅಂಜಲೊ ಮಾಫೈ, ಫಾ। ಡೆನಿಸ್ ಕೊಯಿಲೊ, ಫಾ। ಇಮ್ಯಾನ್ಯುಯೆಲ್ ಕೋರ್ಟಿ, ಫಾ। ಅಂಜಲೊ ಗವಿರಾಘಿ, ಫಾ। ಅಲೆಕ್ಸಾಂಡರ್ ಕಮಿಸಾ ಅಲ್ಲದೆ ಸೆಕ್ಯುಲರ್ ಧರ್ಮಗುರುಗಳಾದ ಫಾ। ಆರ್. ಡಿ. ಸಿಕ್ವೇರಾ ಮತ್ತು ಫಾ। ಎಲಿಯಾಸ್ ಪಿ. ಡಯಾಸ್ ಮುಂತಾದ ಧರ್ಮಗುರುಗಳು ದುಡಿದಿದ್ದಾರೆ.

ಮಾಫೈಯವರ ಅಸಾಮಾನ್ಯ ಕಲಿಕಾ ಸಾಮರ್ಥ್ಯದಿಂದ ಕೊಂಕಣಿಯನ್ನು ಕಲಿತು ಶ್ರೀಸಾಮಾನ್ಯರೊಂದಿಗೆ ಸಂವಹನದಲ್ಲಿ ತೊಡಗಿದರು. ಕೂಳೂರು ಮಿಶನ್‌ನ ಸ್ಥಾಪನೆಯಾದ ಬಳಿಕ ಜೋಪಡಿಯಿಂದ ಜೋಪಡಿಗೆ ಅಲೆದು ಜನರ ಕಷ್ಟ- ನೋವುಗಳನ್ನು ಅರಿತುಗೊಂಡರು. ಮಾಫೈಯವರ ಸೇವಾ ಕಾರ್ಯವನ್ನು ಗುರುತಿಸಿದ ಕೂಳೂರಿನ ಮುಗ್ಧ ಜನರು ಈ ರೀತಿ ಪ್ರತಿಕ್ರಿಯಿಸುತ್ತಿದ್ದರು: ನಾವು ಮನಪೂರ್ವಕವಾಗಿ ನಿಮ್ಮೊಂದಿಗಿರುತ್ತೇವೆ. ಏಕೆಂದರೆ ನೀವು ನಮ್ಮನ್ನು ಪ್ರೀತಿಸುತ್ತೀರಿ. ನಮ್ಮ ಆತ್ಮಗಳನ್ನು ಹೇಗೆ ರಕ್ಷಿಸಬೇಕೆಂದು ಕಲಿಸಿದವರು ನೀವು. ನೀವು ಯಾವಾಗಲೂ ನಮ್ಮೊಂದಿಗೆ ಬಂದು ನೆಲೆಸಿರಿ ಇಲ್ಲದಿದ್ದರೆ ನಮ್ಮ ಮಕ್ಕಳು ಕೆಟ್ಟು ಹೋಗುತ್ತಾರೆ.[೧೪೧] ಇದೇ ತೆರನಾದ ಪ್ರತಿಕ್ರಿಯೆ ಉಳ್ಳಾಲ ಪ್ರದೇಶದ ಜನರಿಂದಲೂ ಲಭಿಸಿತು. ಫಾ। ಮಾಫೈಯವರು ೧೮೯೮ರಲ್ಲಿ ಕಾಸರಗೋಡಿನ ನೆಲ್ಲಿಕುಂಜೆ ಎಂಬಲ್ಲಿಗೆ ತೆರಳಿ ಸಣ್ಣ ಜೋಪಡಿಯೊಂದರಲ್ಲಿ ಶಾಲೆಯೊಂದನ್ನು ತೆರೆದು ತಮ್ಮ ಸೇವಾ ಕಾರ್ಯವನ್ನು ಆರಂಭಿಸಿದರು. ಅಂತೆಯೇ, ಅವರು ತಮ್ಮ ಕಡೆಯ ದಿನಗಳನ್ನು ಅಲ್ಲಿಯೇ ಕಳೆದು ಮಲೇರಿಯ ರೋಗಕ್ಕೆ ತುತ್ತಾಗಿ ಸಾವನಪ್ಪಿದರು.[೧೪೨]

ಭಾರತದ ಯೇಸು ಸಭೆಗೆ ಮಂಗಳೂರಿನಿಂದ ಅಭಿಷಿಕ್ತರಾದ ಮೊದಲ ಧರ್ಮಗುರು ಎಂಬ ಹೆಗ್ಗಳಿಕೆಯ ಫಾ। ಡೆನಿಸ್ ಕೊಯಿಲೊರವರು, ಫಾ। ಮಾಫ್ಫೆ ಅವರ ಸೇವಾ ಕಾರ್ಯವನ್ನು ಮೊದಲು ನೆಲ್ಲಿಕುಂಜೆಯಲ್ಲಿ ನಂತರ ಬಜ್ಪೆಯಲ್ಲಿ ಮುಂದುವರಿಸಿದರು. ಬಜ್ಪೆಯಿಂದ ಮುಂದೆ ಸುರತ್ಕಲ್‌ಗೆ ಬಂದಾಗ ಬ್ರಾಹ್ಮಣರ ತೀವ್ರ ತೆರನಾದ ಪ್ರತಿರೋಧವನ್ನು ಎದುರಿಸಬೇಕಾಯಿತು. ಇಲ್ಲಿ ರೋಗಿಗಳ ಭೇಟಿ, ಮಕ್ಕಳಿಗಾಗಿ ಶಾಲೆಯ ಸ್ಥಾಪನೆ, ಸರ್ಕಾರ ಮತ್ತು ಪ್ರಭಾವಿ ಹಿಂದೂಗಳ ವಿರುದ್ಧ ಬಡವರು ನಡೆಸುತ್ತಿದ್ದ ಹೋರಾಟಗಳಲ್ಲಿ ಮಧ್ಯಸ್ಥಿಕೆ ವಹಿಸುವ ಕಾರ್ಯದಲ್ಲಿ ಸಕ್ರೀಯರಾಗಿದ್ದರು. ಆದರೆ ಫಾ। ಡೆನಿಸ್ ಅವರ ಸುರತ್ಕಲ್ ಮಿಶನ್ ಅಷ್ಟು ಫಲಪ್ರದವಾಗಲಿಲ್ಲ. ಏಕೆಂದರೆ ಅವರು ಜೆಪ್ಪುವಿಗೆ ವರ್ಗಾವಣೆಗೊಂಡಾಗ ಅವರ ಮೂಲಕ ಕ್ರೈಸ್ತಮತ ಸ್ವೀಕರಿಸಿದವರೆಲ್ಲರೂ ಸುರತ್ಕಲನ್ನು ತೊರೆದರು.[೧೪೩]

ಫಾ। ಪೌಸ್ತಿನೊ ಕೋರ್ಟಿ ಮತ್ತು ಫಾ। ಅಲೆಕ್ಸಾಂಡರ್ ಕಮಿಸಾ ಎಂಬ ಇಬ್ಬರು ಆದ್ಯ ಯೇಸು ಸಭೆಯ ಮಿಶನರಿಗಳು ಪರಾಯ ಹಾಗೂ ಕೊರಗ ಸಮುದಾಯದವರಿಗಾಗಿ ದುಡಿದರು. ಸ್ವಿಸ್ ಪ್ರಜೆಯಾದ ಫಾ। ಕೋರ್ಟಿಯವರು ೧೮೮೪ರಲ್ಲಿ ಮಂಗಳೂರಿಗೆ ಆಗಮಿಸಿದ ಬಳಿಕ ಫಜೀರ್ ಹಾಗೂ ಹೊಸಬೆಟ್ಟುಗಳಲ್ಲಿ ಸಹಾಯಕರಾಗಿ ದುಡಿದು ೧೯೦೫ರಲ್ಲಿ ನಾರಾವಿಗೆ ತೆರಳಿದರು. ಪ್ರಾರಂಭದಲ್ಲಿ ನಾರಾವಿಯ ಜೈನರನ್ನು ಹಾಗೂ ಮೇಲ್ವರ್ಗದ ಹಿಂದೂಗಳನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಿಸಲು ಪ್ರಯತ್ನಿಸಿ ವಿಫಲವಾದರು. ತರುವಾಯ ಫಾ। ಕಾಮಿಸಾರವರ ಸಲಹೆಯ ಮೇರೆಗೆ ಫಾ। ಕೋರ್ಟಿಯವರು ತಮ್ಮ ಗಮನವನ್ನು ಪರಾಯದವರೆಡೆಗೆ ಹರಿಸಿದರು. ಫಾ। ಕಾನ್‌ಸ್ಟನ್ಸ್ ಲಿವೆನ್ಸ್‌ರವರ ಉಪೇಕ್ಷಿಸಲ್ಪಟ್ಟವರ ಉದ್ಧಾರ ಮಾಡಿ, ತರುವಾಯ ಮನ ಪರಿವರ್ತನೆ ಮಾಡುವ ವಿಧಾನವನ್ನು ಅನುಸರಿಸಿದರು. ಪರಿಣಾಮವಾಗಿ, ಮೇಲ್ವರ್ಗದ ಹಿಂದೂಗಳು ಇವರನ್ನು ಜರೆದು 'ಮನ್ಸೆರೆ ಗುರು' (ಪರಾಯಗಳ ಗುರು) ಎಂಬ ಬಿರುದು ನೀಡಿದರು.

ಫಾ। ಕೋರ್ಟಿಯವರು ಮೂಲ ಕ್ರೈಸ್ತರ ವಿರೋಧದಿಂದಾಗಿ ಚಾಪಲ್(ಚರ್ಚ್)ನಲ್ಲಿ ಪರದೆಯನ್ನು ಹಾಕುವ ಮೂಲಕ ಅವರನ್ನು (ಪರಾಯ) ಪ್ರತ್ಯೇಕಿಸಿದರು. ಆದರೆ ಬಿಷಪ್ ಪೌಲ್ ಪೆರಿನಿಯವರ ನರೊಲ್ ಭೇಟಿಯ ಸಮಯದಲ್ಲಿ ವಿಭಜನೆಯನ್ನು ಖಂಡಿಸಿ ಪ್ರತ್ಯೇಕತೆಯನ್ನು ನಿಷೇಧಿಸಲಾಯಿತು. ಫಾ। ಕೋರ್ಟಿಯವರಿಗೆ ನಾರಾವಿಯಲ್ಲಿ ಸಹಾಯಕರಾಗಿ ಫಾ।ಅಂಜೆಲೊ ಗವಿರಾಘಿಯವರನ್ನು ಕಳುಹಿಸಿಕೊಟ್ಟರು. ಫಾ। ಗವಿರಾಘಿಯವರು ನಾರಾವಿಯಲ್ಲಿ ಮೊತ್ತ ಮೊದಲ ಪರಾಯ ಶಾಲೆಯನ್ನು ಆರಂಭಿಸಿ ಸರ್ಕಾರದ ಅನುಮೋದನೆ ದೊರೆಯುವವರೆಗೆ ತಮ್ಮ ಸ್ವಂತ ಖರ್ಚಿನಲ್ಲಿ ನಡೆಸಿದರು.[೧೪೪] ಇವರೂ ಸಹ ಚರ್ಚಿನೊಳಗೆ ಮೂಲ ಕ್ರೈಸ್ತರು ಹಾಗೂ ನವ ಕ್ರೈಸ್ತರ ನಡುವಿನ ಅಸಮಾನತೆಯನ್ನು ಹೋಗಲಾಡಿಸಲು ಶ್ರಮಿಸಿದರು. ಪರಾಯಗಳ ಸೇವೆಯನ್ನು ಮಾಡಲು

ಸಿಸ್ಟರ್ಸ್ ಆಫ್ ಚಾರಿಟಿ ಸಭೆಯವರನ್ನು ಆಹ್ವಾನಿಸಿ ಅವರಿಗಾಗಿ ೧೯೩೨ರಲ್ಲಿ ಸಣ್ಣ ಕಾನ್ವೆಂಟೊಂದನ್ನು ಕಟ್ಟಿಸಿದರು. ಅಲ್ಲದೆ, ಅವರು ಅರ್ವಾ, ಬದ್ಯಾರ್, ಅಗ್ರಾರ್, ಸಿದ್ಧಕಟ್ಟೆ, ಬಂಗಾಡಿ, ಬೆಳ್ತಂಗಡಿ, ಮಡಂತ್ಯಾರ್, ನಿರ್ಕಾಣ್ ಮತ್ತು ಮೂಡಬಿದ್ರೆಯಲ್ಲಿ ಸೇವೆಯನ್ನು ಸಲ್ಲಿಸಿದರು. ಗುಲಾಮರು ತಮ್ಮ ಜೈನ ಯಜಮಾನರನ್ನು ತೊರೆದು ಕಾಫಿ ತೋಟಗಳಿಗೆ, ಕೆಲಸಕ್ಕೆ ಹೋಗಲು ಸಲ್ಲಿಸಬೇಕಾದ ದಂಡವನ್ನು 'ಬರ್ಬಡ್ಡಿ' ಎನ್ನುತ್ತಿದ್ದರು. ಫಾ। ಕೋರ್ಟಿಯವರ ಪ್ರಯತ್ನದ ಫಲವಾಗಿ ಆ ಹೀನ ಪದ್ಧತಿಯನ್ನು ಸರ್ಕಾರವು ನಿಷೇಧಿಸಿತು.

ಮೂಡಬಿದರೆಯ ಆಲಂಗಾರ್ ಮಿಶನನ್ನೂ ಫಾ। ಕೋರ್ಟಿಯವರೇ ಪ್ರಾರಂಭಿಸಿದರು. ಅಸ್ಪೃಶ್ಯರಿಗಾಗಿ ಇವರು ಮಾಡಿದ ಸೇವೆಯನ್ನು ಗುರುತಿಸಿದ ಸರ್ಕಾರ ಇವರಿಗೆ ಕೈಸರ್-ಐ-ಹಿಂದ್ ಬಿರುದನ್ನು ನೀಡಿ ಗೌರವಿಸಿತು. 'ಮಲ್ಲಗುರು' (ದೊಡ್ಡ ಗುರುಗಳು)ಎಂದೇ ಖ್ಯಾತರಾಗಿದ್ದ ಫಾ। ಕೋರ್ಟಿಯವರು ಶೋಷಣೆಯ ವಿರುದ್ಧ ಯಾವಾಗಲೂ ಧ್ವನಿ ಎತ್ತುತ್ತಿದ್ದರು.[೧೪೫] ಫಾ। ಆ್ಯಂಟನಿ ಝೀರೊ ಅವರು ದುರ್ಬಲ ಆರೋಗ್ಯದ ಹೊರತಾಗಿಯೂ ಫಾ। ಕೋರ್ಟಿಯವರ ಸಹಾಯಕರಾಗಿ ಸೇವೆ ಸಲ್ಲಿಸಿ ಕಲ್ಲಿಕೋಟೆಯಲ್ಲಿ ತಮ್ಮ ಕೊನೆಯುಸಿರೆಳೆದರು(೧೯೬೫).[೧೪೬]

ಮೇಲ್ವರ್ಗದ ಹಿಂದೂಗಳ ವಿರುದ್ಧ ಗೋಡೆಯಂತೆ ನಿಂತು ಕೊರಗ ಸಮುದಾಯವನ್ನು ರಕ್ಷಿಸಿದ ಖ್ಯಾತ ಯೇಸುಸಭೆಯ ಮಿಶನರಿಯೇ ಫಾ। ಅಲೆಗ್ಸಾಂಡರ್ ಕಮಿಸಾ ಅಥವಾ 'ಬಿಳಿಯ ಕೊರಗ'. ಅವರು ಪ್ರತ್ಯೇಕವಾದ ಮಿಶನನ್ನು ಸ್ಥಾಪಿಸಿದ್ದು ಮುಖ್ಯವಾಗಿ ಕೊರಗರನ್ನು ಅವರ ಜೋಪಡಿ ಮತ್ತು ಫೀಲ್ಡ್‌ಗಳಲ್ಲಿ ಕಂಡು, ಅವರಿಗಾಗಿ ವಸಾಹತು (ಕಾಲೋನಿ)ವನ್ನು ಸ್ಥಾಪಿಸುವುದಕ್ಕಾಗಿ. ಕೊರಗರ ಅಗತ್ಯಗಳ ಬಗ್ಗೆ ತಿಳಿಸಲಾಗಿ ಬ್ರಿಟಿಷ್ ಕಲೆಕ್ಟರ್ ೪೦೦ ಏಕರೆಗಳ ಅರಣ್ಯ ಪ್ರದೇಶವನ್ನು ೧೦ ವರ್ಷಗಳಿಗೆ ಯಾವುದೇ ತೆರಿಗೆ ಇಲ್ಲದೆ ನೀಡಿದರು. ಫಾ। ಕಮಿಸಾ ಅವರು ಹಲವು ಪ್ರದೇಶಗಳನ್ನು ಯೋಚಿಸಿದ್ದರೂ ಅವರಿಗೆ ಮರುಭೂಮಿ ಎಂದು ಪರಿಗಣಿಸಲ್ಪಡುತ್ತಿದ್ದ ಭೂಮಿಯನ್ನು ಕಾಸರಗೋಡಿನ ಪಾವೂರಿನಲ್ಲಿ ನೀಡಿದ್ದರಿಂದ ಅಲ್ಲಿಯೇ ೧೩ ಜೂನ್ ೧೯೧೩ರಲ್ಲಿ ವಸಾಹತುವೊಂದನ್ನು ಸ್ಥಾಪಿಸಿದರು. ಪ್ರಾರ್ಥನೆಗೆಂದು ಸಣ್ಣ ಸನ್ಯಾಸಿ ಮಠ ಸ್ಥಾಪಿಸಿದ್ದ ಅವರು ೩೦ ವಿದ್ಯಾರ್ಥಿಗಳನ್ನೊಳಗೊಂಡ ಶಾಲೆಯೊಂದನ್ನು ಹಿಲರಿ ಸಿಕ್ವೇರಾ ಎಂಬ ಅಧ್ಯಾಪಕರ ನೆರವಿನಿಂದ ಸ್ಥಾಪಿಸಿದರು. ನಂತರ ಪುತ್ತೂರಿನಿಂದ ೨೦ ಮೈಲಿ ದೂರದಲ್ಲಿರುವ ಸುಳ್ಯದಲ್ಲಿ ಇನ್ನೊಂದು ವಸಾಹತುವನ್ನು ೧೯೩೬ರಲ್ಲಿ ಪರಾಯದವರಿಗಾಗಿ ಆರಂಭಿಸಿದರು. ಸುಳ್ಯದ ಕೊರಗ ಜನರ ಬಗ್ಗೆ ಹೆಮ್ಮೆ ಹಾಗೂ ಅಭಿಮಾನದಿಂದ ಫಾ। ಕಮಿಸಾರವರು ಹೀಗೆನ್ನುತ್ತಿದ್ದರು: ಎಲ್ಲಾ ಕಾರ್ಯಕ್ರಮಗಳಲ್ಲಿ ಯಾವಾಗಲೂ ಕೊರಗರೇ ಮೊದಲು. ಅವರನ್ನು ಕೆಲವೇ ವರ್ಷಗಳ ಹಿಂದೆ ಕಥೋಲಿಕ ಚರ್ಚಿನ ಬಳಿ ಸುಳಿಯಲೂ ಬಿಡುತ್ತಿರಲಿಲ್ಲ. ಈಗ ಬಲಿಪೂಜೆಯ

ಸಮಯದಲ್ಲಿ ಉದ್ದ ನಿಲುವಂಗಿ ಧರಿಸಿ ಪೀಠದ ಹುಡುಗರಾಗಿ (ಸಹಾಯಕರಾಗಿ) ಸೇವೆ ಸಲ್ಲಿಸುವುದು ಮಾತ್ರವಲ್ಲದೆ, ಎಲ್ಲರೂ ಒಟ್ಟು ಸೇರಿ ಪ್ರಾರ್ಥನೆಯನ್ನು ಓದುತ್ತಾರೆ, ಲ್ಯಾಟಿನ್ ಭಾಷೆಯಲ್ಲಿ ಹಾಡುತ್ತಾರೆ ಮತ್ತು ಉಳಿದೆಲ್ಲವನ್ನೂ ತಮ್ಮ ಸ್ಥಳೀಯ ಭಾಷೆ ತುಳುವಿನಲ್ಲಿ ಮಾಡುತ್ತಾರೆ. ಧಾರ್ಮಿಕ ನಂಬಿಕೆಯಲ್ಲಿ ಎಷ್ಟು ಆಳವಾಗಿ ಬೇರೂರಿದ್ದಾರೆಂದರೆ ಧರ್ಮಗುರುಗಳು ಚರ್ಚಿನಲ್ಲಿ ಇಲ್ಲದಿರುವಾಗಲೂ ಕೊರಗರೆಲ್ಲಾ ಒಟ್ಟು ಸೇರಿ ತುಳುವಿನಲ್ಲಿ ಪ್ರಾರ್ಥನೆ ಮತ್ತು ಹಾಡನ್ನು ಹಾಡುತ್ತಾರೆ.[೧೪೭] ಆದರೆ ದ್ವಿತೀಯ ಮಹಾಯುದ್ದದ ಸಮಯದಲ್ಲಿ ಕಮಿಸಾರವರನ್ನು ೧೯೪೦ರಲ್ಲಿ ಜೆಪ್ಪುವಿನಲ್ಲಿ ಹಾಗೂ ಫಾ। ಝುನೊಲಿನ್‌ರವರನ್ನು ಬೆಂಗಳೂರಿನಲ್ಲಿ ಕೂಡಿಟ್ಟಾಗ, ಮೂವರು 'ಒಲಿವೆತ್ ಸಹೋದರ'ರು[೧೪೮] ಇವರ ಸೇವೆಗಾಗಿ ಆಗಮಿಸಿದರೂ ಹೆಚ್ಚು ಪ್ರಯೋಜನವಾಗಲಿಲ್ಲ. ಫಾ। ಕಮಿಸಾರವರ ನಿರ್ಗಮನದ ಬಳಿಕ ಕೊರಗರು ಬೇಸಾಯದಲ್ಲಿ ಆಸಕ್ತಿ ಕಳೆದುಕೊಂಡು ವಸಾಹತುವನ್ನು ತೊರೆದು ದಿಕ್ಕಾ ಪಾಲಾದರು. ಫಾ। ಕಮಿಸಾರವರು ಕೊರಗರಿಗೆ ವಿದ್ಯೆಯನ್ನು ಕೊಡಲು ಸಾಧ್ಯವಾಗದಿದ್ದರೂ ಅವರ ಅಂತಸ್ತನ್ನು ಸ್ವಲ್ಪಮಟ್ಟಿಗೆ ಎತ್ತರಿಸುವಲ್ಲಿ ಸಫಲರಾದರು.[೧೪೯]

ಕೊಕ್ಕಡ ಮಿಶನನ್ನು ೧೯೧೯ರಲ್ಲಿ ಫಾ। ರೊಸಾರಿಯೊ ಡಿ. ಸಿಕ್ವೇರಾ ಎಂಬ ದೇಶೀ ಧರ್ಮಗುರುಗಳು ಆರಂಭಿಸಿ, ಆದಿ ದ್ರಾವಿಡರನ್ನು ಮತ ಪರಿವರ್ತನೆಗೊಳಿಸಿ ನೆರವನ್ನು ನೀಡಿದರು. ಕೊಕ್ಕಡದಲ್ಲಿ ಈಗಾಗಲೇ ಇದ್ದ ಶಾಲೆಗೆ ಕಟ್ಟಡವನ್ನು ಕಟ್ಟಿಸಿದರು. ಫಾ। ಲಾರೆನ್ಸ್ ಲೋಬೋರವರು ಕೊಕ್ಕಡ ಮಿಶನ್ ಕಾರ್ಯವನ್ನು ಸಾವಕಾಶವಾಗಿ ಮುಂದುವರಿಸಿ ಮತ ಪರಿವರ್ತನೆ ಆದವರ ಏಳಿಗೆಗಾಗಿ ಶ್ರಮಿಸಿದರು.[೧೫೦] ಮಿಶನರಿಗಳ ಯಶಸ್ಸಿಗೆ ಮುಖ್ಯ ಕಾರಣವೇನೆಂದರೆ ಅವರ ನಿಸ್ವಾರ್ಥ ಸೇವೆ, ಕಠಿಣ ಪರಿಶ್ರಮ, ಅವರ ವೇಳೆ, ಸಾಮರ್ಥ್ಯ (energy) ಹಣ ಮಾತ್ರವಲ್ಲ ಆರೋಗ್ಯವನ್ನೂ ಬಡ ಆದಿ ದ್ರಾವಿಡರ ಉದ್ಧಾರಕ್ಕಾಗಿ ಮೀಸಲಾಗಿಟ್ಟಿರುವುದು. ಯಜಮಾನರಿಂದ ನಿಷ್ಠೂರವಾಗಿ ನಡೆಸಿಕೊಳ್ಳುತ್ತಿದ್ದ ಆ ದುಃಖಿ ವರ್ಗ, ಮಿಶನರಿಗಳ ಸೇವಾ ಕಾರ್ಯದ ಫಲವಾಗಿ ಶುಚಿಯಾದ ಮೈ ತುಂಬಾ ಬಟ್ಟೆ ಉಟ್ಟು ತಲೆ ಎತ್ತಿ ನಡೆಯುವ ಹಾಗೆ ಕ್ರೈಸ್ತ ಧರ್ಮ ಅವರಿಗೊಂದು ಅವಕಾಶವನ್ನು ಕಲ್ಪಿಸಿತು. ಪ್ರಾರಂಭದಲ್ಲಿ ಈ ಆದಿ ದ್ರಾವಿಡರ ಮಕ್ಕಳನ್ನು ಅವರ ದುಸ್ಥಿತಿಯಿಂದ ಪಾರು ಮಾಡಲು ನಾನಾ ಕಾರಣಗಳಿಂದ (ಪೂರ್ವಾಗ್ರಹ, ತಾರತಮ್ಯ ಹಾಗೂ ಅಭದ್ರತೆ) ಕಷ್ಟವಾದರೂ ಕ್ರಮೇಣ ಶಾಲೆಗೆ ಬರುವವರ ಸಂಖ್ಯೆ ಹೆಚ್ಚಾಯಿತು. ಶಿಕ್ಷಣದಿಂದ ಸಾಮಾಜಿಕ ಸ್ಥಿತಿ ಉತ್ತಮ ಪಡಿಸಲು ಸಾಧ್ಯವಾಯಿತು. ಸಮರ್ಥ ಅಧ್ಯಾಪಕರ ಕೊರತೆಯಿಂದಾಗಿ ವಿದ್ಯಾರ್ಥಿಗಳಲ್ಲಿ ಹೇಳಿಕೊಳ್ಳುವಂತ ಪ್ರಗತಿ ಆಗದಿದ್ದರೂ, ಹಲವರು ಪ್ರಾದೇಶಿಕ ಭಾಷೆಯಲ್ಲಿ ಓದಲು ಮತ್ತು ಬರೆಯಲು ಕಲಿತುಕೊಂಡರು.

“ಭಕ್ತಿ ಎಂದರೆ ಕೇವಲ ಆರಾಧನೆ ಮತ್ತು ಧಾರ್ಮಿಕ ಶಾಸ್ತ್ರವಿಧಿ ಹಾಗೂ ಸಂಪ್ರದಾಯದ ಪಾಲನೆ ಮಾತ್ರವಲ್ಲ ಮನುಕುಲದ ಸೇವೆಯೂ ಭಕ್ತಿಯೇ ಎಂಬುದನ್ನು ಭಾರತೀಯರಿಗೆ ತೋರಿಸಿಕೊಟ್ಟವರು ಕ್ರೈಸ್ತ ಮಿಶನರಿಗಳು” ಎಂಬ ಅಂಶವನ್ನು ಶ್ರೀ ವಿರೇಂದ್ರ ಹೆಗ್ಗಡೆಯವರ ಭಾಷಣವನ್ನು ಉಲ್ಲೇಖಿಸಿ ‘ಇಂಡಿಯಾಸ್ ಸೆಕ್ಯೂಲರ್ ಸ್ಪೀರಿಟ್ ಸ್ಟ್ರೆಸ್ಡ್’ ಎಂಬ ತಲೆಬರಹದಡಿಯಲ್ಲಿ ‘ ದ ಟೈಮ್ಸ್ ಆಫ್ ಇಂಡಿಯಾ’ದವರು ಬರೆಯುತ್ತಾರೆ.[೧೫೧] ಶಿಕ್ಷಣ ಎಂದರೆ ಮನಸ್ಸಿನ ಬಿಡುಗಡೆ, ಭಯರಹಿತ ಮನಸ್ಸಿನ ನಿರ್ಮಾಣ. ಧಾರ್ಮಿಕ ಸ್ವಾತಂತ್ರ್ಯದಿಂದಾಗಿ ಪರಸ್ಪರ ಕಲೆತು ತಮಗಿಂತಲೂ ಹೀನ ಸ್ಥಿತಿಯಲ್ಲಿರುವ ತಮ್ಮ ಸಹೋದರರ ಬಗ್ಗೆ ಚಿಂತಿಸಲು ಆಸ್ಪದ ನೀಡಿದೆ. ಧಾರ್ಮಿಕ ಸ್ವಾತಂತ್ರ್ಯ ಕ್ರೈಸ್ತರಿಗೆ ಕಲಿಸಿದ್ದು ಸಾರ್ವತ್ರಿಕ ಭ್ರಾತೃತ್ವ, ಘನತೆ ಮತ್ತು ಸರ್ವರ ಸ್ವಾತಂತ್ರ್ಯ. ಇದಕ್ಕೆ ಸಾಕ್ಷಿಯಾಗಿ ಬಡವರಿಗೆ ಹಾಗೂ ಅಸ್ಪೃಶ್ಯರಿಗೆ (ಹೊರಗಿಟ್ಟವರಿಗೆ) ಚರ್ಚಿನಲ್ಲಿ ಪ್ರವೇಶ ಕಲ್ಪಿಸಲಾಯಿತು. ಬಾಸೆಲ್ ಮಿಶನ್ ಹಾಗೂ ಯೇಸು ಸಭೆಯ ಮೂಲಕ ಕ್ರೈಸ್ತ ಸಭೆಗಳಿಗೆ ಸೇರಿಸಲ್ಪಟ್ಟವರು ಸಾಕಷ್ಟು ರೀತಿಯ ಬದಲಾವಣೆಯನ್ನು ಜೀವನದಲ್ಲಿ ಎದುರಿಸಿದರು. ಕಥೋಲಿಕ ಮತಾಂತರಿಗಳು ತಮ್ಮ ಹಿಂದಿನ ಪರಂಪರೆ ಹಾಗೂ ಸಂಪ್ರದಾಯದಿಂದ ಹೊರಬಂದರು. ಬಾಸೆಲ್ ಮಿಶನ್ನಿನ ಮತಾಂತರಿಗಳು ತಮ್ಮ ಮತಾಂತರ ಪೂರ್ವ ಪದ್ದತಿಗಳನ್ನು ಮುಖ್ಯವಾಗಿ ಜಾತಿ ಪದ್ದತಿ ಬಿಡುವಂತೆ ಒತ್ತಾಯಿಸಲಾಯಿತು. ಕ್ರೈಸ್ತ ಹುಟ್ಟು, ಮದುವೆ ಮತ್ತು ಸಾವಿಗೆ ಸಂಬಂಧಪಟ್ಟ ಧಾರ್ಮಿಕ ವಿಧಿಗಳು ಮತ್ತು ಆಚರಣೆಗಳನ್ನು ಪಾಲಿಸಲು ಅನುವು ಮಾಡಲಾಯಿತು. ಎಲ್ಲಾ ಜಾತಿ ಭೇದಗಳನ್ನು ನಿಷೇಧಿಸಲಾಯಿತು. ಇದನ್ನೆಲ್ಲಾ ತೊಡೆದುಹಾಕಲು ಶಿಕ್ಷಣ ದೊಡ್ಡ ರೀತಿಯಲ್ಲಿ ಸಹಕಾರಿಯಾಯಿತು. ನವಕ್ರೈಸ್ತರ ಮಕ್ಕಳು ಹೆತ್ತವರಿಂದ ವಿಭಿನ್ನವಾದ ಸಾಮಾಜೀಕರಿಸಲ್ಪಟ್ಟ ಹವ್ಯಾಸಗಳು, ಜೀವನ ಶೈಲಿಗಳು ಮತ್ತು ಮೌಲ್ಯಗಳನ್ನು ರೂಢಿಸಿಕೊಂಡರು.

ಬಾಸೆಲ್ ಮಿಶನ್ ಪ್ರಾರಂಭದಿಂದಲೇ ಜಾತಿ ವ್ಯವಸ್ಥೆಯೊಂದಿಗೆ ಹೊಂದಿಕೊಳ್ಳಲು ನಿರಾಕರಿಸಿದೆ. ಅವರ ಘೋಷ ವಾಕ್ಯ ಹೀಗಿದೆ: “ ಕ್ರೈಸ್ತ ಸಭೆಯಲ್ಲಿ ಜಾತಿಯ ಪ್ರತೀಕ ಅಥವಾ ನೆರಳು ಎಂದೂ ಗೋಚರಿಸದಿರಲಿ” ಎಂಬುದು. ಬಾಸೆಲ್ ಮಿಶನ್ ಸ್ಪಷ್ಟಪಡಿಸಿದ್ದು ಹೀಗಿದೆ: “ನಾವು ಭಾರತದಲ್ಲಿ ಕೆಲಸ ಪ್ರಾರಂಭಿಸಿದ ದಿನದಿಂದ ಇಂದಿನವರೆಗೆ ನಮ್ಮ ಸಭೆಯಲ್ಲಿ ಜಾತಿಯೆಂಬ ರಾಕ್ಷಸ ತಲೆಯೆತ್ತಲು ನಾವು ಅವಕಾಶ ನೀಡಿಲ್ಲ. ಇದಕ್ಕೆ ಸಂಬಂಧಿಸಿದಂತೆ ನಾವು ತತ್ವಕ್ಕೆ ಕಟ್ಟುನಿಟ್ಟಿನ ನಿಷ್ಠೆಯನ್ನು ತೋರಿಸಿದ್ದು ನಮಗೆ ಯಶಸ್ಸು ನೀಡಿದೆ”.[೧೫೨]

ಜಾತಿ ವ್ಯವಸ್ಥೆಯನ್ನು ತನ್ನ ಸಭೆಯಿಂದ ನಿರ್ಮೂಲ ಮಾಡಲು ಬಾಸೆಲ್ ಮಿಶನ್ ತನ್ನ ಅನೇಕ ಕೈಗಾರಿಕೆ ಮತ್ತು ಕೃಷಿ ಸಂಸ್ಥೆಗಳ ಮೂಲಕ ಪ್ರಯತ್ನಿಸಿದೆ. ಆರ್ಥಿಕ ಸ್ವಾತಂತ್ರ್ಯವನ್ನು ನೀಡುವ ಆಸ ರೀತಿಯ ಕಾರ್ಯಕ್ರಮಗಳು ಕ್ರೈಸ್ತಮತ ಸ್ವೀಕರಿಸಿದವರಿಗೆ ತಮ್ಮ ಜಾತಿ ತಡೆಯನ್ನು ಮೀರಲು ಸಹಾಯ

ಮಾಡಿದೆ. ಬಾಸೆಲ್ ಮಿಶನ್ ಮತಾಂತರಗೊಳಿಸಿದವರಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರು ಕಡಿಮೆ ಸಂಖ್ಯೆಯಲ್ಲಿ ಇದ್ದಾರೆ. ಮಿಶನರಿಗಳ ಮಹತ್ವಾಕಾಂಕ್ಷೆಗಳಿಗೆ ಯಾವಾಗಲೂ ಗುರಿಯಾಗುತ್ತಿದ್ದ ಹರಿಜನರೊಂದಿಗೆ ಕೆಲಸ ಮಾಡಲು ಬಾಸೆಲ್ ಮಿಶನ್ ಬಯಸದಿರುವುದು ಅಚ್ಚರಿಯ ಸಂಗತಿ. ಆದರೆ ಅವರೊಳಗೆ ಸಾಮೂಹಿಕ ಮತಾಂತರದಷ್ಟು ವೈಯಕ್ತಿಕ ಮತಾಂತರ ಸುಲಭವಾಗಿರಲಿಲ್ಲ. ಇದಕ್ಕೆ ಕಾರಣ ಮೇಲ್ವರ್ಗದವರ ಹೆದರಿಕೆ ಮತ್ತು ತಾವೇ ಸ್ವತಃ ಕಟ್ಟಿ ಬೆಳೆಸಿದ ಭಿನ್ನತೆ. ಪ್ರಾರಂಭದಿಂದಲೇ ಬಾಸೆಲ್ ಮಿಶನ್ ಸಾಮೂಹಿಕ ಮತಾಂತರಕ್ಕೆ ಇಚ್ಛೆಯನ್ನು ತೋರಿಸದೇ ಇದ್ದುದರಿಂದ, ಅವರು ಹರಿಜನರಿಂದ ದೂರ ಇರುವುದಕ್ಕೆ ಇದುವೇ ಕಾರಣವಾಗಿದೆ. ಪ್ರಾರಂಭದಲ್ಲಿ ಬಾಸೆಲ್ ಮಿಶನರಿಗಳು ಸ್ಥಳೀಯವಾಗಿ ಆಧ್ಯಾತ್ಮಿಕ ಮತ್ತು ಸಾಮಾಜಿಕ ಮುಖಂಡತ್ವವನ್ನು ಒದಗಿಸುತ್ತಿದ್ದ ಬ್ರಾಹ್ಮಣರು, ಬಿಲ್ಲವ ಪುರೋಹಿತರು ಮತ್ತು ಬಂಟರನ್ನು ಮತಾಂತರಗೊಳಿಸುವುದರಲ್ಲಿ ಆಸಕ್ತಿ ತೋರಿದ್ದಾರೆ. ಇವರನ್ನು ಮತಾಂತರಗೊಳಿಸಿದರೆ, ಇವರ ಉದ್ದಾಹರಣೆಯಿಂದ ಇವರ ಜಾತಿಯ ಇನ್ನುಳಿದ ಸದಸ್ಯರು ಕೂಡಾ ಮತಾಂತರಗೊಳ್ಳಬಹುದೆಂಬ ನಿರೀಕ್ಷೆ ಅವರದ್ದಾಗಿತ್ತು. ಪರಿಶಿಷ್ಟ ಜಾತಿ ಮತ್ತು ಪಂಗಡದವರನ್ನು ಮತಾಂತರ ಮಾಡಿದರೆ ಇತರ ಮತಾಂತರಿಗಳು ಅವರನ್ನು ಸ್ವೀಕರಿಸದಿರುವ ಸಮಸ್ಯೆ ಕಾಣಿಸಿಕೊಳ್ಳಬಹುದೆಂಬ ಹೆದರಿಕೆ ಅವರಲ್ಲಿತ್ತು.[೧೫೩]

ಜಾತಿ ಬೇಧಗಳನ್ನು ಮೆಟ್ಟುವ ಇನ್ನೊಂದು ವಿಧಾನವೆಂದರೆ ವಸತಿ ಶಾಲೆಗಳ ಸ್ಥಾಪನೆ. ಈ ವಿಧದ ಸಂಸ್ಥೆಯನ್ನು ೧೮೩೬ರಲ್ಲಿ ಮೊದಲು ಮಂಗಳೂರಿನಲ್ಲಿ ಸ್ಥಾಪಿಸಲಾಯಿತು. ವಸತಿ ಶಾಲೆಯ ಮಕ್ಕಳನ್ನು ಮಿಶನರಿಗಳ ಕಟ್ಟುನಿಟ್ಟಿನ ನಿಯಂತ್ರಣದಲ್ಲಿ, ಬೆಳೆಸಿದ್ದರಿಂದ ಮೂಲತಃ ಬೇರೆ ಜಾತಿಗಳಿಗೆ ಸೇರಿದ ಹುಡುಗರು ಒಂದೇ ಕುಟುಂಬದ ಸದಸ್ಯರಂತೆ ಬೆಳೆದಿದ್ದಾರೆ. ರೆವೆ. ಹೆಬಿಕ್‌ರವರಿಂದ ಮಂಗಳೂರು ಶಾಲೆಯಲ್ಲಿ ಶೂದ್ರ ಶಿಕ್ಷಕರ ನೇಮಕಾತಿ ನಡೆದದ್ದು ಕೆಳಜಾತಿಯ ಸದಸ್ಯರನ್ನು ಮೇಲಕ್ಕೆತ್ತುವ ಮತ್ತು ಅವರಿಗೆ ಪ್ರೋತ್ಸಾಹ ನೀಡುವ ಪ್ರಯತ್ನವಾಗಿದೆ.[೧೫೪] ಬಿಲ್ಲವ ಮಕ್ಕಳ ಜೊತೆ ತಮ್ಮ ಮಕ್ಕಳು ಕುಳಿತುಕೊಳ್ಳಲು ಇಚ್ಛಿಸದೆ ಬ್ರಾಹ್ಮಣರು ಪ್ರತ್ಯೇಕ ತರಗತಿಯ ಬೇಡಿಕೆಯನ್ನು ಮಿಶನರಿಗಳ ಮುಂದಿಟ್ಟಾಗ ಅದನ್ನು ಖಂಡತುಂಡವಾಗಿ ತಿರಸ್ಕರಿಸಿರುವುದು ಜಾತಿಭೇದವನ್ನು ಮೆಟ್ಟಿನಿಲ್ಲುವ ಪ್ರಯತ್ನವಾಗಿದೆ.[೧೫೫] ಕ್ರಿಸ್ತನಲ್ಲಿ ಸಮಾನತೆಯನ್ನು ಭೋದಿಸುವ ಕ್ರೈಸ್ತ ಶಿಕ್ಷಣದ ಮೂಲಕವೂ ಜಾತಿ ತಡೆಗಳನ್ನು ಭಗ್ನಗೊಳಿಸುವ ಪ್ರಯತ್ನ ನಡೆಸಲಾಗಿದೆ. ಜಾತಿ ಪದ್ದತಿಯ ಕೆಡುಕುಗಳನ್ನು ಖಂಡಿಸುವ ಗ್ರಂಥಗಳು ಮುಖ್ಯವಾಗಿ ೧೮೪೫ರಲ್ಲಿ ಪ್ರಕಟವಾದ ರೆವೆ. ಮೋಗ್ಲಿಂಗ್‌ರ 'ಜಾತಿ ವಿಚಾರಣೆ' ಗ್ರಂಥ ಮತ್ತು ಸಾಹಿತ್ಯವನ್ನು ಪ್ರಕಟಿಸಲಾಗಿದೆ. 'ಸತ್ಯದೀಪಿಕಾ', 'ಸಭಾಪತ್ರ' ಮತ್ತು 'ಕ್ರೈಸ್_ ದೆ ಹಿತವಾದಿ' ಮುಂತಾದ ಪತ್ರಿಕೆಗಳಲ್ಲಿ ಜಾತಿ ಮತ್ತು ಅದಕ್ಕೆ ಸಂಬಂಧಿಸಿದ ಸಮಸ್ಯೆಗಳ ಕುರಿತು ಲೇಖನಗಳನ್ನು ಮತ್ತು

ವರದಿಗಳನ್ನು ಪ್ರಕಟಿಸಲಾಗಿದೆ. ಹಿಂದೂ ಸಮಾಜ, ತನ್ನ ಹಿತಾಸಕ್ತಿಗಾಗಿ ಮಾಡಿದ ಈ ವ್ಯವಸ್ಥೆಯ ಕೆಡುಕುಗಳ ಕುರಿತು ಪ್ರತಿಯೊಂದು ಹಂತದಲ್ಲಿ ಜನರನ್ನು ಎಚ್ಚರಿಸಿದೆ. ಬಾಸೆಲ್ ಮಿಶನ್ನಿಗೆ ಸಂಖ್ಯೆ ಮುಖ್ಯವಾಗಿರಲಿಲ್ಲ, ಅವರು ಗುಣಮಟ್ಟಕ್ಕೆ ಪ್ರಾಮುಖ್ಯತೆ ನೀಡಿದ್ದಾರೆ. ಆದ್ದರಿಂದ ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್ನಿನಿಂದ ಕ್ರೈಸ್ತಧರ್ಮದ ಕಡೆಗೆ ಸಾಮೂಹಿಕ ಚಳುವಳಿ ನಡೆದಿಲ್ಲ.[೧೫೭] ಮಿಶನರಿಗಳು ಮತಾಂತರಿಗಳೊಳಗೆ ಜಾತಿ, ಜನಾಂಗ, ಅಸಮಾನತೆ ಸಾಧ್ಯವಾದಷ್ಟು ಮಟ್ಟಿಗೆ ತಲೆ ಎತ್ತದಂತೆ ನೋಡಿಕೊಂಡರಾದರೂ, ಮಿಶನರಿ ಮತ್ತು ಸ್ಥಳೀಯ ಮತಾಂತರಿಗಳ ನಡುವೆ ಸಾಮಾನ್ಯವಾಗಿ ಎಲ್ಲಾ ಕಾಲದಲ್ಲಿಯೂ, ಎಲ್ಲಾ ಸಮುದಾಯಗಳಲ್ಲಿಯೂ ಇರುತ್ತಿದ್ದಂತಹ ಸಾಮಾಜಿಕ ಅಂತರವನ್ನು ಉಳಿಸಿಕೊಂಡಿದ್ದರು ಎಂಬುದರಲ್ಲಿ ಸಂಶಯವಿಲ್ಲ. ಕೆಲವು ಮಂದಿ ಮಿಶನ್ ಕ್ರೈಸ್ತರು ಉಡುಪು ಮತ್ತು ಜೀವನ ಶೈಲಿಯಲ್ಲಿ ಯೂರೋಪಿಯನ್ನರನ್ನೇ ಅನುಕರಿಸುತ್ತಿದ್ದಾರೆಂದೂ, ಈ ಪ್ರವೃತ್ತಿಯು ಸಭೆಗೆ ಅಪಾಯಕಾರಿಯೂ, ಸಾಲದ ಶೂಲಕ್ಕೆ ಕಾರಣವೂ ಆಗಿದೆಯೆಂದು ಮಿಶನರಿಗಳು ದೂರಿದರು. ಈ ಮೇಲಿನ ಸ್ವಭಾವವು ಜಾತಿ ಮೇಲ್ಮೆಯ ಭಾವನೆಗೆ ವಂಚನೆಯನ್ನುಂಟು ಮಾಡುವುದಾದರೂ ಮಿಶನರಿಗಳು ಭಾರತದಲ್ಲಿ ಇದನ್ನು ಗೆಲ್ಲಲಾಗಲಿಲ್ಲ. ಅವರು, ಸದಾ ಸ್ಥಳೀಯ ಸಭೆಯಿಂದ ಒಂದಷ್ಟು ದೂರವೇ ಉಳಿದರೂ, ಸ್ಥಳೀಯರನ್ನು ಯೇಸುಕ್ರಿಸ್ತನ ಸಾಹೋದರ್ಯದ ವಲಯದೊಳಕ್ಕೆ ತರಲಾಗಿದೆಯೆಂದು ಘೋಷಿಸಿಕೊಂಡರು. ಮಿಶನರಿಗಳ ಮನದಲ್ಲಿ ತಾವು ಆಳುವ ದೇಶಕ್ಕೆ ಅಥವಾ ಏನಿಲ್ಲಾವೆಂದರೂ ಆಳುವ ಜನಾಂಗಕ್ಕೆ ಸೇರಿದವರೆಂಬ ಭಾವ ಸದಾ ಜಾಗೃತವಾಗಿತ್ತು. ಯೂರೋಪಿಯನ್ನರು, ಎಂದೂ ಸ್ಥಳೀಯ ಸಭೆಯ ಭಾಗವಾಗಲು, ಯತ್ನಿಸಲೇ ಇಲ್ಲ. ಅವರು ಮೇಲಿನಿಂದ ಆಜ್ಞೆ ಮಾಡುವ ಶಿಕ್ಷಕರಾಗಿ ಉಳಿದುಕೊಂಡರಲ್ಲದೆ ಸಭೆಯ ಸದಸ್ಯರು ತಮಗೆ ಅವಿಧೇಯತೆಯನ್ನು ತೋರಿಸಿದಾಗ ಅವರನ್ನು ಶಿಕ್ಷಿಸಿದರು. ಓರ್ವ ಜರ್ಮನ್ ಮಿಶನರಿಯು ಸ್ಥಳೀಯ ಕ್ರೈಸ್ತರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿದ ಒಂದು ಉದಾಹರಣೆಯೂ ದೊರಕುವುದಿಲ್ಲ. ಅಂಥದ್ದು, ಬಹುಶಃ ಜರ್ಮನರ ಕಲ್ಪನೆಗೂ ಮೀರಿದ ವಿಷಯವಾಗಿತ್ತು. ರೆವೆ. ಹರ್ಮನ್ ಕೌಂಡಿನ್ಯ ಮಾತ್ರ ಇದಕ್ಕೆ ಅಪವಾದವೆಂಬಂತೆ ಇದ್ದರು. ಕೆನ್ನೆತ್ ಬಲ್ಹಾಟ್ ಹೇಳುವ ಪ್ರಕಾರ 'ಹೀಗೆ ಸಾಮಾಜಿಕ ಅಂತರವನ್ನು ಉಳಿಸಿಕೊಳ್ಳುವುದು ತಮ್ಮ ಅಧಿಕಾರ ಮತ್ತು ಒಡೆತನದ ಶಕ್ತಿಯನ್ನು ಕಾಪಾಡಲು ಅತ್ಯಂತ ಅಗತ್ಯ'ವೆನಿಸಿತ್ತು. ಸಾಮಾಜಿಕ ಅಂತರವನ್ನು ಹೋಗಲಾಡಿಸುವಂಥ ಮದುವೆ ಸಂಬಂಧಗಳನ್ನು ತೀವ್ರವಾಗಿ ನಿರ್ಬಂಧಿಸಲಾಗಿತ್ತು.[೧೫೮]

ಕಿವುಡರಿಗಾಗಿ ಒಂದು ಶಾಲೆ(೧೮೭೨) ಮತ್ತು ಪಂಚಮರಿಗಾಗಿ ಇನ್ನೊಂದು ಶಾಲೆ (೧೯೧೧) ಹೀಗೆ ಪ್ರತ್ಯೇಕ ಶಾಲೆಗಳ ಸ್ಥಾಪನೆಯೂ, ಮಿಶನರಿಗಳು ಘೋಷಿಸಿಕೊಳ್ಳುವಂತೆ, ಸಾಮಾಜಿಕ

ಸಮಾನತೆಯು ಯಾವ ಬಗೆಯಲ್ಲಿತ್ತೆಂದು ಸೂಚಿಸುತ್ತದೆ; ಹೀಗೆಯೇ ಬಿಲ್ಲವ ಜನಾಂಗ ಮತ್ತು ಅವರಿಂದ ಮೇಲಿನ ಹಂತದಲ್ಲಿರುವವರ ಸ್ಥಿತಿಯೂ ಆಗಿತ್ತು. ಅಷ್ಟು ಮಾತ್ರವಲ್ಲದೆ, ಪರೆಯ ಜನಾಂಗದವರು ಕ್ರೈಸ್ತ ಧರ್ಮ ಸ್ವೀಕರಿಸುವುದು ಕ್ರೈಸ್ತ ಧರ್ಮದ ಬೆಳವಣಿಗೆಗೆ ಮಾರಕ ಎಂಬ ಭಾವನೆ ಇತ್ತು. ೧೯೦೦ರಲ್ಲಿ ಕಾರ್ಕಳದ ಮಿಶನರಿಯೊಬ್ಬರು ವರದಿ ಮಾಡಿರುವ ಪ್ರಕಾರ ಸರಕಾರವು ಪರೆಯ ಜನಾಂಗದ ಇಬ್ಬರು ಮಕ್ಕಳನ್ನು ಮಿಶನ್‌ಗೆ ಹಸ್ತಾಂತರಿಸಿದಾಗ ಸಭೆಯ ಪ್ರಭಾವೀ ವ್ಯಕ್ತಿಗಳು ಗಣನೀಯ ಪ್ರಮಾಣದಲ್ಲಿ ತೊಂದರೆ ನೀಡಿದರು.[೧೫೮] ಮೇಲಿನ ನಿದರ್ಶನಗಳು ಮಿಶನರಿಗಳಲ್ಲಿ ಸ್ವಲ್ಪ ಮಟ್ಟಿನ ಉಚ್ಚ ಜನಾಂಗ ಎಂಬ ಭಾವನೆ ಇತ್ತೆಂಬುದನ್ನು ಪ್ರಚುರಪಡಿಸುತ್ತದೆ ಮಾತ್ರವಲ್ಲದೆ ಸಮಾಜದ ಅತೀ ಕೆಳಸ್ತರದವರನ್ನು ಮತಾಂತರಗೊಳಿಸಿದರೆ ಅವರನ್ನು ಮುಖ್ಯವಾಹಿನಿಗೆ ತರುವುದು ತುಂಬಾ ತ್ರಾಸದಾಯಕವಾಗುತ್ತದೆ ಎಂಬ ಅಂಜಿಕೆ ಕೂಡಾ ಅವರಲ್ಲಿದ್ದುದು ವ್ಯಕ್ತವಾಗುತ್ತದೆ.

ಕ್ರೈಸ್ತ ಧರ್ಮದ ಸ್ಥಾಪಕರಾದ ಯೇಸು ಕ್ರಿಸ್ತನ ಸಾರ್ವಜನಿಕ ಜೀವನದಲ್ಲಿ ಮಾಡಿದ ಮುಖ್ಯ ಕೆಲಸ ಸಮಾಜ ಸೇವೆ. ತಾನು ಇತರಿಗಾಗಿ ಏನನ್ನು ಮಾಡಿದರೋ, ಅದನ್ನು ಅವರ ಶಿಷ್ಯರಿಗೆ ಮತ್ತು ಆ ಮೂಲಕ ಅವರ ಹಿಂಬಾಲಕರಿಗೂ ಕೂಡಾ ಮಾಡುವಂತೆ ಕೇಳಿಕೊಂಡರು. ಕ್ರೈಸ್ತ ಮಿಶನರಿಗಳು ಸುವಾರ್ತಾ ಪ್ರಸಾರವನ್ನು ಮುಖ್ಯ ಉದ್ದೇಶವಾಗಿಟ್ಟು ಭಾರತಕ್ಕೆ ಬಂದರೂ, ಸಮಾಜದಲ್ಲಿ ಅದಾಗಲೇ ಅಸ್ತಿತ್ವದಲ್ಲಿದ್ದ ಅನ್ಯಾಯ, ಶೋಷಣೆ, ಅಜ್ಞಾನ, ಮೂಢನಂಬಿಕೆ ಮುಂತಾದವುಗಳನ್ನು ಕಂಡು ಮೂಕ ಪ್ರೇಕ್ಷಕರಾಗಿ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಬದಲಾಗಿ ಸಮಾಜಕ್ಕೆ ಏನಾದರೂ ಒಳ್ಳೆಯದನ್ನು ಮಾಡಲೇಬೇಕೆಂಬ ದೃಢ ಸಂಕಲ್ಪ ಮಾಡಿದರು. ತತ್ಪರಿಣಾಮವಾಗಿ ಶಾಲೆ, ಆಸ್ಪತ್ರೆ, ಅನಾಥಾಶ್ರಮ, ವಸತಿ ನಿಲಯ, ವೃದ್ಧಾಶ್ರಮ, ಸಹಕಾರಿ ಸಂಘಗಳು, ಮಹಿಳಾ ಅಭ್ಯುದಯ, ರುಗ್ಣಾಲಯ, ಭವಿಷ್ಯನಿಧಿ, ವಿಧವಾಲಯ, ಅಸ್ವಾಸ್ಥ್ಯದ ನಿಧಿ, ಶಿಶುವಿಹಾರ, ಕೃಷಿ ಶಾಲೆ, ಮದ್ಯವರ್ಜನ ಸಂಘಗಳು ಇತ್ಯಾದಿ, ಹುಟ್ಟಿ ಸಮಾಜ ಸೇವೆಯಲ್ಲಿ ತೊಡಗಿದವು. ಮಿಶನರಿಗಳು ಕ್ರೈಸ್ತರನ್ನು ಗಮನದಲ್ಲಿಟ್ಟು ಈ ಎಲ್ಲಾ ಸುಧಾರಣೆಗಳನ್ನು ಕೈಗೊಂಡರೂ, ಇದರ ಲಾಭ ಸಮಸ್ತರಿಗೂ ಲಭಿಸಿತು. ಆ ಮೂಲಕ ಮಿಶನರಿ ಸಂಘ ಸಂಸ್ಥೆಗಳು ಸಾಮಾಜಿಕ ಬದಲಾವಣೆಯಲ್ಲಿ ಪ್ರಧಾನ ಪಾತ್ರ ವಹಿಸಿದವು. ಸಮಾಜದಲ್ಲಿ ಅಸ್ಪೃಶ್ಯರೆಂದು ಅತ್ಯಂತ ನಿಕೃಷ್ಟವಾಗಿ ಕಾಣುತ್ತಿದ್ದ ದಲಿತರಿಗೆ ಅವರ ಮೂಲಭೂತ ಅವಶ್ಯಕತೆಗಳಾದ ಅನ್ನ, ಬಟ್ಟೆ ಮತ್ತು ಆಶ್ರಯ ನೀಡಿ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಪ್ರಯತ್ನವನ್ನು ಯೇಸುಸಭೆಯ ಮಿಶನರಿಗಳಾದ ಕೋರ್ಟಿ, ಕಮಿಸಾ, ಗವಿರಾಘಿ, ಮಾಫ್ಫೈ ಮುಂತಾದವರು ಮಾಡಿದರು. ಅವರ ಕೇರಿಗಳಿಗೆ ಹೋಗಿ ಅವರಿಗಾಗಿ ಜೋಪಡಿ ಶಾಲೆಗಳನ್ನು ತೆರೆದು ಅವರೊಂದಿಗೆ ಉಂಡು ಮಲಗಿ ಮೇಲ್ವರ್ಗದವರ ಟೀಕೆಗೂ ಒಳಗಾದರು. ಅವರು ದಲಿತರಲ್ಲಿ ಮೂಡಿಸಿದ ಜನ ಜಾಗೃತಿಯಿಂದ ಭಯಭೀತರಾದ ಮೇಲ್ವರ್ಗದ ಬ್ರಾಹ್ಮಣರು ಅಮಾಯಕ ಜನರನ್ನು ಮಿಶನರಿಗಳ ವಿರುದ್ಧವೇ ಎತ್ತಿ ಕಟ್ಟಿದ್ದರು. ಮಿಶನರಿಗಳು ದಲಿತರ

ಉದ್ಧಾರಕ್ಕಾಗಿ ಶ್ರಮಿಸಿದ್ದರಿಂದ ಸಾಮೂಹಿಕವಾಗಿ ದಲಿತರು ಕ್ರೈಸ್ತ ಧರ್ಮ ಸ್ವೀಕರಿಸಿದರು. ಆದರೆ, ಒಮ್ಮೆ ಅವರು ಕ್ರೈಸ್ತ ಧರ್ಮ ಸ್ವೀಕರಿಸಿದ ನಂತರ, ಕ್ರೈಸ್ತ ಮೇಲ್ವರ್ಗದಿಂದ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದವರು ಇವರನ್ನು ಚರ್ಚ್‌ನಲ್ಲಿ ಸರಿಸಮಾನರೆಂದು ಸ್ವೀಕರಿಸಲು ತಯಾರಿರಲಿಲ್ಲ. ಆದುದರಿಂದ ನವ ಕ್ರೈಸ್ತರಿಗೆ ಪ್ರತ್ಯೇಕ ಆಸನಗಳನ್ನು ಮೀಸಲಿರಿಸುವ ಪದ್ಧತಿ ರೂಢಿಗೆ ಬಂದಿತು. ಬಾಸೆಲ್ ಮಿಶನ್ ಕ್ರೈಸ್ತರು ಪ್ರಾರಂಭದಿಂದಲೇ ಜಾತಿ ಪದ್ಧತಿಯನ್ನು ವಿರೋಧಿಸಿದ್ದರಿಂದ ಹಾಗೂ ಸಾಮೂಹಿಕ ಮತಾಂತರ ಕೈಗೊಳ್ಳದ್ದರಿಂದ ಈ ಸಮಸ್ಯೆ ಎದುರಾಗಲಿಲ್ಲ. ಅದಕ್ಕಿಂತಲೂ ಮಿಗಿಲಾಗಿ, ಬಾಸೆಲ್ ಮಿಶನ್‌ನವರು ದಲಿತರ ಕ್ರೈಸ್ತ ಮತ ಸ್ವೀಕಾರಕ್ಕೆ ಅಷ್ಟಾಗಿ ಪ್ರಯತ್ನ ಮಾಡಲಿಲ್ಲ. ಹೀಗೆ, ಮೂಲಭೂತ ಅವಶ್ಯಕತೆಗಳ ಈಡೇರಿಕೆಗಾಗಿ ಕ್ರೈಸ್ತ ಮತ ಸ್ವೀಕರಿಸಿದ ದಲಿತರು ಸರ್ಕಾರದ ಸವಲತ್ತುಗಳಿಂದಲೂ ವಂಚಿತರಾದರು ಅಲ್ಲದೆ, ನವಕ್ರೈಸ್ತರಿಗೆ ತಾವು ಹೊಸದಾಗಿ ಆಲಂಗಿಸಿದ ಧರ್ಮದಲ್ಲಿಯೂ ಪ್ರೀತ್ಯಾಧಾರಗಳಿಂದ ಸ್ವೀಕರಿಸಲಿಲ್ಲ. ೧೯೭೦ರ ದಶಕದ ನಂತರ ಕೊಲ್ಲಿ ರಾಷ್ಟ್ರಗಳು ಹಾಗೂ ಯೂರೋಪ್ ರಾಷ್ಟ್ರಗಳಿಗೆ ಉದ್ಯೋಗ ಅರಸಿ ವಲಸೆ ಹೋಗಲಾರಂಭಿಸಿದ ಕ್ರೈಸ್ತರು ಅಲ್ಲಿಯ ಸಂಸ್ಕೃತಿ ಆಚಾರ ವಿಚಾರಗಳನ್ನು ಮೈಗೂಡಿಸಿಕೊಂಡು ಮರಳಿ ಭಾರತಕ್ಕೆ ಬಂದಾಗ ಹಿಂದಿನ ಮಡಿವಂತಿಕೆ ಕಡಿಮೆಯಾಗಿ ಎಲ್ಲರನ್ನೂ ಸರಿ ಸಮಾನವಾಗಿ ಕಾಣುವ ಒಳ್ಳೆಯ ಬೆಳವಣಿಗೆ ನಿಧಾನವಾಗಿ ಆಗುತ್ತಿದೆ. [೧೫೯]

೧೯ನೇ ಶತಮಾನದಲ್ಲಿ ಕಥೋಲಿಕ ಕ್ರೈಸ್ತರು ಪುರುಷ ಪ್ರಧಾನ ಸಮಾಜದ ಎಲ್ಲಾ ಸಂಪ್ರದಾಯಗಳು ಮತ್ತು ನಿಯಮಗಳನ್ನು ಅನುಸರಿಸುತ್ತಿದ್ದರು. ಶ್ರೀಮಂತರನ್ನು ಹೊರತುಪಡಿಸಿ, ಮಹಿಳೆಯರು ಪುರುಷರೊಂದಿಗೆ ಮುಕ್ತವಾಗಿ ಬೆರೆಯುತ್ತಿರಲಿಲ್ಲ. ಅಪರಿಚಿತ ಪುರುಷರ ಮುಂದೆ ಮಹಿಳೆಯರು ಎಂದೂ ಕಾಣಿಸಿಕೊಳ್ಳುತ್ತಿರಲಿಲ್ಲ. ಭಾನುವಾರಗಳಂದು ಮತ್ತು ಹಬ್ಬದ ದಿನಗಳಲ್ಲಿ ಚರ್ಚಿಗೆ ಹೋಗುವ ಅವಕಾಶ ದೊರೆತಾಗ ಮಾತ್ರ ಮಹಿಳೆ ಹೊರಗೆ ಕಾಣಿಸಿಕೊಳ್ಳುತ್ತಿದ್ದಳು. ಸುಶಿಕ್ಷಿತ ವರ್ಗವನ್ನು ಬಿಟ್ಟರೆ ಬೇರೆಯವರಲ್ಲಿ ಹೆಂಡತಿ ಗಂಡನನ್ನು ಹೆಸರು ಹಿಡಿದು ಕರೆಯುವಂತಿರಲಿಲ್ಲ. ಅವರನ್ನು ಗಂಡಸರಿಗೆ ಸಮಾನವಾಗಿ ಪರಿಗಣಿಸುತ್ತಿರಲಿಲ್ಲ. ಅತೀ ಬಡವರ್ಗಗಳಲ್ಲಿ ಕೂಡಾ ವರದಕ್ಷಿಣೆಯ ಪದ್ಧತಿ ಜಾರಿಯಲ್ಲಿತ್ತು. ತಮ್ಮ ಮಕ್ಕಳ ಮದುವೆ ನಿರ್ಧಾರಗಳನ್ನು ಹೆತ್ತವರೇ ಮಾಡುತ್ತಿದ್ದರು. ಹೆತ್ತವರು ಆಯ್ಕೆ ಮಾಡಿದ ಹೆಣ್ಣನ್ನು ತಿರಸ್ಕರಿಸುವ ಹಕ್ಕು ಹುಡುಗನಿಗೆ ಇರುತ್ತಿರಲಿಲ್ಲ. ವಿಧವಾ ವಿವಾಹಕ್ಕೆ ಅವಕಾಶವಿತ್ತಾದರೂ ಅದರ ಕುರಿತು ಒಲವು ಇರಲಿಲ್ಲ. ೧೯ನೇ ಶತಮಾನದ ಕೊನೆಯ ಹಂತದಲ್ಲಿ ಮಹಿಳಾ ಶಿಕ್ಷಣ ಕ್ಷೇತ್ರದಲ್ಲಿ ಗ್ರಾಮೀಣ ಜಿಲ್ಲೆಯ ಕ್ರೈಸ್ತರು ಮುಂಚೂಣಿಯಲ್ಲಿದ್ದರು. ನಗರದಲ್ಲಿ ಅಪೋಸ್ತಲಿಕ್ ಕಾರ್ಮೆಲ್ ಧರ್ಮಭಗಿನಿಯರು ಹೆಣ್ಣು ಮಕ್ಕಳಿಗಾಗಿ ಶಾಲೆಗಳನ್ನು ನಡೆಸುತ್ತಿದ್ದರು ಮತ್ತು ೧೯ನೇ ಶತಮಾನದ ಕೊನೆಯೊಳಗೆ ಮೆಟ್ರಿಕ್ ಮುಗಿಸಿದ ಅನೇಕ ಹೆಣ್ಣುಮಕ್ಕಳಿದ್ದರು. ಆದರೆ ಮಹಿಳೆಯರಿಗೆ ಉನ್ನತ ಶಿಕ್ಷಣ ಪಡೆಯುವ ಅವಕಾಶಗಳು ಇರಲಿಲ್ಲ. ವಾಸ್ತವ

ಸಂಗತಿಯೇನೆಂದರೆ ಕ್ರೈಸ್ತರ ಒಂದು ವರ್ಗ ಮತ್ತು ಯೂರೋಪಿನ ಧರ್ಮಗುರುಗಳು ಮಹಿಳೆಯರ ಉನ್ನತ ಶಿಕ್ಷಣದ ಪರವಾಗಿ ಇರಲಿಲ್ಲ. ಆದರೆ ಮಿಶನರಿಗಳ ಹಾಗೂ ಧರ್ಮಭಗಿನಿಯರ ನಿರಂತರ ಪ್ರಯತ್ನದ ಫಲವಾಗಿ ಕಾಲಕ್ರಮೇಣ ಮಹಿಳೆಯರ ಸ್ಥಾನಮಾನ ಉನ್ನತೀಕರಿಸಲ್ಪಟ್ಟಿತು. ಮಹಿಳೆಯರೂ ಪುರುಷರಿಗೆ ಸರಿಸಮಾಸವಾಗಿ ಅವಕಾಶಗಳನ್ನು ಪಡೆದರು. ಪರಿಣಾಮವಾಗಿ, ಇಂದು ಪುರುಷರಿಗಿಂತಲೂ ಮಹಿಳೆಯರು ಶಿಕ್ಷಣದಲ್ಲಿ, ರಾಜಕೀಯದಲ್ಲಿ ಮತ್ತು ಎಲ್ಲಕ್ಕಿಂತಲೂ ಮಿಗಿಲಾಗಿ ಪ್ರಾಮಾಣಿಕತೆಯಲ್ಲಿ ಮೇಲ್ಪಂಕ್ತಿಯಲ್ಲಿದ್ದಾರೆ, ಮಹಿಳಾ ಶಿಕ್ಷಣ ಎಷ್ಟು ಹೆಚ್ಚಿದೆಯೆಂದರೆ ಪುರುಷರಿಗಿಂತ ವಿದ್ಯಾಭ್ಯಾಸ ಪಡೆದ ಮಹಿಳೆಯರ ಸಂಖ್ಯೆಯೇ ಕೆಲವು ಕಡೆಗಳಲ್ಲಿ ಅಧಿಕವಾಗಿದೆ. ಮುಖ್ಯವಾಗಿ ಉನ್ನತ ಶಿಕ್ಷಣ ಪಡೆದ ಮಹಿಳೆಯರಿಗೆ ತಕ್ಕುದಾದ ಸಂಗಾತಿ ಸಿಗದೆ ತಮ್ಮ ಸಹೋದ್ಯೋಗಿಗಳಲ್ಲಿಯೇ ಯೋಗ್ಯರೆನಿಸಿದವರನ್ನೇ ಪ್ರೀತಿಸಿ ಅಂತರ್‌ಧರ್ಮೀಯ ವಿವಾಹಗಳು ನಡೆಯುತ್ತಿರುವುದು ಸರ್ವೇ ಸಾಮಾನ್ಯ ಬೆಳವಣಿಗೆಯಾಗಿದೆ.

ವಿಭಿನ್ನ ಸಾಮರ್ಥ್ಯದ ಮಕ್ಕಳ ಪಾಲನೆ ಪೋಷಣೆಗೆ ಹಾಗೂ ವಿದ್ಯಾಭ್ಯಾಸಕ್ಕೆ ಹಿಂದೆ ಯಾವುದೇ ಸವಲತ್ತುಗಳಿರಲಿಲ್ಲ. ಆದರೆ, ಈಗ ಅಂಥವರ ಆರೈಕೆಗಾಗಿಯೇ ಮಿಶನರಿಗಳು, ಧರ್ಮಭಗಿನಿಯರು ಹಾಗೂ ಸಾಮಾಜಿಕ ಕಳಕಳಿಯಿರುವ ಧರ್ಮಶೀಲ ವ್ಯಕ್ತಿಗಳು ನಡೆಸುತ್ತಿರುವ ವಿಶೇಷ ಸ್ಕೂಲ್‌ಗಳಿವೆ. ಅಂತಹ ಒಂದು ಖಾಸಗಿ ಸಂಸ್ಥೆಯಾಗಿರುವ, ಉಡುಪಿ ಜಿಲ್ಲೆಯ ಪಾಂಬೂರಿನ ಮಾನಸದ ಪಾಲಕಿ ಭ। ಲೈಸಾರವರು ಮಕ್ಕಳು ಶಾಲೆಗೆ ಸೇರಿದ ಬಳಿಕ ಅವರಲ್ಲಾಗುವ ಬದಲಾವಣೆಯನ್ನು ಗುರುತಿಸಿ ಹೀಗೆನ್ನುತ್ತಾರೆ: "ಮಾನಸಕ್ಕೆ ಮಕ್ಕಳು ಬರುವಾಗ ಅವರಲ್ಲಿ ಕೆಲವರಿಗೆ ಮಾತನಾಡಲು, ನಡೆದಾಡಲು, ಊಟ ಮಾಡಲು, ಉಡಲು, ದೇಹದ ಅಗತ್ಯಗಳನ್ನು ಪೂರೈಸಲು ಗೊತ್ತಿರುವುದಿಲ್ಲ. ಸಂಸ್ಥೆಯಲ್ಲಿ ಇದನ್ನೆಲ್ಲವನ್ನು ಕಲಿಸಲಾಗುತ್ತದೆ. ಕ್ರೀಡೆ, ಯೋಗ, ವ್ಯಾಯಾಮ, ಮನೋರಂಜನೆ, ಸಂಗೀತ...... ಎಲ್ಲಾ ತರಬೇತಿ ಅವರಿಗೆ ಲಭಿಸುತ್ತದೆ. ಕ್ರಮೇಣ ಮಕ್ಕಳು ಪರಿಸ್ಥಿತಿಗನುಗುಣವಾಗಿ ಜೀವಿಸಲು ಕಲಿಯುತ್ತಾರೆ. ರಾಷ್ಟ್ರೀಯ – ಅಂತರರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧೆಯಲ್ಲಿ ಭಾಗವಹಿಸುತ್ತಾರೆ. ಮನುಷ್ಯನಿಗೆ ಗೌರವ ಕೊಡುವ ಸ್ವಾವಲಂಭಿ ಜೀವನ ನಡೆಸಲು ಕಲಿಯುತ್ತಾರೆ." ಹೀಗಿರುವಾಗ, ವಿಶೇಷ ಸಾಮರ್ಥ್ಯದ ಮಕ್ಕಳಿಗೆ ತರಬೇತಿ ನೀಡುವ ಶಾಲೆಗಳು ಅಗತ್ಯವಾಗಿ ಸರ್ಕಾರ ಆರಂಭಿಸಿ ನಡೆಸಬೇಕು ಅಥವಾ ಅಂತಹ ಶಾಲೆಗಳನ್ನು ನಡೆಸುವವರಿಗೆ ಸಲಕರಣೆಗಳು, ಶಿಕ್ಷಕರು ಮತ್ತು ಅಗತ್ಯವಾಗಿ ಬೇಕಾಗಿರುವ ಸಹಾಯಧನ ನೀಡಿ ಪ್ರೋತ್ಸಾಹಿಸಬೇಕು. ವ್ಯಾಪಾರಿ ಮನೋಭಾವ ಇರುವವರು ಇಂತಹ ಸಾಹಸಕ್ಕೆ ಕೈ ಹಾಕುವುದಿಲ್ಲ ಏಕೆಂದರೆ ಇಂತಹ ಸಂಸ್ಥೆಗಳನ್ನು ನಡೆಸುವುದರಿಂದ ಅಧಿಕ ಲಾಭ ಇರುವುದಿಲ್ಲ. ಕೇವಲ ಸಮಾಜಸೇವೆಯ ಮನೋಭಾವ ಇರುವ ವ್ಯಕ್ತಿಗಳು ಮತ್ತು ಸಂಸ್ಥೆಗಳು ಮಾತ್ರ ವಿಭಿನ್ನ ಸಾಮರ್ಥ್ಯದ ಮಕ್ಕಳ ಉದ್ಧಾರಕ್ಕಾಗಿ

ಇರುವ ಶಾಲೆಗಳನ್ನು ನಡೆಸಲು ಮುಂದೆ ಬರುತ್ತಾರೆ. ವಿಭಿನ್ನ ಸಾಮರ್ಥ್ಯದ ಮಕ್ಕಳು ರಾಷ್ಟ್ರದ ನಾಗರಿಕರಾಗಿರುವುದರಿಂದ, ರಾಷ್ಟ್ರದ ಸಂಪತ್ತಿನಲ್ಲಿ ಅವರಿಗೂ ಪಾಲಿದೆ ಮತ್ತು ಅವರನ್ನು ನೋಡಿಕೊಳ್ಳುವ ಜವಾಬ್ದಾರಿ ಸರ್ಕಾರಕ್ಕಿದೆ. ವಿಭಿನ್ನ ಮಕ್ಕಳಿಗೆ ಯಾರ ಅನುಕಂಪವೂ ಅಗತ್ಯವಿಲ್ಲ ಅವರಿಗೆ ಬೇಕಾಗಿರುವುದು ಪ್ರೀತಿ, ಒಡನಾಟ ಮತ್ತು ಗೌರವದಿಂದ ಬಾಳಲು ಮುಕ್ತ ಅವಕಾಶ ಎಂಬುದನ್ನು ಅರ್ಥಮಾಡಿಕೊಳ್ಳಬೇಕಿದೆ.

ವೃದ್ಧಾಶ್ರಮಗಳು, ನಿರ್ಗತಿಕ ಆಶ್ರಮಗಳು, ಅನಾಥಾಶ್ರಮಗಳು, ವಸತಿ ನಿಲಯಗಳು ಹಾಗೂ ವಿದ್ಯಾರ್ಥಿ ನಿಲಯಗಳು ಜಿಲ್ಲೆಯಲ್ಲಿ ಜನ್ಮತಳೆದುದು ಧಾರ್ಮಿಕರ ಹಾಗೂ ಕ್ರೈಸ್ತ ಧರ್ಮಶೀಲ ವ್ಯಕ್ತಿಗಳ ಸೇವೆ, ತ್ಯಾಗ, ಪ್ರೀತಿ ಮತ್ತು ದೂರದೃಷ್ಟಿಯ ಫಲವಾಗಿ. ಇವರು ಹಾಕಿದ ಆ ಭದ್ರ ತಳಹದಿಯ ಮೇಲೆ ಇಂದು ಸಾಕಷ್ಟು ಸೇವಾ ಕೇಂದ್ರಗಳು ತಲೆ ಎತ್ತಿ ಸಮಾಜಸೇವೆಯಲ್ಲಿ ತೊಡಗಿಸಿಕೊಂಡಿವೆ. ಆದರೆ, ಅನಾಥಾಶ್ರಮಗಳು, ವಸತಿ ನಿಲಯಗಳು ಹಾಗೂ ವಿದ್ಯಾರ್ಥಿ ನಿಲಯಗಳು ಇಂದು ತಮ್ಮ ಹಿಂದಿನ ಉದಾತ್ತ ದೃಷ್ಟಿಕೋನವನ್ನು ಮರೆತು ವ್ಯಾಪಾರೀಕರಣದಲ್ಲಿ ತೊಡಗಿವೆ. ಬದಲಾದ ಪರಿಸ್ಥಿತಿಯಲ್ಲಿ ವಸತಿ ನಿಲಯಗಳನ್ನು ಹಾಗೂ ವಿದ್ಯಾರ್ಥಿ ನಿಲಯಗಳನ್ನು ನಡೆಸುವುದು ಒಂದು ಲಾಭದಾಯಕ ದಂಧೆಯಾಗಿದೆ.

ಹೆಚ್.ಐ.ವಿ./ಏಡ್ಸ್ ಒಂದು ಭಯಾನಕ ರೋಗ, ಇದರ ಸೋಂಕಿಗೆ ತುತ್ತಾದವರ ಪಾಡು ಹೀನಾಯವಾಗುತ್ತದೆ. ಹೆಚ್.ಐ.ವಿ/ ಏಡ್ಸ್ ಬಾಧಿತರ ಸಹಾಯಕ್ಕೆ ಗಂಜೀಮಠ ಮತ್ತು ಮಂಗಳೂರಿನಲ್ಲಿ ಆಶ್ರಮಗಳಿವೆ. ಇಲ್ಲಿ ರೋಗದ ಸೋಂಕಿನಿಂದ ಬಳಲುವವರಿಗೆ ಪ್ರೀತಿಯಿಂದ ಆರೈಕೆ ಮಾಡುವುದು ಮಾತ್ರವಲ್ಲದೆ ಸಮಾಧಾನವಾಗಿ ತಮ್ಮ ಅಂತಿಮ ದಿನಗಳನ್ನು ಕಳೆಯುವಂತೆ ಭರವಸೆಯನ್ನು ಮೂಡಿಸುವ ವಿಶಿಷ್ಟ ಕಾರ್ಯವನ್ನು ಮಿಶನರಿಗಳು ಮಾಡಿದ್ದಾರೆ. ಅಂತೆಯೇ ಪಂಚಮರಿಗೆ, ಕಿವುಡರಿಗೆ, ವಿಧವೆಯರಿಗೆ, ಕೊರಗರಿಗೆ, ಆರ್ತರಿಗೆ, ಅನಾಥರಿಗೆ, ವಿಕಲ ಚೇತನರಿಗೆ, ಸೇವೆಯನ್ನು ವಿಸ್ತರಿಸುವುದರೊಂದಿಗೆ ಮಾನವ ಜೀವ ಎಷ್ಟು ಅಮೂಲ್ಯ ಎಂಬುದನ್ನು ಜಗತ್ತಿಗೇ ಸಾರಿ ಹೇಳುವ ಮತ್ತು ಇತರರು ಅಂತಹ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಲ್ಲಿ ಪ್ರೇರೇಪಣೆ ನೀಡುವಲ್ಲಿ ಯಶಸ್ವಿಯಾಗಿರುವುದೇ ಅವರ ಮಹತ್ತರ ಸಾಮಾಜಿಕ ಕೊಡುಗೆಯಾಗಿದೆ.

## ಕೊನೆ ಟಿಪ್ಪಣಿ

೧. ಫಾ। ಮಾರ್ಕ್ ವಾಲ್ಡಾರ್, ''ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮಸಭೆಯ ಪಾತ್ರ'', ಕೃಷ್ಣ ಭಟ್ ಅಡ್ಯನಡ್ಕ, (ಸಂಪಾದಿಸಿದ) ಸುದರ್ಶನ, ತೋನ್ಸೆ ಮಾಧವ ಅನಂತ ಪೈ ಅಭಿನಂದನಾ ಗ್ರಂಥ , ವಿಜಯ ಕಾಲೇಜ್, ಮೂಲ್ಕಿ, ೧೯೭೭ . ಪುಟ ೩೯೦

೨. ಕ್ಯಾಥರಿನ್ ರೊಡ್ರಿಗಸ್, ಕಟ್ಪಾಡಿ, ''ತುಳುನಾಡಿಗೆ ಕ್ರೈಸ್ತರ ಕೊಡುಗೆ'', *ಗುರುತು ವಿಶೇಷಾಂಕ*, ಡಿಸೆಂಬರ್ ೨೦೦೯, ಪುಟ ೮೮

೩. ಬಿ.ಎಂ.ಆರ್ – ೧೮೯೬, ಪುಟ ೭೭

೪. ಬಿ.ಎಂ.ಆರ್ – ೧೮೪೩, ಪುಟಗಳು ೩೩, ೩೪

೫. ಬೆನೆಟ್ ಜಿ. ಅಮ್ಮನ್ನ, ''ಸಿ.ಎಸ್.ಐ. ಯುನಿಟಿ ಸಭೆ, ಮುಲ್ಕಿ ಚರಿತ್ರೆಯ ಪುಟಗಳಲ್ಲಿ .... ಸಿ.ಎಸ್.ಐ.ಯುನಿಟಿ ದೇವಾಲಯ ಮೂಲ್ಕಿ,'' ಸಂಪಾದಕೀಯ ಮಂಡಳಿ ಶತಮಾನೋತ್ತರ ಸ್ವರ್ಣ ಮಹೋತ್ಸವದ ಸ್ಮರಣ ಸಂಚಿಕೆ, ೨೦೦೮ ಪುಟಗಳು ೩೦,೫೦,೭೪-೭೫, ೯೬,೯೭; ಲೆನಿನ್ ಅಮ್ಮನ್ನ, ''ಮಕ್ಕಳ ಮಧ್ಯೆ ಸೇವೆ ಸಲ್ಲಿಸುತ್ತಿರುವ ಸಹ ಸಂಸ್ಥೆಗಳು ಹಾಗೂ ಶಿಕ್ಷಣ ಕ್ಷೇತ್ರಕ್ಕೆ ಇವುಗಳ ಪೂರಕ ಸೇವೆ'', ಸಂಪಾದಕೀಯ ಮಂಡಳಿ ಬೆಳ್ಳಿಹಬ್ಬದ ಸ್ಮರಣ ಸಂಚಿಕೆ, ಕರ್ನಾಟಕ ಸದರ್ನ್ ಡಯಾಸಿಸ್ ಎಜುಕೇಷನ್ ಸೊಸೈಟಿ, (೧೯೭೪-೨೦೦೧) ,ಮಂಗಳೂರು ಪುಟ ಸಂಖ್ಯೆ ಇಲ್ಲ; ಪಿಡಬ್ಲ್ಯುಪಿ, ಪುಟ ೧೦೮

೬. ಬಿ.ಎಂ.ಆರ್. – ೧೮೮೧, ಪುಟ ೬೦

೭. ಬಿ.ಎಂ.ಆರ್. – ೧೮೮೬, ಪುಟ ೪೫

೮. ಬೆನೆಟ್ ಜಿ. ಅಮ್ಮನ್ನ, ಪೂರ್ವೋಕ್ತ, ಪುಟಗಳು ೫೧, ೫೨

೯. ಬಿ.ಎಂ.ಆರ್ – ೧೮೬೦, ಪುಟ ೨೩

೧೦. ಬಿ.ಎಂ.ಆರ್ – ೧೮೮೫, ಪುಟ ೩೪

೧೧. ಪಿ.ಡಬ್ಲ್ಯುಪಿ, ಪುಟ ೧೦೯

೧೨. ಬಿ.ಎಂ.ಆರ್ – ೧೮೭೧, ಪುಟ ೩೪

೧೩. ದ ಹಾರ್ವೆಸ್ಟ್ ಫೀಲ್ಡ್ (೧೮೮೫-೧೮೮೬)- ಸಂಪುಟ .೬, ದ ರೆಕಾರ್ಡ್ ಆಫ್ ಮಿಶನ್ ವರ್ಕ್ ಇನ್ ಇಂಡಿಯ ಆಂಡ್ ಸಿಲೋನ್, ಅಡ್ಡಿಸನ್ ಎಂಡ್ ಕಂಪನಿ, ಮದ್ರಾಸ್, ಪುಟ ೨೩೯

೧೪. ಅದೇ, ಪುಟ ೨೪೦

೧೫. ಇ. ಡಯಾಸ್, ದ ಹಾರ್ವೆಸ್ಟ್ ಫೀಲ್ಡ್ – (೧೮೮೭-೧೮೮೮) ಸಂಪುಟ ೮ , ಪುಟ ೧೯೩

೧೬. ಪಿ.ಡಬ್ಲ್ಯು.ಪಿ, ಪುಟ ೧೦೯

೧೭. ಇ. ಡಯಾಸ್ ಪೂರ್ವೋಕ್ತ, ಪುಟ ೧೯೪; ಪಿ.ಡಬ್ಲ್ಯು.ಪಿ, ಪುಟಗಳು ೧೫೮, ೧೫೯

೧೮. ಪಿ.ಡಬ್ಲ್ಯು.ಪಿ, ಪುಟಗಳು ೧೨೮, ೧೨೯

೧೯. ಬಿ.ಎಂ.ಆರ್ – ೧೮೮೪, ಪುಟ ೮

೨೦. ರೆವೆ. ಎಂ.ಟಿ.ಆರ್ ಪಾಲ್, ದ ಪಾಥ್ ವಿ ಟ್ರೆಡ್ (೧೮೩೪-೧೯೫೯), ವರ್ಕ್ ಆಫ್ ದ ಮಿಶನ್ ಈಸ್ ದ ವರ್ಕ್ ಆಫ್ ದ ಸ್ಪೀರಿಟ್; ಪಿ.ಡಬ್ಲ್ಯು.ಪಿ, ''ಪುತ್ತೂರು ಇತಿಹಾಸ ದರ್ಶನ'' ಪುತ್ತೂರು: ಇತಿಹಾಸ ಮತ್ತು ಸಂಸ್ಕೃತಿ ಅಧ್ಯಯನ ಕೇಂದ್ರ , ವಿವೇಕಾನಂದ ಕಾಲೇಜು ೨೦೦೩ ಪುಟಗಳು ೧೪೯, ೧೫೦; ಪಿ.ಡಬ್ಲ್ಯು.ಪಿ, ''ಬಾಸೆಲ್ ಮಿಶನ್ ಇನ್ ಸೌತ್ ಕೆನರಾ (೧೮೩೪-೧೯೪೭)'', ಅಪ್ರಕಟಿತ ಮಹಾಪ್ರಬಂಧ,ಇತಿಹಾಸ ವಿಭಾಗ ಮಂಗಳೂರು ವಿಶ್ವವಿದ್ಯಾಲಯ, ೧೯೮೮ ಪುಟಗಳು ೧೨೮, ೧೨೯

೨೧. ಲೆನಿನ್ ಅಮ್ಮನ್ನ ಪೂರ್ವೋಕ್ತ, ಪುಟ ಸಂಖ್ಯೆ ಇಲ್ಲ

೨೨. ಅದೇ,

೨೩. ಫ। ಬರ್ನಾಡಿತ್ ಡಿ'ಸೋಜಾ, ''ಜೆನೆಸಿಸ್ ಆಫ್ ಮ್ಯಾಂಗಲೂರ್ ಪ್ರಾವಿನ್ಸ್'',ಮಂಗಳೂರು : ಸೆಂಟನರಿ ಸಾವೆಸಿಯರ್ (೧೮೯೮-೧೯೯೮), ಸಿಸ್ಟರ್ಸ್ ಆಫ್ ಚಾರಿಟಿ, ೧೯೯೪ .ಪುಟಗಳು ೫೩-೮೫

೨೪. ಫಿಫ್ಟಿ ಇಯರ್ಸ್ ಆಫ್ ಮ್ಯಾಂಗಲೂರ್ ಪ್ರಾವಿನ್ಸ್ (೧೯೩೬-೧೯೮೬),ಮಂಗಳೂರು: ಸಿಸ್ಟರ್ಸ್ ಆಫ್ ಚಾರಿಟಿ, ಪುಟಗಳು ೨-೧೫

೨೫. ಒಕ್ಟೇವಿಯಾ ಅಲ್ಬುಕರ್ಕ್, "ಸೋಶಿಯಲ್ ವರ್ಕ್ ಇನ್ ಮ್ಯಾಂಗಲೂರ್", ಸೆಂಟಿನರಿ ಸೆಲೆಬ್ರೇಷನ್ ಸಾವೆನಿಯರ್, ಮ್ಯಾಂಗಲೂರ್ ಮುನ್ಸಿಪಾಲಿಟಿ (೧೮೬೬-೧೯೬೬), ಪುಟ ೮೨

೨೬. ಆಲ್ಬನ್ ಕ್ಯಾಸ್ಟಲಿನೊ, " ಸಾಂತ್ ಆಂತೋನಿಚೊ ಆಸ್ರೋ (ಕೊಂಕಣಿ), ಫಾ। ಎ.ಎಫ್. ಡಿ.ಸೋಜಾ ರಾಕಣೋ ಬೆಳ್ಳಿಹಬ್ಬದ ಸಂಚಿಕೆ (೧೯೩೯-೧೯೬೬) ,ಕೋಡಿಯಲ್‌ಬೈಲ್ ಪ್ರೆಸ್ ಮಂಗಳೂರು, ಪುಟ ೮೨

೨೭. ಅದೇ, ಪುಟಗಳು ೯೩, ೯೪

೨೮. ಎಂ.ಎಂ. ಸಂಪುಟ ೪,- ೧೯೦೮ ಪುಟಗಳು ೩೦೮-೨೧೦

೨೯. ಬಿ.ಎಂ.ಆರ್. - ೧೯೦೭ ಪುಟ ೪೦

೩೦. ಆಲ್ಬನ್ ಕ್ಯಾಸ್ಟಲಿನೊ, ಪೂರ್ವೋಕ್ತ, ಪುಟಗಳು ೯೩-೯೫

೩೧. ಎಂ.ಎಂ.ಸಂಪುಟ- ೪, ೧೯೦೮ ಪುಟ ೩೧೦

೩೨. ಫಾ। ರೋನಾಲ್ಡ್ ಕುಟಿನ್ಹಾ, (ಸಂಪಾದಿಸಿದ) `ಏಕತಾ` ದ ಡೈರೆಕ್ಟರಿ ಆಫ್ ದ ಕ್ರಿಶ್ಚಿಯನ್ ಚರ್ಚಸ್ ಇನ್ ದಕ್ಷಿಣ ಕನ್ನಡ ಆಂಡ್ ಉಡುಪಿ ಡಿಸ್ಟ್ರಿಕ್ಟ್ಸ್ ' ಕೊಡಿಯಾಲ್‌ಬೈಲ್ ಪ್ರೆಸ್, ಮಂಗಳೂರು, ೨೦೦೩ , ಪುಟ ೭೬; ಫಾ। ಅಲೆಗ್ಸಾಂಡರ್ ಲೂವಿಸ್ ಅವರೊಂದಿಗೆ ೧೦ ಸೆಪ್ಟೆಂಬರ್, ೨೦೦೮ರಲ್ಲಿ ನಡೆಸಿದ ಸಂದರ್ಶನದಿಂದ ಸಂಗ್ರಹಿಸಿದ ಮಾಹಿತಿ.

೩೩. ವಿಶಾಂಝ್ ಪಿಂಟೋ, " ಮೈಗ್ರೇಶನ್ ಆಫ್ ದ ಕ್ಯಾಥೋಲಿಕ್ಸ್ ಆಫ್ ಸೌತ್ ಕೆನರಾ ಎಂಡ್ ಇಟ್ಸ್ ಸೋಶಿಯೊ- ಇಕಾನಾಮಿಕ್ ಡೈಮೆನ್ಶನ್ಸ್ (೧೯೦೦-೧೯೮೦)", ಅಪ್ರಕಟಿತ ಮಹಾಪ್ರಬಂಧ,ಇತಿಹಾಸ ವಿಭಾಗ ಮಂಗಳೂರು ವಿಶ್ವವಿದ್ಯಾಲಯ, ೨೦೦೯, ಪುಟ ೧೧೬

೩೪. ಭ। ರೊಸ್ಲಿಟಾ, "ದ ಫಸ್ಟ್ ಹೈಸ್ಕೂಲ್ ಆಫ್ ಬೆಥನಿ" , ಬೆಥನಿ ಎಜುಕೇಷನ್ ಸೊಸೈಟಿ (ಬಿ.ಇ.ಎಸ್.)ಎಡಿಟೋರಿಯಲ್ ಬೋರ್ಡ್ ಗೋಲ್ಡನ್ ಜುಬಿಲಿ ಸಾವೆನಿಯರ್ (೧೯೪೮-೧೯೯೮), ಮಂಗಳೂರು , ಪ್ರಸಾದ್ ಪ್ರಿಂಟರ್ಸ್, ಕುಲಶೇಖರ ಪುಟ ೬೭

೩೫. ವಿಶಾಂಝ್ ಪಿಂಟೋ, ಪೂರ್ವೋಕ್ತ, ಪುಟ ೧೧೬

೩೬. ಭ। ಥೆರೇಸಿನ್, " ರೋಸಾ ಮಿಸ್ತಿಕಾ ಎ ಕ್ರೆಡಲ್ ಆಫ್ ಎಜುಕೇಷನ್", ಬಿ.ಇ.ಎಸ್., ಪೂರ್ವೋಕ್ತ, ಪುಟಗಳು ೮೧, ೮೨

೩೭. ಭ। ಮೇರಿ ಲೈಟಾ, "ಪ್ಲಾಂಟೆಡ್ ಎಂಡ್ ನರ್ಚರ್ಡ್ ಬೈ ದ ಪೌಂಡರ್" , ಪೂರ್ವೋಕ್ತ, ಪುಟ ೭೧

೩೮. ಫಿಫ್ಟಿ ಇಯರ್ಸ್ ಆಫ್ ಮ್ಯಾಂಗಲೂರ್ ಪ್ರಾವಿನ್ಸ್, ಸ್ಟಿಸರ್ ಅಫ್ ಚಾರಿಟಿ , ಮಂಗಳೂರು ೧೯೮೨ ಪುಟ ೭೨

೩೯. ಫಾ। ರೋನಾಲ್ಡ್ ಕುಟಿನ್ಹಾ, ಪೂರ್ವೋಕ್ತ, ಪುಟ ೧೪೨

೪೦. ಅದೇ, ಪುಟ ೧೨೪; ವಿಶಾಂಝ್ ಪಿಂಟೋ, ಪೂರ್ವೋಕ್ತ, ಪುಟ ೧೧೬

೪೧. ಅದೇ, ಪುಟ ೧೬೦; ಅದೇ, ಪುಟ ೧೧೬

೪೨. ಅದೇ , ಪುಟ ೪೮

೪೩. ಫಾ। ಅವಲಿನ್ ಆರ್. ಡಿ'ಸೋಜಾ, "ಸಿಸ್ಟರ್ಸ್ ಕೊಲಬರೇಷನ್ ಇನ್ ಜೆಸ್ಯಿಟ್ ಮಿನಿಸ್ಟ್ರಿ", ಎಡಿಟೋರಿಯಲ್ ಬೋರ್ಡ್ ಸೆಂಟಿನರಿ ಸಾವೆನಿಯರ್ (೧೮೯೮-೧೯೯೮), ಸಿಸ್ಟರ್ಸ್ ಆಫ್ ಚಾರಿಟಿ,ಮಂಗಳೂರು, ೧೯೯೮ ಪುಟಗಳು ೧೬೦, ೧೬೧

೪೪. ಅದೇ ,ಪುಟಗಳು ೪೫೬, ೪೫೭

೪೫. ಅದೇ, ಪುಟ ೪೫೭

೪೬. ಅದೇ , ಪುಟಗಳು ೪೫೭, ೪೫೮

೪೭. ಅದೇ, ಪುಟ ೪೫೮

೪೮. ಅದೇ , ಪುಟಗಳು ೪೫೯, ೪೬೦

೪೯. ಪಿನ್ಸೆಂಟ್ ಆಳ್ವ, "ಐರ್ಘೊನಂ ಹೋಮ್ ಫಾರ್ ದ ಏಜ್ಡ್," ಎಡಿಟೋರಿಯಲ್ ಬೋರ್ಡ್ ಬೆಳ್ಳಿಹಬ್ಬದ ಸ್ಮರಣಾ ಸಂಚಿಕೆ, ಸ್ಮೃತಿ ಪ್ರಕಾಶನ, ಉಡುಪಿ, ೨೦೦೭, ಪುಟಗಳು ೫೬, ೫೭

೫೦. ವಿಶಾಂರ್ಯು ಪಿಂಟೋ, ಪೂರ್ವೋಕ್ತ ಪುಟ ೨೬೩

೫೧. ಫಾ। ರೋನಾಲ್ಡ್ ಕುಟಿನ್ಹೊ ಪೂರ್ವೋಕ್ತ, ಪುಟ ೨೩; ಒಕ್ಟೇವಿಯಾ ಅಲ್ಬುಕರ್ಕ್ ಪೂರ್ವೋಕ್ತ, ಪುಟ ೮೫

೫೨. ಹನ್ನಾ ಎಷಿಮನ್ನ್, "ದ ಆಶ್ರಮ್ ಎಟ್ ಪರ್ಪಲೆ", ಗಾಡ್ವಿನ್ ಶಿರಿ, (ಸಂಪಾದಿಸಿದ) *ಹೋಲ್ನೆಸ್ ಇನ್ ಕ್ರೈಸ್ಟ್ ದ ಲೆಗಸಿ ಆಫ್ ದ ಬಾಸೆಲ್ ಮಿಶನ್ ಇನ್ ಇಂಡಿಯಾ* ಮಂಗಳೂರು : ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ, ಬಲ್ಮಠ,, ೨೦೦೯, ಪುಟ

೫೩. ಪೀಟರ್ ವಿಲ್ಸನ್ ಪ್ರಭಾಕರ್, " ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್", ಪುತ್ತೂರು ಕನ್ನಡ ಸಂಘ, ವಿವೇಕಾನಂದ ಕಾಲೇಜು, ೧೯೮೯, ಪುಟ ೨೭

೫೪. ಪಿ.ಡಬ್ಲ್ಯು.ಪಿ. "ಬಾಸೆಲ್ ಮಿಶನ್ ಇನ್ ಸೌತ್ ಕೆನರಾ(೧೮೩೪-೧೯೪೭)" ಅಪ್ರಕಟಿತ ಮಹಾಪ್ರಬಂಧ ಇತಿಹಾಸ ವಿಭಾಗ , ಮಂಗಳೂರು ವಿಶ್ವವಿದ್ಯಾಲಯ ೧೯೯೮ ಪುಟ ೧೬೮

೫೫. ಜಾನ್ ಆ್ಯಂಡ್ರ್ಯೂ, "ಕ್ರೈಸ್ತ ಸೇವೆಯಲ್ಲಿ ಕ್ರಿಸ್ತ ಸೇವಕಿ ಆಶ್ರಮ, ಪರ್ಪಲೆ ಇದರ ಕೊಡುಗೆ", ಬಿ.ಡಿ. ಸಂಪ್ರಬಂಧ ಕರ್ನಾಟಕ ದೈವಶಾಸ್ತ್ರ ಮಹಾ ವಿದ್ಯಾಲಯ, ಬಲ್ಮಠ, ಮಂಗಳೂರು, ೧೯೯೭, ಪುಟಗಳು ೩, ೪, ೧೪

೫೬. ಕ್ರಾಂತಿ ಕೆ. ಫರಾಯಸ್, "ದ ಕ್ರಿಶ್ಚಿಯನ್ ಇಂಪ್ಯಾಕ್ಟ್ ಇನ್ ಸೌತ್ ಕೆನರಾ" ಮುಂಬೈ: ಚರ್ಚ್ ಹಿಸ್ಟರಿ ಅಸೋಶಿಯೇಷನ್ ಆಫ್ ಇಂಡಿಯಾ, ನ್ಯೂ ಏಜ್ ಪ್ರಿಂಟಿಂಗ್ ಪ್ರೆಸ್, ೧೯೯೯, ಪುಟ ೧೪೮

೫೭. ಎಡ್ವರ್ಡ್ ಎಲ್ ನಜರೆತ್, "ಭಲಾಯ್ಕ ಕ್ಷೇತ್ರಾಂತ್ ಕೊಂಕಣಿ ಲೋಕ್ (ಕೊಂಕಣಿ)", ರಾಕ್ಣೊ ಸಂಪಾದಕೀಯ ಮಂಡಳಿ, 'ರಾಕ್ಣೊ' ಗೋಲ್ಡನ್ ಜುಬಿಲಿ ಸಾವೆನಿಯರ್ (೧೯೩೮-೧೯೮೮), ಕೊಡಿಯಾಲ್‌ಬೈಲ್ ಪ್ರೆಸ್, ಮಂಗಳೂರು, ೧೯೮೮, ಪುಟ ೭೦; ಭ। ವೀಡಾ ಒಲಿವೆರಾ, "ಇನ್ ದ ಕೇರ್ ಆಫ್ ದ ಸಿಕ್ ಅಂಡ್ ದ ಸಫರಿಂಗ್", ಎಡಿಟೋರಿಯಲ್ ಬೋರ್ಡ್ ಸೆಂಟಿನರಿ ಸಾವೆನಿಯರ್, ಸಿಸ್ಟರ್ಸ್ ಆಫ್ ಚಾರಿಟಿ ಇನ್ ಮ್ಯಾಂಗಲೋರ್, ಮಂಗಳೂರು, ೧೯೯೮ , ಪುಟಗಳು ೧೧೧, ೧೧೨

೫೮. ಭ। ಲೂಸಿಯವರೊಂದಿಗೆ ೧೦ ಅಕ್ಟೋಬರ್ ೨೦೦೯ರಂದು ನಡೆಸಿದ ಸಂದರ್ಶನದಿಂದ ಸಂಗ್ರಹಿಸಿದ ಮಾಹಿತಿ.

೫೯. ಫಾ। ಫ್ರೆಡರಿಕ್ ಮಸ್ಕರೇನ್ಹಸ್, "ಒರ್ಝೊನಂ ಹೋಮ್: ಎ ಹೆವನ್ ಫಾರ್ ದ ಏಜ್ಡ್". ಎಡಿಟೋರಿಯಲ್ ಬೋರ್ಡ್ ಒರ್ಝೊನಂ ಹೋಮ್ ಫಾರ್ ದ ಏಜ್ಡ್ ಸಿಲ್ವರ್ ಜ್ಯೂಬಿಲಿ ಸಾವೆನಿಯರ್ (೧೯೮೨-೨೦೦೭) ಪ್ರುತಿ ಪ್ರಕಾಶನ, ಉಡುಪಿ. ಪುಟ ೧೬

೬೦. ಗ್ರೆಗರಿ ಡೇಸಾ, ಪೂರ್ವೋಕ್ತ ,ಪುಟಗಳು ೧೭, ೧೮

೬೧. ಫಾ। ಫ್ರೆಡರಿಕ್ ಮಸ್ಕರೇನ್ಹಸ್, ಪೂರ್ವೋಕ್ತ, ಪುಟ ೧೬

೬೨. ಗ್ರೆಗರಿ ಡೇಸಾ, ಪೂರ್ವೋಕ್ತ, ಪುಟಗಳು ೧೮- ೨೧; ಒರ್ಝೊನಂ ಆಶ್ರಮವಾಸಿಗಳನ್ನು ಹಾಗೂ ಬೆಥನಿ ಧರ್ಮಭಗಿನಿಯರನ್ನು ಸಂದರ್ಶಿಸಿ, ೧೯ ನವಂಬರ್ ೨೦೧೧ರಂದು ಸಂಗ್ರಹಿಸಿದ ಮಾಹಿತಿ

೬೩. ರೋಕಿ ಸಲ್ಡಾನ್ಹ, ' ಒರ್ಝೊನಂ ಹೋಮ್ ಫಾರ್ ದ ಏಜ್ಡ್',ಪೂರ್ವೋಕ್ತ, ಪುಟಗಳು ೫೪, ೫೫

೬೪. ಬಜ್ಜೋಡಿಯ ' ಲಿಟ್ಲ್ ಸಿಸ್ಟರ್ಸ್ ಆಫ್ ದ ಪುವರ್' ಆಶ್ರಮಕ್ಕೆ ೧೦ ಜೂನ್ ೨೦೦೯ರಂದು ಭೇಟಿಕೊಟ್ಟು ಸಂದರ್ಶನದ ಮೂಲಕ ಸಂಗ್ರಹಿಸಿದ ಮಾಹಿತಿ

೬೫. ಜಯರಾಣಿ ವೃದ್ಧಾಶ್ರಮ, ತಲ್ಲೂರು ಇದರ ಮುಖ್ಯಸ್ಥರು ಹಾಗೂ ಆಶ್ರಮದ ವೃದ್ಧ-ವೃದ್ಧೆಯರು ನೀಡಿದ ಮಾಹಿತಿ

೬೬. ನಿತ್ಯಾಧಾರ ವೃದ್ಧಾಶ್ರಮದ ಮುಖ್ಯಸ್ಥರಾದ ಭ। ಬ್ಲಾಂಡಿನರವರ ಹಾಗೂ ಆಶ್ರಮವಾಸಿಗಳ ಸಂದರ್ಶನವನ್ನು ೨೦ ಡಿಸೆಂಬರ್ ೨೦೧೦ರಂದು ನಡೆಸಿ ಸಂಗ್ರಹಿಸಿದ ಮಾಹಿತಿ

೬೭. ವೈಟ್ ಡವ್ಸ್ ಹೋಮ್‌ನ ಆಶ್ರಮವಾಸಿಗಳ ಮೂಲಕ ಸಂಗ್ರಹಿಸಿದ ಮಾಹಿತಿ; ಎಡಿಟರ್ "ಶೇರಿಂಗ್ ಎಂಡ್ ಕೇರಿಂಗ್, ನ್ಯೂಸ್ ಲೇಟರ್ ವೈಟ್ ಡವ್ಸ್ (ರಿ.), ಕರಂಗಲ್‌ಪಾಡಿ , ಮಂಗಳೂರು, ೨೦೧೦.

೬೮. 'ಕರುಣಾಲಯ' ದ ಮುಖ್ಯಸ್ಥೆ ಭ। ಪುಷ್ಪಾ ಹಾಗೂ ಆಶ್ರಮವಾಸಿಗಳೊಂದಿಗೆ ನಡೆಸಿದ ಸಂದರ್ಶನದಿಂದ ಸಂಗ್ರಹಿಸಿದ ಮಾಹಿತಿ: ಫ್ರಾನ್ಸಿಸ್ಕನ್ ಸೆಕ್ಯುಲರ್ ಕುಂದಾಪುರ ವಲಯದ ಅಧ್ಯಕ್ಷೆ ರೀಟಾ ಪಿಕಾರ್ಡೊರವರಿಂದ ಪಡೆದ ಮಾಹಿತಿ

೬೯. ,ಸಂಪಾದಕೀಯ ಮಂಡಳಿ (ಸಂಪಾದಿಸಿದ) ಸೌಹಾರ್ದ ಸಂಪದ, ಸ್ಮರಣ ಸಂಚಿಕೆಬ್ಲೆಸಿಂಗ್ ಆಫ್ ಸೈಂಟ್ ಲಾರೆನ್ಸ್ ಕೆಥೆಡ್ರಲ್, ಉದಯ ಸಮೂಹ ಸಂಪರ್ಕ ಮಾಧ್ಯಮ, ಬೆಳ್ತಂಗಡಿ : ೨೦೦೭, ಪುಟಗಳು ೩೬,೩೭

೭೦. ಡೈರೆಕ್ಟರಿ ೨೦೧೧, ಮಂಗಳೂರು ಧರ್ಮಪ್ರಾಂತ್ಯ ,ಪುಟಗಳು ೭೧, ೧೯೩

೭೧. ಅದೇ, ಪುಟ ೧೮೮

೭೨. ಅದೇ, ಪುಟ ೧೯೫

೭೩. ಡೈರೆಕ್ಟರಿ ೨೦೧೧, ಮಂಗಳೂರು ಧರ್ಮಪ್ರಾಂತ್ಯ ,ಪುಟಗಳು ಪುಟ ೪೮೦

೭೪. ಅದೇ , ಪುಟಗಳು ೪೮೨- ೪೮೭

೭೫. ಭ। ಎಂ. ಲಿಸೆರಿಯ ಎ. ಸಿ., ಮತ್ತು ಭ। ಎಂ. ಸಿಲ್ವೆಟ್ಟ್," ದ ಎ.ಸಿ.ಸಿಂಫೋನಿ, ಎ ಹಿಸ್ಟರಿ ಆಫ್ ದ ಅಪೋಸ್ತಲಿಕ್ ಕಾರ್ಮೆಲ್ ಮಿಶನ್" , ಸಂಪುಟ ೫, ಹಾರ್ಟ್ಸ್ ಆನ್ ಫಾಯರ್, ಫೈಥ್ ಫಾರ್ಮೇಶನ್ (೧೮೬೮-೨೦೦೮) ಮಂಗಳೂರು : ೨೦೦೮ ಪುಟ ೫೧೯

೭೬. ಅದೇ , ಪುಟ ೫೨೨

೭೭. ಬೆನೆಟ್ ಜಿ ಅಮ್ಮನ್ನ, ೪೦ ವರ್ಷಕ್ಕೆ ಪಾದಾರ್ಪಣೆಗೊಳ್ಳುತ್ತಿರುವ ವಿದ್ಯಾರ್ಥಿ ನಿಲಯ (ಕಾಸೆಸ್ ಹಾಸ್ಟೆಲ್) ಕಾಸೆಸ್ ಹಾಸ್ಟೆಲಿನ ನಲ್ವತ್ತು ವರ್ಷಾಚರಣೆಯ ಸವಿನೆನಪಿಗಾಗಿ ಬರೆದ ಲೇಖನ; ರೆವೆ. ಜೇಮ್ಸ್ ಹಾಸ್ಟೆಲಿನ ಪಾಲಕರ ಸಂದರ್ಶನ ನಡೆಸಿ ಸಂಗ್ರಹಿಸಿದ ಮಾಹಿತಿ.

೭೮. ಸಿಸ್ಟರ್ಸ್ ಆಫ್ ದ ಅಡೋರೇಷನ್ ಆಫ್ ದ ಬ್ಲೆಸ್ಡ್ ಸಾಕ್ರಾಮೆಂಟ್

೭೯. ದ ಲಿಟ್ಲ್ ಫ್ಲವರ್ ಕಾಂಗ್ರೇಗೇಶನ್

೮೦. ಸೇಕ್ರೆಡ್ ಹಾರ್ಟ್ ಕಾಂಗ್ರೇಗೇಶನ್

೮೧. ಡಾಟರ್ಸ್ ಆಫ್ ಸೇಕ್ರೆಡ್ ಹಾರ್ಟ್ ಆಫ್ ಜೀಸಸ್

೮೨. ಡಯಾಸಿಸ್ ಆಫ್ ಬೆಳ್ತಂಗಡಿ, ಡೈರೆಕ್ಟರಿ ೨೦೧೧, ಪುಟಗಳು ೬೮, ೬೯

೮೩. ಮಂಗಳೂರು ಧರ್ಮ ಪ್ರಾಂತ್ಯ, ಡೈರೆಕ್ಟರಿ ೨೦೧೧ ಪುಟಗಳು ೨೭-೧೨೦

೮೪. ಎಂ. ಲಿಸೆರಿಯಾ ಮತ್ತು ಎಂ. ಸಿಲ್ವೆಟ್ಟೆ, ಪೂರ್ವೋಕ್ತ ,ಪುಟ ೫೨೩

೮೫. ಅದೇ, ಪುಟಗಳು ೫೨೭, ೫೨೮

೮೬. ಅದೇ , ಪುಟಗಳು ೫೩೨, ೫೩೩

೮೭. ಅದೇ , ಪುಟ ೫೩೪

೮೮. ಅದೇ , ಪುಟಗಳು ೫೩೯, ೫೪೦

೮೯. ಅದೇ , ಪುಟ ೫೪೦

೯೦. ಜೆರಿ ನಿಡ್ಡೋಡಿ, " ಒಳಕ್ " (ಕೊಂಕಣಿ)' ರಾಕ್ಣೊ' ಪಾಸ್ಕ ಹಬ್ಬದ ವಿಶೇಷ ಸಂಚಿಕೆ ೫ ಏಪ್ರಿಲ್ ೨೦೧೨, ಪುಸ್ತಕ ೭೪, ಅಂಕೊ –೧೮ , ಪುಟ ೧೭

೯೧. ಸಂಪಾದಕೀಯ ಮಂಡಳಿ, ಬೆಳ್ಳಿ ಹಬ್ಬದ ಸ್ಮರಣ ಸಂಚಿಕೆ (೧೯೭೪-೨೦೦೧), ಕರ್ನಾಟಕ ಸದರ್ನ್ ಡಯಾಸಿಸ್ ಎಜುಕೇಷನ್ ಸೊಸೈಟಿ, ಮಂಗಳೂರು, ಪುಟ ಸಂಖ್ಯೆ ಇಲ್ಲ

೯೨. ಪಿ.ಡಬ್ಲ್ಯು.ಪಿ. ಪೂರ್ವೋಕ್ತ ಪುಟಗಳು ೧೬೯, ೧೭೦

೯೩. ಫಾ। ರೊನಾಲ್ಡ್ ಕುಟಿನ್ಹೊ, 'ಏಕತಾ' , ಪೂರ್ವೋಕ್ತ, ಪುಟ ೪೪

೯೪. ರಾಕ್ಣೊ ( ಕೊಂಕಣಿ), ಪೂರ್ವೋಕ್ತ, ಪುಟಗಳು ೧೭, ೧೮

೯೫. ಅದೇ , ಪುಟ ೧೮

೯೬. ಜೆರ್ರಿ ನಿಡ್ಡೋಡಿ, " ವಿಭಿನ್ನ್ ಸಕ್ತೆಚಿಂ ಭುರ್ಗಿಂ ಆನಿಂ ಪಂಥಾಹ್ವಾನ,(ಕೊಂಕಣಿ)" ಪೂರ್ವೋಕ್ತ ಪುಟ ೯; ಭ। ಲೈಸಾ. ಮಾಸನ ಸಂಸ್ಥೆಯ ಪಾಲಕಿಯವರ ಸಂದರ್ಶನ ನಡೆಸಿ ಸಂಗ್ರಹಿಸಿದ ಮಾಹಿತಿ (೨೦-೧-೨೦೧೨)

೯೭. ಫ್ರಾನ್ಸಿಸ್ ಅಲಂಗಾರ್, "ವಿಭಿನ್ನ್ ಸಕ್ತೆವಂತಾಂ ಸವೆಂ ಅತ್ಮೊಚ್ ಸಂಸಾರ್ (ಕೊಂಕಣಿ)", ಪೂರ್ವೋಕ್ತ , ಪುಟ ೧೧

೯೮. ಎಡ್ವರ್ಡ್ ನಜರೆತ್, "ಥೊಡಿಂ ಕಿತ್ಯಾಕ್ ವಿಭಿನ್ನ್ ಸಕ್ತೆಚಿಂ ?" ಪೂರ್ವೋಕ್ತ, ಪುಟ ೧೫

೯೯. ರಾಕ್ಣೊ ಪಾಸ್ಖ ಹಬ್ಬದ ವಿಶೇಷ ಸಂಚಿಕೆ , ಪೂರ್ವೋಕ್ತ, ಪುಟ ೧೯

೧೦೦. ಎಡ್ವರ್ಡ್ ನಜರೆತ್, "ಥೊಡಿಂ ಕಿತ್ಯಾಕ್ ವಿಭಿನ್ನ್ ಸಕ್ತೆಚಿಂ ?" ಪೂರ್ವೋಕ್ತ, ಪುಟ ೧೯

೧೦೧. ರಾಕ್ಣೊ ಪಾಸ್ಖ ಹಬ್ಬದ ವಿಶೇಷ ಸಂಚಿಕೆ , ಪೂರ್ವೋಕ್ತ, ಪುಟ ೧೯

೧೦೨. ಭ। ರೆನಿಯವರ ಸಂದರ್ಶನ (೧೨-೦೭-೨೦೧೦) ನಡೆಸಿ ಸಂಗ್ರಹಿಸಿದ ಮಾಹಿತಿ

೧೦೩. ರಮಾನಾಥ್ ಕೋಟೆಕಾರ್, *ಗುರುತು*, ವಿಶೇಷಾಂಕ ಡಿಸೆಂಬರ್ ೨೦೦೯, ಪುಟ ೮೯

೧೦೪. ಡೈರೆಕ್ಟರಿ ೨೦೧೧, ಡಯಾಸಿಸ್ ಆಫ್ ಮ್ಯಾಂಗಲೂರ್, ಪುಟ ೨೧೩

೧೦೫. ಬಿನು ವರ್ಗಿಸ್, "ಸೌಹಾರ್ದ ಸಂಪುಟ" ಪೂರ್ವೋಕ್ತ, ಪುಟ ೨೧

೧೦೬. *ಪ್ರಜಾವಾಣಿ* ದಿನಪ್ರತಿಕೆ ಡಿಸೆಂಬರ್ ೧೯, ೨೦೧೦, ಪುಟ ೨೪

೧೦೭. ಫ್ರಾನಿಸ್ಸ್ ದಾಂತಿ, "ಬ್ಯಾಂಕಿಂಗ್ ಕ್ಷೇತ್ರಾಂತ್ ಕೊಂಕಣಿ ಲೊಕಾಚೊ ವಾವ್ರ್" 'ರಾಕ್ಣೊ' ಸಂಪಾದಕೀಯ ಮಂಡಳಿ, ಗೋಲ್ಡನ್ ಜುಬಿಲಿ ಸಾವೆನಿಯರ್, ಕೊಡಿಯಾಲ್‌ಬೈಲ್ ಪ್ರೆಸ್, ೧೯೮೮, ಮಂಗಳೂರು: ಪುಟಗಳು ೧೦೮.೧೦೯

೧೦೮. ಅದೇ , ಪುಟಗಳು ೧೧೦, ೧೧೧

೧೦೯. ಶತಪದಿ ( ೧೯೧೨-೨೦೧೨), ಮಂಗಳೂರು ಕಥೋಲಿಕ್ ಕೋ-ಒಪರೇಟಿವ್ ಬ್ಯಾಂಕ್ ಲಿಮಿಟೆಡ್, ಸಾಧನೆಯ ಹಾದಿಯ ಶತ ಸಂಭ್ರಮದ ದರ್ಶನ , ಪುಟ ೩

೧೧೦. ಅದೇ , ಪುಟ ೩-೫

೧೧೧. ಐ. ಸಾಮ್ಯುವೆಲ್ ದ ಪ್ರೊಟೆಸ್ಟೆಂಟ್ ಕ್ರಿಶ್ಚಿಯನ್ ಕೋ – ಅಪರೇಟಿವ್ ಸೊಸೈಟಿ ಆಂಡ್ ಹೊಸೈರಿ ಇಂಡಸ್ಟ್ರಿ - ಬಲ್ಮಠ ಸಂಯುಕ್ತ ಬಾಸೆಲ್ ಮಿಶನ್ ಬಲ್ಮಠ ಶಾಂತಿ ದೇವಾಲಯದ ಶತಮಾನೋತ್ಸವದ ಸ್ಮಾರಕ ಸಂಚಿಕೆ (೧೮೬೨-೧೯೬೨) ಬಾಸೆಲ್ ಮಿಶನ್ ಪ್ರೆಸ್, ಮಂಗಳೂರು ೧೯೬೨.

೧೧೨. ಸಂಪಾದಕರು , ಸಿಲ್ವರ್ ಜುಬಿಲ್ ಸಾವೆನಿಯರ್ (೧೯೧೮-೧೯೪೩) ದ ಪ್ರೊಟೆಸ್ಟೆಂಟ್ ಕ್ರಿಶ್ಚಿಯನ್ ಕೋ – ಅಪರೇಟಿವ್ ಸೊಸೈಟಿ (ರಿ), ಮ್ಯಾಂಗಲೂರ್ ಸೌತ್ ಇಂಡಿಯಾ ಬಾಸೆಲ್ ಮಿಶನ್ ಪ್ರೆಸ್, ಮಂಗಳೂರು- ೧೯೬೩ ಪುಟ ೪

೧೧೩. ಅದೇ , ಪುಟ ೫

೧೧೪. ಅದೇ , ಪುಟ ೬

೧೧೫. ಅದೇ , ಪುಟ ೭

೧೧೬. ಐ. ಸಾಮ್ಯುವೆಲ್, ಪುಟ ೬೬, ೬೭

೧೧೭. ಅದೇ , ಪುಟ ೮, ೯

೧೧೮. *ಆಮ್ಚೊ ಸಂದೇಶ್* (ಕೊಂಕಣಿ), ಕಥೋಲಿಕ ಸಭೆ ಮಾಸಿಕ ಪತ್ರಿಕೆ ಅಕ್ಟೋಬರ್ ೨೦೧೧, ಪುಟಗಳು ೪೬,೪೭

೧೧೯. ಎಡಿಟೋರಿಯಲ್ ಬೋರ್ಡ್‌ಸೈಂಟ್ ಎಲೋಶಿಯಸ್ ಕಾಲೇಜ್ , ಮ್ಯಾಂಗಲೂರ್ ಆ್ಯನ್ವಲ್ ೧೨೫ ( ೨೦೦೪-೨೦೦೫), ಪುಟ ೯; ದ ಪೋಸ್ಟ್ - ಸೆಂಟಿನರಿ ಸಿಲ್ವರ್ ಜುಬಿಲಿ ಸಾವೆನಿಯರ್, ಪುಟ ೭೬

೧೨೦. ಫಾ। ಮಾರ್ಕ್ ವಾಲ್ಡಾರ್, ಪೂರ್ವೋಕ್ತ ಪುಟ ೩೯೧

೧೨೧. ಅದೇ , ಪುಟ ೩೯೨

೧೨೨. ಅದೇ , ಪುಟ ೩೯೨

೧೨೩. ಫಾ। ಪಿಯೂಸ್ ಫಿಡೆಲಿಸ್ ಪಿಂಟೋ, "ಕ್ರಿಶ್ಚಿಯನ್ ಕಾಂಟ್ರಿಬ್ಯೂಷನ್ ಟು ರಿಲಿಜಿಯಸ್ ಹಾರ್ಮೋನಿ ಇನ್ ಸೌತ್ ಕೆನರಾ", ಪುಟಗಳು ೪೧, ೪೨

೧೨೪. "ಸೌಹಾರ್ದ ಸಂಪದ", ಪೂರ್ವೋಕ್ತ , ಪುಟಗಳು ೧೯-೨೧

೧೨೫. ವಿಶಾಂಜ್ ಪಿಂಟೋ ಪೂರ್ವೋಕ್ತ ಪುಟಗಳು ೬೪,೬೫

೧೨೬. ಅದೇ, ಪುಟಗಳು ೯೦,೯೧

೧೨೭. *ಕ್ರೈಸ್ತ ಸಭಾ ಪತ್ರವು*, ಮೇ ೧೮೮೪, ಪುಟಗಳು ೧೭೨, ೧೭೩

೧೨೮. ಡೆನಿಸ್ ಫೆರ್ನಾಂಡಿಸ್, ಪೂರ್ವೋಕ್ತ, ಪುಟ ೨೬೭
೧೨೯. ಬಿ.ಎಂ.ಆರ್.- ೧೯೦೭, ಪುಟಗಳು ೪೧, ೪೨
೧೩೦. ಬಿ.ಎಂ.ಆರ್. - ೧೮೦೭ , ಪುಟ ೪೪
೧೩೧. ಬಿ.ಎಂ.ಆರ್. - ೧೯೦೯, ಪುಟ ೫೨
೧೩೨. ಮನೋಜ್ ಕುಮಾರ್, ''ಮಹಿಳೆಯರ ಸಶಕ್ತೀಕರಣ ಮತ್ತು ಸಲಹಾ ಸೇವೆ - ಪ್ರಜ್ಞಾ ಸಲಹಾ ಕೇಂದ್ರದ ಕೊಡುಗೆ- ಒಂದು ಅಧ್ಯಯನ'' , ಅಪ್ರಕಟಿತ ಬಿ.ಡಿ.ಸಂಪ್ರಬಂಧ , ಕರ್ನಾಟಕ ಥಿಯೋಲಾಜಿಕಲ್ ಕಾಲೇಜು, ಮಂಗಳೂರು, ೨೦೧೧
೧೩೩. "ಸೌಹಾರ್ದ ಸಂಪದ", ಪೂರ್ವೋಕ್ತ, ಪುಟಗಳು ೩೩, ೩೪
೧೩೪. ಮದ್ಯವರ್ಜನ ಕೇಂದ್ರದ ನಿರ್ದೇಶಕಿಯಾಗಿರುವ ಭ। ಬರ್ನಾರ್ಡಿನ್‌ರವರ ಸಂದರ್ಶನ ನಡೆಸಿ ಸಂಗ್ರಹಿಸಿದ ಮಾಹಿತಿ
೧೩೫. ವಿಶಾಂಜ್ ಪಿಂಟೋ ಪೂರ್ವೋಕ್ತ ಪುಟ ೨೬೫
೧೩೬. ವಿನಯ್ ರಜತ್ ಡಿ., ''ಕಾಸ್ಟ್, ಎಮೊಂಗ್ ಕ್ರಿಶ್ಚಿಯನ್ಸ್ – ಎ ಸ್ಟಡಿ ಆಫ್ ರೋಮನ್ ಕ್ಯಾಥೋಲಿಕ್ಸ್ ಆಫ್ ಕೋಸ್ಟಲ್ ಕರ್ನಾಟಕ'', *ಸಮಾಜ ಶೋಧನಾ*, ಜರ್ನಲ್ ಆಫ್ ದ ಮ್ಯಾಂಗಲೂರ್ ಸೋಶಿಯಾಲಾಜಿ ಅಸೋಶಿಯೇಷನ್, ಸಂಪುಟ – ೧೦, ನಂ. ೧- ೨, ಮಾರ್ಚ್- ಅಕ್ಟೋಬರ್, ೨೦೦೧, ಪುಟಗಳು ೬೨-೬೩
೧೩೭. ಕ್ರಾಂತಿ ಕೆ. ಫರಾಯಸ್, ಪೂರ್ವೋಕ್ತ, ಪುಟಗಳು ೧೨೦-೧೨೧
೧೩೮. ವಿನಯ್ ರಜತ್ ಡಿ., ಪೂರ್ವೋಕ್ತ , ಪುಟ ೬೩
೧೩೯. ಅದೇ , ಪುಟಗಳು ೬೩-೬೬
೧೪೦. ವಿಶಾಂಝ್ ಪಿಂಟೋ, ಪೂರ್ವೋಕ್ತ ಪುಟ ೬೨
೧೪೧. ಫಾ। ಇಮಾನ್ಯುವೆಲ್ ಬೊಝಿ, *ಎಮಂಗ್ ದಿ ಔಟ್ ಕಾಸ್ಟ್ಸ್ : ಎ ಹಿಸ್ಟರಿ ಆಫ್ ದ ಪಯೋನಿಯರಿಂಗ್ ಜೆಸ್ವಿಟ್ ಮಿಶನರೀಸ್ ಇನ್‌ ದ ಡಯಾನಿಸ್ ಆಫ್ ಮ್ಯಾಂಗಲೂರ್*, ಮಂಗಳೂರು: ಪುಟಗಳು ೩- ೭
೧೪೨. ಅದೇ , ಪುಟಗಳು ೧೯,೨೪, ೨೫
೧೪೩. ಅದೇ , ಪುಟಗಳು ೩೭- ೩೯
೧೪೪. ಅದೇ , ಪುಟಗಳು ೩೬- ೫೨
೧೪೫. ಅದೇ , ಪುಟಗಳು ೬೨, ೬೩
೧೪೬. ಅದೇ , ಪುಟಗಳು ೭೭-೮೧
೧೪೭. ಅದೇ , ಪುಟಗಳು ೧೫೭,೧೫೮
೧೪೮. ಮಂಗಳೂರು ಧರ್ಮ ಪ್ರಾಂತ್ಯದಲ್ಲಿ ಧರ್ಮೋಪದೇಶ ತರಗತಿಗಳನ್ನು (Catechism) ಬೋಧಿಸಲು ಬಿಷಪ್ ವಿಕ್ಟರ್ ಫೆರ್ನಾಂಡಿಸರಿಂದ ೧೯೩೪ರಲ್ಲಿ ನೇಮಕಗೊಂಡ ಒಂದು ಧಾರ್ಮಿಕರ ಸಭೆ
೧೪೯. ಫಾ। ಇಮ್ಯಾನ್ಯುವೆಲ್ ಬೊಝಿ, ಪೂರ್ವೋಕ್ತ, ಪುಟಗಳು ೧೭೩-೧೭೪, ೧೮೩-೧೮೫
೧೫೦. ಫಾ। ಆರ್. ಡಿ. ಸಿಕ್ವೇರಾ, *ಮೈ ರಾಂಬಲ್ಸ್ ಥ್ರೂ ದ ಮಿಶನ್ ಆಫ್ ದ ಡಯಾಸಿಸ್ ಆಫ್ ಮ್ಯಾಂಗಲೂರ್*, ಮಂಗಳೂರು: ೧೯೩೯ ಪುಟಗಳು ೩೦-೩೭; "ಎಜುಕೇಷನ್ ವರ್ಕ್ ಫಾರ್ ದ ಸೋಶಿಯಲ್ ಇಂಪ್ರುವ್‌ಮೆಂಟ್ ಆಫ್ ಕಸ್ಟರ್ಟ್ಸ್ ಇನ್ ದ ಡಯಾಸಿಸ್ ಆಫ್ ಮ್ಯಾಂಗಲೂರ್", *ಕೊಂಕಣಿ ದಿರ್ವೆಂ*, ೧೪ ನಂಬರ್ ೨೪, ಆಗಸ್ಟ್ ೧೯೨೩ ಪುಟಗಳು i, ii
೧೫೧. ಕರ್ನಾಟಕ ಜೆಸ್ವಿತ್ ಸೆಂಟಿನರಿ ಸಾವೆನಿಯರ್ ೧೮೭೮-೧೯೭೮ ಪುಟ ೪೨
೧೫೨. ಪಿ.ಡಬ್ಲ್ಯು.ಪಿ., ಪೂರ್ವೋಕ್ತ , ಪುಟ ೫೬
೧೫೩. ಅದೇ , ಪುಟ ೫೪
೧೫೪. ಅದೇ , ಪುಟ ೫೭
೧೫೫. ಕ್ರಾಂತಿ ಕೆ. ಫರಾಯಸ್, ಪೂರ್ವೋಕ್ತ, ಪುಟ ೧೩೦
೧೫೬. ಅದೇ , ಪುಟ ೧೩೦
೧೫೭. ಡೆನಿಸ್ ಫೆರ್ನಾಂಡಿಸ್, ಪೂರ್ವೋಕ್ತ, ಪುಟಗಳು ೨೬೨,೨೬೩

೧೫೮. ಅದೇ , ಪುಟ ೨೬೨

೧೫೯. ವಿಶಾಂಝ್ ಪಿಂಟೋ, ಪೂರ್ವೋಕ್ತ ಪುಟ ೬೨

# ಅಧ್ಯಾಯ -೫

## ಕೈಗಾರಿಕೆ

ಕ್ರೈಸ್ತರು ವಸಾಹತು ಪೂರ್ವ ಅವಧಿಯಲ್ಲಿ ಕೃಷಿಕರಾಗಿದ್ದು, ಕೆನರಾದಲ್ಲಿ ನೆಲೆಗೊಳ್ಳಲು ಅವರಿಗೆ ಬಿದನೂರು ಅರಸರು ಪ್ರೋತ್ಸಾಹ ನೀಡಿದ್ದರು. ಅವರು ಬೆಟ್ಟಗಳನ್ನು ಕಡಿದು, ಕಾಡನ್ನು ಕತ್ತರಿಸಿ, ಮೂಲ ಭೂಮಿಯನ್ನು ಕೃಷಿ ಭೂಮಿಯಾಗಿ ಪರಿವರ್ತಿಸಿದರು. ಕೆಲವರು ಬಿದನೂರಿನ ಸೈನ್ಯದಲ್ಲಿ ಸೈನಿಕರಾಗಿಯೂ, ಇನ್ನೂ ಕೆಲವರು ವ್ಯಾಪಾರಿಗಳಾಗಿಯೂ ಜೀವನ ನಡೆಸುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಡಕೆ ತಯಾರಿಕೆ, ತಾಮ್ರ, ಕಂಚು, ಹಿತ್ತಾಳೆ ಕೆಲಸ, ಚಿನ್ನ ತಯಾರಿಕೆ, ಕಮ್ಮಾರಿಕೆ, ಕಬ್ಬಿಣದ ಕೆಲಸ, ಮರದ ಕೆಲಸ, ಕೃಷಿ ಉಪಕರಣಗಳ ತಯಾರಿಕೆ ಮುಂತಾದವು ವಸಾಹತುಪೂರ್ವ ಅವಧಿಯಲ್ಲಿದ್ದ ಕೆಲವು ಗುಡಿ ಕೈಗಾರಿಕೆಗಳು ಮತ್ತು ಕೈ ಕಸುಬುಗಳು. ಈ ಜಿಲ್ಲೆಯಲ್ಲಿ ಕೈಗಾರಿಕಾ ಕ್ಷೇತ್ರದಲ್ಲಿ ಬದಲಾವಣೆಯನ್ನು ತಂದದ್ದು ಖಾಸಗಿ ಸಂಸ್ಥೆಯಾದ ಬಾಸೆಲ್ ಮಿಶನ್. ಬಾಸೆಲ್ ಮಿಶನ್‌ನ ಪ್ರವೇಶದಿಂದ ಕೈಗಾರಿಕಾ ಕ್ಷೇತ್ರದಲ್ಲಾದ ಈ ಬದಲಾವಣೆಗಳು ಮಂಗಳೂರಿನ ಸ್ವರೂಪವನ್ನು ರಚನಾತ್ಮಕವಾಗಿ ಹಾಗೂ ಕಾರ್ಯಾತ್ಮಕವಾಗಿ ಬದಲಾಯಿಸಿವೆ. ಮಂಗಳೂರು ಕೇವಲ ವ್ಯಾಪಾರ ಕೇಂದ್ರವಷ್ಟೇ ಅಲ್ಲದೆ ವಸ್ತುಗಳನ್ನು ಉತ್ಪಾದಿಸುವ ನಗರವಾಗಿಯೂ ಬೆಳೆದಿದೆ. ಬಾಸೆಲ್ ಮಿಶನ್ ತನ್ನ ಕೆಲಸ ಕಾರ್ಯಗಳ ಮೂಲಕ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬದಲಾವಣೆಯ ಅಲೆಯನ್ನು ಎಬ್ಬಿಸಿದಂತೂ ನಿಜ. ಅದರ ಜೊತೆಗೆ ಮಿಶನ್ ತನ್ನ ಕೆಲವು ವೈಯಕ್ತಿಕ ಹಿತಾಸಕ್ತಿಗಳನ್ನೂ ಈಡೇರಿಸಿಕೊಂಡಿದೆ. ೧೭೮೪ಕ್ಕಿಂತ ಮೊದಲು ಸಣ್ಣ ಮತ್ತು ದೊಡ್ಡ ಕ್ರೈಸ್ತ ಭೂ ಮಾಲಿಕರು ಮತ್ತು ಕೃಷಿಕರು ಕೆನರಾ ಜಿಲ್ಲೆಯ ಎಲ್ಲೆಡೆಗಳಲ್ಲಿ ಹರಡಿಕೊಂಡಿದ್ದರು ಮತ್ತು ಬಂಧನದ ಸಮಯದಲ್ಲಿ ಅವರು ತಮ್ಮ ಜಮೀನುಗಳನ್ನು ಕಳೆದುಕೊಂಡರು. ಹದಿನೆಂಟನೆಯ ಶತಮಾನದ ಉತ್ತರ ಭಾಗದಲ್ಲಿ, ಇನ್ನೂ ಕೆನರಾ ಜಿಲ್ಲೆ, ಮೈಸೂರು ಸುಲ್ತಾನರ ಆಳ್ವಿಕೆಯಲ್ಲಿಯೇ ಇದ್ದಾಗ, ಬ್ರಿಟಿಷರು ಅನೇಕ ಸೇವೆಗಳಲ್ಲಿ ಜನರ ನೇಮಕಾತಿಯನ್ನು ನಡೆಸಲು ಪ್ರಾರಂಭಿಸಿದ್ದರು. ಇದರ ಫಲವಾಗಿ ಕ್ರೈಸ್ತ ಸಮುದಾಯದ ಒಂದು ಭಾಗ ವಿಶೇಷವಾಗಿ ಅವರ ಭೂಸೇನೆ ಮತ್ತು ನೌಕಾಸೇನೆಯ ಸೇವೆಯಲ್ಲಿ ಸೇರಿಕೊಂಡಿತು. ೧೭೮೧ರಿಂದ ಬ್ರಿಟಿಷರು ಮಲಬಾರಿನಲ್ಲಿ ಇದ್ದು ಅವರ ಉದ್ಯೋಗಿಗಳು ಕೆನರಾದಲ್ಲಿ ಇದ್ದಾಗ ಸುಶಿಕ್ಷಿತ ಕ್ರೈಸ್ತರ ಒಂದು ಗುಂಪು ಈಸ್ಟ್ ಇಂಡಿಯ ಕಂಪನಿ ಸೇರಿ , ಅಲ್ಲಿನ ಅನೇಕ ವಿಭಾಗಗಳಲ್ಲಿ ಉದ್ಯೋಗ ಮಾಡತೊಡಗಿದೆ. ಆ ಕ್ರೈಸ್ತರು ಪೋರ್ಚುಗೀಸ್ ಧರ್ಮಗುರುವಿನ ಕೈ ಕೆಳಗೆ ಅಥವಾ ಸ್ಥಳೀಯ ಶಿಕ್ಷಣ ವ್ಯವಸ್ಥೆಯಲ್ಲಿ

ಸುಶಿಕ್ಷಿತರಾಗಿದ್ದಿರಬಹುದು. ಹಾಗಿದ್ದರೂ, ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಅವರಲ್ಲಿ ಹೆಚ್ಚಿನವರು ಕೃಷಿಕರು ಮತ್ತು ವ್ಯಾಪಾರಿಗಳಾಗಿದ್ದರು.[೧]

ಕೆನರಾದಲ್ಲಿ ಮೈಸೂರು ಆಳ್ವಿಕೆ ೧೭೯೯ರಲ್ಲಿ ಕೊನೆಗೊಂಡದ್ದು ಕಥೋಲಿಕ ಕ್ರೈಸ್ತರಿಗೆ ಸ್ವಾಗತಾರ್ಹ ಬದಲಾವಣೆಯಾಯಿತು. ಈಸ್ಟ್ ಇಂಡಿಯಾ ಕಂಪನಿಯು ಈ ಪ್ರದೇಶವನ್ನು ಮದ್ರಾಸ್ ಪ್ರೆಸಿಡೆನ್ಸಿ ಕೆಳಗೆ ಇಟ್ಟಿತು. ೧೯ನೇ ಶತಮಾನದ ಪ್ರಾರಂಭದಲ್ಲಿ ಆರ್ಥಿಕ ಗತಿಶೀಲತೆಯ ಅನುಪಸ್ಥಿತಿಯಲ್ಲಿ ಕ್ರೈಸ್ತರು ಮುಖ್ಯವಾಗಿ ಕೃಷಿಕರು, ಭೂಮಾಲಿಕರು ಮತ್ತು ವ್ಯಾಪಾರಿಗಳಾಗಿದ್ದರು. ಇವರಲ್ಲಿ ಕೆಲವರಷ್ಟೇ ಸರಕಾರಿ ಸೇವೆಯಲ್ಲಿದ್ದರು. ಕ್ರೈಸ್ತರು ತಮ್ಮ ಜಮೀನನ್ನು ಹಿಂದೆ ಪಡೆಯದಿದ್ದರೂ, ಇವರಲ್ಲಿ ಕೆಲವರಿಗೆ ಅಲ್ಪಸ್ವಲ್ಪ ಅಕ್ಷರಾಭ್ಯಾಸ ಇದ್ದುದರಿಂದ ಅವರಿಗೆ ಸರಕಾರಿ ಹುದ್ದೆಗಳನ್ನು ನೀಡಲಾಯಿತು. ಸಾಮಾನ್ಯವಾಗಿ ಆ ಕಾಲದ ಕ್ರೈಸ್ತರು ಬಡವರಾಗಿದ್ದರು ಮತ್ತು ಧರ್ಮಗುರುಗಳು ತಮ್ಮ ಅನುಯಾಯಿಗಳೊಂದಿಗೆ ಬಿಡುವಿಲ್ಲದವರಾಗಿದ್ದರು. ಅವರಿಗೆ ಬಡತನದ ಕಾರಣದಿಂದಾಗಿ ಚರ್ಚುಗಳ ಪುನರ್‌ನಿರ್ಮಾಣ ಕೈಗೊಳ್ಳುವುದು ಕಷ್ಟಕರವಾಗಿತ್ತು. ಕೆಲವು ಸಂದರ್ಭಗಳಲ್ಲಿ ಚರ್ಚುಗಳ ಪುನರ್‌ನಿರ್ಮಾಣ ಕಾರ್ಯದಲ್ಲಿ ವಸಾಹತು ಸರಕಾರ ಹಣದ ನೆರವನ್ನು ನೀಡಿದ್ದುಂಟು. ಹೀಗೆ ಕ್ರೈಸ್ತರು ತಮ್ಮ ಹಿಂದಿನ ಸಮೃದ್ಧತೆಯನ್ನು ಮರಳಿ ಪಡೆಯಲು ಹೊಸದಾಗಿ ಮತ್ತು ಕಠಿಣ ಶ್ರಮದಿಂದ ಪ್ರಯತ್ನವನ್ನು ನಡೆಸಿದ್ದಾರೆ. ವಸಾಹತು ಆಡಳಿತದ ಪರಿಚಯದಿಂದ ಮತ್ತು ಅವರ ಚಾರಿತ್ರಿಕ ದೃಷ್ಟಿಕೋನದ ಮೂಲಕ ಜಿಲ್ಲೆಯನ್ನು ಅಧಃಪತನದ ಸ್ಥಿತಿಗೆ ತಂದವರು ಹೈದರಾಲಿ ಮತ್ತು ಟಿಪ್ಪು ಸುಲ್ತಾನರೆಂಬುದನ್ನು ಕ್ರೈಸ್ತರ ಸಮುದಾಯದ ಉನ್ನತ ವರ್ಗದವರು ಮತ್ತು ಸುಶಿಕ್ಷಿತರು, ಚರ್ಚಿನ ಅಧಿಕಾರಿ ವರ್ಗದವರು ಮತ್ತು ಇವರ ಮೂಲಕ ಇಡೀ ಸಮುದಾಯದವರು ನಂಬಿ ಬಂದಿದ್ದಾರೆ. ಬ್ರಿಟಿಷ್ ಆಡಳಿತವನ್ನು ಪ್ರಗತಿಪರವಾಗಿ ಮತ್ತು ಸಮುದಾಯಕ್ಕೆ ಅನುಕೂಲಕರವಾಗಿ ಕಲ್ಪಿಸಲಾಗಿದೆ. ಕೆನರಾದಲ್ಲಿ ಅವರ ಆಡಳಿತ ಸ್ಥಾಪನೆಯಾದ ಕೂಡಲೇ, ವಸಾಹತು ಸರಕಾರ ಅನೇಕ ಸರಕಾರಿ ಸ್ಥಾನಗಳನ್ನು ಸುಶಿಕ್ಷಿತ ವರ್ಗಕ್ಕೆ ಒಪ್ಪಿಸಿತು. ಆದುದರಿಂದ ಮಂಗಳೂರು ನಗರದ ಕ್ರೈಸ್ತರ ವಿದ್ಯಾವಂತ ವರ್ಗಗಳು ಮತ್ತು ಸರಕಾರದಲ್ಲಿ ಸ್ಥಾನಗಳನ್ನು ಪಡೆದವರು ಯಾವಾಗಲೂ ವಸಾಹತು ಸರಕಾರದ ಕುರಿತು ಹೊಗಳಿಕೆಯನ್ನೇ ಸೂಚಿಸುತ್ತಿದ್ದರು.[೨]

ದಕ್ಷಿಣ ಕನ್ನಡದ ಹೆಚ್ಚಿನ ಬಾಸೆಲ್ ಮಿಶನ್ ಕ್ರೈಸ್ತರು ಜಾತಿಗನುಸಾರವಾಗಿ ಬಿಲ್ಲವರಾಗಿದ್ದರು. ಇವರು ಮುಖ್ಯವಾಗಿ ಕೂಲಿ ಕೆಲಸ ಮತ್ತು ಮೂರ್ತೆ ತೆಗೆಯುವ ಕೆಲಸ ಮಾಡುತ್ತಿದ್ದರು. ಬಾಸೆಲ್ ಮಿಶನರಿಗಳು ತಮ್ಮ ನಿಯೋಗಿಕ ಕಾರ್ಯವನ್ನು ಪ್ರಾರಂಭಿಸುವ ಮೊದಲು, ಕ್ರೈಸ್ತಮತ ಸ್ವೀಕರಿಸಿದ ಬಿಲ್ಲವ ಬಾಂಧವರನ್ನೊಳಗೊಂಡ ಕ್ರೈಸ್ತ ಸಭೆಯನ್ನು 'ಬಿಲ್ಲವ ಸಭೆ' ಎಂದು ಕರೆಯಲಾಗುತ್ತಿತ್ತು. ೧೮೪೨ರ ನಂತರ ಬಿಲ್ಲವೇತರರು ಕ್ರೈಸ್ತ ಧರ್ಮಕ್ಕೆ ಸೇರ್ಪಡೆಗೊಂಡರು. ಬಿಲ್ಲವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಚ್ಚಿನ

ಸಂಖ್ಯೆಯಲ್ಲಿದ್ದರು. ಬಿಲ್ಲವರೆಂದರೆ ಬಿಲ್ಲುಗಾರರು, ಶೂದ್ರ ಪಂಗಡಕ್ಕೆ ಸೇರಿದವರು. ಆದರೆ ಅಸ್ಪೃಶ್ಯರಾಗಿರಲಿಲ್ಲ. ಪ್ರಾಚೀನ ಕಾಲದಲ್ಲಿ ಬಿಲ್ಲವರು ಸೈನಿಕರಾಗಿದ್ದರು ಮಾತ್ರವಲ್ಲದೆ ಒಳ್ಳೆಯ ಬೇಟೆಗಾರರಾಗಿದ್ದರು. ನಂತರದ ಕಾಲದಲ್ಲಿ ತಮ್ಮನ್ನು ವ್ಯವಸಾಯದ ವೃತ್ತಿಯಲ್ಲಿ ತೊಡಗಿಸಿಕೊಂಡರು. ಭೂಮಾಲೀಕತ್ವವೂ ಅವರ ಬಳಿಯಲ್ಲಿರಲಿಲ್ಲ. ಬಿಲ್ಲವ ಜನಾಂಗದವರು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ರೀತಿಯ ಬಲಹೀನವಾದ ಪಂಗಡವಾಗಿತ್ತು. ಬಿಲ್ಲವರು ಹೆಚ್ಚಾಗಿ ಮದ್ಯವ್ಯಸನಿಗಳಾಗಿದ್ದರು. ವ್ಯವಸಾಯ ವೃತ್ತಿಯನ್ನು ಪ್ರಾರಂಭಿಸಿದ ನಂತರ ತೆಂಗಿನಮರ ಮತ್ತು ತಾಳೆಮರದಿಂದ ಶೇಂದಿ ತೆಗೆಯಲು ಪ್ರಾರಂಭಿಸಿದರು ಮತ್ತು ಕೆಲವರು ಅದರ ಪರಿಷ್ಕರಣೆಯಲ್ಲಿ ನಿರತರಾಗಿದ್ದರು. ಇದು ಮುಂದೆ ಕೆಲವು ಬಿಲ್ಲವ ಜನರ ಜೀವನೋಪಾಯಕ್ಕಾಗಿ ಒಂದು ವೃತ್ತಿಯಾಗಿ ಮಾರ್ಪಟ್ಟಿತ್ತು.[೭]

ದಕ್ಷಿಣ ಕನ್ನಡ ಜಿಲ್ಲೆಯ ಇತರೇ ಪಂಗಡಗಳಂತೆ ಬಿಲ್ಲವರು ಮುಖ್ಯವಾಗಿ ಭೂತಾರಾಧಕರಾಗಿದ್ದರು. ಭಾವೋದ್ದೀಪಿತರಾಗಿ ಕೆಲವು ಭೂತಗಳನ್ನು ಮನೆ ದೇವರುಗಳಾಗಿ ಪೂಜಿಸುತ್ತಿದ್ದರು. ಧಾರ್ಮಿಕ ವ್ರತಾಚಾರಣೆಯ ಸಂದರ್ಭದಲ್ಲಿ 'ಕೋಲ' ಎಂಬ ದೈವ ನೃತ್ಯವನ್ನು ಏರ್ಪಡಿಸುತ್ತಿದ್ದರು. 'ಆಯಾನ' ಮತ್ತು 'ನೇಮ' ಎಂಬ ವಾರ್ಷಿಕ ದೈವ ಉತ್ಸವಗಳನ್ನು 'ಭೂತ ಸ್ಥಾನ'ಗಳೆಂಬ ದೈವದ ದೇವಸ್ಥಾನಗಳಲ್ಲಿ ನಡೆಸುತ್ತಿದ್ದರು. ಬಿಲ್ಲವ ಪೂಜಾರಿಗಳು ತಮ್ಮ ಧಾರ್ಮಿಕ ಆಚರಣೆಯ ಸಂದರ್ಭಗಳಲ್ಲಿ ಭೂತಗಳ ಪಾತ್ರವನ್ನು ನಿರ್ವಹಿಸುತ್ತಿದ್ದರು. ಈ ರೀತಿ ಧಾರ್ಮಿಕ ಆಚರಣೆಯ ಸಂದರ್ಭಗಳಲ್ಲಿ ನಿರ್ವಹಿಸುತ್ತಿದ್ದ ಪಾತ್ರಗಳ ಕಾರಣದಿಂದ ಅವರನ್ನು 'ಪೂಜಾರಿ'ಗಳೆಂದು ಕರೆಯುತ್ತಿದ್ದರು. ಕೆಲವು ಜನ ಬಿಲ್ಲವರು ನಾಟಿ ಮದ್ದಿನಲ್ಲಿ ಒಳ್ಳೆಯ ಜ್ಞಾನವನ್ನು ಪಡೆದಿದ್ದರಿಂದ ಅವರನ್ನು 'ಬೈದ್ಯ' (ವೈದ್ಯ)ರೆಂದು ಕರೆಯಲಾಗುತ್ತಿತ್ತು.[೮] ೧೮೦೧ರ ಬುಕಾನನ್ ವರದಿಯ ಪ್ರಕಾರ, ತುಳುವ ಜನರಲ್ಲಿ ಹೆಚ್ಚಿನವರು ವ್ಯವಸಾಯಗಾರರು, ಶ್ರಮಜೀವಿಗಳು ಆಗಿದ್ದು, ದಿನದೂಟದಲ್ಲಿ ಗಂಜಿಯನ್ನು ಸೇವಿಸುತ್ತಿದ್ದರು. ವ್ಯವಸಾಯದ ಭಾಗಶಃ ಕಾರ್ಯ ಗುಲಾಮರಿಂದ ನಡೆಸಲ್ಪಡುತ್ತಿದ್ದರೆ, ಹೆಚ್ಚಿನ ಕೆಲಸಗಳು ಬಾಡಿಗೆಗೆ ನೇಮಿಸಲ್ಪಟ್ಟ ಕೂಲಿ ಆಳುಗಳಿಂದ ನಡೆಯುತ್ತಿದ್ದವು. ಧನಿಕರು ತಮ್ಮ ಆಳುಗಳನ್ನು ಚೆನ್ನಾಗಿ ದುಡಿಸಿಕೊಳ್ಳುತ್ತಿದ್ದರು. ಹೆಚ್ಚಿನ ಕೂಲಿಯಾಳುಗಳು ತಮ್ಮ ಧಣಿಯವರಿಗೆ ಸಾಲಗಾರರಾಗಿದ್ದರು. ಅವರಿಗೆ ಕೊಡಲ್ಪಡುತ್ತಿದ್ದ ಕೂಲಿಯಿಂದ ತಮ್ಮ ಸಂಸಾರವನ್ನು ನಡೆಸಲು ಯಾವುದೇ ತೊಂದರೆಯೂ ಇರುತ್ತಿದ್ದಿಲ್ಲ ಎಂದು ಅಭಿಪ್ರಾಯ ಪಡುತ್ತಾರೆ.[೯]

ದಕ್ಷಿಣ ಕನ್ನಡ ಮುಖ್ಯವಾಗಿ ಕೃಷಿ ಪ್ರಧಾನ ಜಿಲ್ಲೆಯಾಗಿದ್ದು, ಶೇಕಡಾ ೭೫ರಷ್ಟು ಜನ ತಮ್ಮ ಜೀವನೋಪಾಯಕ್ಕಾಗಿ ವ್ಯವಸಾಯವನ್ನೇ ಅವಲಂಬಿಸಿಕೊಂಡಿದ್ದರು. ಭೂ ಮಾಲೀಕತ್ವವು ಮುಖ್ಯವಾಗಿ

ಬ್ರಾಹ್ಮಣ, ಬಂಟ, ಜೈನ ಮತ್ತು ಕಥೋಲಿಕ ಕ್ರೈಸ್ತರ ಕೈಯಲ್ಲಿತ್ತು. ೧೮೯೧ರ ಸಮೀಕ್ಷೆ ಪ್ರಕಾರ ೬,೩೬,೨೫೦ ವ್ಯವಸಾಯಗಾರರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದರು. ಸುಮಾರು ೩೧,೯೩೦ ಜನರು ಮೂರ್ತೆ ತೆಗೆಯುವ ಮತ್ತು ಮಾರುವ ಕಾಯಕದಲ್ಲಿದ್ದವರು. ಕಬ್ಬಿನಿಂದ ಮತ್ತು ಶೇಂದಿಯಿಂದ ಬೆಲ್ಲದ ತಯಾರಿ ಮತ್ತು ಮಾರಾಟದ ಕೆಲಸವನ್ನು ಜನ ಮಾಡುತ್ತಿದ್ದರು. ಕಾಲಕ್ರಮೇಣ ವೀಳ್ಯದೆಲೆ, ಅಡಿಕೆ ಮಾರಾಟ, ತಂಬಾಕು ಮತ್ತು ನಶ್ಯ ಮಾರಾಟ, ಮೀನು ಹಿಡಿಯುವುದು, ತರಕಾರಿ ವ್ಯಾಪಾರ, ಎಣ್ಣೆ ಗಿರಣಿಗಳಲ್ಲಿ ಕೆಲಸ, ಕಾಫಿ ಬೆಳೆ, ಮಡಿಕೆ ಮಾಡುವಿಕೆ, ಕಬ್ಬಿಣದ ಕೆಲಸ ಮುಂತಾದುವುಗಳನ್ನು ಜೀವನೋಪಾಯಕ್ಕಾಗಿ ಮಾಡತೊಡಗಿದರು.[೬] ದಕ್ಷಿಣ ಕನ್ನಡದವರ ಕೃಷಿಯೆಂದರೆ ಮಳೆರಾಯನ ಅನುಗ್ರಹವನ್ನು ಕಾದು ಕುಳಿತುಕೊಳ್ಳುವ ಕೃಷಿ. ಹೆಚ್ಚೆಂದರೆ ಅಲ್ಲಿ ಇಲ್ಲಿ ಹೊಳೆಗೆ ಸಮೀಪವರ್ತಿಯಾಗಿ 'ಕೊಳಕೆ' ಬೆಳೆಯನ್ನೋ, ಬೆಟ್ಟು ಗದ್ದೆಗಳಲ್ಲಿ ಹುರುಳಿ, ಉದ್ದು, ಹೆಸರನ್ನು ಬೆಳೆಸಿದರೆ ಮಳೆಗಾಲದ ಭತ್ತದ ಬೆಳೆಯೊಡನೆ ದಕ್ಷಿಣ ಕನ್ನಡದ ಬೇಸಾಯ ನಿಂತು ಹೋಗುತ್ತದೆ. ನಿತ್ಯಕ್ಕೆ ಬೇಕಾಗುವ ತರಕಾರಿಗಳನ್ನು ಸ್ವಂತಕ್ಕಲ್ಲದೆ ಮಾರಾಟಕ್ಕೆಂದು ಬೆಳೆಸುವ ಪರಿಪಾಠವಂತೂ ಜಿಲ್ಲೆಯ ಜನರಲ್ಲಿ ಇರಲೇ ಇಲ್ಲ. ಮಾರಾಟಕ್ಕೆ ಕಾಯಿ ಪಲ್ಯ ಬೆಳೆಸುವ ಪ್ರವೃತ್ತಿಯನ್ನು ಹೆಚ್ಚಿನ ಮಟ್ಟಿಗೆ ರೂಢಿಯಲ್ಲಿ ತಂದವರು ಬಾಸೆಲ್ ಮಿಶನ್‌ನವರು; ಅದೂ ಕ್ರೈಸ್ತ ಮತ ಸ್ವೀಕರಿಸಿದವರ ಮೂಲಕ. ಇಂದಿಗೂ ದಕ್ಷಿಣ ಕನ್ನಡದಲ್ಲಿ ತೋಟಗಾರಿಕೆಗೆ ಪ್ರಸಿದ್ಧವಾದ ಅನೇಕ ವಸತಿಗಳು ಈ ಮಾತಿಗೆ ಸಾಕ್ಷಿಯಾಗಿ ನಿಂತಿವೆ. ಈ ಪ್ರದೇಶಗಳ ಸ್ಥಾನಿಕ ತರಕಾರಿ ಇಂದು ಮಂಗಳೂರು, ಉಡುಪಿಗಳಲ್ಲಿ ವಿಫುಲವಾಗಿ ಮಾರಲ್ಪಡುತ್ತದೆ.[೭]

ಭಾರತದ ಅನೇಕ ಭಾಗಗಳಲ್ಲಿ ಇದ್ದಂತೆ ೧೯ನೇ ಶತಮಾನಕ್ಕಿಂತ ಮೊದಲು ದಕ್ಷಿಣ ಕನ್ನಡದ ಆರ್ಥಿಕತೆಯು ಮುಖ್ಯವಾಗಿ ಕೃಷಿ ಪ್ರಧಾನವಾಗಿತ್ತು. ಈ ಜಿಲ್ಲೆಯ ಮೇಲೆ ಬ್ರಿಟಿಷ್ ಆಡಳಿತದ ಸ್ಥಾಪನೆಯು ಮೂಲಭೂತವಾಗಿ ಆ ಸ್ಥಿತಿಯನ್ನು ಬದಲಾಯಿಸಿರಲಿಲ್ಲ. ಆದರೆ, ಈ ಪ್ರದೇಶಕ್ಕೆ ಬಾಸೆಲ್ ಮಿಶನ್ ಹೊಸ ಕೈಗಾರಿಕಾ ಸಂಪ್ರದಾಯವನ್ನು ಪರಿಚಯಿಸಿದ್ದರಿಂದ ಇದರ ಆರ್ಥಿಕತೆಗೆ ಹೊಸ ರೂಪ ಮತ್ತು ಇದರ ಪ್ರಗತಿಗೆ ಹೊಸ ದಿಕ್ಕು ಗೋಚರಿಸುವಂತಾಯಿತು. ಪ್ರಾರಂಭದಲ್ಲಿ ಬಾಸೆಲ್ ಮಿಶನ್ ಕ್ರೈಸ್ತಮತ ಸ್ವೀಕರಿಸಿದವರಿಗೆ ಸೂಕ್ತ ಉದ್ಯೋಗಗಳನ್ನು ಕಲ್ಪಿಸುವ ಸಲುವಾಗಿ ಮತ್ತು ಅವರಲ್ಲಿ ನಿಷ್ಠಾವಂತ ದುಡಿಮೆ ಮತ್ತು ವ್ಯವಹಾರವನ್ನು ಅಳವಡಿಸಿಕೊಳ್ಳುವ ಸಲುವಾಗಿ ಅನೇಕ ಕೈಗಾರಿಕೆಗಳನ್ನು ಪ್ರಾರಂಭಿಸಿದೆ. ವಾರ್ನೆಕ್ ಅವರ ಅವಲೋಕನ ಹೀಗಿದೆ: "ಮೂಲತಃ ಈ ಕೈಗಾರಿಕೆಗಳು ತಮ್ಮ ಜಾತಿಯಿಂದ ಪರಿತ್ಯಜಿಸಲ್ಪಟ್ಟ ಅಥವಾ ಅದರ ಅಗತ್ಯದಿಂದ ನೊಂದುಕೊಂಡಿರುವಂತಹ ಕ್ರೈಸ್ತರಿಗೆ ಉದ್ಯೋಗಗಳನ್ನು ಒದಗಿಸುವುದಕ್ಕಾಗಿ ಕೈಗೊಂಡ ಕ್ರಮಗಳಾಗಿವೆ ಎಂದು ಹೇಳಲಾಗಿದೆ." ಕ್ರೈಸ್ತ ಮತ ಸ್ವೀಕರಿಸಿದವರು ಬಹಳಷ್ಟು ಸಂದರ್ಭದಲ್ಲಿ ತಮ್ಮ ಕುಟುಂಬಗಳು, ಸ್ನೇಹಿತರು ಮತ್ತು ತಾವು ಭಾಗವಾಗಿದ್ದ ಸಮಾಜಗಳ

ಸಂಬಂಧಗಳಿಂದ ಕಳಚಿಕೊಳ್ಳುವ ಗಂಡಾಂತರ ಪರಿಸ್ಥಿತಿಯಲ್ಲಿ ಇರುತ್ತಿದ್ದರು. ಅವರು ಎದುರಿಸುತ್ತಿದ್ದ ಸಾಮಾಜಿಕ ಬಹಿಷ್ಕಾರವು ಅವರನ್ನು ಒಂಟಿಯಾಗಿ ಮತ್ತು ಸ್ನೇಹಿತರಿಲ್ಲದ ಸ್ಥಿತಿಯಲ್ಲಿ ಇಡುತ್ತಿತ್ತು. ಅವರಿಗೆ ಉದ್ಯೋಗವಿರುತ್ತಿರಲಿಲ್ಲ. ಇದರಿಂದ ಅನಿಶ್ಚಿತ ಬಡತನದ ಬದುಕೇ ಶಾಶ್ವತವೆಂಬ ಭಾವನೆ ಬರುತ್ತಿತ್ತು. ಆದುದರಿಂದ ಬಾಸೆಲ್ ಮಿಶನ್‌ಗೆ ಸ್ಥಳೀಯ ಕ್ರೈಸ್ತರ ಪುನರ್ ವಸತಿ ನೈತಿಕ ಜವಾಬ್ದಾರಿಯಾಗಿತ್ತು. ಅವರಿಗೆ ಉದ್ಯೋಗ ಮತ್ತು ಬದುಕಿನಲ್ಲಿ ಸ್ವ-ಪ್ರಗತಿಯನ್ನು ಸಾಧಿಸುವ ಅವಕಾಶಗಳನ್ನು ಒದಗಿಸುವ ಮೂಲಕ ಅವರ ಪುನರ್ವಸತೀಕರಣವನ್ನು ಅವರು ನಡೆಸಬೇಕಾಗಿತ್ತು. ಆ ಒಂದು ಉದ್ದೇಶದಿಂದಲೇ ಬಾಸೆಲ್ ಮಿಶನ್ ಅನೇಕ ಕೈಗಾರಿಕೆಗಳನ್ನು ಪ್ರಾರಂಭಿಸಿದೆ. ಅದಲ್ಲದೆ ಕ್ರೈಸ್ತ ಮತ ಸ್ವೀಕರಿಸಿದವರ ಉದ್ಯೋಗದಾತರಾಗುವ ಮೂಲಕ ಅವರ ಮೇಲೆ ಹೆಚ್ಚಿನ ನಿಯಂತ್ರಣ ಸಾಧಿಸಬಹುದು ಮತ್ತು ತಮ್ಮ ಪ್ರಭಾವದಿಂದ ಅವರು ಕಳಚಿಕೊಳ್ಳದಂತೆ ನೋಡಿಕೊಳ್ಳಬಹುದು ಎಂಬುದು ಅವರ ನಂಬಿಕೆಯಾಗಿತ್ತು ಎಂದೂ ಹೇಳಲಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಉತ್ತಮ ವೃತ್ತಿಪರ ತರಬೇತಿಯು ಸ್ಥಳೀಯ ಕ್ರೈಸ್ತ ಧರ್ಮ ಸ್ವೀಕರಿಸಿದವರಲ್ಲಿ ಶಿಸ್ತು ಮತ್ತು ನಿಷ್ಠಾವಂತ ದುಡಿಮೆಯನ್ನು ಮೈಗೂಡಿಸಬಹುದು, ಇದರಿಂದ ಅವರ ಬದುಕಿನ ಮಟ್ಟ ಮೇಲಕ್ಕೇರಬಹುದು ಎಂಬುದು ಅವರ ನಿರೀಕ್ಷೆಯಾಗಿತ್ತು. ಹಿಂದೊಮ್ಮೆ ಬೇರೆ ಬೇರೆ ಜಾತಿಗಳಿಗೆ ಸೇರಿದಂತಹ ಆ ಜನರು ಮಿಶನ್‌ನ ಉಸ್ತುವಾರಿಯಲ್ಲಿ ಒಟ್ಟಿಗೆ ಕೆಲಸ ಮಾಡುವಂತಾಗುತ್ತದೆ ಮತ್ತು ಅವರು ಕ್ರೈಸ್ತ ಸೋದರತ್ವದ ಕಲೆಯನ್ನು ಕಲಿಯುವಂತಾಗುತ್ತದೆ.[೮]

### ೫.೧. ಉದ್ಯಮ ಸ್ಥಾಪನೆಯ ಉದ್ದೇಶಗಳು

ಕೈಗಾರಿಕಾ ಉದ್ದಿಮೆಗಳ ಗುರಿ ಮಿಶನ್ನಿನ ಉದ್ದೇಶವನ್ನು ಮುಂದುವರಿಸುವುದು ಮತ್ತು ಬಲಪಡಿಸುವುದು ಎರಡೂ ಆಗಿತ್ತು. ಈ ಅಂಶವನ್ನು ಗಮನದಲ್ಲಿಟ್ಟು, ಮಿಶನರಿಗಳ ಉದ್ದೇಶಗಳಿಗೆ ಸಾಧಕವಾಗಿರುವ ನಾಲ್ಕು ಸಮೀಪಸ್ಥ ಧ್ಯೇಯಗಳನ್ನು ನಾವು ಗುರುತಿಸಬಹುದು:

- ಮಾನವ ಹಿತಾಕಾಂಕ್ಷೆ : ಯಾವುದನ್ನು ಆಧರಿಸಿ ಬದುಕುವುದೆಂದು ತಿಳಿಯದ ಅನೇಕ ಕ್ರೈಸ್ತರಿಗೆ ಮತ್ತು ತರಬೇತಿ ಹಂತದಲ್ಲಿರುವವರಿಗೆ ಉದ್ಯೋಗವನ್ನು ಮತ್ತು ಗೌರವಯುತ ಜೀವನಾಧಾರವನ್ನು ಒದಗಿಸುವುದು.
- ಬೋಧನೆ : ಸ್ಥಳಿಯ ಕ್ರೈಸ್ತರಿಗೆ ನಿಯಮಿತತೆ, ಸ್ಥಿರತೆ ಮತ್ತು ಪ್ರಾಮಾಣಿಕ ದುಡಿಮೆಯ ಅಭ್ಯಾಸಗಳನ್ನು ಕಲಿಸುವುದು. ಇದರಿಂದ ಅವರು ಸಾಮಾಜಿಕವಾಗಿ ಮತ್ತು ನೈತಿಕವಾಗಿ ಮೇಲೆ ಬರುವಂತೆ ಮಾಡುವುದು.

- ನಾಗರೀಕರಣ: ಕ್ರೈಸ್ತ ಕುಶಲಕರ್ಮಿಗಳು, ಯಂತ್ರ ಕರ್ಮಿಗಳು, ವ್ಯಾಪಾರಿಗಳು ಇತ್ಯಾದಿ ಜನವರ್ಗಗಳನ್ನು ಸೃಷ್ಟಿ ಮಾಡಿ ದೇಶಕ್ಕೆ ವ್ಯಾಪಕವಾದ ಅನುಕೂಲತೆಯನ್ನು ಒದಗಿಸುವುದು.
- ಆರ್ಥಿಕತೆ: ಮಿಶನಿಗೆ ವರಮಾನದ ಹೊಸ ಮೂಲವನ್ನು ಹುಡುಕಿಕೊಡುವುದು.[೯]

ಈ ಗುರಿಗಳನ್ನು ದೊಡ್ಡ ಪ್ರಮಾಣದಲ್ಲಿ ನೆರವೇರಿಸಲಾಗಿದೆ ಮತ್ತು ಬಯಸಿದ ಫಲಿತಾಂಶಗಳನ್ನು ಮಿಶನಿಗೆ ಒದಗಿಸಲಾಗಿದೆ.

- ವರಮಾನವಿರುವ ಉದ್ಯೋಗಗಳನ್ನು ಸುಲಭವಾಗಿ ಪಡೆಯಲಾಗದ ಅನೇಕ ಜನರಿಗೆ ಕೈಗಾರಿಕಾ ಸಂಸ್ಥೆಗಳು ಕೆಲಸವನ್ನು ಮತ್ತು ಜೀವನೋಪಾಯವನ್ನು ಒದಗಿಸಿಕೊಟ್ಟಿವೆ. ಆ ಉದ್ದಿಮೆಗಳಿಗೆ ಜನರ ಕ್ಷೇಮ ಚಿಂತನೆಯಲ್ಲಿ ಆಸಕ್ತಿ ಇದ್ದುದರಿಂದ, ಅವು ಕ್ರೈಸ್ತ ವರ್ತುಲಗಳಿಗೆ ಸೀಮಿತವಾಗಿದ್ದರೂ, ಸಾಧ್ಯವಿರುವೆಡೆಗಳಲ್ಲೆಲ್ಲಾ "ದುರ್ಬಲರು ಮತ್ತು ಕುಶಲತೆ ಇಲ್ಲದವರು, ಕುರುಡರು ಮತ್ತು ಹೆಳವರು ಮತ್ತು ವಿಧವೆಯರಿಗೆ" [೧೦] ಉದ್ಯೋಗ ನೀಡಿ ಸಮುದಾಯದ ದುರ್ಬಲ ವರ್ಗಕ್ಕೆ ಸಹಾಯ ನೀಡಿದೆ.
- ಈ ಉದ್ದಿಮೆಗಳಿಂದ ಕ್ರೈಸ್ತ ಯುವಜನತೆ ಅದರಲ್ಲಿಯೂ ವಿಶೇಷವಾಗಿ ಅನಾಥರು ಲಾಭವನ್ನು ಪಡೆದಿದ್ದಾರೆ. ಇಲ್ಲಿ ಅವರು ಉಪಯುಕ್ತ ವೃತ್ತಿಗಳನ್ನು ಕಲಿಯುವುದು ಸಾಧ್ಯವಾಗಿದೆ.[೧೧]
- ಜನರ ಸಾಮಾನ್ಯ ಮನಃಸ್ಥಿತಿ ಮತ್ತು ದುಡಿಮೆಯ ಕುರಿತಾದ ಅವರ ಧೋರಣೆ ಕೂಡಾ ಸುಧಾರಣೆಯನ್ನು ಕಂಡಿದೆ. ಕ್ರೈಸ್ತ ಧರ್ಮ ಸ್ವೀಕರಿಸಿದವರಿಗೆ ಕೈಗಾರಿಕೆ ಮತ್ತು ಆಸ್ಥೆಯನ್ನು ಕಲಿಸಿಕೊಡಲಾಗಿದೆ. ಅವರಿಗೆ ಪ್ರಾಮಾಣಿಕ, ಸ್ಥಿರ, ನಿಯಮಿತ ಬದುಕಿನ ತರಬೇತಿಯನ್ನು ನೀಡಲಾಗಿದೆ.[೧೨]
- ಅನೇಕ ಕ್ರೈಸ್ತರು ಈಗ ಕಾಂಪೌಂಡ್‌ಗಳಿರುವ ಸ್ವಂತ ಮನೆಯನ್ನು ಹೊಂದುವುದು ಸಾಧ್ಯವಾಗಿದೆ ಎಂದು ಮಿಶನ್ ವರದಿಗಳು ದಾಖಲಿಸಿವೆ. ಇದು ಅವರ ಬದುಕಿನಲ್ಲಿ ಸ್ಥಿರತೆಯ ಭಾವವನ್ನು ಮೂಡಿಸಿದೆ.
- ಅವರ ವರಮಾನದಿಂದಾಗಿ ಚರ್ಚಿನ ಖರ್ಚುಗಳಿಗೆ ನೀಡುವ ಕೊಡುಗೆ ಕೂಡ ಹೆಚ್ಚಾಗಿದೆ. ಈಗ ಮಿಶನ್ ಮಂಡಳಿ ಬಡವರು ಮತ್ತು ನಿರ್ಗತಿಕರ ಅಗತ್ಯಗಳನ್ನು ಪೂರೈಸುವುದಕ್ಕಿಂತ ಜನರೇ ಆ ಕಾರ್ಯವನ್ನು ಕೈಗೊಳ್ಳುವುದು ಸಾಧ್ಯವಾಗಿದೆ. ಹೀಗೆ, ಸಾಮಾನ್ಯ ನೆಲೆಯಲ್ಲಿ ಕ್ರೈಸ್ತ ಸಮುದಾಯದ ಆರ್ಥಿಕ ಉಚ್ಛ್ರಾಯ ಸ್ಥಿತಿ ಉಂಟಾಗಿದೆ.[೧೩]
- ಕ್ರೈಸ್ತರು ಸಭ್ಯ ಮತ್ತು ನಿಷ್ಠಾವಂತ ಕಾರ್ಯದಲ್ಲಿ ತೊಡಗಿಸಿಕೊಳ್ಳುವುದರ ಮೂಲಕ ಕ್ರೈಸ್ತೇತರರಿಗೆ ಪ್ರಬಲ ಸಾಕ್ಷಿಯನ್ನು ಒದಗಿಸಿದ್ದಾರೆ.

- ಮಿಶನ್ ಕಾರ್ಖಾನೆಗಳಿಂದ ಮತ್ತು ಅಲ್ಲಿ ತರಬೇತಿ ಹೊಂದಿದ ಕುಶಲ ಕರ್ಮಿಗಳಿಂದ ತಯಾರಾದ ವಸ್ತುಗಳ ಗುಣಮಟ್ಟವು ವೃತ್ತಿಪರ ಏಜನ್ಸಿಗಳಿಂದ ಮತ್ತು ಸರಕಾರಿ ಅಧಿಕಾರಿಗಳಿಂದ ಪ್ರಶಂಸಿಸಲ್ಪಟ್ಟಿವೆ.

ದಕ್ಷಿಣ ಕನ್ನಡದಲ್ಲಿ ಉದ್ಯೋಗವಕಾಶಗಳು ಇಲ್ಲದಿರುವುದರಿಂದ ಅನೇಕ ಮಂದಿ, ಅದರಲ್ಲಿಯೂ ವಿಶೇಷವಾಗಿ ಬಡಗಿಗಳು ಮತ್ತು ಕಮ್ಮಾರರು ಜಿಲ್ಲೆಯನ್ನು ಬಿಟ್ಟು ಹೋಗಬೇಕಾಗಿ ಬಂತು. ಇವರಲ್ಲಿ ಅನೇಕ ಮಂದಿ ೧೮೭೯ರ ನಂತರ ಮುಂಬೈಗೆ ವಲಸೆ ಹೋಗಿದ್ದಾರೆ. ದಕ್ಷಿಣ ಕನ್ನಡದ ಸಮುದಾಯವನ್ನು ಒಡೆಯುವುದರಲ್ಲಿ ಇದೊಂದು ಋಣಾತ್ಮಕ ಅಂಶವಾಗಿದೆ. ಆದರೆ ಮುಂಬೈಯಲ್ಲಿ ಬಾಸೆಲ್ ಮಿಶನ್ ಕ್ರೈಸ್ತ ಕುಶಲಕರ್ಮಿಗಳಿಗೆ ದೊರೆತ ಸಿದ್ಧ ಉದ್ಯೋಗಗಳು ಜನರಲ್ಲಿ ಸಂತೃಪ್ತಿಯನ್ನು ಉಂಟು ಮಾಡಿದೆ. ಇದರಿಂದಾಗಿ ಮುಂಬೈಯಲ್ಲಿ ಬಾಸೆಲ್ ಮಿಶನ್ ಕ್ಯಾನರಿಸ್ ಚರ್ಚ್ ರೂಪುಗೊಳ್ಳುವುದು ಕೂಡಾ ಸಾಧ್ಯವಾಗಿದೆ.[೧೪]

ಸುವಾರ್ತಾ ಪ್ರಸಾರಕರು ಸ್ಥಳೀಯ ಕ್ರೈಸ್ತರ ಮೊದಲ ಗುಂಪು ದೊರೆತ ಕೂಡಲೇ ಅವರ ಬದುಕಿನ ಆಧ್ಯಾತ್ಮಿಕ ಮತ್ತು ಪ್ರಾಪಂಚಿಕ ಬದುಕಿನಲ್ಲಿ ತೊಡಗಿಕೊಳ್ಳುವ ಅಗತ್ಯವನ್ನು ಮನಗಂಡರು. ೧೮೪೧ರ ವರದಿಯಲ್ಲಿ ಹೀಗಿದೆ: "ನಗರದ ಬೇರೆ ಬೇರೆ ಭಾಗಗಳಲ್ಲಿರುವ ಮಿಶನ್ ಕ್ರೈಸ್ತರಿಗೆ ನಿರಂತರ ಮೇಲುಸ್ತುವಾರಿ ಮತ್ತು ಮಾರ್ಗದರ್ಶನದ ಅಗತ್ಯವಿದೆ. ಜ್ಞಾನಸ್ನಾನ ಕೊಡುವುದರ ಮೂಲಕ ಅನ್ಯಜಾತಿಯವನ ಪ್ರವೇಶವಾಯಿತೆಂದರೆ ಅದು ಮತ ಪ್ರಚಾರಕರ ಕಾಳಜಿಯ ಅಂತ್ಯವೆಂದು ಅರ್ಥವಲ್ಲ. ಅದರ ನಿಜವಾದ ಪ್ರಾರಂಭವೇ ಅದು. ಜೊತೆಗೆ ಮಿಶನ್ ಸ್ಥಳೀಯ ಕ್ರೈಸ್ತರ ಆಧ್ಯಾತ್ಮಿಕ ಮಾತ್ರವಲ್ಲ ಅವರ ಭೌತಿಕ ಕ್ಷೇಮಾಭಿವೃದ್ಧಿಯ ಕುರಿತು ಕೂಡಾ ಕಾಳಜಿಯನ್ನು ಹೊಂದಿದೆ. ಕಾಲಾನುಕ್ರಮದಲ್ಲಿ ಅನೇಕ ಕುಟುಂಬಗಳನ್ನು ತಾಳೆಮರದಿಂದ ಶೇಂದಿಯನ್ನು ತಯಾರಿಸುವ ಕಾಯಕಕ್ಕಿಂತ ಬೇರೆ ಸ್ಥಾನಕ್ಕೆ ಕರೆದೊಯ್ದು ಅವರು ನಿಷ್ಠಾವಂತ ಬದುಕನ್ನು ಸಾಗಿಸುವಂತೆ ನೋಡಿಕೊಳ್ಳಬೇಕಾಗಿದೆ". ಈ ವರದಿಗಳು ಸೂಚಿಸುವುದೇನೆಂದರೆ , ಜ್ಞಾನಸ್ನಾನವೊಂದರಿಂದಲೇ (ಬ್ಯಾಪ್ಟಿಸಂ) ಕ್ರೈಸ್ತ ಧರ್ಮಸ್ವೀಕಾರ ಪ್ರಕ್ರಿಯೆ ಪೂರ್ಣಗೊಳ್ಳುವುದಿಲ್ಲ ಯಾಕೆಂದರೆ ಇದು ಅಭದ್ರ ಸ್ಥಿತಿಯಾಗಿರುತ್ತದೆ. ಇದಕ್ಕೆ ಮೇಲುಸ್ತುವಾರಿಯ ಮತ್ತು ಕ್ರೈಸ್ತ ವ್ಯಕ್ತಿಗೆ ಹೊಂದಿಕೆಯಾಗುವ ವಿವಿಧ ವೃತ್ತಿಯ ಅಗತ್ಯವಿರುತ್ತದೆ. ಧರ್ಮ ಮತ್ತು ಪ್ರಾಪಂಚಿಕ ಬದುಕು ಮಿಶನೊಂದರ ಎರಡು ಮಗ್ಗಲುಗಳಾಗಿ ಪರಿಗಣಿಸಲ್ಪಟ್ಟಿವೆ.[೧೫]

ಮತಾಂತರಿಗಳನ್ನು 'ಹೀದನ್ ಕ್ರಿಶ್ಚಿಯನ್ಸ್' ಅಥವಾ 'ಹಿಂದೂ ಕ್ರೈಸ್ತ'ರೆಂದು ಕರೆಯಲಾಗುತ್ತಿತ್ತು. ಹೀಗೆ ಕ್ರೈಸ್ತರಾಗಿ ಅವರಿಗೆ ಹಂಗಾಮಿ ದರ್ಜೆಯನ್ನು ನೀಡಲಾಗುತ್ತಿದ್ದು, ಅವರು ಬೇರೆ ದಾರಿ ಹಿಡಿಯದಂತೆ ನೋಡಿಕೊಳ್ಳುವ ಮೇಲುಸ್ತುವಾರಿಯ ಅಗತ್ಯವಿರುತ್ತಿತ್ತು. ಆದರೆ

ಮಿಶನರಿಗಳು ಚಲಾವಣೆಗೆ ತಂದ ಪ್ರಬಲ ನಿಯಂತ್ರಣ ಮತ್ತು ಮೇಲುಸ್ತುವಾರಿಯು ಸಮಿತಿಯ ಕುರಿತಾದ ಅವರ ನಿಷ್ಠಾವಂತ ಬದುಕು ಮತ್ತು ಅವರು ಅನುಸರಿಸುತ್ತಿದ್ದ ಸಾಂಸ್ಥಿಕ ಶಿಸ್ತಿನ ಭಾಗವೇ ಆಗಿದೆ. ಇದೇ ರೀತಿಯ ರಚನೆಯನ್ನು ಅವರು ಸಭೆಯಲ್ಲಿ ಕೂಡಾ ನಿರ್ಮಿಸಲು ಪ್ರಯತ್ನಿಸಿದ್ದಾರೆ. ಈ ರಚನೆಯಲ್ಲಿ ಸುವಾರ್ತಾ ಪ್ರಸಾರಕರು ಅಧಿಕಾರ ಸೂತ್ರದ ಪಿತೃಸ್ಥಾನದಲ್ಲಿದ್ದು, ಭಾರತೀಯ ಕ್ಯಾಟಕಿಸ್ಟ್‌ಗಳು ಮತ್ತು ಡೀಕನ್‌ಗಳು ಅವರ ಸಹಾಯಕರಾಗಿ ಮತ್ತು ಸಭೆಗಳು ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವ ಮತ್ತು ಅವರ ಮೇಲುಸ್ತುವಾರಿ ನೋಡಿಕೊಳ್ಳುವ ಸ್ಥಾನದಲ್ಲಿ ಇರುವುದು. ಮಿಶನರಿಗಳು ತಮ್ಮ ಸಭೆಗಳಿಗಾಗಿ ಅಳವಡಿಸಿಕೊಳ್ಳಬೇಕೆಂದಿದ್ದ ಹೊಸ ನಡವಳಿಕೆಯ ನಿಯಮಗಳ ಮೇಲೆ ಕುಟುಂಬಗಳ ಮತ್ತು ನೆರೆಹೊರೆಯವರ ಪ್ರಭಾವ ಉಂಟಾಗಬಹುದೆಂದು ಆತಂಕದಲ್ಲಿದ್ದರು. ಈ ನಿಯಮಗಳೆಂದರೆ, ಭಾನುವಾರದ ದಿನ ಚರ್ಚಿಗೆ ಭೇಟಿ ನೀಡುವುದು ಮಾತ್ರವಲ್ಲ ಪ್ರತಿದಿನ ಮನೆಯಲ್ಲಿ ಭಕ್ತಿಯನ್ನು ವ್ಯಕ್ತಪಡಿಸಬೇಕಾಗುತ್ತದೆ ಮತ್ತು ಯಾವುದೇ ಕ್ರೈಸ್ತೇತರ ಧರ್ಮಾಚರಣೆಗಳು ಅಥವಾ ಸಮಾರಂಭಗಳಲ್ಲಿ ಅವರು ಭಾಗವಹಿಸುವಂತಿಲ್ಲ. ಮಿಶನರಿಗಳ ವರದಿಗಳಲ್ಲಿ ತಪ್ಪದೆ ಉಲ್ಲೇಖಗೊಳ್ಳುತ್ತಿದ್ದ ವಿಷಯವೆಂದರೆ ಕ್ರೈಸ್ತ ಗ್ರಾಮಗಳಾಗಿ ಅಭಿವೃದ್ಧಿ ಹೊಂದಬಲ್ಲ ಸಣ್ಣ 'ಮಿಶನ್ ವಸಾಹತು'ಗಳನ್ನು ರೂಪಿಸುವುದು. ಭಾನುವಾರ ಕೆಲಸ ಮಾಡುವುದು ನಿಷಿದ್ಧವೆಂಬ ನಿಯಮದೊಂದಿಗೆ ಸಭೆಯ ನಿರೀಕ್ಷೆಯಲ್ಲಿ ಇದ್ದುದು 'ಸ್ವಚ್ಛ ಮತ್ತು ಸಭ್ಯ' ಆದರೆ ಸೌಜನ್ಯಕರ' ಉಡುಪುಗಳು ಮತ್ತು ಮಕ್ಕಳಿಗೆ ಕಡ್ಡಾಯ ಶಿಕ್ಷಣ, ಸಾಲದ ಕುರಿತು ಅದು ಎಚ್ಚರಿಕೆಯನ್ನು ನೀಡಿತ್ತು. ದೈನಂದಿನ ಖರ್ಚಿಗೆ ಸಾಲುವಷ್ಟೇ ವರಮಾನವಿದ್ದ ಅನೇಕ ಮಿಶನ್ ಕ್ರೈಸ್ತರಿಗೆ ಈ ಆದೇಶಗಳು ಕಷ್ಟಕರವಾದವು. ಕೆಲಸದಲ್ಲಿ ತೊಡಗಿಸಿಕೊಳ್ಳುವ ಅಗತ್ಯ ಮತ್ತು ಚರ್ಚಿನ ಶಿಸ್ತಿನ ಅನುಸರಣೆಯನ್ನು ಬೆಂಬಲದ ಅಗತ್ಯವಿರುವ ದೀಕ್ಷೆಗೆ ಒಳಪಡತಕ್ಕಂತಹ ಅಭ್ಯರ್ಥಿಗಳ ನಿಷ್ಠೆಯನ್ನು ಪರೀಕ್ಷೆ ಮಾಡುವ ಉತ್ತಮ ಹಾದಿಯಾಗಿ ಇದನ್ನು ಕಾಣಲಾಗುತ್ತಿತ್ತು.[೧೭]

ಕ್ರೈಸ್ತಮತ ಸ್ವೀಕರಿಸಿದವರನ್ನು ಅವರ ಜಾತಿಯಿಂದ ಬೇರ್ಪಡಿಸಿದ್ದರಿಂದ, ಅವರು ತಮ್ಮ ಮನೆ ಮತ್ತು ಉದ್ಯೋಗವನ್ನು ಕಳೆದುಕೊಳ್ಳುತ್ತಾರೆ. ಆದ್ದರಿಂದ ಅವರಿಗೆ ಪರ್ಯಾಯ ವರಮಾನದ ಅಗತ್ಯವಿದ್ದು, ಈ ಕಾರಣಕ್ಕಾಗಿ ಕೈಗಾರಿಕಾ ಸಂಸ್ಥೆಗಳ ಸ್ಥಾಪನೆಯಾಯಿತು ಎಂದು ಮಿಶನರಿಗಳ ಕುರಿತು ಪ್ರಾರಂಭ ಹಂತದಲ್ಲಿ ಬರೆದ ಅನೇಕ ಚರಿತ್ರೆಕಾರರ ಬರವಣಿಗೆಗಳು ಮತ್ತು ಇತ್ತೀಚಿನ ಗ್ರಂಥಗಳು ವಿವರಿಸಿವೆ. ಈ ವಿಚಾರಕ್ಕೆ ಮುಖ್ಯ ಆಕರವೆಂದರೆ ಮಿಶನ್ನಿನ ಪ್ರಕಟನೆ ' ಕ್ರೈಸ್ತೇತರರ ವಾಣಿ' ( The Messenger to the Heathens- Der evangelische Heidenbote) ಗ್ರಂಥದಲ್ಲಿನ ಬಹು ಉಲ್ಲೇಖಿತ ಲೇಖನ. ಇದು ಮತ ಪ್ರಚಾರಕ ಗ್ರೈನರ್ ಅವರು ಕಳುಹಿಸಿದ ವರದಿಯ ಉದ್ಧರಣೆಯಾಗಿದೆ.

“ ಈ ದೇಶದಲ್ಲಿ ಎಲ್ಲರ ಬದುಕನ್ನು ವ್ಯವಸ್ಥಿತಗೊಳಿಸುವ ಜಾತಿ ಮತ್ತು ಅದರ ನಿಯಮಗಳಿಂದ ಬೇರ್ಪಡಿಸಿ, ಅವರ ಪಾಲಿಗೆ ಬರಬಹುದಾದ ಯಾವುದೇ ಆಸ್ತಿಯ ಹಕ್ಕುಗಳಿಂದ ವಂಚಿತಗೊಳಿಸಿ, ಹತ್ತಿರದ ಬಂಧುಗಳಿಂದ ದೂರವಾಗಿಸಿಕೊಂಡು, ತಮ್ಮ ದೈನಂದಿನ ಬದುಕಿನ ಭವಿಷ್ಯದ ಕುರಿತು ಭರವಸೆಯಿಲ್ಲದೆ, ಬೀದಿಯಲ್ಲಿ ಅವರು ಕಾಣಿಸಿಕೊಂಡಾಗಲೆಲ್ಲಾ ಎಲ್ಲರಿಂದಲೂ ಅವಹೇಳನಕ್ಕೆ, ಗೇಲಿಗೆ ಮತ್ತು ತಿರಸ್ಕಾರಕ್ಕೆ ಒಳಗಾಗಿ ಇರುವಂತಹದು ಕ್ರೈಸ್ತನಾಗಿ ಮತಾಂತರ ಹೊಂದಿ ಅವನ ಹೆಸರನ್ನು ಹೊಂದಿರುವ ಹಿಂದೂವಿನ ಸ್ಥಿತಿಯಾಗಿದೆ. ಅವನ ಅಧ್ಯಾತ್ಮಿಕ ಬದುಕು ಎಚ್ಚೆತ್ತು ಕೊಂಡಿದ್ದರೂ, ಅವನು ಸತ್ತವನ ಹಾಗೆ ತಿರುಗಾಡಿಕೊಂಡಿರುತ್ತಾನೆ. ಅವನ ಸಂಬಂಧಿಕರು ಅವನ ಅಂತ್ಯಕ್ರಿಯೆಯನ್ನು ಆಚರಿಸಿದ್ದಾರೆ. ಒಂಟಿಯಾಗಿ, ತನ್ನ ಕುಟುಂಬದಿಂದ ತ್ಯಜಿಸಲ್ಪಟ್ಟು ನಿರ್ಬಂಧಿತ ಅಧ್ಯಾತ್ಮಿಕ ಸಾವಿನ ಸಂಕೋಲೆಯಲ್ಲಿ ಅವನು ಬಂಧಿತನಾಗಿದ್ದಾನೆ”. ಈ ಸಂಗತಿಯನ್ನು ಬಿಟ್ಟರೆ, ನಾವು ಮಿಶನರಿಗಳ ವರದಿಗಳಲ್ಲಿ ಆಗಾಗ ಈ ರೀತಿಯ ಉಲ್ಲೇಖಗಳನ್ನು ನಿರ್ದಿಷ್ಟ ಉದಾಹರಣೆಗಳೊಂದಿಗೆ ಕಾಣುತ್ತೇವೆ. ೧೮೫೮ರ ದಕ್ಷಿಣ ಭಾರತೀಯ ಸುವಾರ್ತಾ ಪ್ರಸಾರಕರ ಅಧಿವೇಶನದಲ್ಲಿ, ಸುವಾರ್ತಾ ಪ್ರಸಾರಕರ ಕಾರ್ಯಗಾರಗಳ ಚರ್ಚೆಯಲ್ಲಿ ಈ ವಾದವನ್ನು ಬಳಸಿಲ್ಲ. ಆದುದರಿಂದ ಈ ವಿಚಾರವು ಭಾರತದಲ್ಲಿ ಚಲಾವಣೆಯಲ್ಲಿ ಇರುವುದಕ್ಕಿಂತ ಬಾಸೆಲ್‌ನಲ್ಲಿ ಇತ್ತು ಎನ್ನಬಹುದು. ಬಾಸೆಲ್‌ನಲ್ಲಿ ಮಿಶನ್ನಿನ ಕೈಗಾರಿಕಾ ಸಾಹಸಗಳನ್ನು ಸ್ನೇಹಿತರಿಗೆ ವಿವರಿಸುವ ಸಂದರ್ಭದಲ್ಲಿ ಈ ವಿಚಾರವನ್ನು ಬಳಕೆ ಮಾಡಲಾಗಿದೆ. ಬೆಂಬಲಿಗರಲ್ಲಿ ಅನುಕಂಪವನ್ನು ಹೊರಹೊಮ್ಮಿಸಲು ಈ ಸರಳ ವಾದವು ಸೂಕ್ತ ರೂಪದ್ದಾಗಿದೆ.[೧೭]

‘ಪ್ರಲೋಭನೆ’ ಸುವ್ಯಕ್ತ ಪದ. ಅದು ಕುಟುಂಬ ಮತ್ತು ಸಮುದಾಯದ ಪ್ರತಿರೋಧವನ್ನು ಪರೀಕ್ಷೆಯಾಗಿ, ಮೀರಬೇಕಾದ ತಡೆಯಾಗಿ ಕಾಣಬೇಕೆಂದು ಸೂಚಿಸುತ್ತದೆ. ಬಹುಪಾಲು ವರದಿಗಳು ಚಿತ್ರಿಸಿದ್ದು ಇದನ್ನೇ. ಈ ವಿವರಗಳಿಂದ ಸ್ಪಷ್ಟವಾಗುವುದೇನೆಂದರೆ, ಮತಾಂತರಿ ಅಥವಾ ಜ್ಞಾನಸ್ನಾನ ಪಡೆಯಲಿಚ್ಛಿಸುವ ಅಭ್ಯರ್ಥಿಯು ಸ್ವತಃ ನಿರ್ಧಾರ ಕೈಗೊಂಡ ವ್ಯಕ್ತಿಯಾಗಿರುತ್ತಾನೆ. ಮಿಶನ್ ಕ್ರೈಸ್ತರು ಜಾತಿಯ ಎಲ್ಲಾ ಬಾಹ್ಯ ಚಿನ್ಹೆಗಳನ್ನು ತೆಗೆಯಬೇಕು ಮತ್ತು ಜಾತಿ ನಿಯಮಗಳ ಅನುಸರಣೆಯನ್ನು ಕೈ ಬಿಡಬೇಕೆಂದು ಮಿಶನ್ ಸಂಸ್ಥೆ ತಿಳಿಸುತ್ತದೆ. ಇದನ್ನು ಕೂಡಾ ಅಭ್ಯರ್ಥಿಯ ನಿಷ್ಕಪಟತೆಯ ಪರೀಕ್ಷೆಯಾಗಿ ಮತ್ತು ಮಿಶನ್ನಿನ ಒಂದು ಷರತ್ತಾಗಿ ಕಾಣಲಾಗುತ್ತಿತ್ತು. ಅವರು ಕ್ರೈಸ್ತೇತರರಿಂದ ದೂರವಿರುವುದನ್ನು ನಿರೀಕ್ಷಿಸಲಾಗುತ್ತಿತ್ತು. ಸಾಮಾಜಿಕ ಮತ್ತು ಆರ್ಥಿಕ ಬಹಿಷ್ಕಾರವನ್ನು ಸೂಚಿಸಿದ ದುರ್ದೈವಿ ಬಲಿಪಶುವಿನ ರೀತಿಯ ಮತಾಂತರಿಯ ಸಾಂಪ್ರದಾಯಿಕ ಪ್ರತಿನಿಧಿತ್ವಕ್ಕಿಂತ ಅಧಿಕವಾಗಿ ಕ್ರೈಸ್ತ ಧರ್ಮ ಸ್ವೀಕಾರವು ಇನ್ನೂ ಹೆಚ್ಚಿನ ಸಂಕೀರ್ಣ ಕಾರಣಗಳನ್ನು ಮತ್ತು ಪರಿಣಾಮಗಳನ್ನು ಸ್ಪಷ್ಟವಾಗಿ ಒಳಗೊಂಡಿತ್ತು. ಸ್ಥಳೀಯ ಕ್ರೈಸ್ತರನ್ನು ಅಂಚಿಗೆ ತಳ್ಳುವ ಮತ್ತು ಬಹಿಷ್ಕರಿಸುವ ಪ್ರಕ್ರಿಯೆ ನಡೆದಿರುವುದು ನಿಜ. ಆದರೆ ಅದು ಪರಸ್ಪರ ದೂರಗೊಳ್ಳುವಿಕೆಯಾಗಿತ್ತು ಮತ್ತು ಮಿಶನ್ ಕ್ರೈಸ್ತರಿಗೆ ಅದು

ಕಡ್ಡಾಯವಾಗಿತ್ತು. ಕ್ರೈಸ್ತ ಮತ ಸ್ವೀಕಾರವು ವೈಯಕ್ತಿಕ, ಅಧ್ಯಾತ್ಮಿಕ ಅಥವಾ ಭಾವನಾತ್ಮಕ ಅನುಭವ ಮತ್ತು ಪರಿವರ್ತನೆಯಷ್ಟೇ ಅಲ್ಲ ಅದನ್ನು ಸೆಣಸಾಟವಾಗಿ, ವಿಮುಕ್ತಿಯಾಗಿ ಅಥವಾ ಸಾಮಾಜಿಕ ಚಲನೆಯ ಹುಡುಕಾಟದ ವರ್ತನೆಯಾಗಿ ಕಂಡರೆ ಅದಕ್ಕೆ ವ್ಯಾಪಕ ಪರಿಣಾಮಗಳು ಇರುತ್ತವೆ, ಅದು ಮಿಶನ್ ಕ್ರೈಸ್ತರಿಗೆ 'ಅವರು ಅದುವರೆಗೆ ಸೇರಿಕೊಂಡಿದ್ದ ಚಿರಪರಿಚಿತ ಲೋಕದಿಂದ ಉಚ್ಚಾಟನೆಯಾಗಿದೆ.' ಆದರೆ ಹೊಸ ಸಮುದಾಯದೊಂದಿಗೆ ಅದರದೇ ಆದ ಕಟ್ಟುನಿಟ್ಟಿನ ನಿಯಮಗಳೊಂದಿಗೆ ಸಂಯೋಜನೆ ಹೊಂದುವುದು ಕೂಡಾ ಆಗಿದೆ. ಕುಟುಂಬ ಮತ್ತು ಸಮುದಾಯದಿಂದ ಕಳಚಿಕೊಂಡು ಏರ್ಪಟ್ಟ ಹೊಸ ಸಂಬಂಧವು ಮಿಶನ್ ಕ್ರೈಸ್ತರನ್ನಷ್ಟೇ ಅಲ್ಲ ಅವರು ಬಿಟ್ಟು ಬಂದಿರುವ ಸಮುದಾಯದಲ್ಲಿ ಕೂಡಾ ಬದಲಾವಣೆಯನ್ನು ತಂದಿದೆ. ಇವರಿಗೆ ಕೆಲವು ಬಾವಿಗಳಿಂದ ನೀರು ಸೇದಲು ಅನುಮತಿ ನೀಡದಿರುವುದು ಅಥವಾ ಅವರನ್ನು ದೂರ ಮಾಡಿರುವುದು ಕೂಡಾ ವರದಿಯಲ್ಲಿ ಇದೆ. "ಹೆಂಡ ಇಳಿಸುವ ಕಾಯಕದ ಜ್ಞಾನಸ್ನಾನ ಪಡೆಯಲಿಚ್ಛಿಸಿದ್ದ ಅಭ್ಯರ್ಥಿಗಳ ಕುಟುಂಬ ಒಂದಿತ್ತು. ಅವರು ವಿಗ್ರಹಾರಾಧನೆಯನ್ನು ಕೈಬಿಟ್ಟ ಸುದ್ಧಿಯನ್ನು ಕೇಳಿದ ಕೂಡಲೇ ಅವರ ಮನೆ ಮಾಲಿಕ ಅವರನ್ನು ತನ್ನ ಮನೆಯಿಂದ ಹೊರಗೆ ಕಳುಹಿಸಿಯೇ ಬಿಟ್ಟ. ಅವರು ಮಿಶನರಿಗಳೊಂದಿಗೆ ಸೇರಿ, ಪಕ್ಕದ ದೈವಸ್ಥಾನದಲ್ಲಿದ್ದ ಭೂತಗಳನ್ನು ಓಡಿಸಿ ತನ್ನನ್ನು ತೊಂದರೆಯಲ್ಲಿ ಸಿಕ್ಕಿಸಿ ಹಾಕಬಹುದೆಂಬ ಅಂಜಿಕೆ ಅವರದು'. ಹಾಗಿದ್ದರೂ ಸಂಪೂರ್ಣ ಪ್ರತ್ಯೇಕಿಕರಣವು ವರದಿಯಾಗಿಲ್ಲ. ಮಿಶನರಿಗಳಿಗೆ ಮಾತ್ರ ಅಂತಹ ಸಂದರ್ಭಗಳನ್ನು ವರದಿ ಮಾಡುವುದು ಕೃಷಿ ಅಥವಾ ಕೈಗಾರಿಕಾ ಕ್ಷೇತ್ರ ಪ್ರವೇಶಕ್ಕೆ ಉತ್ತಮ ಕಾರಣವಾಗಿರುತ್ತಿತ್ತು. ತನ್ನ ಸುತ್ತ ಇರುವ ಸಮಾಜದಿಂದ ಪ್ರತ್ಯೇಕಿಸಲ್ಪಟ್ಟ ಮತ್ತು ಸ್ವತಂತ್ರವಾಗಿರುವ ಸಮುದಾಯಗಳನ್ನು ನಿರ್ಮಿಸುವುದು ಮತ್ತು ಕ್ರೈಸ್ತ ಧರ್ಮ ಸ್ವೀಕಾರವನ್ನು ರೂಪಿಸುವ ಮಿಶನ್ನಿನ ತಂತ್ರವು ಕೇವಲ ಸ್ಥಳೀಯ ಪ್ರತಿಕ್ರಿಯೆ ಮತ್ತು ಅದರ ಪ್ರಚೋದನೆಯಿಂದಾಗಲಿ ನಡೆದಿರುವುದಲ್ಲ ಅದು ಅಪ್ಪಟ ಕ್ರೈಸ್ತ ಸಮುದಾಯಗಳನ್ನು ಬಾಳಿಕೆಯಾಗಿಸುವ ಪ್ರಯತ್ನವಾಗಿದೆ.[೧೮]

ಕೈಗಾರಿಕಾ ಆಯೋಗಕ್ಕೆ ತನ್ನ ಸುವಾರ್ತಾ ಪ್ರಸಾರಕ ರುಜುವಾತುಗಳನ್ನು ಪ್ರದರ್ಶಿಸುವ ಆತುರವಿತ್ತು. ತಮ್ಮ ಯೋಜನೆಯು ಮತಾಂತರದ ಪ್ರಾಯೋಗಿಕ ಅನುಕೂಲಗಳನ್ನು ಜನರಿಗೆ ತೋರಿಸಬಹುದು ಮತ್ತು ಕ್ರೈಸ್ತಧರ್ಮದ ವಿಸ್ತರಣೆಗೆ ತಡೆಯಾಗಿರುವ ಜಾತಿ ವ್ಯವಸ್ಥೆಯನ್ನು ಅದು ದುರ್ಬಲಗೊಳಿಸಬಹುದೆಂದು ಅವರು ಸೂಚಿಸಿದ್ದಾರೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಪ್ರಾಪಂಚಿಕ ಅನುಕೂಲಗಳು, ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳು ನ್ಯಾಯಬದ್ಧ ಗುರಿಗಳಾಗಿವೆ. ಯಾಕೆಂದರೆ ಇವು ಜನರನ್ನು ಕ್ರೈಸ್ತ ಮತೀಯಗೊಳಿಸುವುದಕ್ಕೆ ತಯಾರು ಮಾಡಬಹುದು. ಇಲ್ಲಿ ಗಮನಾರ್ಹ ವಿಚಾರ ಯಾವುದೆಂದರೆ, ಕೈಗಾರಿಕಾ ಆಯೋಗವು, ಕೈಗಾರಿಕೆಗಳ ಬೆಂಬಲಗಳ ಹೊರತಾಗಿಯೂ, ಅವರು ನೇಕಾರರ ಸಮುದಾಯಗಳನ್ನು ಮಾತ್ರವೇ ನಿರ್ಮಿಸಿಕೊಂಡು

ಇರಬಾರದೆಂದು ಸುವಾರ್ತಾಪ್ರಸಾರಕರು ವಾದಿಸಿದಾಗಲೂ, ಆಯೋಗವು ಕಾರ್ಯಗಾರ ಸ್ಥಾಪನೆ ಮಾಡುವುದಾಗಲೀ ಅಥವಾ ಕೈಗಾರಿಕೆಗಳನ್ನು ವಿವಿಧ ಮುಖಗಳಲ್ಲಿ ಬೆಳೆಸುವುದಾಗಲೀ ಮಾಡಿಲ್ಲ. ಸಮಿತಿಯ ನೇರ ಆದೇಶಗಳ ಕೆಳಗೆ ಸೃಷ್ಟಿಯಾದ ಏಕಮಾತ್ರ ಹೊಸ ನಮೂನೆಯ ಕಾರ್ಯಗಾರವೆಂದರೆ ಹಂಚು ಕಾರ್ಯಗಳಿಗಾಗಿ ಸ್ಥಾಪನೆಯಾದ ತಾಂತ್ರಿಕ ಕಾರ್ಯಾಗಾರವಾಗಿದೆ. ಕೈಗಾರಿಕಾ ಆಯೋಗದ ಅಧ್ಯಕ್ಷರಾಗಿದ್ದ ಕಾರ್ಲ್ ಸರಸಿನ್ ಸಮರ್ಥ ಕುಶಲ ಚಿಂತಕರೆನ್ನುವುದು ಸ್ಪಷ್ಟವಾಗಿದೆ. ಆದರೆ ಅವರು ಭಾರತೀಯ ಕಾರ್ಯಾಗಾರಗಳಿಗಾಗಿ ಯಾವುದೇ ನಿಯಮವನ್ನಾಗಲೀ ಅಥವಾ ತಾಂತ್ರಿಕ ಮಾರ್ಗದರ್ಶನವನ್ನಾಗಲೀ ಅಭಿವೃದ್ಧಿ ಪಡಿಸಿಲ್ಲ. ಮಿಶನರಿಗಳು ಹೊಸ ನೇಯ್ಗೆ ಮಳಿಗೆಗೆ ಅಥವಾ ಹಂಚು ಕಾರ್ಖಾನೆಗೆ, ಅಥವಾ ಈಗಾಗಲೇ ಇರುವುದರ ವಿಸ್ತರಣೆಗೆ ಅಗತ್ಯವಿರುವ ಸಾಲಗಳಿಗೆ ಬೇಡಿಕೆ ಮುಂದಿಟ್ಟಾಗ ಅದಕ್ಕೆ ಮಂಜೂರಾತಿ ನೀಡುವುದರ ಮೂಲಕ ಅವರು ಜಾಗೃತ ಲೇವಾದೇವಿಗಾರರಂತೆ ನಡೆದುಕೊಂಡಿದ್ದಾರೆ. ಆದರೆ ೧೮೬೦ರಲ್ಲಿ ಕೈಗಾರಿಕಾ ಸಂಸ್ಥೆಗಳಲ್ಲಿ ಆರೋಗ್ಯ ಮತ್ತು ಉಳಿತಾಯ ನಿಧಿಗಳ ಸೃಷ್ಟಿಗಾಗಿ ಅವರು ಸಮಿತಿಯೊಂದಿಗೆ ಒತ್ತಾಯ ವ್ಯಕ್ತಪಡಿಸಿದ್ದಾರೆ. ಆದರೆ ಪ್ರಾರಂಭದ ವರ್ಷಗಳ ಮಿಶನರಿಗಳು ವ್ಯಕ್ತಪಡಿಸಿದಂತಹ ಸೃಜನಶೀಲತೆ ಮತ್ತು ಪ್ರಯೋಗಶೀಲತೆಗಳ ಉತ್ಸಾಹವು ಕ್ರಮೇಣ ಆಡಳಿತ ಮತ್ತು ನಿಯಂತ್ರಣದ ಮೇಲಿನ ಸಾಂಸ್ಥಿಕ ಕೇಂದ್ರೀಕೃತ ದೃಷ್ಟಿಯಾಗಿ ಪರಿವರ್ತನೆಯನ್ನು ಹೊಂದಿದೆ. ಅವರ ಪ್ರಯತ್ನ ಯಾವುದೇ ಇರಲಿ ಅದು ಅದರ ವೆಚ್ಚವನ್ನು ನಿಭಾಯಿಸುವ ರೀತಿಯದ್ದಾಗಿರಬೇಕೆನ್ನುವುದರ ಮೇಲೆ ಹೆಚ್ಚಿನ ಕಾಳಜಿ ವ್ಯಕ್ತವಾಗಿದೆ.[೧೯]

ಕಾರ್ಯಾಗಾರಗಳ ಮಿಶನರಿಗಳ ನಡವಳಿಕೆಯ ಕುರಿತಾದ ಕೈಗಾರಿಕಾ ಆಯೊಗದ ಒತ್ತಾಯ ಸೂಚಿಸುವುದೇನೆಂದರೆ, ಈ ವಿಧದ ಲೌಕಿಕ ಕೆಲಸಗಳಿಗೆ ಹಿಂಜರಿಯುವ ಮಿಶನ್ನಿನ ಬೆಂಬಲಿಗರಲ್ಲಿ ಬ್ಲಾಕ್ ಫಾರೆಸ್ಟ್‌ನ ಭಕ್ತಿಭಾವದ ಗಡಿಯಾರ ತಯಾರಕರು ಮಾತ್ರವೇ ಇರುವುದಿಲ್ಲ. ಭಾರತೀಯ ಮಿಶನ್ ಕ್ರೈಸ್ತರ ಭೌತಿಕ ಅಗತ್ಯಗಳನ್ನು ಪೂರೈಸುವುದರ ಕುರಿತು ಯೂರೋಪಿನ ಅನೇಕ ಬೆಂಬಲಿಗರು ಕೂಡಾ ಅಸಂತುಷ್ಟಿಯನ್ನು ವ್ಯಕ್ತಪಡಿಸಿದ್ದಾರೆ ಎಂದು ತಪಾಸಣಾಧಿಕಾರಿ ಜೋಸನ್ ಹಾನ್ಸ್ ಅವರು ತಿಳಿಸಿದ್ದಾರೆ. ಇದೇ ಕಾರಣಕ್ಕಾಗಿ ಭಾರತೀಯ ಕಾರ್ಯಾಗಾರಗಳಲ್ಲಿ ವ್ಯಾವಹಾರಿಕ ವ್ಯಕ್ತಿಗಿಂತ ಮಿಶನರಿಯನ್ನು ನೇಮಿಸಿಕೊಳ್ಳಲಾಗಿದೆ ಮತ್ತು ೧೮೫೯ರಲ್ಲಿ ಸ್ಥಾಪನೆಯಾದ ಮಿಶನ್ ವ್ಯಾಪಾರಿ ಸಂಸ್ಥೆಯಿಂದ ಅವರನ್ನು ಹೊರಗಿಡಲಾಗಿದೆ. ಮಿಶನ್ನಿನ ಉದ್ಯೋಗಿಗಳು ಮಾತ್ರ ಕಂಪನಿಯಲ್ಲಿ ಕೆಲಸ ಮಾಡಬೇಕೆಂದು ಒತ್ತಾಯಿಸಲಾಗಿದೆ. ಕಂಪನಿಯ ಚೇರ್‌ಮನ್ ಉಲ್‌ರಿಚ್ ಜೆಲ್‌ವೇಗರ್ ವೇತನವನ್ನು ಪಡೆಯುವ ಉದ್ಯೋಗಿಗಳನ್ನು ಪರಿಚಯಿಸಬೇಕೆಂದು ಕೊಂಡಿದ್ದರು. ಅವರು ವ್ಯಾಪಾರಿ ಜನರಾಗಿರುತ್ತಾರೆ ಮತ್ತು ಮಿಶನ್ನಿನಿಂದ ಸ್ವತಂತ್ರರಾಗಿರುತ್ತಾರೆ. ಆದರೆ ಅವರ ಆ ಮನವಿಯನ್ನು ಸಮಿತಿ ತಿರಸ್ಕರಿಸಿತು. ಇದರಿಂದ ಬೇಸರಗೊಂಡ ಜೆಲ್‌ವೇಗರ್ ೧೮೬೪ರಲ್ಲಿ ತಮ್ಮ ಸ್ಥಾನಕ್ಕೆ ರಾಜೀನಾಮೆ

ನೀಡಿದರು. ಟ್ರೇಡಿಂಗ್ ಕಂಪನಿಯಲ್ಲಿ ಸಮಾನಾಂತರ ಜಾತ್ಯಾತೀತ ಸಂಘಟನೆಯನ್ನು ೧೮೬೦ರಲ್ಲಿ ಪರಿಚಯಿಸುವ ಮೂಲಕ ಸಮಿತಿಯ ನಿಷೇಧಕ ಅಧಿಕಾರವನ್ನು ಉಲ್‌ರಿಚ್ ಜೆಲ್‌ವೇಗರ್ ಪ್ರಶ್ನಿಸಿದ್ದಾರೆ. ೧೮೮೦ರಲ್ಲಿ ತಪಾಸಣಾಧಿಕಾರಿ ಸ್ಕಾಟ್ ಅವರು ಸಮಿತಿಯ ತೀರ್ಪನ್ನು ಸುವಾರ್ತಾಪ್ರಸಾರದ ಪರಿಪ್ರೇಕ್ಷೆಯಿಂದ ಪ್ರಶ್ನಿಸಿದ್ದಾರೆ.[೨೦]

೧೮೭೨-೭೩ರಲ್ಲಿ ಅಲಹಾಬಾದಿನಲ್ಲಿ ಆಯೋಜಿಸಲಾಗಿದ್ದ ಮಿಶನ್ ಅಧಿವೇಶನಕ್ಕೆ ತಯಾರಿಸಲಾಗಿದ್ದ ಭಾರತದ ನೈಋತ್ಯ ಭಾಗದಲ್ಲಿದ್ದ ಬಾಸೆಲ್ ಜರ್ಮನ್ ಇವಾಂಜಲಿಕಲ್ ಮಿಶನರಿ ಸೊಸೈಟಿಯ ೧೮೬೨-೧೮೭೨ರ ಅವಧಿಯ ಪ್ರಗತಿ ವರದಿ ತಿಳಿಸುವುದೇನೆಂದರೆ: " ಮಿಶನ್ ಕ್ರೈಸ್ತರನ್ನು ಸಾಮಾಜಿಕ ಮತ್ತು ಹಣಕಾಸಿನ ದೃಷ್ಟಿಕೋನದಿಂದ ಮೇಲಕ್ಕೆತ್ತುವ ಪ್ರಯತ್ನಗಳಲ್ಲಿ ಮಿಶನ್ನಿನ ಏಜೆಂಟರ ನಿರ್ವಹಣೆಯಲ್ಲಿ ಅನೇಕ ಕೈಗಾರಿಕಾ ಅಥವಾ ವಾಣಿಜ್ಯ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಇದು ಕ್ರೈಸ್ತ ಕುಶಲಕರ್ಮಿ, ಯಂತ್ರಜ್ಞರು, ವ್ಯಾಪಾರಿಗಳು ಇತ್ಯಾದಿ ವರ್ಗಗಳನ್ನು ಸೃಷ್ಟಿಸುವ ಉದ್ದೇಶವನ್ನು ಹೊಂದಿದೆ. ಅನೇಕ ಮಿಶನ್ ಕ್ರೈಸ್ತರಿಗೆ ಉಪಯುಕ್ತ ಉದ್ಯೋಗಗಳನ್ನು ಮತ್ತು ಗೌರವಯುತ ಬಾಳ್ವೆಯ ದಾರಿಯನ್ನು ಕಲ್ಪಿಸಿ ತನ್ನ ಉದ್ದೇಶವನ್ನು ಮಿಶನ್ ನೆರವೇರಿಸಿಕೊಂಡಿದೆ. ಇಲ್ಲದಿದ್ದರೆ ಈ ಜನರು ಮಿಶನಿಗೆ ಹೊರೆಯಾಗುವ ಸಾಧ್ಯತೆಗಳಿದ್ದವು. ಸೋಮಾರಿತನಕ್ಕೆ ಸಂಸ್ಥೆಯಲ್ಲಿ ಆಕರ್ಷಣೆ ಹುಟ್ಟುವುದಕ್ಕೆ ಸಾಧ್ಯವಿಲ್ಲ. ಯಾಕೆಂದರೆ, ಇಲ್ಲಿ ಪ್ರತಿಯೊಬ್ಬರು ಸ್ವತಃ ತಮ್ಮ ಕೈಯಿಂದಲೇ ದುಡಿದು ಸಂಪಾದಿಸಬೇಕು. ಇದಕ್ಕಾಗಿ ಅವರಿಗೆ ನಿಯಮಿತತೆ, ಸ್ಥಿರತೆ ಮತ್ತು ಕೆಲಸದಲ್ಲಿ ಶ್ರದ್ಧೆಯ ಪರಿಪಾಠಗಳ ತರಬೇತಿಯನ್ನು ನೀಡಲಾಗುತ್ತದೆ. ಇದು ಬಹಳ ಲಾಭದಾಯಕವೂ, ಸ್ಥಳೀಯ ಕ್ರೈಸ್ತರಲ್ಲಿ ಬಹಳ ಅಪರೂಪದಲ್ಲಿ ಕಂಡು ಬರುವ ವಿಚಾರವೂ ಆಗಿದೆ.[೨೧]

ಯೂರೋಪಿನಲ್ಲಿ ಅನೇಕ ಪ್ರೊಟೆಸ್ಟೆಂಟ್ ಕ್ರೈಸ್ತ ಮಿಶನರಿ ಸಂಸ್ಥೆಗಳು ಹತ್ತೊಂಬತ್ತನೆಯ ಶತಮಾನದಲ್ಲಿ ಕಾರ್ಯಪ್ರವೃತ್ತವಾದವು. ಈ ಮಿಶನ್‌ಗಳು ಸಾಮಾನ್ಯವಾಗಿ ವಸಾಹತು ವಿಸ್ತರಣೆಯ ಪಥಗಳನ್ನು ಅನುಸರಿಸಿವೆ ಮತ್ತು ಅನೇಕ ಯೂರೋಪಿಯನ್ ವಸಾಹತುಗಳಲ್ಲಿ ತಮ್ಮ ಚಟುವಟಿಕೆಗಳ ಕೇಂದ್ರಗಳನ್ನು ಸ್ಥಾಪಿಸಿವೆ. ೧೭ ಮತ್ತು ೧೮ನೇ ಶತಮಾನದಲ್ಲಿ ಯೂರೋಪಿನಲ್ಲಿ ನಡೆದ ಪಾಯ್ಟಿಸ್ಟ್ (Pietist) ಚಳುವಳಿಯಿಂದ ಪ್ರೊಟೆಸ್ಟೆಂಟ್ ಕ್ರೈಸ್ತ ಮಿಶನರಿ ಸಂಸ್ಥೆಗಳು ತಮ್ಮ ಪ್ರೇರಣೆಯನ್ನು ಪಡೆದುಕೊಂಡಿದೆ. ಈ ಚಳವಳಿ ಒತ್ತು ನೀಡಿದ ಅಂಶಗಳೆಂದರೆ ಕ್ರೈಸ್ತ ಮತದ ಸ್ವೀಕಾರದ ಮೂಲಕ ವೈಯಕ್ತಿಕ ಮುಕ್ತಿಯನ್ನು ಹೊಂದುವುದು ಮತ್ತು ಕ್ರೈಸ್ತ ಧರ್ಮದಿಂದ ಜಗತ್ತಿನ ಪುನರ್ ನಿರ್ಮಾಣ. ಯೂರೋಪಿನ ಸಂಸ್ಕೃತಿಗೆ ಕ್ರಿಸ್ತನ ಪರಿಚಯವಿದ್ದುದ್ದರಿಂದ, ಯೂರೋಪಿನ ಸಂಸ್ಕೃತಿಯು ಶ್ರೇಷ್ಠವೆಂದು ಐರೋಪ್ಯರು ನಂಬಿಕೊಂಡಿದ್ದರು. ಪೂರ್ವದ ಕುರಿತಾದ ವಸಾಹತು ತಿಳಿವಳಿಕೆಯಿಂದಾಗಿ,

ಕ್ರೈಸ್ತೇತರರನ್ನು ಒಳಗೊಂಡಿರುವ ಪೂರ್ವದ ಸಮಾಜಗಳು ಕತ್ತಲೆಯಲ್ಲಿ ಜೀವಿಸುತ್ತಿವೆ, ಅವುಗಳನ್ನು ಕ್ರೈಸ್ತ ಅರ್ಥೈಸುವಿಕೆಯ ಮೂಲಕ ನಾಗರಿಕಗೊಳಿಸಬೇಕಾಗಿದೆ ಎಂಬ ಅವರ ನಂಬಿಕೆಯನ್ನು ಅದು ಬಲಪಡಿಸಿತು.[೨೨]

ಬಾಸೆಲ್ ಮಿಶನನ್ನು ಸ್ಥಾಪಿಸಿದಾಗ ಅದರ ಉದ್ದೇಶ ಇತರ ಸುವಾರ್ತಾಪ್ರಚಾರಕ ಸಂಸ್ಥೆಗಳಿಗಾಗಿ ಸುವಾರ್ತಾಪ್ರಚಾರಕರನ್ನು ತರಬೇತಿಗೊಳಿಸುವುದಾಗಿತ್ತು. ಆದುದರಿಂದ, ಮಿಶನರಿಗಳ ತರಬೇತಿ ಕಾರ್ಯಕ್ರಮಗಳಲ್ಲಿ ಕೆಲವು ಕಲೆಗಳನ್ನು ತಿಳಿದುಕೊಳ್ಳುವುದು ಅವಶ್ಯಕವಾಗಿತ್ತು. ಆದರೆ ಮಿಶನ್ನಿಗೆ ಕೈಗಾರಿಕಾ ಚಟುವಟಿಕೆಗಳನ್ನು ಪ್ರಾರಂಭಿಸುವ ಉದ್ದೇಶ ಇರಲಿಲ್ಲ. ಮಿಶನರಿಗಳು ಯಾರಿಗಾಗಿ ಕೆಲಸ ಮಾಡುವರೋ ಆ ಜನರನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುವ ಸಲುವಾಗಿ ಅವರ ಭಾಷೆ ಮತ್ತು ಸಂಪ್ರದಾಯವನ್ನು ಅಧ್ಯಯನ ಮಾಡುವಂತೆ ಅವರಿಗೆ ತಿಳಿಸಲಾಗುತ್ತಿತ್ತು. ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯಲು ಅವರಿಗೆ ಜಮೀನು ಮತ್ತು ತೋಟದ ಕೆಲಸಗಳನ್ನು ಕಲಿಸುವುದು ಮಿಶನ್ನಿನ ಹೆಚ್ಚಿನ ಜವಾಬ್ದಾರಿಯಾಗಿತ್ತು. ೧೮೫೨ರಲ್ಲಿ ಜೋಸೆಫ್ ಜೋಸೆನ್ ಹಾನ್ಸ್ ಅವರು, ಪ್ರತ್ಯೇಕವಾಗಿ ಸ್ಥಾಪಿಸಲಾದ ಕೈಗಾರಿಕಾ ಆಯೋಗದ ಮುಖ್ಯ ತಪಾಸಣಾಧಿಕಾರಿಯಾಗಿ ಅಧಿಕಾರ ಸ್ವೀಕರಿಸಿದ ನಂತರ ಪ್ರಾರ್ಥನೆ ಮತ್ತು ಕೆಲಸದ ವಿಚಾರ ಮಿಶನ್ನಿನ ಉದ್ದೇಶದಲ್ಲಿ ಪ್ರವೇಶ ಪಡೆಯಿತು. ಅದು ಪ್ರಾರ್ಥಿಸುವುದೆಂದರೆ ಕೆಲಸ ಮಾಡುವುದು, ಕೆಲಸ ಮಾಡುವುದೆಂದರೆ ಪ್ರಾರ್ಥಿಸುವುದು ಎಂಬ ಕಲ್ಪನೆಗೆ ದಾರಿ ಮಾಡಿಕೊಟ್ಟಿತ್ತು. ಅದರ ಪರಿಣಾಮವಾಗಿ, ಮಿಶನ್ನಿನ ಆರ್ಥಿಕ ಚಟುವಟಿಕೆಯು ಮಿಶನನ್ನು ಬೆಂಬಲಿಸುವುದಕ್ಕೆ ಮಾತ್ರವಲ್ಲ, ಅದು ಮಿಶನ್ ಎಂದೇ ಪರಿಗಣಿತವಾಯಿತು. ಕೆಲಸದ ಸಾಮರ್ಥ್ಯ ಮತ್ತು ನಿಷ್ಠೆಯನ್ನು ಸ್ವಾಧೀನ ಪಡಿಸುವುದು ಕೂಡಾ ಮನುಷ್ಯನ ಸ್ವಭಾವದ ಮೇಲೆ ಸುವಾರ್ತಾಪ್ರಸಾರಕ ಪ್ರಭಾವವನ್ನು ಹೊಂದಿರುತ್ತದೆ ಎಂದು ಮಿಶನರಿಗಳು ಆಲೋಚಿಸಿದ್ದರು. ಕ್ರೈಸ್ತಮತ ಸ್ವೀಕರಿಸಲು ಇಚ್ಛಿಸುವ ಅಭ್ಯರ್ಥಿಗಳು ತಮ್ಮ ಕ್ರೈಸ್ತ ಮತ ಸ್ವೀಕಾರದ ಬಯಕೆಯನ್ನು ಎಷ್ಟು ಗಂಭೀರವಾಗಿ ಪರಿಗಣಿಸಿದ್ದಾರೆ ಎಂಬುದನ್ನು ಅವರ ದೈಹಿಕ ಮತ್ತು ನಿಷ್ಠಾವಂತ ದುಡಿಮೆಯ ಮೂಲಕ ತಿಳಿದುಕೊಳ್ಳಲು ಅವರನ್ನು ಮಿಶನ್ ಕಾರ್ಖಾನೆಗಳಿಗೆ ಕಳುಹಿಸಲಾಗಿತ್ತು. ಬಾಸೆಲ್ ಮಿಶನರಿ ಫ್ರಾನ್ ಮೇಯರ್ ಅವರು "ಪರೀಕ್ಷಾರ್ಥಿಗಳ ಪ್ರಾಮಾಣಿಕತೆಯನ್ನು ಪರೀಕ್ಷೆ ಮಾಡುವ ಅವಕಾಶವನ್ನು ಒದಗಿಸುವುದು ಕೈಗಾರಿಕಾ ಸಂಸ್ಥೆಗಳ ಪ್ರಮುಖ ಸೌಕರ್ಯಗಳಲ್ಲಿ ಒಂದು"[೨೩] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಮಿಶನರಿಗಳ ಸಾಮಾಜಿಕ ಹಿನ್ನಲೆ ಮತ್ತು ೧೯ನೇ ಶತಮಾನದಲ್ಲಿ ಭಾರತದಲ್ಲಿ ಇದ್ದಂತಹ ಜಾತಿ ಶ್ರೇಣೀಕರಣ, ದಕ್ಷಿಣ ಕನ್ನಡದಲ್ಲಿ ಮಿಶನ್ ಕೈಗಾರಿಕಾ ಘಟಕಗಳ ಸ್ಥಾಪನೆಗೆ ಪ್ರಚೋದನೆ ನೀಡಿದ ಅಂಶಗಳಾಗಿವೆ. ಬಾಸೆಲ್ ಮಿಶನ್ ಹೇಳಿದ ಪ್ರಕಾರ ಅವರು ಆರ್ಥಿಕ ಚಟುವಟಿಕೆಗಳನ್ನು

ಪ್ರಾರಂಭಿಸಲು ಒತ್ತಡ ತಂದ ವಿಚಾರಗಳೆಂದರೆ: ಜಾತಿ ನಿಷ್ಠುರತೆ ಮತ್ತು ಅದನ್ನು ಅನುಸರಿಸಿ ಬಂದಂತಹ ಸಾಮಾಜಿಕ ಬಹಿಷ್ಕಾರ ಮತ್ತು ಕ್ರೈಸ್ತ ಧರ್ಮ ಸ್ವೀಕರಿಸುವವರು ಅವರ ಸಾಂಪ್ರದಾಯಿಕ ವೃತ್ತಿಗಳನ್ನು ಕಳೆದುಕೊಳ್ಳಬೇಕಾಗಿ ಬಂದುದು. ಕ್ರೈಸ್ತೇತರ ಮಂದಿ ಕ್ರೈಸ್ತ ಧರ್ಮವನ್ನು ಸ್ವೀಕರಿಸಲು ಇದ್ದಂತಹ ಮುಖ್ಯ ತಡೆಗಳೆಂದರೆ ಅವರು ಕ್ರೈಸ್ತಮತ ಸ್ವೀಕಾರದಿಂದ ಬಂಧುತ್ವದ ಸಂಬಂಧ ಕಳಚಿಕೊಳ್ಳುವುದು ಮತ್ತು ವೃತ್ತಿಯನ್ನು ಕಳೆದುಕೊಳ್ಳುವುದು ಆಗಿತ್ತು. ಮಿಶನರಿಗಳು ಸಾಮೂಹಿಕ ಧರ್ಮ ಪರಿವರ್ತನೆ ನಡೆಸಲು ನಿರಾಕರಿಸಿದುದು ಪರಿಸ್ಥಿತಿಯನ್ನು ಬಿಗಡಾಯಿಸಿತು. ಸಾಮೂಹಿಕ ಧರ್ಮ ಪರಿವರ್ತನೆಗಳಲ್ಲಿ ಬಂಧುತ್ವವನ್ನು ತೊರೆಯುವ ಮತ್ತು ಜಾತಿ ವೃತ್ತಿಗಳನ್ನು ಕೈ ಬಿಡಬೇಕಾದ ಅಪಾಯ ಬಹಳ ಕಡಿಮೆ ಪ್ರಮಾಣದಲ್ಲಿ ಇರುತ್ತದೆ. ಕೂಡು ಕುಟುಂಬಗಳ ವಿಚಾರಗಳಲ್ಲಿ ಧರ್ಮಪರಿವರ್ತನೆಯಿಂದ ಕೂಡು ಕುಟುಂಬದಿಂದ ಉಚ್ಚಾಟನೆ ಪಡೆಯುವುದು ಖಂಡಿತವಿರುತ್ತಿತ್ತು. ಧರ್ಮಪರಿವರ್ತನೆ ಹೊಂದಿದವರು ಕುಟುಂಬದ ಸಂಪನ್ಮೂಲಗಳ ಹಕ್ಕನ್ನು ಕೂಡ ಕಳೆದುಕೊಳ್ಳುವುದು ಅನಿವಾರ್ಯವಿರುತ್ತಿತ್ತು. ಈ ರೀತಿಯ ಕೌಟುಂಬಿಕ ಸಂಸ್ಥೆಗಳನ್ನು ಆಳುತ್ತಿರುವ ಸಾಂಪ್ರದಾಯಿಕ ನಿಯಮಗಳು ತಮ್ಮ ವ್ಯಾಪ್ತಿಯಲ್ಲಿ ಕೂಡು ಕುಟುಂಬಗಳ ಆಸ್ತಿಯನ್ನು ವೈಯಕ್ತಿಕ ಆಧಾರದಲ್ಲಿ ವಿಭಜಿಸುವುದಕ್ಕೆ ಅವಕಾಶ ನೀಡುವುದಿಲ್ಲ.[೨೪]

ಪ್ರತಿಯೊಬ್ಬ ಮಿಶನರಿಯ ಅಥವಾ ಮಿಶನರಿ ಗುಂಪುಗಳ ಸಾಮಾಜಿಕ ಹಿನ್ನಲೆಯು ಸಾಮಾಜಿಕ ಸುಧಾರಣಾ ಚಳವಳಿಗಳಿಗೆ ಪ್ರೋತ್ಸಾಹದಾಯಕ ಅಂಶವಾಗಿತ್ತು. ಫಾರೆಸ್ಟರ್ ಅವರ ಅವಲೋಕದಲ್ಲಿ ಬಹುಪಾಲು ಮಿಶನರಿಗಳು ಯಂತ್ರ ಕುಶಲಿಗಳ ಮತ್ತು ಕರಕುಶಲಿಗಳ ಮತ್ತು ವರ್ತಕ ವರ್ಗದಿಂದ ಬಂದವರಾಗಿದ್ದಾರೆ. ಅವರಲ್ಲಿ ಉತ್ತಮ ದರ್ಜೆಯನ್ನು ಹೊಂದುವ ಆಂತರಿಕ ಬಯಕೆ ಮತ್ತು ಶ್ರೇಣೀಕರಣದ ಕುರಿತು ತೀವ್ರ ಅಪನಂಬಿಕೆ ಇತ್ತು. ಮಿಶನರಿಗಳಿಗೆ, ಮಿಶನರಿ ಚಟುವಟಿಕೆಯಲ್ಲಿ ಭಾಗವಹಿಸುವುದು ಅವಕಾಶ ವಂಚಿತ ವರ್ಗದ ಸಾಮಾಜಿಕ ವಿಮೋಚನೆಯ ವಿಸ್ತೃತ ಅಭಿವ್ಯಕ್ತಿಯೇ ಆಗಿದೆ.[೨೫]

೧೮೪೦ರಿಂದಲೇ ಬಾಸೆಲ್ ಮಿಶನ್ ಮಂಗಳೂರಿನಲ್ಲಿ ಕೈಗಾರಿಕೆಗಳನ್ನು ಪ್ರಾರಂಭಿಸುವ ಸಾಹಸಕ್ಕೆ ಕೈ ಹಚ್ಚಿತು. ಆರಂಭದಲ್ಲಿ ಮಂಗಳೂರಿನ ಬಲ್ಮಠದಲ್ಲಿ ಕಾಫಿ ಪ್ಲಾಂಟೇಶನ್ (ತೋಟ) ಮಾಡಲಾಯಿತು. ಆದರೆ ಅದು ಅಷ್ಟು ಫಲಕಾರಿಯಾಗಲಿಲ್ಲ. ೧೮೪೬ರಲ್ಲಿ ಮಂಗಳೂರಿನಲ್ಲಿ ಒಂದು ಕೈಗಾರಿಕಾ ತರಬೇತಿ ಶಾಲೆಯನ್ನು ಸ್ಥಾಪಿಸಲಾಯಿತು. ಇಲ್ಲಿ ಮರದ ಕೆಲಸ, ನೇಯ್ಗೆ, ಬೀಗ ತಯಾರಿಕೆ ಮುಂತಾದುವುಗಳ ಬಗ್ಗೆ ತರಬೇತಿಯನ್ನು ಯುವಜನರಿಗೆ ಕೊಡಲಾಗುತ್ತಿತ್ತು. ಆ ತರಬೇತಿ ಶಾಲೆಯು ಬೊಸಿಂಜರ್ ಮತ್ತು ಮುಲ್ಲರ್ ಎಂಬ ಇಬ್ಬರು ತಜ್ಞರ ಕೈ ಕೆಳಗೆ ಕೆಲಸ ಮಾಡುತ್ತಿತ್ತು.[೨೬] ಪ್ರಾರಂಭದ ಪ್ರಯತ್ನಗಳಲ್ಲಿ ಸ್ವಲ್ಪ ಮಟ್ಟಿನ ಯಶಸ್ಸನ್ನು ಸಾಧಿಸಿದ ಉದ್ಯೋಗವೆಂದರೆ ಮರಗೆಲಸದ ಉದ್ದಿಮೆ.

ಮಂಗಳೂರಿನಲ್ಲಿ ಮತ್ತು ಮಲಬಾರ್‌ನ ಕಲ್ಲಿಕೋಟೆಯಲ್ಲಿ ಇದನ್ನು ಪ್ರಾರಂಭಿಸಲಾಗಿದೆ. ೧೮೫೨ರಲ್ಲಿ ಜರ್ಮನಿಯಿಂದ ಬಂದ ನುರಿತ ಮರಗೆಲಸಗಾರ ಆ ಕಾರ್ಯಗಾರದ ಉಸ್ತುವಾರಿಯನ್ನು ವಹಿಸಿಕೊಂಡರು. ಅಲ್ಲಿ ಕ್ರೈಸ್ತ ಧರ್ಮ ಸ್ವೀಕರಿಸಿದವರಿಗೆ ತರಬೇತಿಯನ್ನು ನೀಡಲಾಗುತ್ತಿತ್ತು. ಆ ಸಂಸ್ಥೆ ಪ್ರಾರಂಭದಲ್ಲಿ ಉತ್ತಮ ಯಶಸ್ಸನ್ನು ಗಳಿಸಿತ್ತಾದರೂ ಸ್ಥಳೀಯ ಕರಕುಶಲ ಕರ್ಮಿಗಳಿಂದ ಅತೀವ ಪೈಪೋಟಿಯನ್ನು ಎದುರಿಸಿದ ಕಾರಣ ಅವನತಿಯತ್ತ ಸಾಗಿತು. ಇವುಗಳ ಜೊತೆಗೆ ಕಮ್ಮಾರ ಕೆಲಸ, ಕಸೂತಿ ಕೆಲಸ, ತೋಟಗಾರಿಕೆ, ಅಚ್ಚು ಹಾಕುವುದು ಇತ್ಯಾದಿ ಕಸುಬುಗಳಲ್ಲಿ ತರಬೇತಿ ಕೊಡಲಾಗುತ್ತಿತ್ತು. ಆದರೆ ಸಾಂಪ್ರದಾಯಿಕ ಕಸುಬುಗಳಲ್ಲಿ ಜನರನ್ನು ತರಬೇತು ಮಾಡಿ ಅವರನ್ನು ಪುನರ್ವಸತಿ ಮಾಡಬೇಕೆಂಬ ಮಿಶನರಿಗಳ ಉದ್ದೇಶ ನಿರೀಕ್ಷಿಸಿದ ಮಟ್ಟದಲ್ಲಿ ಸಫಲವಾಗಲಿಲ್ಲವೆಂದು ತಿಳಿದು ಅದನ್ನು ಕೈ ಬಿಡಬೇಕಾದ ಪರಿಸ್ಥಿತಿ ಬಂದಿತು. ಮಿಶನರಿಗಳ ಮೊದಲ ಪ್ರಯತ್ನವು (ಕೈಗಾರಿಕಾ ತರಬೇತಿ ಶಾಲೆ) ಅಸಫಲತೆಯನ್ನು ಪಡೆಯುವಲ್ಲಿ ಈಗಾಗಲೇ ಬೆಸೆದುಕೊಂಡಿದ್ದ ಸಾಮಾಜಿಕ ಪರಿಸ್ಥಿತಿಗಳು ಹೊಸದಾದ ಕುಶಲಕರ್ಮಿಗಳನ್ನು ಪ್ರೋತ್ಸಾಹಿಸದೇ ಇದ್ದುದೇ ಕಾರಣವಾಗಿರಬಹುದು. ಇನ್ನೊಂದು ಮಿಶನರಿ ಮೂಲದ ಪ್ರಕಾರ ತಿಳಿದು ಬರುವುದೇನೆಂದರೆ, ಸ್ಥಳೀಯ ಕೈಗಾರಿಕೆಯು ಇತರೇ ಉಪಶಾಖೆಗಳಲ್ಲೂ ತನ್ನ ಉಳಿವಿಗಾಗಿ ಹೋರಾಟವನ್ನು ನಡೆಸುತ್ತಿವೆ ಮತ್ತು ನಿಧಾನವಾಗಿ ಅವನತಿಯತ್ತ ಸಾಗುತ್ತಿವೆ. ಇದಕ್ಕೆ ಪ್ರಮುಖ ಕಾರಣ ಬ್ರಿಟಿಷ್ ವಸಾಹತುಶಾಹಿ ವ್ಯವಸ್ಥೆ.[೨೭] ಬಿಪನ್ ಚಂದ್ರ ಅವರ ಪ್ರಕಾರ ವಸಾಹತುಶಾಹಿ ಒಂದು ಹೊಸ ಉತ್ಪಾದನಾ ವಿಧಾನವಲ್ಲ. ಅದು ಹಲವಾರು ಉತ್ಪಾದನಾ ವಿಧಾನಗಳನ್ನು ಒಳಗೊಂಡಿರುವ ಸಮ್ಮಿಶ್ರವಾದ ವ್ಯವಸ್ಥೆ. ಆ ವ್ಯವಸ್ಥೆಯೊಳಗೆ ಊಳಿಗಮಾನ್ಯತೆ, ಬಂಡವಾಳಶಾಹಿ, ಜೀತ, ಶೋಷಣೆ, ವ್ಯಾಪಾರ, ಕೈಗಾರಿಕೆ, ಕೃಷಿ ಮುಂತಾದವುಗಳೆಲ್ಲವೂ ಸೇರಿ ಕೊಂಡಿರುತ್ತದೆ. ಬಂಡವಾಳ ಶೇಖರಣೆಗೆ ಅನುಕೂಲವಾಗುವ ರೀತಿಯಲ್ಲಿ ಹೊಸ ಹೊಸ ಎಸ್ಟೇಟುಗಳು (ತೋಟದ ಉದ್ಯಮ) ಹುಟ್ಟಿಕೊಂಡವು. ಇದು ಹೊಸ ಭೂ ಮಾಲೀಕ ವರ್ಗಗಳ ಹುಟ್ಟಿಗೂ ಕಾರಣವಾಯಿತು. ಅದು ತರುವ ಆಧುನೀಕರಣ ಕೇವಲ ಆರ್ಥಿಕ ಪರಿವರ್ತನೆಗಳಿಗಷ್ಟೇ ಸೀಮಿತವಾದದ್ದಲ್ಲ. ಅದು ಆಯಾ ದೇಶದ ಸಾಮಾಜಿಕ, ಆಡಳಿತ ಮತ್ತು ಸಾಂಸ್ಕೃತಿಕ ಜೀವನದ ಮೇಲೂ ಗಾಢವಾದ ಪರಿಣಾಮಗಳನ್ನು ಬೀರುವಂತದ್ದು. ಬ್ರಿಟಿಷ್ ಆಳ್ವಿಕೆ ಅನಿವಾರ್ಯ ಎನ್ನುವ ಭಾವನೆಯನ್ನು ಮೂಡಿಸುವುದೇ ಅದರ ಮೊದಲ ಕೆಲಸ. ಆ ಕಾರಣಕ್ಕಾಗಿಯೇ ಅದು ಬ್ರಿಟಿಷ್ ಆಡಳಿತವನ್ನು ಆಧುನಿಕ ಹಾಗೂ ಬ್ರಿಟಿಷ್ ಪೂರ್ವ ಅವಧಿಯನ್ನು ಕತ್ತಲೆಯ ಯುಗ ಎಂಬುದಾಗಿ ಹೆಸರಿಸಿತು.[೨೮]

ವಸಾಹತು ಆಳ್ವಿಕೆಗೆ ಸಂಬಂಧಪಟ್ಟಂತೆ ಇರುವ ಒಂದು ಪ್ರಮುಖ ಚರ್ಚೆಯೆಂದರೆ, ವಸಾಹತು ಆಳ್ವಿಕೆಯಿಂದಾಗಿ ಸ್ಥಳೀಯ ಪೇಟೆ-ಪಟ್ಟಣಗಳು ಮತ್ತು ಕೈಗಾರಿಕೆಗಳು ನಾಶಹೊಂದಿದವು ಎನ್ನುವುದು. ಈ ವಾದವನ್ನು ಮುಂದಿಟ್ಟವರು ರಾಷ್ಟ್ರೀಯವಾದಿಗಳು. ಅವರ ಪ್ರಕಾರ ಕೈಗಾರಿಕಾ

ಕ್ರಾಂತಿಯ ಪರಿಣಾಮವಾಗಿ ಸ್ಥಳೀಯ ಕೈಗಾರಿಕೆಗಳು ಮೂಲೆ ಗುಂಪಾದವು ಹಾಗೂ ಅವುಗಳಲ್ಲಿ ದುಡಿಯುತ್ತಿದ್ದ ಕುಶಲಕರ್ಮಿಗಳು ನಿರುದ್ಯೋಗಿಗಳಾದರು. ಆದರೆ ಸಾಮ್ರಾಜ್ಯಶಾಹಿಗಳ ಪ್ರಕಾರ ಭಾರತದ ಗುಡಿ ಕೈಗಾರಿಕೆಗಳು ಅವುಗಳ ಹಿಂದುಳಿದ ತಂತ್ರಜ್ಞಾನದಿಂದಾಗಿ ತಮ್ಮಷ್ಟಕ್ಕೆ ಅವನತಿಯತ್ತ ಸಾಗಿದ್ದವು. ಈ ವಾದ ಪ್ರತಿವಾದಗಳ ಹಿಂದೆ ಅವರವರ ಹಿತಾಸಕ್ತಿಗಳು ಅಡಗಿದ್ದವು. ಅದೇನೇ ಇದ್ದರೂ ಹೊಸ ಕೈಗಾರಿಕಾ ನೀತಿಯ ಪ್ರವೇಶವಾದಾಗ ಸ್ಥಳೀಯ ಕೈಗಾರಿಕೆಗಳು ಹಲವಾರು ಸಮಸ್ಯೆಗಳನ್ನು ಎದುರಿಸಿದ್ದಂತೂ ನಿಜ.[೨೯] ಸಾಮ್ರಾಜ್ಯಶಾಹಿಗಳ ಪ್ರಕಾರ ಬ್ರಿಟಿಷರ ಆಗಮನಕ್ಕಿಂತ ಮೊದಲು ಭಾರತದಲ್ಲೇನೂ ಕೈಗಾರಿಕಾ ಕ್ರಾಂತಿ ನಡೆದಿರಲಿಲ್ಲ. ಹಾಗಾಗಿ ಕೈಗಾರಿಕೆಗಳ ಅವನತಿ ಎನ್ನುವ ಮಾತೇ ಹುಟ್ಟಿಕೊಳ್ಳುವುದಿಲ್ಲ. ಬ್ರಿಟಿಷ್ ಆಳ್ವಿಕೆಯಲ್ಲಿ ಹತ್ತಿ ಉದ್ಯಮದಂತಹ ಕೆಲವು ಕೈಗಾರಿಕೆಗಳು ಪ್ರೋತ್ಸಾಹ ಕಂಡಿದ್ದರ ಬಗ್ಗೆ ಹಾಗೂ ಕೆಲವು ಹೊಸ ಕೈಗಾರಿಕೆಗಳು ಸ್ಥಾಪನೆಗೊಂಡಿದ್ದರ ಬಗ್ಗೆ ರಾಷ್ಟ್ರೀಯವಾದಿಗಳು ಮೌನವಹಿಸಿದರೆ, ಯೂರೋಪಿನ ಕೈಗ್ಾರಿಕಾ ಬಂಡವಾಳ ಇಲ್ಲಿನ ಅರ್ಥವ್ಯವಸ್ಥೆಯನ್ನೇ ಬುಡಮೇಲು ಮಾಡಿದ್ದರ ಬಗ್ಗೆ ಸಾಮಾಜ್ಯಶಾಹಿಗಳು ಮೌನ ವಹಿಸುತ್ತಾರೆ.[೩೦] ಅಮೂಲಾಗ್ರವಾಗಿ ಪರಿಷ್ಕರಿಸಿದ್ದಲ್ಲಿ ವಸಾಹತುಗಳಲ್ಲಿ ಹೆಚ್ಚಾಗಿ ವ್ಯಾಪಾರವಾಗುತ್ತಿದ್ದುದು ಬ್ರಿಟಷ್ ಉತ್ಪಾದನೆಗಳು. ನೇಯ್ಗೆ ಕಾರ್ಖಾನೆಗಳ ಉದಾಹರಣೆಯನ್ನು ತೆಗೆದುಕೊಂಡಲ್ಲಿ ಇಡೀ ದೇಶದಲ್ಲಿ ಬ್ರಿಟಿಷ್ ನೇಯ್ಗೆಗಳು ಬಹಳ ಕಡಿಮೆ ಖರ್ಚಿನಲ್ಲಿ ತಮ್ಮ ವ್ಯಾಪಾರವನ್ನು ನಡೆಸುತ್ತಿದ್ದವು. ಇದರಿಂದ ಸ್ಥಳೀಯ ಉದ್ಯೋಗಸ್ಥರಿಗೆ ಅಪಾರವಾದ ನಷ್ಟವು ಸಂಭವಿಸುತ್ತಿತ್ತು.[೩೧]

ಮಿಶನ್ನಿನ ಖರ್ಚುವೆಚ್ಚ ಮತ್ತು ಕ್ರೈಸ್ತ ಧರ್ಮ ಸ್ವೀಕರಿಸಿದವರ ಬದುಕಿನ ಪರಿಸರದ ಕುರಿತು ಬಾಸೆಲ್ ಮಿಶನ್ ವ್ಯಕ್ತಪಡಿಸಿದ ಕಾಳಜಿ ಹೀಗಿದೆ: “ ಮಿಶನ್ ಕೆಲಸ ಹೆಚ್ಚು ವಿಸ್ತರಣೆಗೊಳ್ಳುತ್ತಿದ್ದಂತೆ, ಸ್ಥಳೀಯ ಸಭೆ ಬಾಸೆಲ್ ಮಿಶನ್ನಿನ ಮೇಲೆ ಹೆಚ್ಚು ಭಾರದ ಹೊರೆಯಾಗಲಿಕ್ಕಿಲ್ಲವೇ ಎಂಬುದು ಮಿಶನರಿಗಳ ಮುಖ್ಯ ಪ್ರಶ್ನೆ. ಅವರಿಗೆ ವೃತ್ತಿಗಳಲ್ಲಿ ತರಬೇತಿ ನೀಡುವುದರಿಂದ ನಿಷ್ಠೆಯ ಬದುಕನ್ನು ಪಡೆಯುವುದು ಸಾಧ್ಯವಾಗುವುದು. ವಯಸ್ಕ ಸದಸ್ಯರನ್ನು ಸಂಪೂರ್ಣ ಹೊಸದಾಗಿರುವ ವೃತ್ತಿಗಳಿಗೆ ಪರಿಚಯಿಸುವುದು ಕಷ್ಟದ ಕೆಲಸ. ಆದರೆ ಸಣ್ಣ ವಯಸ್ಸಿನವರಿಗೆ ಉತ್ತಮ ಯುರೋಪಿಯನ್ ಕೆಲಸಗಾರರಾಗಿ ತರಬೇತಿ ನೀಡಿದರೆ, ಈಗ ಇರುವ ಪರಿಸರದಿಂದ ಅವರನ್ನು ಹೊರಗೆ ತರುವುದು ಮತ್ತು ಅವರು ತನ್ನ ಮತ್ತು ತನ್ನ ಕುಟುಂಬಕ್ಕಾಗಿ ದುಡಿದು ಸಂಪಾದಿಸುವುದು ಸಾಧ್ಯವಾಗಬಹುದು.” ಈ ವಿಚಾರ ಮೆಟ್ಜ್ ಅವರ ನೇತೃತ್ವದಲ್ಲಿ ಕೈಗಾರಿಕಾ ಶಾಲೆಯ ಸ್ಥಾಪನೆಗೆ (೧೮೫೬) ಕಾರಣವಾಯಿತು.[೩೨]

೧೮೪೪ರಲ್ಲಿ ಗಡಿಯಾರ ತಯಾರಿಕೆ ಮತ್ತು ಉಮೇದುವಾರರಿಗೆ ತರಬೇತಿಯನ್ನು ನೀಡುವ ಕಾರ್ಯಾಗಾರದ ಸ್ಥಾಪನೆಗಾಗಿ 'ಕೈಗಾರಿಕಾ ಸಹೋದರರು' ಎಂದೇ ಪ್ರಸಿದ್ಧರಾಗಿದ್ದ ಇಬ್ಬರು ಸಹೋದರರ ಆಗಮನವಾಯಿತು. ಬಾಸೆಲ್ ಮಿಶನ್ ಕೈಗಾರಿಕಾ ಆಯೋಗವನ್ನು ಸ್ಥಾಪಿಸಲು ಈ ಯೋಜನೆ ದಾರಿ ಮಾಡಿಕೊಟ್ಟಿದೆ. ಈ ಯೋಜನೆಗೆ ಪ್ರಬಲ ವಿರೋಧ ವ್ಯಕ್ತಗೊಂಡದ್ದು ಗಡಿಯಾರ ತಯಾರಿಕೆಯ ಪ್ರಮುಖ ಕೇಂದ್ರವಾಗಿದ್ದ ಬ್ಲಾಕ್ ಫಾರೆಸ್ಟ್‌ನಲ್ಲಿನ ಸೈಂಟ್ ಜಾರ್ಜೆನ್‌ನ ಪಾಯ್ಟಿಸ್ಟ್ (Pietist) ಗಡಿಯಾರ ತಯಾರಕರಿಂದ. ಅವರೇ ಸ್ವತಃ ಗಡಿಯಾರವನ್ನು ಭಾರತಕ್ಕೆ ರಫ್ತು ಮಾಡುವ ಯೋಚನೆಯಲ್ಲಿದ್ದರು. ಇಂತಹ ಸಾಹಸಗಳು ನಷ್ಟವನ್ನುಂಟು ಮಾಡಬಹುದು ಮತ್ತು ಮಿಶನ್ನನ ಹೆಸರು ಕೆಡುವುದಕ್ಕೆ ಕಾರಣವಾಗಬಹುದು ಎಂದು ಅವರು ವಾದಿಸಿದರು. ಪ್ರತಿಭಟನಾಕಾರರಿಗೆ ವಾಸ್ತವ ವಿಚಾರವನ್ನು ವಿವರಿಸಿದ ಮಿಶನ್, ತಾವು ಗಡಿಯಾರದ ದೊಡ್ಡ ಪ್ರಮಾಣದ ಆಮದುಗಳನ್ನು ಯೋಜಿಸಿಲ್ಲವೆಂದೂ, ಕ್ರೈಸ್ತ ಕುಟುಂಬಗಳಿಗೆ ನ್ಯಾಯಬದ್ಧ ರೀತಿಯ ವರಮಾನವನ್ನು ಒದಗಿಸುವುದು ಮತ್ತು ಕ್ರೈಸ್ತ ಕುಶಲ ಕರ್ಮಿಗಳ ಸಮ್ಮುಖದಲ್ಲಿ ಅವರ ಪ್ರಭಾವ ಜನರ ಮೇಲೆ ಆಗುವಂತೆ ನೋಡಿಕೊಳ್ಳುವುದು ಮಿಶನ್‌ನ ಉದ್ದೇಶವೆಂದು ತಿಳಿಸಿತು. ಕೆಲವು ತಿಂಗಳು ಕಳೆದ ನಂತರ, ಅಮೇರಿಕೆಯು ಹಡಗಿನ ಮೂಲಕ ಬಹಳ ಕಡಿಮೆ ಬೆಲೆಯ ಗಡಿಯಾರಗಳನ್ನು ರಫ್ತು ಮಾಡುತ್ತಿರುವುದರಿಂದ ತನ್ನ ಯೋಜನೆಗಳನ್ನು ಕೈ ಬಿಟ್ಟಿರುವುದಾಗಿ ಸೈಂಟ್ ಜಾರ್ಜೆನ್ ವರದಿ ಮಾಡಿತು. ಹಾಗಿದ್ದರೂ ಸಮಿತಿ ಮುಂದುವರಿಯುವುದಾಗಿ ನಿರ್ಧರಿಸಿತು. ಆದರೆ ಕಿಸೆ ಗಡಿಯಾರಗಳ ದುರಸ್ತಿಗೆ ಮತ್ತು ಇಬ್ಬರು ಸಹೋದರರ ಕಾರ್ಯಕ್ರಮಕ್ಕೆ ಟಿನ್ ಪ್ಲೇಟಿಂಗಿಗೆ ಕೆಲವು ತರಬೇತಿಯನ್ನು ಸೇರಿಸಿತು. ೧೮೪೪ರಲ್ಲಿ ಭಾರತಕ್ಕೆ ಹೊರಡುವ ಮೊದಲು ಮುಲ್ಲರ್ ಮತ್ತು ಬೊಸಿಂಘರ್ ಅವರನ್ನು ಗಡಿಯಾರಗಳಿಗೇ ಸೀಮಿತವಾಗಿದ್ದು ಕೆಲಸ ಮಾಡಬಾರದೆಂದೂ, 'ಬಡಗಿ ಕೆಲಸ, ಲೋಹದ ಕೆಲಸ ಅಥವಾ ಗಂಟೆ ಕಾರ್ಖಾನೆ, ಚಮಚ ತಯಾರಿಕೆ, ಬಣ್ಣ ಬಳಿಯುವುದು, ಲೇಪ ಹಾಕುವುದು ಇತ್ಯಾದಿ ಕ್ಷೇತ್ರಗಳಲ್ಲಿ ಕೂಡ ಪ್ರಯತ್ನ ನಡೆಸುವಂತೆ ತಿಳಿಸಲಾಗಿದೆ. ಮುಲ್ಲರ್ ಮತ್ತು ಬೊಸಿಂಘರ್ ಭಾರತಕ್ಕೆ ಬಂದಾಗ ಅವರಲ್ಲಿದ್ದ ಸಂದೇಹ ನಿಜವಾಗಿದೆ. ಮಳೆಗಾಲದ ತೇವಭರಿತ ಹವೆ ಗಡಿಯಾರಗಳ ಮೇಲೆ ಪರಿಣಾಮ ಬೀರಿತು ಮತ್ತು ಅಮೇರಿಕೆಯ ಆಮದುಗಳಿಂದ ಬೆಲೆ ಇಳಿಮುಖವಾಯಿತು. ಗಡಿಯಾರ ತಯಾರಿಕೆಯಲ್ಲಿ ಪ್ರವೀಣರಾದ ಬೋಸಿಂಘರ್ ಮತ್ತು ಮುಲ್ಲರ್‌ರವರು ಮಂಗಳೂರಿಗೆ ಬಂದು 'ಬ್ಲಾಕ್ ಫಾರೆಸ್ಟ್ ಕುಕು' (Black Forest Cuckoo) ಗಡಿಯಾರಗಳನ್ನು ತಯಾರಿಸಿದರು ಮಾತ್ರವಲ್ಲದೆ ಅಪ್ರಟೀಸ್‌ಗಳಿಗೆ ಗಡಿಯಾರ ತಯಾರಿ ಮತ್ತು ದುರಸ್ತಿ ಕಾರ್ಯದಲ್ಲಿ ತರಬೇತಿಯನ್ನು ನೀಡಿದರು. ಸ್ವತಂತ್ರವಾಗಿ ಕಾರ್ಯವನ್ನು ನಿರ್ವಹಿಸುತ್ತಾ ಬಂದ ಬಾಸೆಲ್ ಮಿಶನ್ ತಾತ್ಕಾಲಿಕವಾದ ಬೆಂಬಲವನ್ನು ಬಾಸೆಲ್‌ನಿಂದ ಪಡೆಯುತ್ತಿತ್ತು. ಆದರೆ ಅಮೇರಿಕನ್ ಕಂಪನಿಗಳ ತೀವ್ರವಾದ ಪೈಪೋಟಿಯ

ಕಾರಣದಿಂದ ಗಡಿಯಾರ ತಯಾರಿಸುವಿಕೆಯ ಕಾರ್ಯ ಅಷ್ಟಾಗಿ ಯಶಸ್ಸನ್ನು ಕಾಣಲಿಲ್ಲ. ಇದಕ್ಕೆ ಕಾರಣ ಗಡಿಯಾರಗಳ ತಯಾರಿಕೆಯಲ್ಲಾಗಲೀ ಅಥವಾ ದುರಸ್ತಿಯ ಕಾರ್ಯದಲ್ಲಾಗಲೀ ಹೆಚ್ಚಿನ ಬೇಡಿಕೆಗಳು ಇರಲಿಲ್ಲ. ಆ ಕೆಲಸದಲ್ಲಿ ಸೂಕ್ಷ್ಮ ರೀತಿಯ ಕೈಗಾರಿಕಾ ಜಾಣ್ಮೆ ಅಗತ್ಯವಿದ್ದುದರಿಂದ ಅಂದಿನ ಪರಿಸ್ಥಿತಿಯಲ್ಲಿ ಅದು ಯಶಸ್ವಿಯಾಗಲಿಲ್ಲ. ಒಟ್ಟಿನಲ್ಲಿ ಸ್ಥಳೀಯ ಸಾಂಪ್ರದಾಯಿಕ ಕಸುಬುಗಳಲ್ಲಿ ತರಬೇತು ನೀಡುವುದರಿಂದ ಹೆಚ್ಚಿನ ಪ್ರಯೋಜನವಾಗುವುದಿಲ್ಲವೆಂದು ತಿಳಿದು ಆ ಯೋಜನೆಯನ್ನು ೧೮೬೫ರಲ್ಲಿ ಕೈ ಬಿಡಲಾಯಿತು.[೩೩] ಯೋಜನೆಯ ತಾಂತ್ರಿಕ ತಯಾರಿ ಬಹಳ ಕಟ್ಟುನಿಟ್ಟಿನದ್ದಾಗಿದ್ದರೂ, ಸೈಂಟ್ ಜಾರ್ಜೆನ್‌ನಲ್ಲಿಯೇ ಗುರುತಿಸಲಾಗಿದ್ದ ವಾಣಿಜ್ಯ ತೊಂದರೆಗಳನ್ನು ಪರಿಗಣಿಸಿರಲಿಲ್ಲ. ಆ ರೀತಿಯ ವಾಣಿಜ್ಯ ಮುಂದಾಲೋಚನೆಗಳ ಕೊರತೆ ಅನೇಕ ಯೋಜನೆಗಳಲ್ಲಿ, ಅದರಲ್ಲಿಯೂ ವಿಶೇಷವಾಗಿ ಕೃಷಿಯಲ್ಲಿ ಸಮಸ್ಯೆಗಳನ್ನು ಹುಟ್ಟಿಸಿವೆ. ಆದರೆ ಆ ಸೋಲನ್ನು ವಿವರಿಸಿದ ರೀತಿಯು ಬಾಸೆಲ್ ಮಿಶನ್ನಿನ ಕೈಗಾರಿಕೆಗಳ ಅಗತ್ಯಗಳನ್ನು ಮತ್ತು ಭಾರತೀಯರು ಮತ್ತು ಭಾರತದ ಗುಣಲಕ್ಷಣಗಳಿಂದಾಗಿ ಮಿಶನ್ ಎದುರಿಸಿದ ಸಮಸ್ಯೆಗಳನ್ನು ಕೂಡಾ ಚಿತ್ರಿಸುತ್ತದೆ. ಕೈಗಾರಿಕಾ ಆಯೋಗದ ಮೊದಲ ವರದಿಯಲ್ಲಿ ನೀಡಿದ ವಿವರಗಳ ಪ್ರಕಾರ ಕ್ರೈಸ್ತೇತರ ಜನರು ಇರುವ ಭಾರತದಲ್ಲಿ ಗಡಿಯಾರ ತಯಾರಿಕೆಯನ್ನು ಪರಿಚಯಿಸುವುದು ಅಸಾಧ್ಯವಾಗಿದೆ; ಇನ್ನು ಮತಾಂತರಿ ಹಿಂದೂವು ಆದ್ಯಂತ ಯೂರೋಪಿಯನ್ ಅಲ್ಲ, ಅಥವಾ ಒಂದೂವರೆ ಮಿಲಿಯ ಜನರ ಕೈಗೆ ಒಪ್ಪಿಸಲಾಗಿರುವ ನಮ್ಮ ನಾಗರಿಕತೆಯು ನಮಗೆ ಮುಂದಾಳ್ತತನವನ್ನು ನೀಡಿದೆ. ಆದುದರಿಂದ ಪ್ರಾರಂಭದಲ್ಲಿ ಎದುರಾಗುವ ಯಾವುದೇ ಹಿನ್ನಡೆಯನ್ನು ಸೋಲೆಂದು ಪರಿಗಣಿಸಬಾರದೆಂಬುದು ಮಿಶನರಿಗಳ ವಾದವಾಗಿದೆ. ಜರ್ಜೆನ್ ಒಸ್ಟರ್ಹಮ್ಮೆಲ್ (Jurgen Osterhommel) ಸೂಚಿಸಿದ ಹಾಗೆ ಮಿಶನ್ನಿನ ಪರಿಕಲ್ಪನೆಯ ಉನ್ನತೀಕರಣದಲ್ಲಿ ಸಾಮಾನ್ಯವಾಗಿ ಸೋಲು ಅಥವಾ ಪ್ರತಿರೋಧವನ್ನು ನಿರೀಕ್ಷಿಸಲಾಗುವುದಿಲ್ಲ. ನಾಗರಿಕತೆಯ ಪ್ರಗತಿಯ ಹಂತಗಳಲ್ಲಿ ಯೂರೋಪು ಬೇರೆ ಸಂಸ್ಕೃತಿಗಿಂತ ಹೆಚ್ಚು ಮುಂದೆ ಇದ್ದುದು ಕಾಲಕ್ಕೆ ಅನುಗುಣವಾಗಿದೆ. ನಾಗರಿಕತೆಯ ಪರಿಕಲ್ಪನೆಯು ಜನರನ್ನು ವರ್ಗೀಕರಿಸುವ ಮತ್ತು ಅವರ ನಡುವಿನ ವ್ಯತ್ಯಾಸಗಳನ್ನು ಗುರುತಿಸುವ ಮತ್ತು ವಿವರಿಸುವ ಜನಾಂಗೀಯ ಕಲ್ಪನೆಯದಷ್ಟೇ ತೆಳುವಾಗಿತ್ತು. ಅವರನ್ನು ಸಾಂಸ್ಕೃತಿಕ, ಭೌಗೋಳಿಕ, ಧಾರ್ಮಿಕ ಅಥವಾ ಜನಾಂಗೀಯ ಗುಂಪುಗಳಾಗಿ ಗುರುತಿಸಬಹುದಿತ್ತು. ಬಾಸೆಲ್ ಮಿಶನ್ನಿನ ಸುವಾರ್ತಾಪ್ರಸಾರಕರ ವರದಿಗಳು ಮತ್ತು ಪ್ರಕಟಣೆಗಳಲ್ಲಿ ಜನಾಂಗ (race) ಎಂಬ ಪದ ಹೆಚ್ಚು ಬಳಕೆಯಾಗದಿದ್ದರೂ, ಸಭೆಯ ನಿಯಮಾವಳಿಗಳಲ್ಲಿ ಹೀಗೆ ಹೇಳಿದೆ: "ಕ್ರಿಸ್ತನಲ್ಲಿ ಬಿಳಿಯರು ಅಥವಾ ಕಪ್ಪು ಜನರು ಎಂಬ ಪರಿಗಣನೆ ಇಲ್ಲ. ಕ್ರಿಸ್ತನಲ್ಲಿ ಅವರೆಲ್ಲರೂ ಒಂದೇ" ಆದರೆ ಭಾರತೀಯರು ಮತ್ತು ಯೂರೋಪಿಯನ್ನರ ನಡುವಿನ ವ್ಯತ್ಯಾಸಗಳನ್ನು ಎಂದೂ ಮರೆಯಲಾಗಿಲ್ಲ. ಅವರ ನಡುವೆ ಕಟ್ಟುನಿಟ್ಟಿನ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲಾಗಿದೆ. ಯೂರೋಪಿಯನ್ ಮತ್ತು ಇತರ ಜನಾಂಗಗಳ ಜನರ ನಡುವೆ

ವಿವಾಹ ಸಂಬಂಧ ಏರ್ಪಡಲು ಅನುಮತಿ ಇರಲಿಲ್ಲ. ಸಾಂಸ್ಕೃತಿಕ ಪದ್ಧತಿಗಳ ಅಳವಡಿಕೆಗೆ ಅವಕಾಶವಿರಲಿಲ್ಲ. ದೇವರ ಸ್ತುತಿ ಗೀತೆಗಳಲ್ಲಿ ಭಾರತೀಯ ಸಂಗೀತದ ಬಳಕೆಗೆ ಪ್ರೋತ್ಸಾಹವಿರಲಿಲ್ಲ. ಕ್ರೈಸ್ತ ಸಮುದಾಯದ ಸಮಾನತಾವಾದದ ವಾರಸುತನ ಮತ್ತು ಸಭೆಗಳು ಮತ್ತು ಜನರ ನಡುವಿನ ವ್ಯತ್ಯಾಸಗಳ ಮೇಲಿನ ಒತ್ತು ಇವುಗಳ ನಡುವಿನ ಸಂದಿಗ್ಧತೆಯನ್ನು ಕಾಪಾಡಿಕೊಂಡು ಬರಲಾಗಿದೆ.[೩೪]

## ೫.೨.ಮುದ್ರಣಾಲಯ ಮತ್ತು ಪ್ರಕಾಶನ ವಿಭಾಗ

೧೮೪೧ರಲ್ಲಿ ಸ್ಥಾಪನೆಯಾದ ' ಜರ್ಮನ್ ಇವಾಂಜಲಿಕಲ್ ಮಿಶನ್ ಪ್ರೆಸ್' ದಕ್ಷಿಣ ಕನ್ನಡ ಜಿಲ್ಲೆಯ ಮೊತ್ತ ಮೊದಲ ಕಲ್ಲಚ್ಚಿನ ಛಾಪಖಾನೆ. ಅದು ಇತ್ತೀಚಿಗಿನ ತನಕ ಜಿಲ್ಲೆಯ ಶ್ರೇಷ್ಠ ಛಾಪಖಾನೆಗಳಲ್ಲಿ ಒಂದಾಗಿ ದೇಶಾದ್ಯಂತ ಕೀರ್ತಿ ಗಳಿಸಿತ್ತು. ಈಗ ಅದು ' ಬಲ್ಮಠ ಮಾಸ್ಟರ್ ಪ್ರಿಂಟರ್ಸ್ ಆಂಡ್ ಪ್ರಿಂಟಿಂಗ್ ಟೆಕ್ನಾಲಜಿ ಇನ್‌ಸ್ಟಿಟ್ಯೂಟ್' ಎಂಬ ಹೆಸರನ್ನು ಪಡೆದಿದೆ.[೩೫] ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಕರ್ನಾಟಕದಲ್ಲಿಯ ಯಾವುದೇ ಮುದ್ರಣಾಲಯಗಳಿಗಿಂತ ಅದು ದೊಡ್ಡದಾಗಿತ್ತು. ಆ ಮುದ್ರಣಾಲಯದಲ್ಲಿ ಆಗುತ್ತಿದ್ದ ಮುದ್ರಣ ಕಾರ್ಯವು ಅಂದಿನ ಭಾರತದಲ್ಲಿ ಅತ್ಯಂತ ಸುಂದರವಾದುದೆಂಬ ಪ್ರಶಂಸೆಯನ್ನು ಗಳಿಸಿತ್ತು.[೩೬] ಅದರ ರೂವಾರಿಯಾಗಿದ್ದವರು ಗಾಟ್‌ಫೈಟ್ ವೈಗ್ಲೆ. ಅಲ್ಲಿ ಪ್ರಕಾಶನಗೊಂಡ ಮೊದಲ ಪುಸ್ತಕ ' ತುಳು ಕೀರ್ತನೆಗಳು' ಎಂಬ ಕೆಲವು ತುಳು ಪ್ರಾರ್ಥನೆಗಳ ಸಂಗ್ರಹ.[೩೭] ರೆವೆ. ಹರ್ಮನ್ ಮೋಗ್ಲಿಂಗ್‌ರವರ ಮೊದಲ ಕನ್ನಡ ಪತ್ರಿಕೆ 'ಮಂಗಳೂರು ಸಮಾಚಾರ' (೨ ಜುಲೈ, ೧೮೪೩) ಬಾಸೆಲ್ ಮಿಶನ್ ಛಾಪಖಾನೆಯಲ್ಲಿ ಪ್ರಕಟವಾಗಿದೆ. ಸುಮಾರು ಅರ್ಧ ಶತಮಾನದವರೆಗೆ ದಕ್ಷಿಣ ಕನ್ನಡದಲ್ಲಿದ್ದ ಏಕಮಾತ್ರ ಮುದ್ರಣಾಲಯ ಎಂದರೆ ಅದುಬಾಸೆಲ್ ಮಿಶನ್ ಪ್ರೆಸ್ ಮಾತ್ರ. ಅದರೆ, ೧೮೮೨ರಲ್ಲಿ ಕೊಡಿಯಲ್‌ಬೈಲ್ ಪ್ರೆಸ್ ಸ್ಥಾಪನೆಯಾಯಿತು.[೩೮] ಆ ಮುದ್ರಣಾಲಯಗಳಿಂದ ಅನೇಕ ಜನರಿಗೆ ಉಪಜೀವನಕ್ಕೆ ಮಾರ್ಗವಾಗಿದೆ. ಕನ್ನಡ ಮುದ್ರಣದ ವಿಸ್ತಾರ, ವೈವಿಧ್ಯ, ಉತ್ತಮಿಕೆ ಈ ಯಾವುದೇ ಅಂಶಗಳನ್ನು ತೆಗೆದುಕೊಂಡರೂ ಮಂಗಳೂರು ಬಾಸೆಲ್ ಮಿಶನ್ನಿನವರ ಕಾರ್ಯವು ಇತರ ಎಲ್ಲಾ ಮುದ್ರಣ ಸಂಸ್ಥೆಗಳಿಗಿಂತ ಮೇಲ್ಮಟ್ಟದಲ್ಲಿ ನಿಲ್ಲುತ್ತದೆ ಎಂಬ ಅಭಿಮತವು ಸತ್ಯದ ಮಾತಾಗಿದೆ.

## ೫.೩.ಪತ್ರಿಕಾ ಪ್ರಕಟಣೆಯ ಉದ್ದೇಶಗಳು

- ಪತ್ರಿಕೆಗಳ ಮೂಲಕ ಜಿಲ್ಲೆಯ ಜನರಲ್ಲಿ ಪ್ರಪಂಚ ಜ್ಞಾನ ಉಂಟಾಗಬೇಕೆಂದು ಮಿಶನರಿಗಳ ಬಯಕೆಯಾಗಿತ್ತು.

- ಸುಳ್ಳು ಸುದ್ದಿ ಹರಡುವುದನ್ನು ತಡೆಯುವುದು ಮತ್ತು ಜನರಲ್ಲಿ ಓದುವ ಅಭಿರುಚಿಯನ್ನು ಬೆಳೆಸುವುದು.
- ಕೊಲೆ, ಸುಲಿಗೆ, ದರೋಡೆ ಮುಂತಾದ ದುಷ್ಕೃತ್ಯಗಳನ್ನು ಎಸಗಿ ನ್ಯಾಯಾಲಯಗಳಲ್ಲಿ ಶಿಕ್ಷೆಗೊಳಗಾದವರ ಬಗ್ಗೆ ಮಾಹಿತಿ ಒದಗಿಸುವುದು ಮತ್ತು ಅಂತಹ ಕೃತ್ಯಗಳಿಂದಾಗುವ ಅನಾಹುತಗಳ ಬಗ್ಗೆ ಜನರಿಗೆ ಅರಿವನ್ನು ಮೂಡಿಸುವುದು.[೩೯]

ಹೀಗೆ ಪ್ರಾರಂಭವಾದ ಮುದ್ರಣಾಲಯದ ಕಾರ್ಯ ಹತ್ತು ವರ್ಷಗಳ ಕಾಲ ಕಲ್ಲಚ್ಚಿನಿಂದ ಕುಂಟುತ್ತಾ ಸಾಗಿತ್ತು. ಇದರಿಂದ ವಿಶೇಷ ಉಪಯೋಗವಿಲ್ಲವೆಂದು ತೋರಿದಾಗ ಅದರ ಉದ್ಧಾರಕ್ಕೆಂದೇ ವುರ್ಟನ್‌ಬರ್ಗ್‌ನಿಂದ ಜಾರ್ಜ್ ಪ್ಲೆಬ್ಸ್ ಎಂಬ ಮುದ್ರಣ ತಜ್ಞನನ್ನು ಮಂಗಳೂರಿಗೆ ಕಳುಹಿಸಲಾಗಿದೆ. ಅವನು ತನ್ನ ಸಹಾಯಕನಾದ ಚೀನೀ ಯುವಕ ಟಾಮಿ ಲುಕ್ಲಿನ್ ಎಂಬವನಿಗೆ ತರಬೇತಿ ಕೊಟ್ಟು ಹೊಸ ಬಗೆಯ ಮುದ್ರಣಕ್ಕೆ ನಾಂದಿ ಹಾಡಿದ. ಕಲ್ಲಚ್ಚು ಮಾಯವಾಗಿ ಅದರ ಬದಲಿಗೆ ಬಿಡಿ ಮೊಳೆಗಳನ್ನು ಅವರಿಬ್ಬರೂ ಸಿದ್ಧಪಡಿಸಿದರು. ಪ್ಲೇಬ್ಸ್‌ನ ಪ್ರತಿಭೆಯಿಂದ ಹಿಂದೆ ಹಿತವಾಗಿ ಕಾಣದ ಕನ್ನಡ ಅಕ್ಷರಗಳು ಹೊಸ ರೂಪ ತಳೆದು ಆಕರ್ಷಕವಾದವು.[೪೦] ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ರಸ್ತೆಗಳೇ ಅಪರೂಪವಾಗಿದ್ದ, ೩೦-೪೦ ಕಿಲೋ ಮೀಟರ್ ದೂರದ ಊರುಗಳ ನಡುವೆ ಸಂಪರ್ಕವೇ ದುಸ್ತರವಾಗಿದ್ದ ಆ ಕಾಲದಲ್ಲಿ 'ಮಂಗಳೂರ ಸಮಾಚಾರ' ನೀಡುತ್ತಿದ್ದ ವರ್ತಮಾನ ಜನರಲ್ಲಿ ತುಂಬಾ ಕುತೂಹಲ ಮೂಡಿಸುತ್ತಿತ್ತು. ಪತ್ರಿಕೆಯಲ್ಲಿ ವಿದೇಶಿಯರ ಬಗ್ಗೆ ಸಾಕಷ್ಟು ಸುದ್ದಿ ಪ್ರಕಟಿಸುತ್ತಿದ್ದರು. ಅದನ್ನು ಸಂಪಾದಕರು, " ಈ ದೇಶವೆಂಬ ಮನೆಯಲ್ಲಿ ವಾಸಿಸುವ ಜನರು ಇಂದಿನ ಪರಿಯಂತರ ಹೊರಗಿನ ದೇಶಸ್ಥರ ಸಮಾಚಾರ ಮಾರ್ಗ ಮರ್ಯಾದೆಗಳನ್ನು ತಿಳಿಯದೇ ಕಿಟಕಿಯಿಲ್ಲದ ಬಿಡಾರದಲ್ಲಿ ಉಳಕೊಳ್ಳುವವರ ಹಾಗೆಯಿರುತ್ತಾ ಬಂದರು. ಅದು ಕಾರಣ ಹೊರಗಿನ ಕಾರ್ಯಗಳನ್ನು ಕಾಣುವ ಹಾಗೆಯೂ ಒಳಗೆ ಸ್ವಲ್ಪ ಬೆಳಕು ಬೀರುವ ಹಾಗೆಯೂ ನಾಲ್ಕೂ ದಿಕ್ಕಿಗೆ ಕಿಟಕಿಗಳನ್ನು ಮಾಡುವ ಈ ಸಮಾಚಾರ ಕಾಗದವನ್ನು ಪಕ್ಷಕ್ಕೆ ವೊಂದು ಸಾರಿ ಶಿದ್ದಮಾಡಿ ಅದನ್ನು ಓದಬೇಕೆಂದಿರುವೆಲ್ಲರಿಗೆ ಕೊಟ್ಟರೆ ಕಿಟಕಿಗಳನ್ನು ಮಾಡಿದ ಹಾಗಾಗಿರಬಹುದು"[೪೧] ಎಂದು ಸಮಜಾಯಿಸಿ ನೀಡಿದ್ದಾರೆ. ಆದರೆ ಐ. ಯಂ. ಮುತ್ತಣ್ಣನವರು ರೆವೆ. ಮೋಗ್ಲಿಂಗ್‌ರ ಕನ್ನಡ ಪತ್ರಿಕೆಯ ಕುರಿತು ಹೇಳುತ್ತಾ, " ...... ಪತ್ರಿಕೆಗಳನ್ನು ಹೊರಡಿಸಿದಾಗ ಅವರ ಧ್ಯೇಯವೇನಿತ್ತೆಂದರೆ ತನ್ನ ಮತ ಪ್ರಚಾರ ಕಾರ್ಯಕ್ಕೆ ಅನುಕೂಲತೆಯನ್ನು ಒದಗಿಸುವುದೇ ಆಗಿತ್ತು. ...... ಆದರೆ ಅದರ ಬರವಣಿಗೆಗಳೆಲ್ಲವೂ ತಮ್ಮ ಮತದ......ಮೇಲ್ಮೆಯನ್ನೂ, ಪ್ರಭಾವವನ್ನೂ ಮೇಲೆತ್ತಿ ಜನಕ್ಕೆ ತಿಳಿಸುವುದರಲ್ಲೇ ಕೇಂದ್ರೀಕೃತವಾಗಿತ್ತೆಂಬುದನ್ನೂ ನೆನಪಿಡಬೇಕಾಗಿದೆ"[೪೨] ಎಂದು ಹೇಳುವ ಮಾತುಗಳು ಸತ್ಯಕ್ಕೆ

ದೂರವಾಗಿವೆ. ಅಂತೆಯೇ, ೧೮೫೭ರಿಂದ ಪಾಕ್ಷಿಕವಾಗಿ 'ಕ್ಯಾನರೀಸ್ ಮೆಸೆಂಜರ್' ಎಂಬ ಆಂಗ್ಲ ವರ್ತಮಾನ ಪತ್ರಿಕೆಯನ್ನು ಬಾಸೆಲ್ ಮಿಶನ್‌ನವರು ಪ್ರಕಟಿಸಿದ್ದಾರೆ. ಆದರೆ ಬೆಂಬಲದ ಕೊರತೆಯಿಂದ ಸ್ವಲ್ಪ ಸಮಯದ ನಂತರ ಅದನ್ನು ನಿಲ್ಲಿಸಲಾಗಿದೆ. ಮಿಶನ್ ಪ್ರಕಾಶನಗಳನ್ನು ಮಾರಾಟ ಮಾಡಲು ಕೋಲ್‌ಪೋರ್ಟರನ್ನು (ಪುಸ್ತಕ ಮಾರಾಟ ಮಾಡಲು ಒಯ್ಯುವವರು) ನಿಯಮಿತವಾಗಿ ವಿವಿಧ ದಿಕ್ಕುಗಳಿಗೆ ಕಳುಹಿಸಲಾಗುತ್ತದೆ. ಆದರೆ ಇದರಿಂದ  ಹೆಚ್ಚಿನ ಲಾಭವಾಗದಿದ್ದರೂ, ಸ್ಥಳೀಯ ಕ್ರೈಸ್ತರಲ್ಲಿ ಸಾಹಿತ್ಯದ ಅಭಿರುಚಿ ನಿಧಾನವಾಗಿ ಹುಟ್ಟಬಹುದೆಂದು ಮಿಶನರಿಗಳು ತಿಳಿದುಕೊಂಡಿದ್ದಾರೆ.[೪೩]

ಪ್ರೆಸ್ಸಿನಲ್ಲಿ ಗ್ರಂಥದ ಹೊರಕವಚ (ಬುಕ್ ಬೈಂಡಿಂಗ್) ಹಾಕುವ ವಿಭಾಗ ಕೂಡಾ ಇತ್ತು, ಅದು ಅನೇಕ ಸ್ಥಳೀಯ ಕ್ರೈಸ್ತರಿಗೆ ಉದ್ಯೋಗವನ್ನು ಕಲ್ಪಿಸಿದೆ. ಮುದ್ರಣಾಲಯದ  ಗ್ರಂಥಗಳ ಮಾರಾಟಕ್ಕೆಂದು ಪ್ರತ್ಯೇಕ ಪುಸ್ತಕದಂಗಡಿಯನ್ನು ೧೮೪೯ರಲ್ಲಿ ತೆರೆಯಲಾಗಿದೆ.[೪೪] ಮುದ್ರಣ ಕಾರ್ಯ ಕೇವಲ ಕ್ರೈಸ್ತ ಸಾಹಿತ್ಯಕ್ಕೇ ಮೀಸಲಾಗಿರದೆ, ಸಮಾಜ ವಿಜ್ಞಾನಗಳು , ಕಲೆ ಮತ್ತು ಸಾಹಿತ್ಯಕ್ಕೆ ಸಂಬಂಧಸಿದ ಗ್ರಂಥಗಳನ್ನು ಕೂಡಾ ಮುದ್ರಣಾಲಯದ ಮೂಲಕ ಪ್ರಕಟಿಸಲಾಗಿದೆ. ಸಾಹಿತ್ಯ ಕ್ಷೇತ್ರಕ್ಕೆ ಬಾಸೆಲ್ ಮಿಶನ್ನಿನ ಕೊಡುಗೆಯ ವಿಚಾರವಾಗಿ ಹೇಳುವುದಾದರೆ, 'ಇಂಡಿಯನ್ ಆಂಟಿಕ್ವೇರಿಯಲ್ಲಿ(೧೮೭೨) ಹೇಳಿರುವುದು ಹೀಗಿದೆ: 'ಭಾರತದ ಪಶ್ಚಿಮ ಕರಾವಳಿಯು ಸುಮಾರು ಮೂರು ಶತಮಾನಗಳ ಕಾಲ ಅತ್ಯಂತ ಮಹತ್ವದ ಸಾಹಿತ್ಯಕ ಚಟುವಟಿಕೆಯ ಕೇಂದ್ರವಾಗಿದೆ. ೧೬ನೇ ಶತಮಾನ ಕೊನೆಗೊಳ್ಳುವುದರೊಳಗೆ ಗೋವಾದ ಜೆಸ್ಯುಯಿಟರು ಮತ್ತು ಕಾರ್ಮಲೈಟ್‌ರು ಮುಖ್ಯವಾಗಿ ಕೊಚ್ಚಿ ಪ್ರದೇಶದಲ್ಲಿ ತಮ್ಮ ಸಂಶೋಧನಾ ಕಾರ್ಯವನ್ನು ಮುಂದುವರಿಸಿದ್ದಾರೆ. ೧೮ನೇ ಶತಮಾನದ ಕೊನೆ ಮತ್ತು ೧೯ನೇ ಶತಮಾನದ ಪ್ರಾರಂಭದಲ್ಲಿ ಎಲ್ಲಾ ವಿಚಾರಣೆಗಳು ಕೊನೆಗೊಂಡ ಹಾಗೆ ಕಾಣುತ್ತದೆ. ಆದರೆ ೧೮೩೪ರಿಂದ  ಬಾಸೆಲ್ ಮಿಶನರಿಗಳು ಹಿಂದಿನ ಕೊರತೆಯನ್ನು ತುಂಬುವ ರೀತಿಯಿಂದ ಮತ್ತು ತಮ್ಮ ಕಾರ್ಯ ಸಂಖ್ಯೆಯಿಂದ ಹಿಂದೆ ಮಾಡಿದ ಸಾಧನೆಯನ್ನು ಅವರು ಮೀರಿದ್ದಾರೆ'.[೪೫] ಬುಕ್ ಬೈಂಡಿಂಗ್‌ನಲ್ಲಿ  ಪ್ಲೇಬ್ಸ್ಟ್‌ರ ಸಹಾಯಕ ಲೂಕ್ ಜೋಸುವಾ ತುಂಬಾ ಪ್ರಸಿದ್ಧರಾಗಿದ್ದರು ಎಂದು ಹೇಳಲಾಗುತ್ತದೆ. ಅವರು ಸ್ವತಃ ಬೈಂಡಿಂಗ್ ಮಾಡುತ್ತಿದ್ದರಲ್ಲದೆ  ಅನೇಕ ಬೈಂಡಿಂಗ್ ಕೆಲಸಗಾರರನ್ನು ತರಬೇತುಗೊಳಿಸಿದ್ದಾರೆ. ಪುಸ್ತಕಗಳಿಗೆ ಹೊದಿಕೆ ಹಾಕುವ ಅಂಗಡಿಯನ್ನು ನಂತರ ಅವರಿಗೇ  ವರ್ಗಾಯಿಸಲಾಗಿದೆ. ಅವರು ಮಂಗಳೂರು ಸಭೆಯ ಸದಸ್ಯರಾಗಿದ್ದು, ತನ್ನದೇ  ಆದ ರೀತಿಯಲ್ಲಿ ಮತ್ತು ಜವಾಬ್ದಾರಿಯಿಂದ ಅಂಗಡಿಯ ವ್ಯವಹಾರವನ್ನು ನಡೆಸಿದ್ದರು.[೪೬] ೧೮೬೪-೭೩ರ ಅವಧಿಯಲ್ಲಿ ಬಾಸೆಲ್ ಮಿಶನ್ ಪ್ರೆಸ್ ಸುಮಾರು ೩೨೨  ಪುಸ್ತಕಗಳನ್ನು ಹೊರ ತಂದಿದೆ. ಪುಸ್ತಕಗಳ ಸಂಖ್ಯೆ ದೊಡ್ಡದಲ್ಲ, ಆದರೆ ಮಿಶನ್ ಪ್ರೆಸ್ಸಿನಲ್ಲಿ ೧೦ ಲಕ್ಷ ಪ್ರತಿಗಳನ್ನು ಮುದ್ರಿಸಲಾಗುತ್ತಿತ್ತು ಎಂಬ ಆಧಾರದ ಮೇಲೆ ಅದರ ಕೆಲಸದ ಬೃಹತ್ತನ್ನು ಊಹಿಸಬಹುದು. ೧೮೭೩ರಲ್ಲಿ

ಬಾಸೆಲ್ ಮಿಶನ್‌ನ ಮುದ್ರಣ ಕಾರ್ಯವನ್ನು 'ಮದ್ರಾಸ್ ಮೇಲ್' ಪತ್ರಿಕೆ " ಬಾಸೆಲ್ ಮಿಶನ್ ಪ್ರೆಸ್ ಡಿಡ್ಸ್ ದ ಬೆಸ್ಟ್ ವರ್ಕ್ ಇನ್ ದ ಎನ್ಟ್ಯಾರ್ ಮದ್ರಾಸ್ ಪ್ರೆಸಿಡೆನ್ಸಿ" ಎಂದು ಶ್ಲಾಘಿಸಿದೆ. ಆ ಶ್ಲಾಘನೆಯ ಜೊತೆಗೆ ಸರಕಾರದಿಂದ ನಡೆಸುತ್ತಿದ್ದ ಪರೀಕ್ಷೆಗಳ ಪ್ರಶ್ನೆ ಪತ್ರಿಕೆಗಳನ್ನು ಮುದ್ರಿಸುವ ಹೊಣೆಯನ್ನು ಬಾಸೆಲ್ ಮಿಶನ್‌ನವರಿಗೇ ವಹಿಸಿಕೊಟ್ಟರು. ಅಂದಿನ ದಿನಗಳೆಂದರೆ ಶಾಲಾ ಇನ್ಸ್‌ಪೆಕ್ಟರುಗಳಿಂದ ಪ್ರಶ್ನೆಗಳು ಪರೀಕ್ಷೆಗೆ ಮೊದಲೇ ಬಹಿರಂಗವಾಗುತ್ತಿದ್ದ ದಿನಗಳು. ಆದರೆ ಬಾಸೆಲ್ ಮಿಶನ್‌ನವರು ಅದಕ್ಕೊಂದು ಅಪವಾದವೆನ್ನುವಂತೆ ತಮಗೆ ವಹಿಸಿಕೊಟ್ಟ ಹೊಣೆಯನ್ನು ಒಂದೇ ಒಂದು ತಪ್ಪಿಲ್ಲದೆ ಹಾಗೂ ಆರೋಪ ಬರದಂತೆ ನಿರ್ವಹಿಸಿದ್ದಾರೆ.[೪೭] ಈ ರೀತಿಯಲ್ಲಿ ಪರೋಕ್ಷವಾಗಿ ಬ್ರಿಟಿಷ್ ಸರ್ಕಾರಕ್ಕೆ ಆಡಳಿತದಲ್ಲಿ ಬಾಸೆಲ್ ಮಿಶನ್ ನೆರವು ನೀಡಿ ಸಹಕರಿಸಿದೆ. ಮುದ್ರಾಕ್ಷರ ಶಾಲೆಯನ್ನು ಸ್ಥಾಪಿಸಿ ಪುರಾತನ ಕನ್ನಡ ಗ್ರಂಥಗಳನ್ನು ಮುದ್ರಿಸಿದ್ದಲ್ಲದೆ, ಅನೇಕ ಹೊಸ ಹೊಸ ಬಾಲ ಬೋಧಕ ಪುಸ್ತಕಗಳನ್ನೂ, ಜ್ಞಾನಪರವಾದ ಇತರ ವಹಿಗಳನ್ನೂ, ಗ್ರಂಥಗಳನ್ನೂ ರಚಿಸಿ, ಅಲ್ಪ ಕ್ರಯಕ್ಕೆ ಸಕಲರಿಗೂ ದೊರೆಯುವಂತೆ ಮಾಡಿ ಸರ್ವ ಸಾಮಾನ್ಯ ವ್ಯಾವಹಾರಿಕ ಜ್ಞಾನ ಉಂಟಾಗುವಂತೆ ಬಾಸೆಲ್ ಮಿಶನ್‌ನವರು ಮಾಡಿದ್ದಾರೆ.[೪೮] ಅವರು ತಮ್ಮ ಸಾಹಿತ್ಯದ ಮೂಲಕ ಇಡೀ ಸಮಾಜದ ರಚನೆಯನ್ನು ವ್ಯಾಪಿಸಿಕೊಂಡಿರುವ ಜಾತಿ ಮತ್ತು ವರದಕ್ಷಿಣೆ ಪದ್ಧತಿಯಂತಹ ಸಾಮಾಜಿಕ ಕಂಟಕಗಳ ವಿರುದ್ಧ ಜನರಲ್ಲಿ ತಿಳಿವಳಿಕೆ ಮೂಡಿಸಲು ಪ್ರಯತ್ನಿಸಿದ್ದಾರೆ. ಪತ್ರಿಕೆಗಳು, ಸಾಹಿತ್ಯ ಮತ್ತು ಶಾಲೆಗಳ ಮೂಲಕ ಜನರ ಧಾರ್ಮಿಕ, ಅಧ್ಯಾತ್ಮಿಕ ಮತ್ತು ನೈತಿಕ ಬದುಕನ್ನು ಮೇಲಕ್ಕೆತ್ತುವ ಪ್ರಯತ್ನವನ್ನು ಅವರು ನಡೆಸಿದ್ದಾರೆ.[೪೯]

ಕನ್ನಡ ಪತ್ರಿಕಾರಂಗದ ಚರಿತ್ರೆಯ ಪುಟಗಳು ತೆರೆದುಕೊಳ್ಳುವುದೇ ಕರಾವಳಿ ಕ್ರೈಸ್ತ ಮಿಶನರಿಗಳ ಸಾಹಸದ ನೆನಪುಗಳಿಂದ. ಕರಾವಳಿ ಕರ್ನಾಟಕ, ಆಧುನಿಕತೆಗೆ ಬಹು ಬೇಗ ತೆರೆದುಕೊಳ್ಳಲು ಕಾರಣವಾದ ಬಾಸೆಲ್ ಮಿಶನ್, ಕನ್ನಡ ಪತ್ರಿಕಾ ರಂಗದ ಉದಯಕ್ಕೆ ಕಾರಣವಾಯಿತು. ರೆವೆ.ಹರ್ಮನ್ ಮೋಗ್ಲಿಂಗ್ ಹಾಕಿದ ಅಡಿಗಲ್ಲ ಮೇಲೆ ಇಂದು ಕನ್ನಡ ಪತ್ರಿಕಾರಂಗ ಹೆಮ್ಮರವಾಗಿ ಬೆಳೆದಿದೆ, ಬೆಳೆಯುತ್ತಿದೆ. ೧೯೯೮ರಲ್ಲಿ ಕರಾವಳಿ ಭಾಗದ ಪತ್ರಿಕಾರಂಗದಲ್ಲಿ ಹೊಸ ಅಲೆಯನ್ನೇ ಸೃಷ್ಟಿಸಿದ 'ಜನವಾಹಿನಿ'ಯು ಕ್ರೈಸ್ತ ಸಮುದಾಯದ ಮತ್ತೊಂದು ಅಮೋಘ ಕೊಡುಗೆಯಾಗಿದೆ. ೨೦೦೧ರಲ್ಲಿ ಆರಂಭಗೊಂಡ 'ದಾಯ್ಜಿ ವರ್ಲ್ಡ್' ವೆಬ್ ಪೋರ್ಟಲ್ ಕೂಡ ಕ್ರೈಸ್ತ ಸಮುದಾಯದ ಮತ್ತೊಂದು ಹೆಮ್ಮೆಯ ಕೊಡುಗೆ. ಕ್ರೈಸ್ತ ಸಮುದಾಯದವರೇ ನಡೆಸಿಕೊಂಡು ಬರುತ್ತಿರುವ 'ಮ್ಯಾಂಗಳೂರಿಯನ್ ಡಾಟ್ ಕಾಂ' ಓದುಗರನ್ನು ರಂಜಿಸುವ, ಬೋಧಿಸುವ ಕೆಲಸದಲ್ಲಿ ಸದಾ ನಿರತವಾಗಿವೆ.[೫೦] ಕ್ರೈಸ್ತ ಮಿಶನರಿಗಳು ಪತ್ರಿಕಾರಂಗಕ್ಕೆ ಸಲ್ಲಿಸಿರುವ ಅಪಾರ ಸೇವೆಯಿಂದಾಗಿ ಇಂದು ಪತ್ರಿಕಾರಂಗ ಇಷ್ಟರ ಮಟ್ಟಿಗೆ ಬೆಳೆಯಲು ಸಾಧ್ಯವಾಗಿದೆ.

## ೫.೪.ಕೊಡಿಯಲ್‌ಬೈಲ್ ಪ್ರೆಸ್

ಕೊಡಿಯಲ್‌ಬೈಲ್ ಪ್ರೆಸ್ ಆರಂಭಗೊಳ್ಳುವ ಮೊದಲು, ಯೇಸುಸಭೆಯವರು ತಮಗೆ ಬೇಕಾದ ಪ್ಯಾಸ್ಟರಲ್‌ಗಳು ಮತ್ತು ಸರ್ಕ್ಯುಲರ್ (ಸುತ್ತೋಲೆ)ಗಳನ್ನು, ಆಡಳಿತದ ಮತ್ತಿತರ ವಿಷಯಗಳನ್ನು ಮುದ್ರಿಸಲು ಬಾಸೆಲ್ ಮಿಶನ್ ಪ್ರೆಸ್ಸಿಗೆ ಹೋಗಬೇಕಿತ್ತು. ಹೀಗಿರುವಾಗ ಕೆಲವೊಮ್ಮೆ ಪ್ರೊಟೆಸ್ಟೆಂಟ್ ಮಿಶನರಿಗಳು ತಮಗೆ ಮೆಚ್ಚಿಗೆ ಇಲ್ಲದ ವಿಷಯಗಳನ್ನು ಮುದ್ರಿಸಲು ನಿರಾಕರಿಸುತ್ತಿದ್ದರು. ಅದಲ್ಲದೆ ಪ್ರೊಟೆಸ್ಟೆಂಟ್ ಮಿಶನರಿಗಳು ಕಥೋಲಿಕ ಇಗರ್ಜಿಯ ವಿರುದ್ಧ ಕೈಪತ್ರಗಳನ್ನು ಮತ್ತು ಲೇಖನಗಳನ್ನು ಪ್ರಕಟಿಸಿ ಹಂಚುತ್ತಿರುವಾಗ ಆ ಅಪಪ್ರಚಾರದ ವಿರುದ್ಧ ಹೋರಾಡಲು ದಾರಿ ಕಾಣದೆ ಪರಿತಪಿಸುತ್ತಿದ್ದರು.[೫೧] ಬಾಸೆಲ್ ಮಿಶನ್ನಿನ ಮುದ್ರಣಾಲಯದ ಮುದ್ರಣಾ ದರಗಳು ದುಬಾರಿ ಎಂದು ಕಥೋಲಿಕರು ಕಂಡುಕೊಂಡಿದ್ದರು.[೫೨] ಅಂತಹ ಪರಿಸ್ಥಿತಿಯಲ್ಲಿ, ಬಾಸೆಲ್ ಮಿಶನ್ ಪ್ರೆಸ್ಸಿಗೆ ಅವಲಂಬಿತವಾಗಿರಲು ಇಷ್ಟವಿಲ್ಲದೆ ಹಾಗೂ ತಮಗಿಷ್ಟವಾದ ಕಾಗದ ಪತ್ರಗಳನ್ನೂ, ಪುಸ್ತಕಗಳನ್ನೂ ಪ್ರಕಟಿಸಲು ಅನುಕೂಲವಾಗುವ ಪ್ರೆಸ್ಸನ್ನು ಆರಂಭಿಸುವ ನಿರ್ಧಾರ ಕೈಗೊಂಡರು. ತತ್ಪರಿಣಾಮವಾಗಿ, ೧೮೮೨ರಲ್ಲಿ ಫಾ। ಅಂಜೆಲೊ ಮುಟ್ಟಿಯವರು ಒಂದು ಸಣ್ಣ ಕೈ ಯಂತ್ರ ಮತ್ತು ಕೆಲವು ಮೊಳೆಗಳನ್ನು ಹಿಡಿದು ಕೊಡಿಯಾಲ್‌ಬೈಲಿನಲ್ಲಿ ಒಂದು ಸಣ್ಣ ಕೋಣೆಯಲ್ಲಿ ತಮ್ಮ ಪ್ರೆಸ್ಸನ್ನು ಆರಂಭಿಸಿದರು. ಈ ರೀತಿಯಲ್ಲಿ ಪರೋಕ್ಷವಾಗಿ ಕೊಡಿಯಲ್‌ಬೈಲ್ ಮುದ್ರಣಾಲಯದ ಸ್ಥಾಪನೆಗೆ ಬಾಸೆಲ್ ಮಿಶನ್‌ರವರು ಕಾರಣರಾದರು.

ಆರಂಭದಲ್ಲಿ ೪ ಜನ ಕಂಪೋಜಿಟರ್ಸ್‌ಗಳೊಂದಿಗೆ ವ್ಯವಸ್ಥಾಪಕರಾದ ಬ್ರ। ಲುವಿಜಿ ಡೊನೆಡೊರವರು ದುಡಿಯುತ್ತಿದ್ದರು. ತಿಯೋಡರ್ ಸೋನ್ಸರು ಕಂಪೋಝಿಂಗ್ ಕೆಲಸದಲ್ಲಿ ಬೇರೆ ಕಂಪೋಝಿಟರುಗಳಿಗೆ ತರಬೇತಿಗೊಳಿಸಿದ್ದರು. ಸರ್ಕಾರಿ ಮತ್ತು ಕೋರ್ಟಿನ ಮುದ್ರಣದ ಕೆಲಸಗಳು ಹಾಗೂ ಸಿವಿಲ್ ಮತ್ತು ಕ್ರಿಮಿನಲ್ ಕೋರ್ಟುಗಳ ತೀರ್ಪುಗಳು ಕೊಡಿಯಾಲ್‌ಬೈಲ್ ಪ್ರೆಸ್ಸಿನಲ್ಲಿ ಮುದ್ರಿತವಾಗುತ್ತಿದ್ದ ಮುಖ್ಯವಾದ ಸಾರ್ವಜನಿಕ ಕೆಲಸವಾಗಿತ್ತು. ಅಲ್ಲದೆ ವ್ಯಾಪಾರಸ್ಥರ ಸಾಕಷ್ಟು ಮುದ್ರಣ ಕಾರ್ಯಗಳು ಪ್ರೆಸ್ಸಿಗೆ ಲಭ್ಯವಾಗುತ್ತಿದ್ದವು. ೧೮೮೨ರಿಂದ ೧೯೨೪ರವರೆಗೆ ಎಡೆಬಿಡದೆ ಪ್ರೆಸ್ಸಿನ ಸೇವೆ ಮಾಡಿದ ಬ್ರ। ಡೊನೆಡೊರವರ ಅಡಿಯಲ್ಲಿ ಪ್ರೆಸ್ಸಿನ ಹೆಸರು ಎಲ್ಲೆಡೆ ಪಸರಿಸಿತು ಮತ್ತು ಇಡೀ ಭಾರತದಿಂದ ಮಾತ್ರವಲ್ಲ ಸಿಲೋನ್ ಮತ್ತು ಆಫ್ರಿಕಾದಿಂದಲೂ ಇಲ್ಲಿಗೆ ಕೆಲಸ ಬರತೊಡಗಿತು. ಮದ್ರಾಸ್ ಮತ್ತು ಬೊಂಬಾಯಿ ಪ್ರಾಂತ್ಯಗಳ ಸರ್ಕಾರದಿಂದ ಶಾಲೆಯ ಪುಸ್ತಕಗಳನ್ನು ಮುದ್ರಿಸುವ ಮತ್ತು ಇತರ ಮುದ್ರಣದ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಿದ್ದ ಬಾಸೆಲ್ ಮಿಶನ್ ಪ್ರೆಸ್ಸಿಗೆ ಕೊಡಿಯಾಲ್‌ಬೈಲ್ ಪ್ರೆಸ್ ಉತ್ತಮ ಸ್ಪರ್ಧೆ ನೀಡುತ್ತಿದ್ದುದು ಬಾಸೆಲ್ ಮಿಶನ್ ವರದಿಗಳಲ್ಲಿ ವ್ಯಕ್ತವಾಗುತ್ತದೆ. ೧೮೮೩ರ

ವರದಿಯಲ್ಲಿ ವಿರೋಧಿ ಮುದ್ರಣಾಲಯಗಳ ಸಂಖ್ಯೆ ತ್ವರಿತಗತಿಯಿಂದ ಏರುತ್ತಿರುವುದರಿಂದ ಎರಡು ಪ್ರಾಂತ್ಯಗಳಲ್ಲಿ ಪ್ರಸಿದ್ಧವಾಗಿರುವ ಮುದ್ರಣಾಲಯದ ಗುಣಮಟ್ಟವನ್ನು ಉಳಿಸಿಕೊಳ್ಳುವುದು ನಮ್ಮ ಮುಂದಿರುವ ಏಕೈಕ ಗುರಿಯಾಗಿದೆ ಎಂದು ಬರೆದಿದ್ದಾರೆ.[೫೩] ಪ್ರಾರಂಭದಲ್ಲಿ ಕೇವಲ ೪ ಕಾರ್ಮಿಕರನ್ನು ಹೊಂದಿದ್ದ ಕೊಡಿಯಲ್‌ಬೈಲ್ ಪ್ರೆಸ್ ೧೯೦೬ರಲ್ಲಿ ೪೦ ಜನರಿಗೆ ಉದ್ಯೋಗವನ್ನು ಮತ್ತು ಯೋಗ್ಯ ರೀತಿಯ ವರಮಾನವನ್ನು ನೀಡಿದೆ. ಇದು ಜಿಲ್ಲಾ ಮತ್ತು ಮುನ್ಸಿಫ್ ನ್ಯಾಯಾಲಯ, ಮುನ್ಸಿಪಲ್ ಕೌನ್ಸಿಲ್ ಮತ್ತು ಸ್ಥಳೀಯ ಸಂಸ್ಥೆಗಳ ಜಿಲ್ಲಾ ಮಂಡಳಿ ಮತ್ತು ಇತರ ಸಾರ್ವಜನಿಕ ಮತ್ತು ಖಾಸಗಿ, ದೊಡ್ಡ ಮತ್ತು ಸಣ್ಣ ವ್ಯಾಪಾರೀ ಸಂಸ್ಥೆಗಳ ವಿಶ್ವಾಸ ಮತ್ತು ಪೋಷಣೆಯನ್ನು ಪಡೆದುಕೊಂಡಿದೆ.[೫೪] ಕಾಫಿ ಸಂಸ್ಕರಣ ಮತ್ತು ಹೆಂಚು ತಯಾರಿಕೆಯನ್ನು ಬಿಟ್ಟರೆ ಬೇರೆ ಉದ್ದಿಮೆಗಳಿಲ್ಲದ ನಗರದ ಜನರಿಗೆ ಪ್ರೆಸ್ ಉದ್ಯೋಗವಕಾಶವನ್ನು ಕಲ್ಪಿಸಿದೆ.[೫೫] ದಕ್ಷಿಣ ಕನ್ನಡದ ಆದ್ಯ ಮುದ್ರಣಾಲಯಗಳಿಂದ ತರಬೇತಿ ಪಡೆದ ಮತ್ತು ಪ್ರಭಾವಿತರಾದ ಹಲವರು ತಮ್ಮ ಸ್ವಂತ ಮುದ್ರಣಾಲಯಗಳನ್ನು ಸ್ಥಾಪಿಸಿದ್ದಾರೆ. ಸೈಂಟ್ ಅಲೋಶಿಯಸ್ ಕಾಲೇಜಿನ ೧೯೪೧-೪೨ರ ವಾರ್ಷಿಕ ವರದಿಯಲ್ಲಿ ತಿಳಿಸಿರುವಂತೆ ದಕ್ಷಿಣ ಕನ್ನಡದಲ್ಲಿ ವರದಿ ವರ್ಷದಲ್ಲಿ ೨೨ ಮುದ್ರಣಾಲಯಗಳಿದ್ದು, ಅವುಗಳಲ್ಲಿ, ೧೬ ಮುದ್ರಣಾಲಯಗಳು ಮಂಗಳೂರು ನಗರದಲ್ಲಿಯೇ ಇದ್ದವು ಎಂಬುದು ಮುದ್ರಣಾಲಯದ ಬೆಳವಣಿಗೆ ಉತ್ತಮ ನಿದರ್ಶನವಾಗಿದೆ. ೧೯೪೧ರಲ್ಲಿ ಬಾಸೆಲ್ ಮಿಶನ್ ಪ್ರೆಸ್‌ನಲ್ಲಿ ೧೬೦ಕ್ಕಿಂತ ಹೆಚ್ಚು ಪುರುಷರಿಗೆ ಉದ್ಯೋಗ ನೀಡಿ ಭಾರತದ ಉತ್ತಮ ಮುದ್ರಣಾಲಯಗಳಲ್ಲಿ ಒಂದು ಎಂದು ತೋರಿಸಿಕೊಟ್ಟಿದೆ.[೫೬]

ಫಾ। ಕೈತಾನ್ ಗೊನ್ಸಾಲ್ವಿಸ್‌ರವರು ಕೋಡಿಯಾಲ್‌ಬೈಲ್ ಮುದ್ರಣಾಲಯದ ನಿರ್ದೇಶಕರಾಗಿದ್ದ ಅವಧಿಯಲ್ಲಿ ಕಾರ್ಮಿಕರ ಕಲ್ಯಾಣಕ್ಕಾಗಿ 'ಭವಿಷ್ಯ ನಿಧಿ'ಯನ್ನು ಆರಂಭಿಸಿದ್ದರು. ಕೊಡಿಯಾಲ್‌ಬೈಲ್ ಬುಕ್ ಬೈಂಡಿಂಗ್ ವಿಭಾಗ ಅದರ ನಾಜೂಕಾದ ಬೈಂಡಿಂಗ್ ಕೆಲಸಕ್ಕೆ ಹೆಸರುವಾಸಿಯಾಗಿದ್ದು ಭಾರತದ ವಿವಿಧ ಭಾಗಗಳಿಂದ ಬೈಂಡಿಂಗಿಗಾಗಿ ಈ ಪ್ರೆಸ್ಸಿಗೆ ಪುಸ್ತಕಗಳು ಬರುತ್ತಿದ್ದವು ಮತ್ತು ಇಂದಿಗೂ ಶ್ರೀಲಂಕಾ ಮತ್ತು ಲಂಡನ್‌ನಿಂದ ಪುಸ್ತಕಗಳನ್ನು ಬೈಂಡಿಂಗ್‌ಗಾಗಿ ಕಳುಹಿಸಿಕೊಡುತ್ತಾರೆ. ಹೀಗೆ ದೇಶ ವಿದೇಶಗಳಲ್ಲಿ ಪ್ರಸಿದ್ಧಿ ಪಡೆದಿರುವ ಕೊಡಿಯಾಲ್‌ಬೈಲ್ ಪ್ರೆಸ್ ಸಮಾಜದ ಹಿರಿ-ಕಿರಿಯ ಮುದ್ರಣಾಲಯಗಳಿಗೆ ಒಂದು ಪ್ರೇರಣೆ ಹಾಗೂ ಮಾರ್ಗದರ್ಶಕವಾಗಿದೆ. ಕೊಡಿಯಾಲ್‌ಬೈಲ್‌ಪ್ರೆಸ್ಸಿನಲ್ಲಿ ಒಬ್ಬ ಸಾಮಾನ್ಯ ಕಾರ್ಮಿಕನಾಗಿ ದುಡಿದು ಸ್ವ- ಸಾಮರ್ಥ್ಯದಿಂದ ಹಾಗೂ ಪರಿಶ್ರಮದಿಂದ ಅಭಿವೃದ್ಧಿ ಹೊಂದಿರುವ ಪಕ್ಷಿಕೆರೆಯ ಜೋಸೆಫ್ ಡಿಸೋಜರವರು ಕೇರಳದ ಕ್ವಿಲೋನ್‌ನಲ್ಲಿ 'ಸೈಂಟ್ ಜೋಸೆಫ್ ಆರ್ಟ್ ಪ್ರಿಂಟರ್ಸ್' ಎಂಬ ಮುದ್ರಣ ಉದ್ಯಮವನ್ನು ಸ್ಥಾಪಿಸಿ ಅಭೂತಪೂರ್ಣ ಯಶಸ್ಸನ್ನು ಗಳಿಸಿ ಸಾವಿರಾರು ಜನರಿಗೆ ಉದ್ಯೋಗವಕಾಶವನ್ನು ಕಲ್ಪಿಸಿ ಕೊಟ್ಟಿದ್ದಾರೆ. ಕೊಂಕಣಿಯಲ್ಲಿ ಪ್ರಕಾಶನದ ಉದ್ಯಮ ಅಷ್ಟೊಂದು

ಲಾಭದಾಯಕ ವ್ಯಾಪಾರವಲ್ಲದಿದ್ದರೂ ಮಾತೃಭಾಷೆಯ ಅಭಿಮಾನದಿಂದ ಪ್ರಕಾಶನ ಉದ್ಯಮವನ್ನು ಕೈಗೆತ್ತಿಕೊಂಡು ಕೊಂಕಣಿ ಸಾಹಿತ್ಯ ಪ್ರಕಾಶನ, ಸ್ವತಂತ್ರ ಪ್ರಕಾಶನ, ಸಾಳಕ್ ಪ್ರಕಾಶನ, ಮನವ್ ಪ್ರಕಾಶನ, ಪ್ರಗತಿ ಪ್ರಕಾಶನ, ಪ್ರಕಾಶಾಲಯ, ಶತಾಬ್ಧಿ ಪ್ರಕಾಶನ, ರಾಕ್ಣೊ ಪ್ರಕಾಶನ, ಜೆಜುರಾಯ್ ಪ್ರಕಾಶನ ಮುಂತಾದ ಪ್ರಕಾಶಕರು ಕೊಂಕಣಿ ಭಾಷೆಯ ಸೇವೆ ಮಾಡಿದ್ದಾರೆ.[೫೭]

ಜಿಲ್ಲೆಯ ಆದ್ಯ ಮುದ್ರಣಾಲಯಗಳಾದ ಬಾಸೆಲ್ ಮಿಶನ್ ಮತ್ತು ಕೊಡಿಯಾಲ್‌ಬೈಲ್ ಪ್ರೆಸ್‌ಗಳು ಸಾವಿರಾರು ಜನರಿಗೆ ಉದ್ಯೋಗ ಕಲ್ಪಿಸಿವೆ. ಮಾತ್ರವಲ್ಲದೆ ನಿರುದ್ಯೋಗ ಸಮಸ್ಯೆಯನ್ನು ಸ್ವಲ್ಪ ಮಟ್ಟಿಗೆ ಪರಿಹರಿಸುವ ನಿಟ್ಟಿನಲ್ಲಿ ಸಹಕಾರಿಯಾಗಿವೆ. ಅಲ್ಲದೆ ಆ ಮುದ್ರಣಾಲಯಗಳಲ್ಲಿ ತರಬೇತಿ ಪಡೆದ ಹಲವರು ಮುಂದೆ ತಮ್ಮದೇ ಸ್ವಂತ ಮುದ್ರಣಾಲಯಗಳನ್ನು ಸ್ಥಾಪಿಸಲು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಕಾರಣವಾಗಿವೆ. ಜಿಲ್ಲೆಯ ನಗರ ಪ್ರದೇಶಗಳಾದ ಉಡುಪಿ, ಕುಂದಾಪುರ, ಪುತ್ತೂರು ಮುಂತಾದ ಸ್ಥಳಗಳಲ್ಲಿ ಹಲವಾರು ಮುದ್ರಣಾಲಯಗಳು ಹುಟ್ಟಿ ಉದ್ಯೋಗ ಸೃಷ್ಟಿಯಾಗಿದೆ. ಇಂತಹ ಕೆಲವು ಮುದ್ರಣಾಲಯಗಳು ಹತ್ತು ಹಲವು ವಿಘ್ನಗಳ ಹೊರತಾಗಿಯೂ ತಮ್ಮ ಸೇವೆಯನ್ನು ಮುಂದುವರಿಸುತ್ತಿದ್ದರೆ ಇನ್ನೂ ಕೆಲವು ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ತಮ್ಮ ತೇಜಸ್ಸನ್ನು ಕಳೆದುಕೊಂಡು ಕಾಲಕ್ರಮೇಣ ತೆರೆಮರೆಗೆ ಸರಿದಿವೆ. ಕ್ರೈಸ್ತರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಸ್ತುತ ನಡೆಸುತ್ತಿರುವ ಮುಖ್ಯವಾದ ಕೆಲವು ಮುದ್ರಣಾಲಯಗಳು- ಕರಂಗಲ್ ಪಾಡಿಯ ಅಸಿಸ್ಸಿ ಪ್ರೆಸ್, ಮಲ್ಲಿಕಟ್ಟೆಯ ಆದರ್ಶ ಪ್ರೆಸ್, ಕುಲಶೇಖರದ ಪ್ರಸಾದ್ ಪ್ರಿಂಟರ್ಸ್, ಪಂಪ್‌ವೆಲ್‌ನ ಮೀರಾ ಪ್ರಿಂಟರ್ಸ್, ಉಪ್ಪಿನಂಗಡಿಯ ಏಂಜಲ್ ಪ್ರಿಂಟರ್ಸ್, ಪುತ್ತೂರಿನ ಥಾಮ್ಸನ್ ಪ್ರಿಂಟರ್ಸ್, ಬ್ರಹ್ಮಾವರದ ಸೈಂಟ್ ಆ್ಯಂಟನಿ ಪ್ರಿಂಟಿಂಗ್ ಪ್ರೆಸ್, ಕಟಪಾಡಿಯ ಲವೀನಾ ಆಫ್‌ಸೆಟ್ ಪ್ರಿಂಟರ್ಸ್ ಇತ್ಯಾದಿ. ಈ ಮುದ್ರಣಾಲಯಗಳು ಅನಕ್ಷರಸ್ಥ ನಿರುದ್ಯೋಗಿಗಳಿಗೆ ಜೀವನಾಧಾರವಾಗಿರುವುದು ಮಾತ್ರವಲ್ಲದೆ ಅವರಿಗೆ ಭವಿಷ್ಯನಿಧಿ, ಬೋನಸ್, ರಜೆ ಸಂಬಳ, ಇ.ಎಸ್.ಐ. ಸೌಲಭ್ಯ ಇತ್ಯಾದಿಗಳನ್ನು ಒದಗಿಸಿಕೊಡುವುದರೊಂದಿಗೆ ಅವರಿಗೊಂದು ಸ್ವಂತ ಮನೆ ಹೊಂದಲು ಹಾಗೂ ವಾಹನ ಖರೀದಿಸಲು ಬ್ಯಾಂಕಿನಿಂದ ಸಾಲ ಸೌಲಭ್ಯ ಕೊಡಿಸುವಂತಹ ಕಾರ್ಯಗಳನ್ನೂ ಮಾಡುತ್ತಿವೆ.[೫೮]

### ೫.೫. ನೇಯ್ಗೆ ಕೈಗಾರಿಕೆ

ಜಿಲ್ಲೆಯಲ್ಲಿ ನೇಯ್ಗೆಯು ಗೃಹ ಕೈಗಾರಿಕೆಯಾಗಿ ಅಪರಿಚಿತವಾಗಿರದಿದ್ದರೂ, ಅದನ್ನು ೧೮೪೪ರಲ್ಲಿ ರೆವೆ. ಮೆಟ್ಜ್ ರವರ ಮೂಲಕ ವಾಣಿಜ್ಯ ಮಟ್ಟದಲ್ಲಿ ಪರಿಚಯಿಸಿದ್ದು ಬಾಸೆಲ್ ಮಿಶನ್. ಮಿಶನ್ ಕ್ರೈಸ್ತರ ಮಕ್ಕಳಿಗೆ ಮತ್ತು ಮಂಗಳೂರಿನ ವಸತಿ ಶಾಲೆಯಲ್ಲಿ ವಾಸಿಸುವ ಬೇರೆ ಕೆಲವರಿಗೆ ಉದ್ಯೋಗವನ್ನು ಕಲ್ಪಿಸುವ ಸಲುವಾಗಿ ಬಲ್ಮಠದಲ್ಲಿ ನೇಯ್ಗೆ ಸಂಸ್ಥೆಯನ್ನು ಸ್ಥಾಪಿಸಿದೆ.[೫೯] ಪ್ರಥಮ ಮಹಾಯುದ್ಧದವರೆಗೆ

ಬಾಸೆಲ್ ಮಿಶನ್ನಿನ ನೇಯ್ಗೆ ಸಂಸ್ಥೆ ಉತ್ತಮ ಯಶಸ್ಸಿನೊಂದಿಗೆ ಮುಂದುವರಿಯಿತು. ಆದರೆ ಯುದ್ಧ ಪ್ರಾರಂಭವಾದ ಬಳಿಕ ಇದನ್ನು 'ಕಾಮನ್‌ವೆಲ್ತ್ ಟ್ರಸ್ಟ್ ಲಿಮಿಟೆಡ್'ಗೆ ವಹಿಸಿಕೊಡಲಾಯಿತು. ನಂತರ ಇದು 'ಹೊಸೈರಿ ಫ್ಯಾಕ್ಟರಿ' ಎಂಬ ಹೊಸ ಹೆಸರಿನೊಂದಿಗೆ ಮಂಗಳೂರಿನ ಬಲ್ಮಠದಲ್ಲಿ ಮುಂದುವರಿಯಿತು. ಆ ಕಾರ್ಖಾನೆಯಲ್ಲಿ ಜನಪ್ರಿಯ ಬನಿಯನ್‌ಗಳು ೧೯೬೦ರವರೆಗೆ ಉತ್ಪಾದಿಸಲ್ಪಡುತ್ತಿದ್ದವು. ನಂತರ ಆರ್ಥಿಕ ಕೊರತೆ, ಕೈ ಮಗ್ಗದ ಬಟ್ಟೆಗಳ ಬೇಡಿಕೆಯಲ್ಲಿ ಇಳಿಮುಖವಾಗಿರುವುದು ಮತ್ತು ಯಂತ್ರದಲ್ಲಿ ತಯಾರಾದ ಕಡಿಮೆ ಬೆಲೆಯ ವಸ್ತುಗಳೊಂದಿಗೆ ಸ್ಪರ್ಧಿಸಲಾಗದ ಅಸಹಾಯಕತೆಯಿಂದಾಗಿ ಅದನ್ನು ಮುಚ್ಚಿ ಬಿಡಲಾಗಿದೆ.[೬೦] ಮಿಶನ್ ಸಂಸ್ಥೆಯ ನೇಯ್ಗೆ ಉದ್ದಿಮೆಗಳು ಅತ್ಯಂತ ಹೆಚ್ಚಿನ ಯಶಸ್ಸನ್ನು ಹೊಂದಿವೆ. ಅನೇಕ ಜನರಿಗೆ ಜೀವನೋಪಾಯದ ವೃತ್ತಿಯನ್ನು ಒದಗಿಸಿವೆ. ಮದ್ಯವ್ಯಸನಿಗಳಾಗಿದ್ದವರು ಆ ಶಾಖೆಯ ಉದ್ಯೋಗಿಗಳಾದ ಬಳಿಕ ಮದ್ಯಪಾನ ತ್ಯಜಿಸಿ ಜವಾಬ್ದಾರಿಯುತ ವ್ಯಕ್ತಿಗಳಾಗಿದ್ದಾರೆ. ಜಾತಿಯಲ್ಲಿ ನೇಕಾರರಾಗಿರುವವರು ಕುಡಿತಕ್ಕೆ ಹೆಸರುವಾಸಿ. ಒಂದು ಕಾಲದಲ್ಲಿ ನೇಕಾರನನ್ನು ಮದುವೆಯಾಗುವುದು ಮಹಿಳೆಗೆ ಅವಮಾನಕಾರಿ ಸಂಗತಿಯಾಗಿತ್ತು. ಮಿಶನರಿಗಳ ಪ್ರಭಾವದಿಂದ ವಸ್ತುಸ್ಥಿತಿ ಬದಲಾವಣೆಯಾಯಿತು ಎಂದು ಮಿಶನ್ ಹೇಳಿಕೊಂಡಿದೆ. ನೇಕಾರರ ಸ್ಥಾನ ಕೂಡಾ ಸುಧಾರಣೆಯನ್ನು ಹೊಂದಿತು. ಕೈತೋಟವಿರುವ ಸ್ವಂತದ ಪುಟ್ಟ ಮನೆಯನ್ನು ಹೊಂದುವುದು ಕೂಡಾ ಅವರಿಗೆ ಸಾಧ್ಯವಾಗಿದೆ.[೬೧] ೧೮೫೯ರ ವೇಳೆಗೆ ನಾಲ್ಕು ವಿಭಾಗಗಳು ನೇಯ್ಗೆ ಮಳಿಗೆಗಳನ್ನು ಹೊಂದಿದ್ದು ಸುಮಾರು ೫೦ರಷ್ಟು ಮಗ್ಗಗಳು ಕಾರ್ಯನಿರ್ವಹಿಸುತ್ತಿವೆ. ಅದರಲ್ಲಿ ಸುಮಾರು ನೂರು ಮಂದಿ ಮಿಶನ್ ಕ್ರೈಸ್ತರು ತಮ್ಮ ಅನ್ನವನ್ನು ಸಂಪಾದಿಸುತ್ತಿದ್ದರು. ಅವರಲ್ಲಿ ಬಹುಪಾಲು ಜನರಿಗೆ ನಿಶ್ಚಿತ ಆದಾಯವಿರಲಿಲ್ಲ, ಆದರೆ ಅವರು ಒದಗಿಸಿದ ಕೆಲಸಕ್ಕೆ ಕೂಲಿಯನ್ನು ನೀಡಲಾಗುತ್ತಿತ್ತು. ಕೆಲವರಿಗೆ ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ನೆರವನ್ನು ಒದಗಿಸಲಾಗಿದೆ. ಅವರಲ್ಲಿ ಕೆಲವರು ತಮ್ಮೊಂದಿಗಿರುವ ಅನೇಕ ಕ್ರೈಸ್ತರಿಗೆ ಉದ್ಯೋಗವನ್ನು ನೀಡುವಷ್ಟು ಯಶಸ್ವಿಯಾಗಿದ್ದಾರೆ.[೬೨] ಡಿಗೆಲ್ ಅವರ ಮಾತಿನಲ್ಲಿ ಹೇಳುವುದಾದರೆ, " ಹತ್ತು ವರ್ಷಗಳ ಹಿಂದೆ ಬರೀ ಆರು ಮಂದಿಯಲ್ಲಿ ಅವರ ಸ್ವಂತ ಮನೆಗಳಿದ್ದವು. ಉಳಿದವರು ತಮ್ಮ ಸ್ವಂತದ ಗುಡಿಸಲನ್ನು ಹೊಂದುವುದಕ್ಕೂ ಸಾಧ್ಯವಿಲ್ಲದಷ್ಟು ಬಡವರಾಗಿದ್ದರು. ಈಗ ೧೮ ಗಂಡಸರು ತಮ್ಮ ಕುಟುಂಬದೊಂದಿಗೆ ತೋಟವಿರುವ ಸ್ವಂತ ಮನೆಯಲ್ಲಿದ್ದಾರೆ....... ಅವರು ತಮ್ಮ ಬಿಡುವಿನ ಸಮಯದಲ್ಲಿ ತೋಟದ ಕೃಷಿಯನ್ನು ಕೂಡಾ ನಡೆಸುತ್ತಿದ್ದಾರೆ.[೬೩] ಈ ಮೇಲಿನ ಉದ್ಧರಣೆಯಿಂದ ತಿಳಿಯುವುದೇನೆಂದರೆ, ಮಿಶನ್ ಕ್ರೈಸ್ತರು ತಮ್ಮ ಮೂಲ ಕಸುಬು ಕಳೆದುಕೊಂಡರೂ, ಬಾಸೆಲ್ ಮಿಶನ್ ತಮ್ಮ ಸುಧಾರಿತ ನೇಯ್ಗೆ ಕಾರ್ಖಾನೆಯಲ್ಲಿ ಉದ್ಯೋಗ ಕಲ್ಪಿಸಿದೆ. ಅಂತೆಯೇ, ನೇಯ್ಗೆಯು ಗುಡಿ ಕೈಗಾರಿಕೆಯಾಗಿ ಈ ಮೊದಲೇ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿದ್ದರೂ, ಅದರಲ್ಲಿ ದುಡಿಯುತ್ತಿದ್ದವರಲ್ಲಿ ಹೆಚ್ಚಿನವರು ಕುಡಿತದ ಚಟಕ್ಕೆ ಬಲಿಯಾಗಿ ಹಣವನ್ನು

ದುಂದುವೆಚ್ಚ ಮಾಡುತ್ತಿದ್ದುದರಿಂದ ಬಡತನ ತಾಂಡವವಾಡುತ್ತಿತ್ತು. ಆದರೆ, ಕ್ರೈಸ್ತ ಧರ್ಮ ಸ್ವೀಕರಿಸಿದ ನಂತರ, ನೇಯ್ಗೆ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದವರು ಮಿಶನರಿಗಳ ಕಣ್ಣು ತಪ್ಪಿಸಿ ಕುಡಿಯುವುದು ತ್ರಾಸದಾಯಕವಾದುದರಿಂದ, ದುಡಿದ ಹಣ ದುರುಪಯೋಗವಾಗುವುದು ತಪ್ಪಿತು. ಇದರಿಂದ ಅವರ ಆರ್ಥಿಕ ಪರಿಸ್ಥಿತಿ ಉತ್ತಮಗೊಂಡು ಸಮಾಜದಲ್ಲಿ ಒಳ್ಳೆಯ ಸ್ಥಾನಮಾನ ಹಾಗೂ ಗೌರವ ಪ್ರಾಪ್ತವಾಯಿತು.

ಅವಿವಾಹಿತ ನೇಕಾರಿಗೆ ಅವರ ಕೆಲಸದಿಂದ ಬರುವ ಲಾಭದ ೧/೪ ಭಾಗವನ್ನು ಮತ್ತು ಅದೇ ರೀತಿ ವಿವಾಹಿತರಿಗೆ ಲಾಭದ ೫/೬ನೇ ಭಾಗವನ್ನು ಮಿಶನ್ ನೀಡಿದೆ. ಹೀಗೆ ಸಂಗ್ರಹವಾದ ಹಣವನ್ನು ಕೆಲವು ವರ್ಷಗಳು ಕಳೆದು ನಂತರ ಒಟ್ಟುಗೂಡಿಸಿ ಸ್ವತಂತ್ರ ಉದ್ಯಮವನ್ನು ಆರಂಭಿಸಲು ಮತ್ತು ಸ್ವಾವಲಂಬಿ ಜೀವನ ನಡೆಸಲು ಮಿಶನ್ ಪೂರಕ ವಾತಾವರಣವನ್ನು ಸೃಷ್ಟಿಸಿದೆ.[೬೪] ನೇಯ್ಗೆ ಉದ್ದಿಮೆಯ ಒಟ್ಟು ಉದ್ಯೋಗಸ್ಥರಲ್ಲಿ ಶೇಕಡಾ ೯೮ರಷ್ಟು ಮಂದಿ ಮಿಶನ್ ಕ್ರೈಸ್ತರಾಗಿದ್ದರೆ, ಹೆಂಚು ಕಾರ್ಖಾನೆಗಳಲ್ಲಿ ಅವರ ಪಾಲು ಶೇಕಡಾ ೫೫ರಷ್ಟು ಮಾತ್ರ. ಪ್ರಾಯಶಃ ಇದಕ್ಕೆ ಕಾರಣವೇನೆಂದರೆ, ಹೆಂಚು ಕಾರ್ಖಾನೆಗಳನ್ನು ಕಚ್ಚಾವಸ್ತು ಮತ್ತು ಸಾರಿಗೆ ಸೌಕರ್ಯಗಳಿರುವಲ್ಲಿ ಮಾತ್ರ ಸ್ಥಾಪಿಸಬೇಕಾಗಿರುವುದು. ಈ ರೀತಿಯ ಪ್ರದೇಶಗಳಲ್ಲಿ ಮಿಶನ್ ಕ್ರೈಸ್ತರಿಗೆ ಆದ್ಯತೆ ನೀಡುವುದಕ್ಕಿಂತ, ಅಲ್ಲಿ ಲಭ್ಯ ಇರುವವರನ್ನು ಕೆಲಸಕ್ಕೆ ಸೇರಿಸುವುದು ಸುಲಭವಿತ್ತು. ಆದರೆ ನೇಯ್ಗೆ ಕಾರ್ಖಾನೆಯ ಕೆಲಸ ಕುಶಲಕರ್ಮಿಗಳದ್ದು. ಎಲ್ಲಕ್ಕಿಂತ ಹೆಚ್ಚಾಗಿ ಹೆಂಚು ಕಾರ್ಖಾನೆಯ ಕೆಲಸವು ಮುಖ್ಯವಾಗಿ ಅನಿಶ್ಚಿತ ಸ್ವರೂಪದ್ದಾಗಿದೆ ಮತ್ತು ಅದು ಹೆಚ್ಚಿನ ಪ್ರಮಾಣದಲ್ಲಿದೆ. ಅದು ಕಾರ್ಮಿಕರಿಗೆ ಮತ್ತು ಸಿಬ್ಬಂದಿಗಳಿಗೆ ನೀಡುವ ವೇತನಕ್ಕೆ ಸಂಬಂಧಿಸಿದ ವಿಚಾರದಲ್ಲಿ ಪ್ರತಿಫಲಿತವಾಗಿದೆ.[೬೫] ನೇಯ್ಗೆ ಕಾರ್ಖಾನೆಗೆ ನುರಿತ ಕುಶಲಕರ್ಮಿಗಳ ಅಗತ್ಯ ಅಧಿಕವಾಗಿರುವುದರಿಂದ, ಮಿಶನ್ ಕ್ರೈಸ್ತರನ್ನೇ ಹೆಚ್ಚಿನ ಆದ್ಯತೆ ನೀಡಿ ಕೆಲಸಕ್ಕೆ ತೆಗೆದುಕೊಂಡಿದೆ. ಏಕೆಂದರೆ ಕಾಲಕ್ರಮೇಣ ಮಿಶನರಿಗಳು ಅವರನ್ನು ಸ್ವಾವಲಂಬಿಗಳಾಗಿ ಸ್ವತಂತ್ರ ಜೀವನ ನಡೆಸಲು ತರಬೇತುಗೊಳಿಸ ಬಯಸಿದ್ದರು. ನೇಯ್ಗೆ ಉದ್ಯಮ ಪೂರ್ಣಾವಧಿಯ ಕೆಲಸವಾಗಿರುವುದರಿಂದ ಮಿಶನ್ ಕ್ರೈಸ್ತರಿಗೆ ವರ್ಷವಿಡೀ ಕೆಲಸ ಕೊಡುವ ಉದ್ದೇಶದಿಂದ ಅವರನ್ನು ಅಧಿಕ ಸಂಖ್ಯೆಯಲ್ಲಿ ನೇಮಕ ಮಾಡಿಕೊಳ್ಳಲಾಗಿದೆ. ಅಂತೆಯೇ ಹೆಂಚಿನ ಕಾರ್ಖಾನೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಹಾಗೂ ಸಿಬ್ಬಂದಿಗಳಿಗೆ ನೇಕಾರರ ವೇತನಕ್ಕಿಂತ ಕಡಿಮೆ ವೇತನ ನೀಡಿದ್ದಾರೆ. ಈ ರೀತಿಯಲ್ಲಿ ಕ್ರೈಸ್ತರು ಮತ್ತು ಅನ್ಯರು ಎಂಬ ತಾರತಮ್ಯವನ್ನು ಸ್ವಲ್ಪ ಮಟ್ಟಿಗೆ ಮಾಡುತ್ತಿದ್ದರೆಂದೆಣಿಸುತ್ತದೆ. ರೆವೆ. ಫಿಶರ್‌ರವರ ಅವಲೋಕನದಲ್ಲಿ, ೧೮೮೨ರವರೆಗೆ ಬಾಸೆಲ್ ಮಿಶನ್ನಿನ ನೇಯ್ಗೆ ಮತ್ತು ಹೆಂಚು ಕಾರ್ಖಾನೆಗಳು ಸ್ಥಳೀಯವಾಗಿ ಅಥವಾ ಉದ್ದಿಮೆಯ ಬೇರೆ ಶಾಖೆಗಳಲ್ಲಿ ಇರುವ ವೇತನ ದರಕ್ಕಿಂತ ಅಧಿಕ ವೇತನವನ್ನು ನೀಡುತ್ತಿದ್ದವು. ೧೮೮೨ರ ನಂತರ ಮುಖ್ಯವಾಗಿ ಮಿಶನ್ ಕೈಗಾರಿಕೆ ಮತ್ತು ಮಿಶನ್ ಟ್ರೇಡಿಂಗ್ ಕಂಪೆನಿಯ

ವಿಲಯನದ ಬಳಿಕ, ಮಾರುಕಟ್ಟೆ ದರಕ್ಕಿಂತ ಹೆಚ್ಚಿನ ವೇತನವನ್ನು ನೀಡುವುದು, ಆರೋಗ್ಯಕರ ವ್ಯಾಪಾರೀ ನೀತಿಗೆ ತಕ್ಕದಲ್ಲವೆಂದು ಪರಿಗಣಿಸಲಾಗಿದೆ. ಅದೇ ರೀತಿ ಕ್ರೈಸ್ತರು ಮತ್ತು ಕ್ರೈಸ್ತೇತರರು ಒಂದೇ ರೀತಿಯ ಕೆಲಸಕ್ಕೆ ಒಂದೇ ವಿಧದ ವೇತನವನ್ನು ಪಡೆದಿದ್ದಾರೆ. ಆದರೆ ಕ್ರೈಸ್ತರಿಗೆ ರಿಯಾಯಿತಿ ದರದ ಮನೆ ಮತ್ತು ಉಚಿತವಾಗಿ ನೀಡುವ ಅಕ್ಕಿ ಮತ್ತು ತುರ್ತು ಪರಿಸ್ಥಿತಿಗಳಲ್ಲಿ ಪರಿಹಾರ ಮುಂತಾದ ಇತರ ಅನುಕೂಲತೆಗಳಿದ್ದವು.[೬೬] ಓರ್ವ ಕಾರ್ಮಿಕನಿಗೆ, ಅವನು ಕ್ರೈಸ್ತನಾಗಿರಲೀ ಅಥವಾ ಕ್ರೈಸ್ತೇತರನಾಗಿರಲಿ, ಅವನ ಕಾರ್ಯ ನಿರ್ವಹಣೆಗೆ ತಕ್ಕ ವೇತನವನ್ನು ಸಂಸ್ಥೆ ನೀಡದೆ ಇದ್ದರೆ ಅದು ಸ್ಥೈರ್ಯಗೆಡಿಸುವ ಪರಿಣಾಮವನ್ನುಂಟು ಮಾಡುತ್ತದೆ. ೧೮೮೦ರಲ್ಲಿ ಬೇರ್ಪಡುವಿಕೆಯ ವಾಸ್ತವಂಶವೊಂದನ್ನು ಹೆಂಚು ಕಾರ್ಖಾನೆಗಳಲ್ಲಿ ಗಮನಿಸಲಾಗಿದೆ, ಅದೇನೆಂದರೆ, ಕ್ರೈಸ್ತರು ತಮ್ಮ ಕೆಲಸವನ್ನು ಅವರ ಕ್ರೈಸ್ತೇತರ ಸಹ ಕೆಲಸಗಾರರಷ್ಟು ಚೆನ್ನಾಗಿ ಮಾಡುತ್ತಿರಲಿಲ್ಲ. ವ್ಯವಸ್ಥಾಪಕರೊಬ್ಬರ ಅಭಿಪ್ರಾಯದಲ್ಲಿ ಸ್ಥಳೀಯ ಕ್ರೈಸ್ತರು ಸೋಮಾರಿಗಳಾಗಿ, ಬಡವರಾಗಿ ಮತ್ತು ನಂಬಿಕೆಗೆ ಅನರ್ಹರಾಗಿದ್ದರು. ಆ ದೃಷ್ಟಿಕೋನವು ಮಿಶನ್ ಕೈಗಾರಿಕೆಯ ತಳಹದಿಗೆ ಮಾರ್ಗದರ್ಶನ ನೀಡಿದ ನಿರೀಕ್ಷೆಗಳಿಗೆ ವಿರೋಧ ನೆಲೆಯದ್ದಾಗಿದೆ.[೬೭]

೧೮೫೧ರ ಹೊತ್ತಿಗೆ ನೇಯ್ಗೆ ಕಾರ್ಖಾನೆಯು ೨೧ ಯೂರೋಪಿಯನ್ ಮಗ್ಗಗಳನ್ನು ಹೊಂದಿತ್ತು. ಅಲ್ಲದೆ ಅದೇ ವರ್ಷ ಜೋನ್ ಹೇಲರ್ ಎಂಬ ತಜ್ಞನು ಆ ಕಾರ್ಖಾನೆಯ ಹೊಣೆ ವಹಿಸಿಕೊಂಡಿದ್ದಾನೆ. 'ಖಾಕಿ' ಬಟ್ಟೆಯನ್ನು ಇಂದು ಎಲ್ಲರೂ ಬಲ್ಲರು. ೧೮೬೦ರ ಸುಮಾರಿಗೆ ಅದನ್ನು ಉತ್ಪಾದಿಸಲು ಆರಂಭಿಸಿದವರು ಬಾಸೆಲ್ ಮಿಶನ್‌ನವರು ಎಂದು ಹೇಳಲಾಗುತ್ತಿದೆ. ಆದರೆ ಅದಕ್ಕೂ ಮುಂಚೆ ಎಂದರೆ ೧೮೪೮ರಲ್ಲಿ 'ಖಾಕಿ' ಎಂಬ ಶಬ್ದ ಬಳಕೆಯಲ್ಲಿತ್ತು ಎಂದು ದೊಡ್ಡ ಆಕ್ಸ್‌ಫರ್ಡ್ ನಿಘಂಟು ಹೇಳುತ್ತದೆ. ಅದೇನಿದ್ದರೂ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಫುಲವಾಗಿ ಬೆಳೆಯುವ ಗೇರುಬೀಜದ ಸಿಪ್ಪೆಯ ರಸದಿಂದ ಆ ಬಣ್ಣವನ್ನು ಕಂಡು ಹಿಡಿದು ಬಟ್ಟೆಗೆ ಉಪಯೋಗಿಸಿದವನು ಬಾಸೆಲ್ ಮಿಶನ್‌ನ ಜೋನ್ ಹೇಲರ್ ಎಂಬುವನು.[೬೮] ಖಾಕಿ ಬಣ್ಣವನ್ನು ಕಂಡು ಹಿಡಿದ ನಂತರ ಇಡೀ ಪ್ರಪಂಚದಲ್ಲಿಯೇ ಮೊದಲ ಬಾರಿ ಮಂಗಳೂರಿನ ಬಾಸೆಲ್ ಮಿಶನ್ ನೇಯ್ಗೆ ಕಾರ್ಖಾನೆಯಲ್ಲಿ ಖಾಕಿ ವಸ್ತ್ರವನ್ನು ತಯಾರು ಮಾಡಲಾಗಿದೆ. ಅಂದಿನ ಮದ್ರಾಸ್ ಪ್ರಾಂತ್ಯದ ಬ್ರಿಟಿಷ್ ಗವರ್ನರ್ ಲಾರ್ಡ್ ರಾಬರ್ಟ್ಸ್ ಮಂಗಳೂರಿನ ನೇಯ್ಗೆ ಕಾರ್ಖಾನೆಗೆ ಒಮ್ಮೆ ಭೇಟಿಕೊಟ್ಟ ಅನಂತರ, ಖಾಕಿ ಬಟ್ಟೆಯನ್ನು ನೋಡಿ ಅದರಿಂದ ಬಹಳಷ್ಟು ಪ್ರಭಾವಿತರಾಗಿ, ಖಾಕಿ ಬಟ್ಟೆಯನ್ನು ಬ್ರಿಟಿಷ್ ಸೈನಿಕರ ಸಮವಸ್ತ್ರವನ್ನಾಗಿ ಉಪಯೋಗಿಸಲು ಶಿಫಾರಸು ಮಾಡಿದರು. ಅವರ ಶಿಫಾರಸನ್ನು ಬ್ರಿಟಿಷ್ ಸರಕಾರವು ಅಂಗೀಕರಿಸಿದ್ದರಿಂದ ಪ್ರಪಂಚದಾದ್ಯಂತ ಬ್ರಿಟಿಷ್ ಸೈನಿಕರು ಖಾಕಿ ಬಟ್ಟೆಯನ್ನು ತಮ್ಮ ಸಮವಸ್ತ್ರವನ್ನಾಗಿ ಉಪಯೋಗಿಸುವಂತಾಗಿದೆ. ಬ್ರಿಟಿಷ್ ಸೈನಿಕರು ಮಾತ್ರವಲ್ಲದೇ, ಇಂದು ಪ್ರಪಂಚದ ಹಲವು ದೇಶಗಳ ಸೈನಿಕರು, ಪೋಲಿಸರು ಮತ್ತು ಸಾರಿಗೆ ನೌಕರರು

ಖಾಕಿ ಬಟ್ಟೆಯನ್ನು ತಮ್ಮ ಸಮವಸ್ತ್ರಕ್ಕಾಗಿ ಬಳಸುತ್ತಿದ್ದಾರೆ. ಅಲ್ಲದೆ ದಕ್ಷಿಣ ಕನ್ನಡ ಮತ್ತು ಭಾರತದ ಹಲವೆಡೆ ಶಾಲಾ- ಕಾಲೇಜುಗಳಲ್ಲಿ ಖಾಕಿ ಬಟ್ಟೆಯನ್ನು ಮಕ್ಕಳ ಸಮವಸ್ತ್ರಕ್ಕಾಗಿ ಉಪಯೋಗಿಸಲಾಗುತ್ತಿದೆ. ಹೀಗೆ ಖಾಕಿ ಬಣ್ಣ ಮತ್ತು ಖಾಕಿ ಬಟ್ಟೆಯ ಸಂಶೋಧನೆ, ಮಂಗಳೂರಿನ ಬಾಸೆಲ್ ಮಿಶನ್ ನೇಯ್ಗೆ ಕಾರ್ಖಾನೆಯು ಇಡೀ ಪ್ರಪಂಚದ ವಸ್ತ್ರೋದ್ಯಮಕ್ಕೆ ಸಲ್ಲಿಸಿದ ಮಹೋನ್ನತ ಕೊಡುಗೆಯಾಗಿದೆ. [೬೯] ಬಾಸೆಲ್ ಮಿಶನ್ ನೇಯ್ಗೆ ಕಾರ್ಖಾನೆಯ ಬಹು ಮುಖ್ಯವಾದ ವೈಶಿಷ್ಟ್ಯವೆಂದರೆ ಅದು ತನ್ನ ಕೆಲಸಗಾರರಿಗೆ ಒದಗಿಸಿದ ಸವಲತ್ತು. ಇದಕ್ಕಿಂತ ಪೂರ್ವದಲ್ಲೇ ಆಗಲಿ ಅನಂತರದ ೫೦ ವರ್ಷಗಳವರೆಗಾಗಲೀ ಕೆಲಸಗಾರರ 'ಕ್ಷೇಮನಿಧಿ' ಮತ್ತು 'ಆರೋಗ್ಯ ನಿಧಿ'ಯನ್ನು ಯಾವ ಉದ್ಯಮ ಸಂಸ್ಥೆಯೂ ಭಾರತದಲ್ಲಿ ಪ್ರಾರಂಭಿಸಿರಲಿಲ್ಲ. ೧೮೬೭ರಲ್ಲಿ ಬಾಸೆಲ್‌ನ ಕೈಗಾರಿಕಾ ನಿಯೋಗ ಇಂಥದ್ದೊಂದು ಅನುಕೂಲತೆಯನ್ನು ಮಿಶನ್ ಕೆಲಸಗಾರರಿಗೆ ಒದಗಿಸಿಕೊಡಬೇಕೆಂದು ಆದೇಶ ನೀಡಿದೆ. ಪ್ರತಿ ಕೆಲಸಗಾರನಿಂದ ಆ ನಿಧಿಗೆ ಅವನ ವೇತನದ ಶೇ.೬ರಷ್ಟನ್ನು ಜಮಾಯಿಸಲಾಗಿದೆ. ಕಾರ್ಖಾನೆಯ ಕೆಲಸಗಾರರು ಆ ನಿಧಿಯನ್ನು 'ರೋಗಿ ಬೊಕ್ಕಸ' ಎಂದು ಕರೆಯುತ್ತಿದ್ದರು. ಆ ಬಗೆಯ ಔದ್ಯಮಿಕ ಎತ್ತುಗಡೆಗಳಿಂದ ತಮಗಾದ ಉಪಕಾರವನ್ನು ದಕ್ಷಿಣ ಕನ್ನಡದ ಜನತೆ ಮರೆಯಲಿಕ್ಕಿಲ್ಲ. ತಮ್ಮ ಮೇಲ್ವಿಚಾರಕ ಮಿಶನರಿಗಳು ನಿವೃತ್ತರಾಗಿ, ಇನ್ನೊಂದು ಅಧಿಕಾರ ಸ್ಥಾನಕ್ಕೆ ವರ್ಗವಾಗಿ ಹೋಗುವಾಗಲೆಲ್ಲ ಕಾರ್ಖಾನೆಯ ಕೆಲಸಗಾರರು ಅವರಿಗೆ ಮಾನಪತ್ರವನ್ನು ಸಲ್ಲಿಸಿದ್ದಾರೆ. ಮುದ್ರಿತ ಮಾನಪತ್ರದ ಪರಂಪರೆಗೆ ಬಾಸೆಲ್ ಮಿಶನ್ ಒಂದು ನಿಮಿತ್ತವಾಗಿದೆಯೆನ್ನುವುದು ಇಲ್ಲಿ ನೆನಪಿಡಬೇಕಾದ ಮಾತು. ೨೭ ಜನರಿಂದ ಪ್ರಾರಂಭವಾದ ನೇಯ್ಗೆ ಕಾರ್ಖಾನೆಯಲ್ಲಿ ೧೮೮೦ರಲ್ಲಿ ೧೦೦ ಜನ ಕೆಲಸಗಾರಿದ್ದರು. ಆ ಕಾರ್ಖಾನೆಯಲ್ಲಿ ಅಧಿಕ ಸಂಖ್ಯೆಯಲ್ಲಿ ಕ್ರೈಸ್ತರು ಮತ್ತು ಕೆಲವು ಕ್ರೈಸ್ತೇತರರರೂ ಕೆಲಸಕ್ಕಿದ್ದರು.[೭೦]

ಮಂಗಳೂರಿನ ನೇಯ್ಗೆ ಕಾರ್ಖಾನೆಯ ಪ್ರಗತಿಯನ್ನು, ಖ್ಯಾತಿಯನ್ನು ನೋಡಿದ ಬಾಸೆಲ್ ಮಿಶನ್, ೨೮ ಸೆಪ್ಟೆಂಬರ್ ೧೮೮೭ರಂದು ಮುಲ್ಕಿಯಲ್ಲಿ ಕೂಡಾ ಒಂದು ನೇಯ್ಗೆ ಕಾರ್ಖಾನೆಯನ್ನು ಪ್ರಾರಂಭಿಸಿದೆ. ಬಾಸೆಲ್ ಮಿಶನ್ ನೇಯ್ಗೆ ಕಾರ್ಖಾನೆಗಳು ಶರ್ಟ್ ಬಟ್ಟೆ, ಸಿಲ್ಕ್ ಬಟ್ಟೆ, ಮೇಜಿನ ಮೇಲೆ ಹಾಸುವ ಬಟ್ಟೆ ಮತ್ತು ಹೊದಿಕೆಗಳು, ಟವಲ್ಸ್, ಕರವಸ್ತ್ರಗಳು, ಸ್ಥಳೀಯ ಇತರ ಉಡುಪುಗಳು ಮಾತ್ರವಲ್ಲದೇ ಟ್ವೈನ್ ಹಗ್ಗ, ಕಾಲೊರಸಿ, ರಗ್ ಮುಂತಾದುವುಗಳನ್ನು ಕೂಡಾ ತಯಾರು ಮಾಡುತ್ತಿದ್ದವು. ಬಾಸೆಲ್ ಮಿಶನ್ ಹಂಚುಗಳಂತೆ, ಮಂಗಳೂರಿನ ನೇಯ್ಗೆ ಕಾರ್ಖಾನೆ ಕೂಡಾ ತನ್ನಲ್ಲಿ ತಯಾರಾಗುವ ಎಲ್ಲಾ ವಸ್ತುಗಳ ಗುಣಮಟ್ಟವನ್ನು ಕಾಯ್ದುಕೊಂಡಿದ್ದು, ಅದಕ್ಕಾಗಿ ಹಲವು ಬೆಳ್ಳಿ ಪದಕಗಳನ್ನು, ಬಂಗಾರದ ಪದಕವನ್ನು ಗಳಿಸಿಕೊಂಡಿದೆ. ಮಂಗಳೂರಿನ ಬಾಸೆಲ್ ಮಿಶನ್ ನೇಯ್ಗೆ ಕಾರ್ಖಾನೆಯಲ್ಲಿ ತಯಾರಾದ ವಸ್ತುಗಳನ್ನು ಇಡೀ ಭಾರತದ ಇತರ ಎಲ್ಲಾ ಪ್ರದೇಶಗಳಿಗೆ ಮಾರಾಟ

ಮಾಡಲಾಗಿದೆ. ಮಾತ್ರವಲ್ಲದೆ ಬರ್ಮ, ದಕ್ಷಿಣ ಆಫ್ರಿಕಾ, ಆಸ್ಟ್ರೇಲಿಯಾ, ಚೀನಾ, ಆಫ್ರಿಕಾದ ಮೊಂಬಾಸ ಮುಂತಾದ ದೇಶಗಳಿಗೆ ರಫ್ತು ಮಾಡಲಾಗಿದೆ.[೭೧]

ಜೋನ್ ಹೇಲರ್ ನೇಯ್ಗೆ ಉದ್ದಿಮೆಯಲ್ಲಿ ಮೊದಲು ಪರಿಚಯಿಸಿದ್ದು ಅತೀ ವೇಗದಿಂದ ಚಲಿಸುವ ಲಾಳಿಯನ್ನು ಅಥವಾ 'ಫ್ಲೈ ಶಟಲ್'. ಹೊಸ ತಂತ್ರಜ್ಞಾನ ಹರಡಿಕೊಂಡಂತೆ ಮಿಶನ್ ಕೈಮಗ್ಗದ ಉತ್ಪಾದನೆ ಗಂಭೀರ ಸ್ಪರ್ಧೆಯನ್ನು ಎದುರಿಸುವಂತಾಗಿದೆ. ಇದರ ಪರಿಣಾಮವಾಗಿ ಮಿಶನಿನ ನೇಯ್ಗೆ ಘಟಕವು ಮಲಬಾರ್ ಕರಾವಳಿಯಲ್ಲಿ 'ಜಾಕ್ವಾರ್ಡ್' ಎಂಬ ಮತ್ತೊಂದು ತಾಂತ್ರಿಕತೆಯನ್ನು ಅಳವಡಿಸಿಕೊಂಡಿತು. ಬಾಸೆಲ್ ಮಿಶನಿನ ನೇಯ್ಗೆ ಚಟುವಟಿಕೆಗಳ ಸಮಗ್ರ ಮಾರುಕಟ್ಟೆ ತಂತ್ರವು, ಇತರ ಸ್ಥಳೀಯ ಉತ್ಪಾದನೆಗಳು ಮತ್ತು ಆಮದು ಇಂಗ್ಲೀಷ್ ಉತ್ಪಾದನೆಗಳ ಸ್ಪರ್ಧೆ ಇಲ್ಲದ ಆಯ್ದ ಪ್ರತ್ಯೇಕ ಮಾರುಕಟ್ಟೆಗೆ ಕೇಂದ್ರೀಕೃತಗೊಂಡಿತ್ತು.[೭೨] ಮ್ಯಾಂಚೆಸ್ಟರ್ ಉತ್ಪನ್ನಗಳ ಆಮದು, ನೇಕಾರರನ್ನು ಅವರ ಅನುವಂಶಿಕ ವೃತ್ತಿಯಿಂದ ದೂರ ಮಾಡಿಲ್ಲ. ಮ್ಯಾಂಚೆಸ್ಟರ್ ಸ್ಪರ್ಧೆಯಿಂದ ಅವರ ಹಣಕಾಸಿನ ಪರಿಸ್ಥಿತಿಗೆ ಗಂಭೀರ ಹಾನಿಯಾಗಿದೆ ಎನ್ನುವುದು ಸಂದೇಹಾಸ್ಪದ. ಆದರೆ ಒಂದಂತೂ ನಿಜ, ಸ್ಪರ್ಧೆಯಿಂದಾಗಿ ಕೆಲಮಟ್ಟಿಗೆ ಬೆಲೆಯೇರಿಕೆಯ ಸಮಯದ ಸಮೃದ್ಧಿಯಲ್ಲಿ ಪಾಲುಗೊಳ್ಳುವುದು ನೇಕಾರರಿಗೆ ತಪ್ಪಿಹೋಗಿದೆ.[೭೩]

ಬಾಸೆಲ್ ಮಿಶನ್ ಉತ್ಪಾದನಾ ಚಟುವಟಿಕೆಗಳ ಒಂದು ನೇರ ಪ್ರಭಾವ ಯಾವುದೆಂದರೆ ಸಾಂಪ್ರದಾಯಿಕ ಕಾರ್ಯಗತಿಗಳ ಸಾಮಾನ್ಯ ನೆಲೆಯ ಅಭಿವೃದ್ಧಿಯಾಗಿದೆ. ಇಲ್ಲಿ ಅನೇಕ ತಾಂತ್ರಿಕ ಬದಲಾವಣೆಗಳನ್ನು ಅಳವಡಿಸಿಕೊಳ್ಳಲಾಗಿದೆ. ಇದರಲ್ಲಿ ಫ್ಲೈ ಶಟಲ್ ಮತ್ತು ಬಣ್ಣ ಹಾಕುವ ತಂತ್ರಜ್ಞಾನದ ಬಳಕೆ, ವಿನ್ಯಾಸಗಳು ಮತ್ತು ಚಿತ್ರಾಕೃತಿಗಳನ್ನು ಮೂಡಿಸುವುದಕ್ಕಾಗಿ ಜಾಕ್ವಾರ್ಡ್ ಮಗ್ಗದ ಬಳಕೆ, ನೂಲು ಸುತ್ತುವಿಕೆ ಮತ್ತು ಹೊಸ ವಸ್ತುಗಳಾದ ಒಳ ಉಡುಪುಗಳಿಗಾಗಿ ಟ್ವಿಲ್ ಹತ್ತಿ, ಸ್ಟಾಕಿನೆಟ್ ವಸ್ತುಗಳ ಉಪಯೊಗ ಇತ್ಯಾದಿ. ಎಲ್ಲಕ್ಕಿಂತ ಹೆಚ್ಚಾಗಿ ಮಾರುಕಟ್ಟೆಗೆ ಹೊಸ ಸರಕುಗಳನ್ನು ಪರಿಚಯಿಸುವ ಅಧಿಕ ಸಾಮರ್ಥ್ಯವನ್ನು ಬಾಸೆಲ್ ಮಿಶನ್ ತೋರಿಸಿದೆ. ಈ ಎಲ್ಲಾ ಉತ್ಪಾದನೆಗಳು ಸಣ್ಣ ಮಾರುಕಟ್ಟೆಗಾಗಿ ಇರುವಂತಹವುಗಳು, ಇವುಗಳಿಗೆ ಸಂಪ್ರದಾಯಸ್ಥ ಉತ್ಪಾದಕರಿಂದಾಗಲೀ ಅಥವಾ ಬ್ರಿಟಿಷ್ ಉತ್ಪನ್ನಗಳಿಂದಾಗಲೀ ಸ್ಪರ್ಧೆ ಇರುತ್ತಿರಲಿಲ್ಲ. ಮಾರುಕಟ್ಟೆ ಮುಖ್ಯವಾಗಿ ಸ್ಥಳೀಯವಾಗಿದ್ದರಿಂದ, ಅದರ ವಿಶಾಲತೆಗೆ ಸಂಬಂಧಿಸಿದಂತೆ ಕಾರ್ಮಿಕ ತಜ್ಞತೆಯು ಸೀಮಿತವಾಗಿತ್ತು. ಬಾಸೆಲ್ ಮಿಶನ್ ಪ್ರಾರಂಭಿಸಿದ ಕಾರ್ಖಾನೆಯ ಕಾರ್ಯಗತಿಯಲ್ಲಿ ಇನ್ನೂ ಹೆಚ್ಚಿನ ಕಾರ್ಮಿಕ ತಜ್ಞತೆಯನ್ನು ತೊಡಗಿಸಿಕೊಳ್ಳಲಾಗಿದೆ. ಆದುದರಿಂದ ಕೈಗಾರಿಕಾ ಚಟುವಟಿಕೆಯಲ್ಲಿ ಬಾಸೆಲ್ ಮಿಶನಿನ ಪ್ರವೇಶವು ಉತ್ಪಾದನಾ ಕಾರ್ಯಗತಿಯಲ್ಲಿ ಮಾತ್ರವಲ್ಲ ಕಾರ್ಮಿಕ ಕಾರ್ಯಗತಿಯಲ್ಲಿ ಕೂಡಾ ತಾಂತ್ರಿಕ ಉನ್ನತೀಕರಣವನ್ನು

ಸಾಧಿಸಿದೆ. ಮಿಶನರಿ ಮೂಲಗಳು ಹೇಳುವ ಪ್ರಕಾರ, ಅವರ ಕೈಗಾರಿಕೆಗಳು ಸಾಂಪ್ರದಾಯಿಕ ನೇಕಾರರ ಸ್ಪರ್ಧೆಯಿಂದ ಭಾದಿತವಾಗದ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಆದರೆ ನೇಯ್ದ ವಸ್ತುಗಳ ಒಟ್ಟು ಬೇಡಿಕೆಯ ಮೇಲಿನ ಸಮಗ್ರ ಪರಿಣಾಮವು ಸಂಪ್ರದಾಯಸ್ಥ ನೇಕಾರರನ್ನು ತೊಂದರೆಗೆ ಸಿಲುಕಿಸಿದೆ. ಪ್ರಾರಂಭದಲ್ಲಿ ಬಾಸೆಲ್ ಮಿಶನ್ ಉದ್ಯಮಗಳ ಉತ್ಪಾದನೆಯ ಗುರಿ ರಫ್ತು ಮಾರುಕಟ್ಟೆಯಾಗಿತ್ತು. ಆದರೆ ಸ್ಥಳೀಯವಾಗಿ ಅವರು ಬಹಳ ಯಶಸ್ವಿಯಾಗಿ ಮಾರಾಟ ಮಾಡಿದ್ದು ಒರೆಸುಬಟ್ಟೆಗಳನ್ನು ಅಥವಾ ಟವೆಲ್ಸ್. ಅದೇ ಕಾರಣಕ್ಕಾಗಿ ಮಿಶನನ್ನು ಬೇರೆ ಮಿಶನ್‌ಗಳು 'ಟವೆಲ್ ಮಿಶನ್' ಎಂದು ಗೇಲಿ ಮಾಡಿದ್ದುಂಟು. ಸ್ಥಳೀಯವಾಗಿ ತಯಾರಾಗುತ್ತಿದ್ದ 'ಥುವಾರ್ತ್" (ಟುವಾಲು) ಜೊತೆ ಮಿಶನ್ನಿನ ಉತ್ಪಾದನೆ (ಟವೆಲು)ಬಹಳ ಯಶಸ್ವಿಯಾಗಿ ಸ್ಪರ್ಧಿಸಿದೆ. ಇದು ಸಾಂಪ್ರದಾಯಿಕ ನೇಕಾರರ ಉತ್ಪಾದನೆಗಳ ಮಾರಾಟದ ಮೇಲೆ ಪರಿಣಾಮ ಬೀರಿರಬಹುದು.[೭೪]

ಬಾಸೆಲ್ ಮಿಶನ್ ಉದ್ಯಮಗಳು ಸಾಂಪ್ರದಾಯಿಕ ಉದ್ಯಮಗಳಿಂದ ಒಂದು ವಿಶಿಷ್ಟ ವಿಚಾರದಲ್ಲಿ ಭಿನ್ನವಾಗಿತ್ತು. ಅದೇನೆಂದರೆ, ಈ ಉದ್ಯಮಗಳು ಪೂರೈಸುತ್ತಿದ್ದ ಬೇಡಿಕೆಯ ಸ್ವರೂಪ ಸಾಂಪ್ರದಾಯಿಕ ಉದ್ಯಮಗಳಿಗೆ ಇದ್ದ ಬೇಡಿಕೆಯು ಆಯಾ ಪ್ರದೇಶಗಳಿಗೆ ಸೀಮಿತವಾದುದು. ಸಾಂಪ್ರದಾಯಿಕ ಉದ್ಯಮಗಳು ಮಾರುಕಟ್ಟೆಯ ಮಿತಿಗಳಿಂದಾಗಿ ತಾಂತ್ರಿಕವಾಗಿ ಕೆಳದರ್ಜೆಯ ತಳಹದಿಯ ಮೇಲೆ ಕಾರ್ಯವನ್ನು ನಿರ್ವಹಿಸುತ್ತವೆ. ಬಾಸೆಲ್ ಮಿಶನಿನ ಕೈಗಾರಿಕಾ ಚಟುವಟಿಕೆ ಈ ಮೇಲಿನ ಸಂಬಂಧಗಳಲ್ಲಿ ಹೊಸ ವಿಚಾರವನ್ನು ಅಳವಡಿಸಿಕೊಂಡಿತು. ನೇಯ್ಗೆ ಉದ್ಯಮದ ಉತ್ಪನ್ನಗಳನ್ನು ಹತ್ತಿರದ ಪ್ರದೇಶಗಳಲ್ಲಿ ಮಾರಾಟ ಮಾಡುವ ಪ್ರಯತ್ನವನ್ನು ನಡೆಸಿದ ಬಳಿಕ, ತಮ್ಮ ನೇಯ್ಗೆ ಘಟಕಗಳನ್ನು ಮುಂದುವರಿಸಿಕೊಂಡು ಹೋಗಲು ಇನ್ನೂ ವಿಶಾಲವಾದ ಮಾರುಕಟ್ಟೆಯ ಅಗತ್ಯವಿದೆ ಎಂದು ಬಾಸೆಲ್ ಮಿಶನರಿಗಳು ಮನಗಂಡರು. ದಕ್ಷಿಣ ಕನ್ನಡದ ಜನರ ಉಡುಪಿನ ಅಗತ್ಯಗಳು ಸ್ಥಳೀಯ ನೇಕಾರರು ತಯಾರಿಸುತ್ತಿದ್ದ ಬಿಳಿ ಉಡುಪುಗಳಿಗೆ ಸೀಮಿತವಾಗಿದ್ದವು. ಕುಲೀನ ವರ್ಗದ ಜನರು ಲಾಂಕಶೈರ್‌ನಿಂದ ಆಮದಾಗುತ್ತಿದ್ದ ಮಲ್ ಬಟ್ಟೆಯನ್ನು ಧರಿಸುತ್ತಿದ್ದರು. ಈ ಯಾವುದೇ ಉತ್ಪನ್ನಗಳನ್ನು ಬಾಸೆಲ್ ಮಿಶನ್ ತಯಾರಿಸುತ್ತಿರಲಿಲ್ಲ. ಅದು ತನ್ನ ನೇಯ್ಗೆ ಉದ್ಯಮದಲ್ಲಿ ಬಳಸುತ್ತಿದ್ದ ನೂಲು ಕೂಡಾ ಹೊರದೇಶದಿಂದ ಆಮದಾಗಿದೆ. ಆದುದರಿಂದ, ಬಾಸೆಲ್ ಮಿಶನಿನ ನೇಯ್ಗೆ ಉದ್ಯಮ ಮತ್ತು ಸಾಂಪ್ರದಾಯಿಕ ನೇಯ್ಗೆ ಉದ್ಯಮದಲ್ಲಿ ಸಮಾನವಾಗಿದ್ದ ಅಂಶವೆಂದರೆ ಕಾರ್ಮಿಕ ಪ್ರಮಾಣವಾಗಿದೆ. ಬಾಸೆಲ್ ಮಿಶನ್ ಸ್ಥಾಪಿಸಿದ ಆಧುನಿಕ ಕೈಗಾರಿಕಾ ಘಟಕಗಳು ಅಂತರಾಷ್ಟ್ರೀಯ ಬೇಡಿಕೆಗಳನ್ನು ಪೂರೈಸಿವೆ. ಉತ್ಪನ್ನಗಳ ವಿಶೇಷತೆ ಮತ್ತು ನಿರಂತರ ತಾಂತ್ರಿಕ ಸುಧಾರಣೆಗಳ ಮೂಲಕ ಅತ್ಯಂತ ಸ್ಪರ್ಧಾತ್ಮಕವಾಗಿದ್ದ ಅಂತರರಾಷ್ಟ್ರೀಯ ಮಾರುಕಟ್ಟೆಯೊಂದಿಗೆ ವ್ಯವಹಾರ ನಡೆಸುವುದು ಬಾಸೆಲ್ ಮಿಶನ್‌ಗೆ ಸಾಧ್ಯವಾಗಿದೆ. ಬಾಸೆಲ್ ಮಿಶನ್

ಉದ್ಯಮಗಳ ಅತ್ಯಂತ ಮುಖ್ಯ ಪ್ರಭಾವವೆಂದರೆ, ಅದು ದೇಶದೊಳಗೆ ಮತ್ತು ದೇಶದ ಹೊರಗೆ ಮಾರುಕಟ್ಟೆ ದಾರಿಯನ್ನು ಸ್ಥಾಪಿಸಿಕೊಂಡಿತ್ತು. ದೇಶದ ಒಳಗೆ ಅವರ ನೇಯ್ಗೆ ಉದ್ಯಮಗಳ ಉತ್ಪನ್ನಗಳಿಗೆ ಬೇಡಿಕೆ ಇದ್ದುದು ಮುಖ್ಯವಾಗಿ ಭಾರತದಲ್ಲಿ ನೆಲೆಸಿದ ಯೂರೋಪಿನ ಜನರಿಂದ ಮತ್ತು ಯೂರೋಪಿನ ಜನರನ್ನು ಉಡುಪು ಮತ್ತು ನಡವಳಿಕೆಗಳಿಂದ ಅನುಸರಿಸುತ್ತಿದ್ದ, ಅದೇ ತಾನೇ ನಗರದಲ್ಲಿ ತಲೆಯೆತ್ತುತ್ತಿದ್ದ ಮಧ್ಯಮ ವರ್ಗದವರಿಂದ.[೭೫]

ನೇಯ್ಗೆ ಉದ್ಯಮ ಉತ್ತಮ ಸ್ಥಿತಿಯಲ್ಲಿದ್ದು ಪುರುಷರಿಗೆ ಮತ್ತು ಮಹಿಳೆಯರಿಗೆ ಜೀವನಾಧಾರವನ್ನು ಒದಗಿಸಿದೆ. ಉದ್ಯಮದಲ್ಲಿ ಸಂಪಾದಿಸಿದ ಹಣದಿಂದ ಮಿಶನ್ ಕ್ರೈಸ್ತರು ತಮ್ಮ ನೆಮ್ಮದಿಯ ಮನೆಗಳನ್ನು ನಿರ್ಮಿಸಲು ಸಾಧ್ಯವಾಗಿದೆ. ನೇಯ್ಗೆ ಉದ್ಯಮದಲ್ಲಿ ಕೈ ತುಂಬಾ ಕೆಲಸ ಇರುವುದರಿಂದ ಸರಿಯಾದ ಸಮಯಕ್ಕೆ ಪೂರೈಸಲಾಗದ ಸಮಸ್ಯೆ ಎದುರಾಗಿದೆ. ಹೀಗಾಗಿ ಕೆಲವು ಕ್ರೈಸ್ತೇತರ ನೇಕಾರರನ್ನು ಮಿಶನ್ ಸಂಸ್ಥೆಯಲ್ಲಿ ಕೆಲಸಕ್ಕೆ ತೆಗೆದುಕೊಳ್ಳುವ ಬಗ್ಗೆ ಚಿಂತನೆ ನಡೆದಿದ್ದರೂ, ಕ್ರೈಸ್ತ ಪ್ರಭಾವದ ಹೆದರಿಕೆಯಿಂದಾಗಿ ಅವರು ಹಿಂದೇಟು ಹಾಕುವಂತೆ ಮಾಡಿದೆ.[೭೬] ಕಥೋಲಿಕ ಕ್ರೈಸ್ತರು ನೇಯ್ಗೆ ಉದ್ಯಮದಲ್ಲಿ ಪ್ರವೇಶ ಪಡೆದದ್ದು ೧೯ನೇ ಶತಮಾನದ ಕೊನೆಯ ಭಾಗದಲ್ಲಿ. ನೇಯ್ಗೆ ಉದ್ಯಮವು ಕಾರ್ಮಿಕರನ್ನು ಒಳಗೊಳ್ಳುವುದರಿಂದ ಇದು ಕ್ರೈಸ್ತ ಸಮುದಾಯದ ಬಡವರ್ಗಗಳಿಗೆ ಉದ್ಯೋಗವನ್ನು ಕಲ್ಪಿಸಿಕೊಟ್ಟಿದೆ. ೧೯೪೪ರಲ್ಲಿ ನೇಯ್ಗೆ ಸಂಸ್ಥೆಗಳಲ್ಲಿದ್ದ ಕಥೋಲಿಕ ಕ್ರೈಸ್ತ ಕಾರ್ಮಿಕರ ಸಂಖ್ಯೆ ೧೦೦೦ ವೆಂದು ಅಂದಾಜಿಸಲಾಗಿದೆ. ಈ ರೀತಿಯ ಮಗ್ಗಗಳು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕೂಡಾ ಕಾರ್ಯನಿರ್ವಹಿಸುತ್ತಿದ್ದವು.

## ೫.೬. ಹಂಚಿನ ಕಾರ್ಖಾನೆ

ಕರಾವಳಿ ಪ್ರದೇಶದಲ್ಲಿ ಮನೆಗಳ ಮೇಲ್ಛಾವಣಿಗಳಿಗೆ ಹೊದಿಸಲು ಬಹಳ ಹಿಂದಿನಿಂದಲೇ ಆವೆ ಮಣ್ಣಿನಿಂದ ತಯಾರಿಸಲಾದ ಹಂಚುಗಳನ್ನು ಉಪಯೋಗಿಸುತ್ತಿದ್ದರು. ಈ ಹಂಚುಗಳನ್ನು 'ನಾಡ ಹಂಚು'ಗಳೆಂದು ಕರೆಯುತ್ತಾರೆ. ೧೮೬೫ರಲ್ಲಿ 'ಮಂಗಳೂರು ಹಂಚು'ಗಳ ಉತ್ಪಾದನೆ ಪ್ರಾರಂಭವಾದ ನಂತರ ದಕ್ಷಿಣ ಕನ್ನಡದಲ್ಲಿ ನಾಡ ಹಂಚಿನ ಬಳಕೆ ನಿಂತುಹೋಗಿದ್ದು, ಮೈಸೂರು, ಮಂಡ್ಯ, ತುಮಕೂರು ಮತ್ತು ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಇಂದು ಕೂಡಾ ನಾಡ ಹಂಚುಗಳನ್ನು ಉಪಯೋಗಿಸುತ್ತಿದ್ದಾರೆ. ೧೫೧೦-೧೫೩೧ರ ಮಧ್ಯೆ ಮಲಬಾರ್ ಕರಾವಳಿ ತೀರಕ್ಕೆ ಬಂದ ಪೋರ್ಚುಗಿಸ್ ಪ್ರವಾಸಿಗ ಡ್ಯೂರೆಟ್ ಬರ್ಬೋಸಾ, ಭಾರತದ ಪಶ್ಚಿಮ ಕರಾವಳಿ ತೀರದಲ್ಲಿದ್ದ ಕುಂಬಾರರು, ಕುಂಬಾರ ಕಲೆ ಮತ್ತು ಹಂಚುಗಳ ಬಗ್ಗೆ ಈ ಕೆಳಗಿನ ವಿವರಣೆ ನೀಡಿದ್ದಾರೆ: 'ಆವೆ ಮಣ್ಣನ್ನು ಸುಡುವುದು ಮತ್ತು ಹಂಚು ತಯಾರಿಸುವುದು

ಇಲ್ಲಿಯ ಜನರ ಮುಖ್ಯ ಉದ್ಯೋಗ. ಮನೆಯ ಮೇಲ್ಛಾವಣಿ, ದೇವಾಲಯಗಳು ಮತ್ತು ರಾಜಮನೆತನಕ್ಕೆ ಸಂಬಂಧಪಟ್ಟ ಕಟ್ಟಡಗಳ ಮೇಲ್ಛಾವಣಿಗೆ ಹೊದಿಸಲು ಅವರು ಹಂಚನ್ನು ಉಪಯೋಗಿಸುತ್ತಿದ್ದರು. ಆದರೆ ಸಾಮಾನ್ಯ ಜನರು ತಮ್ಮ ಮನೆಗಳ ಮೇಲ್ಛಾವಣಿಗೆ ಎಲೆ ಅಥವಾ ಹುಲ್ಲನ್ನು ಹೊರತು ಬೇರೆ ಯಾವುದೇ ವಸ್ತುಗಳನ್ನು ಬಳಸಬಾರದು ಎಂಬುದು ಆಗಿನ ಸಾಮಾನ್ಯ ಕಾನೂನಾಗಿತ್ತು ಎಂದು ಅವರು ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ. ಅಂದರೆ ಅರಮನೆ ಮತ್ತು ಹಣವಂತರು ಮಾತ್ರ ಹಂಚನ್ನು ಉಪಯೋಗಿಸುತ್ತಿದ್ದರು. ಆದರೆ ಬಡವರು ಮತ್ತು ಸಮಾಜದ ಶೋಷಿತವರ್ಗ ಹಂಚನ್ನು ಬಳಸದಂತೆ ಅವರ ಮೇಲೆ ಅಲಿಖಿತ ಕಾನೂನು (ಸಂಪ್ರದಾಯ) ಜಾರಿಯಲ್ಲಿತ್ತೆಂದು ಇದರಿಂದ ತಿಳಿದುಬರುತ್ತದೆ. ಒಬ್ಬಾತನು ಹಂಚಿನ ಮನೆಯನ್ನು ಹೊಂದಿರುವುದು, ಸಮಾಜದಲ್ಲಿ ಆತನ ಸ್ಥಾನಮಾನವನ್ನು ನಿರ್ಧರಿಸುವ ಅಳತೆ ಗೋಲಾಗಿತ್ತು, ಎಂಬ ಸ್ಪಷ್ಟ ತೀರ್ಮಾನಕ್ಕೆ ಬರಲು ಬರ್ಬೋಸನ ಈ ಮೇಲಿನ ಹೇಳಿಕೆಯು ಒಂದು ಉತ್ತಮ ಆಧಾರವಾಗಿದೆ. ೧೯ನೇ ಶತಮಾನದ ತನಕ ಕರಾವಳಿ ತೀರದಲ್ಲಿ ಇದೇ ಪರಿಸ್ಥಿತಿ ಮುಂದುವರಿದಿದೆ. ೧೯ನೇ ಶತಮಾನದಲ್ಲಿ ಸಾರ್ವಜನಿಕ ಕಟ್ಟಡ, ರೈಲ್ವೆ ನಿಲ್ದಾಣಗಳು ಇತ್ಯಾದಿ ಕಟ್ಟಲು ಪ್ರಾರಂಭಿಸಿದಾಗ ಹೆಚ್ಚಿನ ಹಂಚು ಪೂರೈಕೆಗಾಗಿ ಕಾದುಕೊಂಡಿದ್ದ ಸಿದ್ಧ ಮಾರುಕಟ್ಟೆಯಿತ್ತು. ಆದರೆ ನಾಡ ಹಂಚಿನ ಉತ್ಪಾದನೆಯಲ್ಲಿ ತೊಡಗಿದ್ದವರಿಗೆ ಈ ಹೊಸ ಬೇಡಿಕೆಯನ್ನು ಪೂರೈಸಲು ಸಾಧ್ಯವಾಗಲಿಲ್ಲ. ಅಂತಹ ಸಂದರ್ಭದಲ್ಲಿ ಬಾಸೆಲ್ ಮಿಶನ್, ಯಂತ್ರದ ಮೂಲಕ ತಯಾರಿಸಿದ ತನ್ನ ಹಂಚನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಿತು. [೭೭]

ಹಂಚು ತಯಾರಿಕೆಯ ಚಟುವಟಿಕೆ ಸಾಂದ್ರಗೊಳ್ಳುವುದರಲ್ಲಿ, ಅದರಲ್ಲಿಯೂ ದಕ್ಷಿಣ ಕನ್ನಡದಲ್ಲಿ ಪ್ರಭಾವ ಬೀರಿದ ಅತ್ಯಂತ ಮುಖ್ಯ ವಾಸ್ತವಾಂಶವೆಂದರೆ ನದಿ ದಡಗಳಿಗೆ ಸಮೀಪವಿರುವ ಜಮೀನಿನಲ್ಲಿ ಲಭ್ಯವಾಗುತ್ತಿದ್ದ ಉತ್ತಮ ಗುಣಮಟ್ಟದ ಆವೆಮಣ್ಣು. ಜಿಲ್ಲೆಯ ಪ್ರಮುಖ ಉದ್ಯೋಗವು ಕೃಷಿಯಾಗಿರುವುದರಿಂದ, ಬೇಸಿಗೆ ಋತುವಿನಲ್ಲಿ ಕೃಷಿ ಭೂಮಿಯನ್ನು ಸಾಗುವಳಿ ಮಾಡದೆ ಖಾಲಿ ಬಿಡಲಾಗುತ್ತಿತ್ತು ಮತ್ತು ಹಂಚು ತಯಾರಿಕೆಗೆ ಬೇಸಿಗೆಯು ಸಕಾಲವಾಗಿದೆ. ಇದಕ್ಕನುಗುಣವಾಗಿ ಹಂಚು ತಯಾರಿಕೆಯು ಋತುಮಾನಕ್ಕೆ ಅನುಗುಣವಾದ ಉದ್ಯೋಗವಾಗಿದೆ. ಬಹುತೇಕ ಕೃಷಿ ಕಾರ್ಮಿಕರ ಕುಟುಂಬಗಳು, ಅದರಲ್ಲಿ ನಿರ್ದಿಷ್ಟವಾಗಿ ಕುಂಬಾರರು ಹಂಚು ತಯಾರಿಕೆಯ ಕಾರ್ಯದಲ್ಲಿ ತೊಡಗಿಕೊಳ್ಳುತ್ತಿದ್ದರು. ಯಾಕೆಂದರೆ ಬೇಸಿಗೆಯಲ್ಲಿ ಅವರಿಗೆ ಕೃಷಿ ಕಾರ್ಯಗಳು ಇರುತ್ತಿರಲಿಲ್ಲ. ಕರಾವಳಿ ಪ್ರದೇಶದಲ್ಲಿ ಕಟ್ಟಡ ನಿರ್ಮಾಣ ಕಾರ್ಯವನ್ನು ಬೇಸಿಗೆಯಲ್ಲಿ ಕೈಗೊಳ್ಳಲಾಗುತ್ತದೆ. ಹೀಗಾಗಿ ಈ ಋತುವಿನಲ್ಲಿ ಹಂಚುಗಳಿಗೆ ಹೆಚ್ಚಿನ ಬೇಡಿಕೆ ಇರುತ್ತದೆ. ಹಿಂದಿನ ಕಾಲದಲ್ಲಿ ಹಂಚು ತಯಾರಿಕೆ ಗುಡಿ ಕೈಗಾರಿಕೆಯಾಗಿದ್ದಾಗ, ಉತ್ತಮ ರಸ್ತೆಗಳು ಮತ್ತು ಸಾರಿಗೆ ಸೌಲಭ್ಯಗಳು ಲಭ್ಯವಿರಲಿಲ್ಲ. ಸ್ಥಳೀಯ ಸಾರಿಗೆಯ ವಿಧಾನಗಳೆಂದರೆ ಎತ್ತಿನ ಗಾಡಿಗಳು ಮತ್ತು ತೀರಾ ಸಣ್ಣ ಅಂತರಗಳಿಗೆ ಸಾಮಾನ್ಯವಾಗಿ ಸಾರಿಗೆ

ಸಾಧನವಾಗಿ ಬಳಕೆಯಾಗುತ್ತಿದ್ದುದು ಸ್ಥಳೀಯ ದೋಣಿಗಳು. ಗುಡಿ ಕೈಗಾರಿಕೆಯ ಬಹುಪಾಲು ಹಂಚು ತಯಾರಿಕಾ ಘಟಕಗಳು ಇದ್ದುದು ನದಿ ದಡದಲ್ಲಿ. ಯಾಕೆಂದರೆ  ಅವರಿಗೆ ಕಚ್ಚಾ ಸಾಮಾಗ್ರಿಗಳನ್ನು ಉತ್ಪಾದನಾ ಕೇಂದ್ರಗಳಿಗೆ ಸಾಗಿಸುವುದು, ಮತ್ತು ತಯಾರಾದ ವಸ್ತುಗಳನ್ನು ಹತ್ತಿರದ ಪ್ರದೇಶಗಳಿಗೆ ಸಾಗಿಸುವುದು ನದಿಗಳಮೇಲೆ ಚಲಿಸುವ ಸ್ಥಳೀಯ ದೋಣಿಗಳಿಂದ ಸುಲಭವಾಗುತ್ತಿತ್ತು.[೬೮]

ಪ್ರಾರಂಭದಲ್ಲಿ ಬಾಸೆಲ್ ಮಿಶನ್ ಸಂಘಟಿಸಿದ ಹಂಚು ತಯಾರಿಕಾ ಘಟಕಗಳಲ್ಲಿ ಹಂಚುಗಳನ್ನು ಸಂಪೂರ್ಣವಾಗಿ ಕೈಯಿಂದಲೇ ತಯಾರಿಸಲಾಗಿದೆ. ಕಾಲಾನುಕ್ರಮದಲ್ಲಿ ಗೃಹಪದ್ಧತಿಯಾಗಿದ್ದ ಹಂಚು ಉತ್ಪಾದನೆಯು ಕಾರ್ಖಾನೆ ವ್ಯವಸ್ಥೆಯಾಗಿ ಸಂಘಟಿತವಾಯಿತು. ಹಂಚಿನ ಉದ್ದಿಮೆಯನ್ನು ಸಂಘಟಿತ ಕಾರ್ಖಾನೆಯ ಉತ್ಪಾದನಾ ವ್ಯವಸ್ಥೆಯಾಗಿ ಬೆಳೆಸಿದ ಕೀರ್ತಿ ಬಾಸೆಲ್ ಮಿಶನ್ನಿಗೆ ಸಲ್ಲುತ್ತದೆ. ಸಣ್ಣ ಘಟಕಗಳಲ್ಲಿ ಕೆಲಸ ಮಾಡುತ್ತಿದ್ದ ಎಲ್ಲಾ ಕಾರ್ಮಿಕರು, ಮಿಶನ್ ಕ್ರೈಸ್ತರು ಮತ್ತು ಮಿಶನ್ನಿಗೆ ನಿಷ್ಠಾವಂತರಾಗಿದ್ದರಿಂದ, ಗುಡಿ ಕೈಗಾರಿಕಾ ವ್ಯವಸ್ಥೆಯಿಂದ ಸುಸಂಘಟಿತ ಕಾರ್ಖಾನೆ ವ್ಯವಸ್ಥೆಗೆ ನಡೆದ ಪರಿವರ್ತನೆಗೆ ಕಾರ್ಮಿಕರು ಪ್ರತಿರೋಧವನ್ನು ತೋರಲಿಲ್ಲ.  ಹಂಚು ತಯಾರಿಕೆಯನ್ನು ಸಂಘಟಿಸಿ ಕಾರ್ಖಾನೆ ವ್ಯವಸ್ಥೆಯ ಸಂಸ್ಥೆಯನ್ನಾಗಿ ಮಾಡಿದ ಕೀರ್ತಿ ವೈಯಕ್ತಿಕವಾಗಿ ಬಾಸೆಲ್ ಮಿಶನ್ನಿನ ಉದ್ಯೋಗಿಯಾಗಿದ್ದ  ಜಾರ್ಜ್ ಆ್ಯಂಡ್ರ್ಯೂ ಪ್ಲೆಬ್ಸ್‌ಗೆ ಸಲ್ಲುತ್ತದೆ.[೬೯]

'ಎಲ್ಲಾ ವಿಧದ ವ್ಯವಹಾರಗಳ ಪರಿಣತ' ರೆಂದು ಬಣ್ಣಿಸಲಾದ ಪ್ಲೆಬ್ಸ್, ವಿಶ್ರಾಂತಿ ರಜೆಯಲ್ಲಿ ಮನೆಗೆ ಹೋಗಿದ್ದಾಗ ಅಲಸ್ಸಾದ ಜನಪ್ರಿಯ ಗಿಲ್ಲರ್ಡೋನಿಯಿಂದ ಪ್ರಥಮ ಬಾರಿ ತಯಾರಿಸಲಾದ ಛಾವಣಿಗೆ ಉಪಯೋಗಿಸುವ ಹೆಂಚುಗಳನ್ನು ಕಂಡರು. ಅದು ಭಾರತಕ್ಕೆ ಅತ್ಯಂತ ಸೂಕ್ತ ವಸ್ತುವಾಗಬಲ್ಲದು ಎಂದು ಅವರ ಮನಸ್ಸಿಗೆ ಹೊಳೆಯಿತು. ಅವರು ಭಾರತಕ್ಕೆ ಮರಳಿ ಬರುವಾಗ ಅಚ್ಚುಗಳನ್ನು ಮತ್ತು ಒತ್ತು ಗುಂಡಿಯನ್ನು ತೆಗೆದುಕೊಂಡು ಬಂದರು. ಜುಲೈ ೧೮೬೫ರಲ್ಲಿ ಪ್ರಥಮ ಬಾರಿಗೆ ಮಿಶನ್, ಛಾವಣಿಯ ಹೆಂಚುಗಳನ್ನು ಬಲ್ಮಠದಲ್ಲಿ ತಯಾರಿಸಿತು. ನಂತರ ಹೆಂಚು ತಯಾರಿಕೆಯನ್ನು ಜೆಪ್ಪುವಿಗೆ ವರ್ಗಾಯಿಸಲಾಗಿದೆ. ಹೀಗೆ, ಕೇವಲ ೧೨ ಮಂದಿ ಕಾರ್ಮಿಕರೊಂದಿಗೆ  ೧೮೬೫ರಲ್ಲಿ ಪ್ರಾರಂಭವಾದ ಆ ಕಾರ್ಖಾನೆಯಲ್ಲಿ ೧೯೨೭ರಲ್ಲಿ ೫೦೦ ಕಾರ್ಮಿಕರಿದ್ದರು.[೭೦] ಇದರಿಂದ ಮುಖ್ಯವಾಗಿ ತಿಳಿಯುವ ಅಂಶವೇನೆಂದರೆ, ೧೯ನೇ ಶತಮಾನದ ಉತ್ತರಾರ್ಧದಲ್ಲಿ ಹಂಚಿಗೆ ಅಧಿಕ ಬೇಡಿಕೆ ಇತ್ತು ಮತ್ತು ಬಾಸೆಲ್ ಮಿಶನ್ ಹಂಚಿನ ಉದ್ಯಮ, ಆಧುನಿಕ ತಂತ್ರಜ್ಞಾನ ಬಳಸಿ ಅದನ್ನು ಪೂರೈಸಲು ಎಲ್ಲಾ ರೀತಿಯ ಪ್ರಯತ್ನ ಮಾಡಿದೆ ಎಂಬುದು. ಅಲ್ಲದೆ ಮಂಗಳೂರಿನ ಕುದ್ರೋಳಿ ಎಂಬಲ್ಲಿ ಇನ್ನೊಂದು ಹಂಚಿನ ಕಾರ್ಖಾನೆಯನ್ನು ೧೮೮೨ರಲ್ಲಿಯೂ, ಅಲ್ಲದೆ ಉಡುಪಿಯ ಬಳಿ ಮಲ್ಪೆ ಎಂಬಲ್ಲಿ ೧೮೮೬ರಲ್ಲಿ ಬಾಸೆಲ್ ಮಿಶನಿನ ಮೂರನೇ ಹಂಚಿನ ಕಾರ್ಖಾನೆಯನ್ನು ಪ್ರಾರಂಭಿಸಲಾಗಿದೆ.[೭೧] ಪ್ಲೆಬ್ಸ್‌ರವರ ಯಶಸ್ಸು

ಹೊರಗಿನವರ ಗಮನಕ್ಕೆ ಬಂದದ್ದರಿಂದ, "ಹಂಚು ತಯಾರಿಕಾ ಘಟಕಗಳು ಮಂಗಳೂರಿನಲ್ಲಿ ಮತ್ತು ಅದರ ಸುತ್ತಮುತ್ತ ಅಣಬೆಯಂತೆ ತಲೆಯೆತ್ತಿವೆ"[೮೨] ಎಂಬುದಾಗಿ ೧೮೫೭ರ ವರದಿಯು ಬಾಸೆಲ್ ಮಿಶನ್ ಹಂಚಿನ ಉದ್ಯಮದ ಪ್ರಭಾವವನ್ನು ಕುರಿತು ಉಲ್ಲೇಖಿಸಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಂಚಿನ ಉದ್ಯಮಕ್ಕೆ ಅವಶ್ಯವಿರುವ ಉತ್ತಮ ಆವೆಮಣ್ಣು, ಉರುವಲು ಕಟ್ಟಿಗೆ ಮತ್ತು ಅಗ್ಗದ ಕೂಲಿ ಲಭ್ಯವಿರುವುದರಿಂದ ಹಂಚಿನ ಉದ್ದಿಮೆ ಲಾಭದಾಯಕವಾಗಿ ಬೆಳೆದು ಅಂತರರಾಷ್ಟ್ರೀಯ ಮಾರುಕಟ್ಟೆಯನ್ನು ಪ್ರವೇಶಿಸಿದೆ. ದಕ್ಷಿಣ ಕನ್ನಡದ ಹಂಚುಗಳನ್ನು ಕುರಿತು 'ಮಂಗಳೂರು ಜಗತ್ತಿಗೇ ಛಾವಣಿಯನ್ನು ಒದಗಿಸುತ್ತದೆ' ಎಂಬ ಅಭಿಪ್ರಾಯ ಉಂಟಾಗಿದೆ. ೧೮೬೫ರಲ್ಲಿ ಆರಂಭಗೊಂಡ ಹಂಚಿನ ಉದ್ಯಮ, ೧೮೮೫ರಲ್ಲಿ ೧೧ ಕಾರ್ಖಾನೆಗಳನ್ನು ಹೊಂದಿ ೧೯೨೯ರಲ್ಲಿ ೪೦ ಕಾರ್ಖಾನೆಗಳು ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಕಾರ್ಖಾನೆಗಳ ಒಳಗೆ ಸುಮಾರು ೪೦೦೦ ಕಾರ್ಮಿಕರು ದುಡಿಯುತ್ತಿದ್ದರೆ, ಹಂಚು ಉದ್ದಿಮೆಯೊಂದನ್ನೇ ಆಧರಿಸಿದವರ ಸಂಖ್ಯೆ ಸುಮಾರು ೨೫,೦೦೦ ದಷ್ಟಾಗುತ್ತದೆ.[೮೩] ಎರಡನೇ ಮಹಾಯುದ್ಧದ ಬಳಿಕ ೧೯೪೮ರಲ್ಲಿ ಜಿಲ್ಲೆಯಲ್ಲಿ ಒಟ್ಟು ೩೫ ಹಂಚಿನ ಕಾರ್ಖಾನೆಗಳು ಕಾರ್ಯಾಚರಿಸುತ್ತಿದ್ದು, ಬಾಂಬ್ ದಾಳಿಯಿಂದ ಧ್ವಂಸಗೊಂಡಿರುವ ಬರ್ಮಾ, ಮಲಯ, ಸಿಂಗಾಪುರ ಮತ್ತು ಹಾಂಗ್‌ಕಾಂಗ್ ಮುಂತಾದ ದೇಶಗಳಿಗೆ ಮಾತ್ರವಲ್ಲದೆ ಶ್ರೀಲಂಕಾಮತ್ತು ಪೂರ್ವ ಆಫ್ರಿಕಾದ ದೇಶಗಳಿಗೂ ಹಂಚುಗಳನ್ನು ರಫ್ತು ಮಾಡುತ್ತಿವೆ.[೮೪]

ಹಂಚಿನ ಕಾರ್ಖಾನೆಗಳು ಹೆಚ್ಚಾಗಿ ಕುಶಲಿಗಳಲ್ಲದ ಕಾರ್ಮಿಕರನ್ನೇ ಕೆಲಸಕ್ಕೆ ತೆಗೆದುಕೊಂಡಿವೆ. ಇದರಿಂದ ಮಿಶನ್ ಕುಶಲಕರ್ಮಿಗಳಿಗೆ ತರಬೇತಿ ನೀಡುವುದೆಂಬ ಮಾತನ್ನು ತಳ್ಳಿ ಹಾಕಿದಂತಾಗಿದೆ. ದೊಡ್ಡ ಕಾರ್ಖಾನೆಗಳು ಶ್ರಮಜೀವಿಗಳನ್ನು ಹುಟ್ಟಿಸುತ್ತವೆ ಎಂಬ ಭಾವನೆ ವ್ಯಾಪಾರಿ ಸಹೋದರರಲ್ಲಿ ಒಬ್ಬರದಾಗಿತ್ತು. ಇದರೊಂದಿಗೆ ಹಂಚಿನ ಕೆಲಸಗಳಲ್ಲಿ ಹಿಂದೂ, ಮುಸ್ಲಿಂ ಅಥವಾ ಕ್ರೈಸ್ತರನ್ನೇ ಹೆಚ್ಚಾಗಿ ಕೆಲಸಕ್ಕೆ ತೆಗೆದುಕೊಳ್ಳಲಾಗುತ್ತಿತ್ತೇ ವಿನಹ ಸಭೆಯ ಸದಸ್ಯರುಗಳನ್ನಲ್ಲ. ಟ್ರೇಡಿಂಗ್ ಕಂಪನಿಗಳು ಪ್ರಾರಂಭಿಸಿದ ಮಳಿಗೆಗಳು ತಮ್ಮ ಸರಕುಗಳ ಜಾಹೀರಾತನ್ನು ಪ್ರಾರಂಭಿಸಿದ್ದವು. ಮಿಶನ್ ಮಳಿಗೆಗಳು ಸುಂದರ ಶೈಲಿಯ ಬಟ್ಟೆಗಳಂತಹ ಲೌಕಿಕ ಉತ್ಪನ್ನಗಳ ಜಾಹೀರಾತು ನಡೆಸುವುದು ಅನೇಕರಿಗೆ ಆಘಾತವನ್ನುಂಟು ಮಾಡಿತ್ತು. ಮಳಿಗೆಯಲ್ಲಿ ಮಾದಕ ಪಾನೀಯಗಳನ್ನು ಮಾರಾಟ ಮಾಡುವುದು, ಸಾಲಗಾರರಿಗೆ ಶಿಕ್ಷೆ ವಿಧಿಸುವುದು ಇತ್ಯಾದಿಗಳು ಚರ್ಚಾಸ್ಪದವಾಗಿದ್ದವು. ಈ ಸಮಸ್ಯೆಗಳು ವ್ಯಾಪಾರಿ ಬ್ರದರ್‌ಗಳು ಮತ್ತು ಇವರಿಗೆ ತೀರಾ ಹತ್ತಿರದಿಂದ ನೆರವಾಗುತ್ತಿದ್ದ ದೀಕ್ಷಾಬದ್ಧ ಸುವಾರ್ತಾ ಪ್ರಸಾರಕರು ಮತ್ತು ಕೈಗಾರಿಕಾ ಬ್ರದರ್‌ಗಳ ನಡುವಿನ ಬಿಕ್ಕಟ್ಟನ್ನು ಉಂಟುಮಾಡಿದವು. ನಿಯಮಿತ ಉದ್ಯಮಶೀಲ ಮತ್ತು ಅಪ್ಪಟ ಕ್ರೈಸ್ತ ಸಮುದಾಯದ ಧರ್ಮಶೀಲ ಆದರ್ಶ ಮತ್ತು ತನ್ನದೇ ಆದ ಚಲನೆ ಮತ್ತು

ನಿರ್ಬಂಧಗಳನ್ನು ಹೊಂದಿದ್ದು ತ್ವರಿತಗತಿಯಿಂದ ಬದಲಾಗುತ್ತಿರುವ ಅಂತರರಾಷ್ಟ್ರೀಯ ಆರ್ಥಿಕತೆಯ ನಡುವಿನ ಬಿಕ್ಕಟ್ಟನ್ನು ಈ ಘಟನೆಗಳು ಸ್ಪಷ್ಟವಾಗಿ ತೋರಿಸಿಕೊಡುತ್ತವೆ.[೮೫]

ಮೊದಲ ಎರಡು ಹಂಚಿನ ಕಾರ್ಖಾನೆಗಳಾದ ಮಂಗಳೂರಿನಲ್ಲಿರುವ ಜೆಪ್ಪುವಿನ ಕಾರ್ಖಾನೆ ಮತ್ತು ಕಲ್ಲಿಕೋಟೆಯ ಪುತ್ತ್ಯರ್ಕಳದ ಕಾರ್ಖಾನೆಯನ್ನು ಸಣ್ಣ ಪ್ರಮಾಣದಲ್ಲಿ ಪ್ರಾರಂಭಿಸಿ ನಂತರ ನಿಧಾನವಾಗಿ ವಿಸ್ತರಿಸಲಾಗಿದೆ. ಕಾರ್ಮಿಕರು ಹೊಸದಾಗಿ ತಾವು ಅಳವಡಿಸಿಕೊಂಡಿದ್ದ ಕಾರ್ಯ ಶಿಸ್ತು ಮತ್ತು ಕುಶಲತೆಯನ್ನು ಅನೌಪಚಾರಿಕ ಸಂಪ್ರದಾಯದಂತೆ ಹೊಸದಾಗಿ ಕೆಲಸಕ್ಕೆ ಸೇರಿಕೊಂಡವರಿಗೆ ದಾಟಿಸಿದ್ದಾರೆ. ಪ್ರಾರಂಭದಲ್ಲಿ ಅವರಿಗೆ ಕೈ ತುಂಬಾ ಸಂಬಳ ನೀಡಿದ್ದರು ಹಾಗೂ ಅವರಲ್ಲಿ ಅನೇಕರು ಮಿಲ್ – ರಿಯಾಯಿತಿ ಕಾರ್ಯಯೋಜನೆಯ ಅನ್ವಯ ಲಾಭವನ್ನು ಪಡೆದಿದ್ದಾರೆ. ಇದರಿಂದಾಗಿ ಅವರ ಕೆಲವು ಹಣಕಾಸಿನ ಬಯಕೆಗಳು ಈಡೇರಿವೆ. ಇದು ಅವರನ್ನು ಬಹಳ ನಂಬಿಕಸ್ಥ ಕೆಲಸಗಾರನ್ನಾಗಿ ಮತ್ತು ಸಭೆಯ ಸಂತೃಪ್ತ ಸದಸ್ಯರನ್ನಾಗಿ ಮಾಡಿದೆ. ಮೊದಲ ಎರಡು ಹಂಚಿನ ಕಾರ್ಖಾನೆಗಳು ಅತ್ಯಂತ ಯಶಸ್ವೀ ವ್ಯವಹಾರ ನಡೆಸಿದ್ದವು ಮತ್ತು ಇವುಗಳಿಗೆ ಭಾರತದಲ್ಲಿ ಮತ್ತು ವಿದೇಶದಲ್ಲಿ ಸಿದ್ಧ ಮಾರುಕಟ್ಟೆಗಳೂ ದೊರೆತಿದ್ದವು. ಇವರ ಯಶಸ್ಸನ್ನು ಕಂಡ ಮಿಶನ್ನೇತರ ಉದ್ದಿಮೆದಾರರು ೧೮೮೧ರೊಳಗೆ ೪ ಕಾರ್ಖಾನೆಗಳನ್ನು ಸ್ಥಾಪಿಸಿದರು ಮತ್ತು ೧೯೧೦ರಲ್ಲಿ ಇವುಗಳ ಸಂಖ್ಯೆ ಮೂವತ್ತರ ಗಡಿ ದಾಟಿತ್ತು. ಆ ಎಲ್ಲಾ ಕಾರ್ಖಾನೆಗಳು ಸ್ಥಳೀಯ ಉದ್ದಿಮೆದಾರರ ಸ್ವಂತದಾಗಿದ್ದು ಅವರ ನಿರ್ವಹಣೆಯಲ್ಲಿ ನಡೆಯುತ್ತಿದ್ದವು. ಉತ್ಪಾದನಾ ವೆಚ್ಚಗಳಿಗೆ ಸಂಬಂಧಿಸಿದಂತೆ ಸ್ಪರ್ಧೆಗಳನ್ನು ಸಮಾನವಾಗಿಡಲು ಮತ್ತು ಹೆಚ್ಚಿನ ಲಾಭವನ್ನು ಹುಟ್ಟಿಸಿ ಅದನ್ನು ಭಾರತೀಯ ಮಿಶನ್ ಕ್ಷೇತ್ರಕ್ಕೆ ಮತ್ತೆ ಸೇರಿಸಲು ಆಗ ಇರುವ ಸಾಮರ್ಥ್ಯವನ್ನು ಹೆಚ್ಚಿಸುವ ಮತ್ತು ದೊಡ್ಡ ಪ್ರಮಾಣದಲ್ಲಿ ಹೊಸ ಕಾರ್ಖಾನೆಗಳನ್ನು ಪ್ರಾರಂಭಿಸುವ ನಿರ್ಧಾರವನ್ನು ಕೈಗೊಳ್ಳಲಾಯಿತು. ಈ ವಿಧದ ಯೋಜನೆಗಳನ್ನು ಅನುಷ್ಠಾನಕ್ಕೆ ತರಲು ಆಗ ಇರುವಂತಹ ಬಂಡವಾಳ ಮತ್ತು ಕೈಗಾರಿಕಾ ಆಯೋಗದ ಆಡಳಿತ ಸಾಮರ್ಥ್ಯ ಸಾಕಾಗುತ್ತಿರಲಿಲ್ಲ. ಆದುದರಿಂದ ೧೮೮೨ರಲ್ಲಿ ಭಾರತದ ಮಿಶನ್ ಉದ್ದಿಮೆಯ ಸೊತ್ತುಗಳನ್ನು ಮಿಶನ್ ಟ್ರೆಡಿಂಗ್ ಸೊಸೈಟಿಗೆ ಹಸ್ತಾಂತರಿಸಲಾಯಿತು.[೮೬]

೧೮೮೫-೮೬ ಮತ್ತು ೧೮೯೭ರಲ್ಲಿ ಬಹುಪಾಲು ಬಾಸೆಲ್ ಮಿಶನ್ ಪ್ರದೇಶಗಳಲ್ಲಿ ಆಹಾರದ ಕೊರತೆ, ಬೆಲೆಗಳ ಹೆಚ್ಚಳ ಮತ್ತು ಬರಗಾಲ ಇತ್ತು. ಹೀಗಾಗಿ ಮಿಶನ್ ಕಾರ್ಖಾನೆಗಳು ಆರ್ಥಿಕ ಬಿಕ್ಕಟ್ಟಿಗೆ ಸಿಲುಕಿದ ಅನೇಕ ಮಂದಿಯನ್ನು ಕೆಲಸಕ್ಕೆ ತೆಗೆದುಕೊಂಡವು. ಧರ್ಮ ಪರಿವರ್ತನೆ ಯಾವಾಗಲೂ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳನ್ನು ಹೊಂದಿರುವುದರಿಂದ, ೧೮೮೦ಕ್ಕಿಂತ ಹಿಂದೆ ಅದು 'ಸೆಳೆತ'ದ ವಿಧವಾಗಿತ್ತು, ಅಂದರೆ ಧರ್ಮ ಪರಿವರ್ತನೆ ಬಯಸುವವರು ವೃತ್ತಿಪರ ಮತ್ತು ಹಣಕಾಸಿನ ಪ್ರಗತಿಯಿಂದ ಆಕರ್ಷಿತರಾಗುತ್ತಿದ್ದರು. ಆದರೆ ೧೮೮೦ರ ನಂತರ ದೊಡ್ಡ ಸಂಖ್ಯೆಯಲ್ಲಿ ಚರ್ಚನ್ನು ಸೇರಿಕೊಂಡವರು ಈ

ಸ್ವ-ಆಯ್ಕೆಯ ಕಾರ್ಯಗತಿಯನ್ನು ಹೊಂದಿರಲಿಲ್ಲ. ಅವರು ಸಭೆಗೆ ಕೇವಲ ಹತಾಶೆಯಿಂದ 'ಸೆಳೆಯಲ್ಪಟ್ಟಿದ್ದಾರೆ'. ಆ ಹೊಸ ಮಿಶನ್ ಕ್ರೈಸ್ತರಿಗೆ ಕಾರ್ಖಾನೆ ಮತ್ತು ಚರ್ಚಿನ ಶಿಸ್ತು ಹೊರೆಯಾಗಿ ಪರಿಣಮಿಸಿದೆ. ಅವರು ತಮ್ಮ ಪ್ರತಿರೋಧವನ್ನು ಕೆಲಸಕ್ಕೆ ಹಾಜರಾಗದೆ, ಕಾರ್ಯನಿರ್ವಹಣೆಯ ಗುರಿಗಳನ್ನು ತಲುಪದೆ, ಅಧಿಕಾರಿಗಳ ಆಜ್ಞೆಗ್ಗಳನ್ನು ಉಲ್ಲಂಘಿಸುವ ಮೂಲಕ ವ್ಯಕ್ತಪಡಿಸಿದ್ದಾರೆ.[೮೭]

ಸ್ಥಳೀಯ ಕ್ರೈಸ್ತರು ಸೋಮಾರಿಗಳಾಗಿ, ಬಡವರಾಗಿ ನಂಬಿಕೆಗೆ ಅನರ್ಹರಾಗಿದ್ದಾರೆಂಬ ವ್ಯವಸ್ಥಾಪಕರ ಟೀಕೆ ವಿಚಾರಣಾ ಸಮಿತಿಯ ಸ್ಥಾಪನೆಗೆ ಅವಕಾಶ ಮಾಡಿಕೊಟ್ಟಿತು ಹಾಗೂ ಸಮಿತಿಯ ವಿಚಾರಣೆಯಲ್ಲಿ ಹಂಚು ಕಾರ್ಖಾನೆಯಲ್ಲಿರುವ ಕ್ರೈಸ್ತ ಕಾರ್ಮಿಕರ ಕಾರ್ಯಾನಿರ್ವಹಣೆ ಚೆನ್ನಾಗಿಲ್ಲವೆಂದು ದೃಢಪಟ್ಟಿತ್ತು. ಅದಕ್ಕೆ ಕಾರಣವಾದ ಎರಡು ಮುಖ್ಯ ಅಂಶಗಳೆಂದರೆ: ಮೊದಲನೆಯದು ಕ್ರೈಸ್ತರು ಮತ್ತು ಕ್ರೈಸ್ತೇತರ ಸಿಬ್ಬಂದಿ ಆಯ್ಕೆಯಲ್ಲಿ ವಿಭಿನ್ನ ಮಾನದಂಡಗಳನ್ನು ಅನುಸರಿಸಿದ್ದು ಮತ್ತು ಎರಡನೆಯದಾಗಿ ಕ್ರೈಸ್ತರು ತಮ್ಮ ಸಹ ಕೆಲಸಗಾರರಾಗಿರುವ ಕ್ರೈಸ್ತೇತರರಿಗಿಂತ ದೈಹಿಕವಾಗಿ ಹೆಚ್ಚು ಶಕ್ತಿಯನ್ನು ಹೊಂದದಿರುವುದು. ಅದಕ್ಕೆ ಹಣವಿಲ್ಲದೆ ಪೂರೈಸಿಕೊಳ್ಳಲಾಗದ ಪೌಷ್ಟಿಕಾಂಶದ ಕೊರತೆ ಕಾರಣವೆಂದು ತಿಳಿದು ಬಂತು. ವಿಚಾರಣಾ ವರದಿ ತಿಳಿಸಿದ ಪ್ರಕಾರ ಹಂಚು ಕಾರ್ಖಾನೆಗಳಲ್ಲಿ ಕ್ರೈಸ್ತರು ಹೊಂದಿದ ಸ್ಥಾನವು ಕ್ರೈಸ್ತೇತರಿಗೆ ಸಮ್ಮತವಾಗುವ ರೀತಿಯದ್ದಾಗಿರಲಿಲ್ಲ. ಕ್ರೈಸ್ತೇತರಿಗೆ ಅವರ ಉತ್ತಮ ವೇತನವಿರುತ್ತಿತ್ತು ಮತ್ತು ಅವರು ಕಾರ್ಖಾನೆಯ ಹೊರಗೆ ತಮಗೆ ಇಷ್ಟ ಬಂದಂತೆ ನಡೆದುಕೊಳ್ಳಬಹುದಿತ್ತು. ಆದರೆ ಕ್ರೈಸ್ತರು ಖಾಯಂ ನಿಗಾದಲ್ಲಿ ಇರುತ್ತಿದ್ದರು. ಸಭೆಯ ಸಂವಿಧಾನದಿಂದಾಗಿ ಅವರ ನಡವಳಿಕೆ ಸೀಮಿತವಾಗಿ ಇರುವುದಲ್ಲದೆ, ಅವರು ಆರ್ಥಿಕ ಹೊರೆಯನ್ನು ಕೂಡ ಅನುಭವಿಸುತ್ತಿದ್ದರು. ಕ್ರೈಸ್ತರು ಚರ್ಚ್ ಸೂಚಿಸಿದ ಮಟ್ಟಗಳನ್ನು ಕಾಪಾಡಿಕೊಳ್ಳಲು ತಮ್ಮ ಉಡುಪುಗಳಿಗೆ ಹೆಚ್ಚು ಹಣವನ್ನು ಖರ್ಚು ಮಾಡಬೇಕಿತ್ತು ಅಲ್ಲದೆ ಅವರ ಮಕ್ಕಳು ಶಾಲೆಗೆ ಹೋಗಬೇಕಿತ್ತು. ಅದು ಖರ್ಚಿನ ಬಾಬತ್ತು ಆಗಿತ್ತೇ ವಿನಹ ಕುಟುಂಬದ ವರಮಾನಕ್ಕೆ ಕೊಡುಗೆಯಾಗಿರುತ್ತಿರಲಿಲ್ಲ. ಅವರು ಚರ್ಚಿನ ತೆರಿಗೆಯನ್ನು ಕಟ್ಟಬೇಕಿತ್ತು. ಕಾರ್ಖಾನೆಗಳ ಅನಾರೋಗ್ಯ ಮತ್ತು ವೃದ್ಧಾಪ್ಯ ನಿಧಿಗಳಿಗೆ ಹಣ ಸಂದಾಯ ಮಾಡಬೇಕಿತ್ತು. ಕಾರ್ಖಾನೆಗಳು ಅವರಿಗೆ ಒದಗಿಸುತ್ತಿದ್ದ ಪಾರ್ಶ್ವ ಅನುಕೂಲತೆಗಳು, ಈ ಅನಾನುಕೂಲತೆಗಳನ್ನು ಸರಿದೂಗಿಸುವಷ್ಟು ಇರುತ್ತಿರಲಿಲ್ಲ.[೮೮]

ಉತ್ತಮ ಸ್ಥಿತಿಯಲ್ಲಿದ್ದ ನಗರ ಪ್ರದೇಶದ ಸಭೆಗಳಲ್ಲಿನ ದೊಡ್ಡ ಸಂಖ್ಯೆಯ ನೇಕಾರರು, ಸಾರ್ವಜನಿಕ ಸೇವೆಯಲ್ಲಿರುವವರು, ವೃತ್ತಿಪರರು, ಉಪದೇಶಿಗಳು ಮತ್ತು ಮಿಶನ್ ಶಾಲೆಯ ಅಧ್ಯಾಪಕರುಗಳು ಹಂಚು ಕಾರ್ಖಾನೆಗಳ ಕಾರ್ಮಿಕರನ್ನು ದೂರವಿಟ್ಟರು. ಅವರ ಬಾಹ್ಯ ಚಹರೆಯಷ್ಟೇ ಅವರನ್ನು ಜೀತದಾರರನ್ನಾಗಿ ಮಾಡಿರಲಿಲ್ಲ, ಬದುಕಿನ ಕುರಿತಾದ ಧೋರಣೆಗಳು ಮತ್ತು ಪರಿಪ್ರೇಕ್ಷಗಳ

ಕುರಿತು ಕೂಡಾ ಅವರು ಕೆಳವರ್ಗದವರೇ ಆಗಿದ್ದರು. ಕಾರ್ಖಾನೆಯ ಕೆಲಸಗಾರರಲ್ಲಿ ಕುಡಿತದ ಚಟ ಹೆಚ್ಚಾಗತೊಡಗಿತು. ಅದು ಅವರ ಕಾರ್ಯ ಸಾಮರ್ಥ್ಯವನ್ನು ಕಡಿಮೆ ಮಾಡಿತಲ್ಲದೆ, ಅವರನ್ನು ಸಾಲಗಾರರನ್ನಾಗಿ ಕೂಡಾ ಮಾಡಿದೆ. ತಂದೆಯ ವೇತನ ಕುಟುಂಬ ನಿರ್ವಹಣೆಗೆ ಸಾಲದಿರುವಾಗ, ತಾಯಂದಿರ ವೇತನದ ದುಡಿಮೆ ಚಟುವಟಿಕೆಗಳು ಹೆಚ್ಚಾದವು. ಇದರಿಂದ ಗೃಹ ಕೃತ್ಯದ ಕರ್ತವ್ಯಗಳಲ್ಲಿ ಮತ್ತು ಮಕ್ಕಳ ಕುರಿತು ನಿರ್ಲಕ್ಷ್ಯ ಧೋರಣೆ ಉಂಟಾದುದರ ಕುರಿತು ಪಾಸ್ಟರ್‌ಗಳು ದೂರು ಹೇಳಲು ಪ್ರಾರಂಭಿಸಿದರು. ಹೆತ್ತವರ ದುಡಿಮೆಯ ಅವಧಿಯಲ್ಲಿ ಮಕ್ಕಳಿಗೆ ಮನೆ ಇಲ್ಲವಾಯಿತು ಮತ್ತು ಅವರನ್ನು ನೋಡಿ ಕೊಳ್ಳುವವರು ಇಲ್ಲವಾದರು. ಅಂತೆಯೇ ಅವರನ್ನು ನಿಯಂತ್ರಿಸುವುದು ಕಷ್ಟಕರವಾಗಿ ಪರಿಣಮಿಸಿ, ಅವರು ವಯಸ್ಸಿಗೆ ಬರುವಷ್ಟರಲ್ಲಿ ಕೆಟ್ಟ ನಡತೆಗೆ ಬಲಿಯಾಗತೊಡಗಿದರು. ಕಾರ್ಖಾನೆಗಳಲ್ಲಿ 'ಕ್ರೆಶ್' ಸೌಲಭ್ಯವನ್ನು ಒದಗಿಸುವುದು ಮತ್ತು ಕಾರ್ಮಿಕರ ಮಿತಾಚಾರದ ಸಂಘಗಳ ಸ್ಥಾಪನೆ ಪರಿಸ್ಥಿತಿ ಸುಧಾರಣೆಗೊಳ್ಳಲು ನೆರವಿಗೆ ಬರಲಿಲ್ಲ. ತಮ್ಮ ಈ ಸ್ಥಿತಿಗೆ ಕೆಲಸಗಾರರ ಪ್ರತಿಕ್ರಿಯೆ ವೈಯಕ್ತಿಕ ನೆಲೆಯಲ್ಲಿಯೇ ಉಳಿದುಬಿಟ್ಟಿದೆ, ಅವರು ಅದನ್ನು ಅವಿಧೇಯತೆ, ಕುಡಿತ ಇತ್ಯಾದಿಗಳ ಮೂಲಕ ವ್ಯಕ್ತಪಡಿಸತೊಡಗಿದರು. ಕೆಲವರು ತಮ್ಮ ನಿಜವಾದ ವೇತನ ಕಡಿಮೆಯಾಗುವುದನ್ನು ಸರಿ ಹೊಂದಿಸುವುದಕ್ಕಾಗಿ ಹೆಚ್ಚು ಕೆಲಸ ಮಾಡಿದರೆ, ಸಾಕಷ್ಟು ಸಂಪರ್ಕ ಉಳ್ಳವರು ಬೇರೆ ಕೆಲಸಕ್ಕಾಗಿ ಅಥವಾ ಸ್ವಂತ ಕಾರ್ಯಾಗಾರಗಳನ್ನು ಸ್ಥಾಪಿಸುವ ಉದ್ದೇಶದಿಂದ ತಮ್ಮ ಮಿಶನ್ ಉದ್ಯೋಗವನ್ನು ಬಿಟ್ಟು ಬಂದಿದ್ದಾರೆ.[೮೯] ಭಾರತದ ಬಾಸೆಲ್ ಮಿಶನ್ ಕೈಗಾರಿಕೆಯ ಚರಿತ್ರೆಯಲ್ಲಿ ದಾಖಲಾಗಿರುವ ಏಕಮಾತ್ರ ಪ್ರಮುಖ ಮುಷ್ಕರ ನಡೆದದ್ದು ೧೯೦೧ರಲ್ಲಿ , ಕಣ್ಣಾನೂರಿನ ಬಟ್ಟೆ ಶಾಖೆಯ ನೇಯ್ಗೆ ವಿಭಾಗದಲ್ಲಿ ಎಂಬ ಅಭಿಪ್ರಾಯವಿದೆ. ಆ ಚಳವಳಿಯು ಸಾಮಾಜಿಕ ಅರಿವನ್ನು ಹೊಂದಿರುವ ಕುಲೀನ ಕ್ರೈಸ್ತರಲ್ಲಿ ಹೆಚ್ಚಿನವರ ಅನುಭವಕ್ಕೆ ಬಂದ ಸಭೆಗಳ ಮೇಲಿನ ಮಿಶನರಿಗಳ ಸಹಿಸಲಸಾಧ್ಯವಾದ ನಿಯಮದ ಮತ್ತು ನಾಗರಿಕರಾಗಿ ಅವರ ಹಕ್ಕುಗಳು ಮತ್ತು ಅನಿರ್ಬಂಧಿತತೆಗಳ ಅತಿಕ್ರಮಗಳ ಅಭಿವ್ಯಕ್ತಿಯಾಗಿದೆ.[೯೦] ಆದರೆ, ಬಿ.ವಿ. ಕಕ್ಕಿಲಾಯರು ಹಂಚಿನ ಕಾರ್ಖಾನೆಯ ಇನ್ನೊಂದು ಮುಷ್ಕರದ ಬಗ್ಗೆ ಉಲ್ಲೇಖಿಸುತ್ತಾ S.K.T.C.ಯ (ಸೌತ್ ಕೆನರಾ ಟ್ರೇಡ್ ಕಾಂಗ್ರೆಸ್)ಪ್ರಯತ್ನದ ಫಲವಾಗಿ ೧೯೪೪-೪೫ರಲ್ಲಿ ಮಂಗಳೂರಿನ ಹಂಚಿನ ಕಾರ್ಖಾನೆ ಕಾರ್ಮಿಕರು ಸಂಘಟಿತರರಾಗಿ, ೧೯೪೫ರಲ್ಲಿ ನಡೆಸಿದ ಮುಷ್ಕರ ಮತ್ತು ಅದು ಕುಂದಾಪುರಕ್ಕೆ ಹರಡಿ ಆನೇಕ ಹೋರಾಟವನ್ನು ನಡೆಸಿ ಜಯಗಳಿಸಿದ ವಿವರ ನೀಡುತ್ತಾರೆ. ದಕ್ಷಿಣ ಕನ್ನಡದಲ್ಲಿ ಹಂಚಿನ ಕಾರ್ಖಾನೆಗೆ ಸಂಬಂಧಿಸಿದ 'ಸೌತ್ ಕೆನರಾ ಟೈಲ್ ವರ್ಕರ್ಸ್ ಯೂನಿಯನ್' ಎಂಬ ಕಾರ್ಮಿಕ ಸಂಘಟನೆ ೧೯೪೪ರಲ್ಲಿ ಆರಂಭಗೊಂಡಿದೆ. ೧೯೪೭-೧೯೪೮ರಲ್ಲಿ 'ಕಾಂಟ್ರಾಕ್ಟ್ ಪದ್ಧತಿ'ಯನ್ನು ತೆಗೆದುಹಾಕುವಂತೆ ಮಾಡಿದ್ದು ಈ ಸಂಘಟನೆಯ ಮುಖ್ಯ ಸಾಧನೆ.[೧೩೩] ಗುತ್ತಿಗೆದಾರರು ಕಾರ್ಮಿಕರಿಗೆ ಸರಿಯಾಗಿ ಸಂಬಳ ಕೊಡದೆ ಬಹುಳಷ್ಟು ಹಣವನ್ನು ಜೇಬಿಗಿಳಿಸಿ ಮೋಸ ಮಾಡುತ್ತಿದ್ದರು.

ಇದು ರಾಜ್ಯಾದ್ಯಂತ ಇದ್ದ ಸಾಮಾನ್ಯ ಲಕ್ಷಣವಾಗಿತ್ತು. ವಸಾಹತು ಕರ್ನಾಟಕದ ಪ್ರತಿಯೊಂದು ಪ್ರಾಂತ್ಯದಲ್ಲೂ ಕೈಗಾರಿಕಾ ಕಾರ್ಮಿಕರ ಚಳುವಳಿಗಳು ಕೈಗಾರಿಕಾ ಮಾಲೀಕರ ವಿರುದ್ಧವಷ್ಟೇ ಅಲ್ಲದೇ, ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧವೂ ಧ್ವನಿ ಎತ್ತಿದವು. ಸ್ವಾತಂತ್ರ್ಯ ಹೋರಾಟ ಮತ್ತು ಜಾಗತಿಕ ಯುದ್ಧಗಳು ಸ್ಥಳೀಯವಾಗಿ ಕೈಗಾರಿಕೆಗಳು ಬೆಳೆಯುವುದಕ್ಕೆ ಕಾರಣವಾದವು. ಬ್ರಿಟಿಷ್ ಆಳ್ವಿಕೆಯ ವಿರುದ್ಧ ಭಾರತದಲ್ಲಿ ಆರಂಭಗೊಂಡ ಸ್ವದೇಶಿ ಚಳುವಳಿ ಅನೇಕ ಕೈಗಾರಿಕೆಗಳ ಹುಟ್ಟಿಗೂ ಕಾರಣವಾಗಿದೆ. ವಿದೇಶಿ ವಸ್ತುಗಳನ್ನು ತಿರಸ್ಕರಿಸುವ ಹಾಗೂ ಆ ವಸ್ತುಗಳನ್ನು ಸ್ಥಳೀಯವಾಗಿ ಉತ್ಪಾದಿಸುವ ಪ್ರಯತ್ನಗಳು ನಡೆದಿವೆ. ಹೀಗೆ ಬ್ರಿಟಿಷ್ ಆಳ್ವಿಕೆಗೆ ಪ್ರತಿಕ್ರಿಯೆಯ ರೂಪದಲ್ಲೂ ಅನೇಕ ಕೈಗಾರಿಕೆಗಳು ಹುಟ್ಟಿಕೊಂಡಿವೆ.[೯೧]

ಮಂಗಳೂರಿನ ಸ್ಥಳೀಯ ಕ್ರೈಸ್ತರಲ್ಲಿ ಹಂಚು ಕಾರ್ಖಾನೆಯನ್ನು ಮೊದಲು ಪ್ರಾರಂಭಿಸಿದ ವ್ಯಕ್ತಿ ಅಲೆಕ್ಸ್ (ಪೈ) ಅಲ್ಬುಕರ್ಕ್.[೯೦] ಅಲೆಕ್ಸ್ ಪೈಯವರು ತನ್ನ ಮಗ ಫೆಲಿಕ್ಸ್ ಜೊತೆಗೂಡಿ ಮಂಗಳೂರಿನ ಹೈಗೆ ಬಜಾರಿನಲ್ಲಿ ೧೮೬೮ರಲ್ಲಿ ಎ. ಅಲ್ಬುಕರ್ಕ್ ಆಂಡ್ ಸನ್ಸ್ ಎಂಬ ಹಂಚಿನ ಕಾರ್ಖಾನೆಯನ್ನು ಸ್ಥಾಪಿಸಿದರು. ನಂತರ ಈ ಕೈಗಾರಿಕೆಯನ್ನು ವಿವಿಧ ಮುಖಗಳಲ್ಲಿ ಬೆಳೆಸಿದ ಅಲೆಕ್ಸ್ ಪೈಯವರು, ಹೊಸ ವಿಧಾನಗಳನ್ನು ಅಳವಡಿಸಿ, 'ಸನ್ ಬ್ರಾಂಡ್' ಹಂಚುಗಳನ್ನು ಉತ್ಪಾದಿಸತೊಡಗಿದರು. ಮುಂದಿನ ಮೂವತ್ತು ವರ್ಷಗಳಲ್ಲಿ ನೊರೋನ್ಹಾ, ಪಿ.ಎಫ್.ಎಕ್ಸ್, ಸಲ್ದಾನ, ಆಲ್ವಾರೀಸ್, ರೆಬೆಲ್ಲೊ, ಕೊಯಿಲೊ, ರೇಗೊ ಹಾಗೂ ಬ್ರಿಟ್ಟೊ ಕುಟುಂಬದ ಸದಸ್ಯರುಗಳು ಆರಂಭಿಸಿದ ೭ ಹಂಚಿನ ಕಾರ್ಖಾನೆಗಳು ತಮ್ಮ ಗುಣಮಟ್ಟ ಹಾಗೂ ಕಾರ್ಯಕ್ಷಮತೆಯಿಂದ ಪ್ರಸಿದ್ಧವಾದವು.[೯೨] ೧೮೭೧ರಲ್ಲಿ 'ಹೆಂಚು ವ್ಯಾಪಾರಿಗಳ ಕೂಟ' ಬೊಂಬಾಯಿ, ಆಫ್ರಿಕಾ ಮತ್ತು ಅದರಾಚೆ ಮಾರುಕಟ್ಟೆಯನ್ನು ಬೆಳೆಸಿಕೊಂಡಿತು. ೧೮೭೦ರಲ್ಲಿ ಮಂಗಳೂರು ಹಂಚನ್ನು ಛಾವಣಿಗೆ ಬಳಸಿದ ಮೊತ್ತಮೊದಲ ರಾಜ್ಯ ಸರ್ಕಾರದ ಪ್ರತಿಷ್ಠಿತ ಕಟ್ಟಡವೆಂದರೆ ಬೊಂಬಾಯಿಯ ಹಳೆ ವಿಕ್ಟೋರಿಯಾ ರೈಲು ನಿಲ್ದಾಣ ( ವಿಕ್ಟೋರಿಯಾ ಟರ್ಮಿನಸ್). ೨೦ನೇ ಶತಮಾನದ ಮೂವತ್ತರ ದಶಕದಲ್ಲಿ ಉಂಟಾದ ಅತಿದೊಡ್ಡ ಆರ್ಥಿಕ ಕುಸಿತದ ಸಮಯದಲ್ಲಿ ಬೆಲೆ ಮತ್ತು ಬೇಡಿಕೆ ಎರಡೂ ತಗ್ಗಿದವು. ಹಾಗಿದ್ದರೂ, ಎರಡನೇ ಮಹಾಯುದ್ಧದ ಬಳಿಕ ಸರಕಾರಕ್ಕೆ ೫ ಮಿಲಿಯ ಸೈನ್ಯಗಳಿಗೆ ಆಶ್ರಯವನ್ನು ಒದಗಿಸುವ ಪ್ರಸಂಗ ಬಂದುದರಿಂದ, ಅವರಿಗೆ ಹಂಚುಗಳಿಂದ ಛಾವಣಿ ಒದಗಿಸುವುದು ಸುಲಭವಾಯಿತು. ಹೀಗಾಗಿ ಈ ಉದ್ದಿಮೆ ಪುನಶ್ಚೇತನ ಪಡೆಯಿತು. ೧೯೪೭ರಲ್ಲಿ ೨೫ ಮಾಲಿಕ ಸದಸ್ಯರೊಂದಿಗೆ ' ವೆಸ್ಟರ್ನ್ ಇಂಡಿಯಾ ಟೈಲ್ ಮ್ಯಾನ್ಯು ಫ್ಯಾಕ್ಚರರ್ಸ್ ಅಸೋಶಿಯೇಶನ್' ರೂಪುಗೊಂಡಿತು.[೯೩] ೧೯೭೦ರ ಸುಮಾರಿಗೆ ಹಂಚು ಉತ್ಪಾದನಾ ವೆಚ್ಚವು ಅಧಿಕವಾಗತೊಡಗಿತು. ೧೯೮೦ರ ಬಳಿಕ ಗುಜರಾತಿನ ಮೋರ್ವಿಯಲ್ಲಿ ಸುಮಾರು ೩೦೦ ಹಂಚಿನ ಕಾರ್ಖಾನೆಗಳು ಆರಂಭಗೊಂಡದ್ದರಿಂದ ಮಂಗಳೂರು ಹಂಚುಗಳಿಗೆ ಬೇಡಿಕೆ ಕಡಿಮೆಯಾಗಿದೆ.[೯೪] ಹಂಚುಗಳ ಸ್ಥಾನದಲ್ಲಿ

ಸಿಮೆಂಟ್ (ಆಸ್‌ಬೆಸ್ಟಾಸ್) ಮತ್ತು ಕೃತ್ರಿಮವಾಗಿ ಸಂಯೋಜಿತ (ಸಿಂಥೆಟಿಕ್) ಹಾಳೆಗಳನ್ನು ಶಿಫಾರಸು ಮಾಡುತ್ತಿರುವ ಸರಕಾರದ ಧೋರಣೆಯಿಂದಾಗಿ ಹಂಚು ಉದ್ದಿಮೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದೆ. ಕಳೆದ ಎರಡು ದಶಕಗಳಿಂದ ಆಧುನಿಕ ವಸ್ತುಗಳು ಮತ್ತು ತಂತ್ರಜ್ಞಾನಗಳು ಪರಿಚಯವಾದ ಕಾರಣವಾಗಿ ಹಂಚುಗಳ ಬಳಕೆ ಜಗತ್ತಿನಾದ್ಯಂತ ಕಡಿಮೆಯಾಗಿದೆ.[೬೫]

ಬಾಸೆಲ್ ಮಿಶನ್ ದಕ್ಷಿಣ ಕನ್ನಡದಲ್ಲಿ ಪ್ರಥಮ ಹಂಚಿನ ಕಾರ್ಖಾನೆಯನ್ನು ೧೮೬೫ರಲ್ಲಿ ಸ್ಥಾಪಿಸುವುದರ ಮೂಲಕ ಇಂದೂ ಕೂಡಾ ಜಿಲ್ಲೆಯ ಮಾತ್ರವಲ್ಲದೇ ಇಡೀ ಭಾರತ ದೇಶದಲ್ಲಿ ಎಲ್ಲಾ ಜನರ ಹೃದಯಾಳದಲ್ಲಿ ಆದರ ನೆನಪನ್ನು ಬಿಟ್ಟುಹೋಗಿದೆ. ೧೯ನೇ ಶತಮಾನದಲ್ಲಿ ಆ ಉದ್ಯಮವು ಸಂಸ್ಥೆಯ ಮತ್ತು ಜಿಲ್ಲೆಯ ಹಲವು ಜನರ ಜೀವನಕ್ಕೆ ಒಂದು ಆಧಾರವಾಗಿತ್ತು. ಬಾಸೆಲ್ ಮಿಶನ್‌ನ ಪ್ರವೇಶದಿಂದ ಕೈಗಾರಿಕಾ ಕ್ಷೇತ್ರದಲ್ಲಾದ ಈ ಬದಲಾವಣೆಗಳು ಮಂಗಳೂರಿನ ಸ್ವರೂಪವನ್ನು ರಚನಾತ್ಮಕವಾಗಿ ಹಾಗೂ ಕಾರ್ಯಾತ್ಮಕವಾಗಿ ಬದಲಾಯಿಸಿವೆ. ಮಂಗಳೂರು ಕೇವಲ ವ್ಯಾಪಾರ ಕೇಂದ್ರವಷ್ಟೇ ಅಲ್ಲದೆ ವಸ್ತುಗಳನ್ನು ಉತ್ಪಾದಿಸುವ ನಗರವಾಗಿಯೂ ಬೆಳೆದಿದೆ. ಕರಾವಳಿ ತೀರದಲ್ಲಿ ಮುಂಗಾರು ಅತ್ಯಂತ ತೀವ್ರವಾಗಿರುವೆಡೆ ಮಳೆಗಾಳಿಯ ಹೊಡೆತದಿಂದ ಜನರನ್ನು ರಕ್ಷಿಸುವಲ್ಲಿ ತಲೆಯ ಮೇಲೊಂದು ಸೂರು ನಿರ್ಮಿಸುವಲ್ಲಿ, ಸ್ಥಳೀಯ ಆರ್ಥಿಕ ಪರಿಸ್ಥಿತಿಯು ಸುಧಾರಿಸುವಲ್ಲಿ, ದೇಶಕ್ಕೆ ಅಗತ್ಯವಿರುವ ವಿದೇಶಿ ವಿನಿಮಯವನ್ನು ಗಳಿಸಿಕೊಡುವಲ್ಲಿ ಮಂಗಳೂರು ಹಂಚುಗಳು ಬಹಳ ಮುಖ್ಯ ಪಾತ್ರ ವಹಿಸಿವೆ.

## ೫.೭. ಯಂತ್ರಾಗಾರ ಸಂಸ್ಥೆ (ಮೆಕ್ಯಾನಿಕಲ್ ವರ್ಕ್‌ಶಾಪ್ )

೧೮೭೪ರಲ್ಲಿ ಮಂಗಳೂರಿನಲ್ಲಿ ಬಾಸೆಲ್ ಮಿಶನ್ ವರ್ಕ್‌ಶಾಪ್‌ನ್ನು ಆರಂಭಿಸಲಾಗಿದೆ. ಇಲ್ಲಿ ಹೊಸ ಯಂತ್ರಗಳನ್ನು ತಯಾರು ಮಾಡುವುದಲ್ಲದೇ ಹಳೇ ಯಂತ್ರಗಳ ದುರಸ್ತಿ ಕಾರ್ಯಗಳನ್ನು ಕೈಗೆತ್ತಿಕೊಳ್ಳಲಾಗುತ್ತಿತ್ತು. ಹಟ್ಟಿಂಜರ್ ಎಂಬುವರು ಆರಂಭದಲ್ಲಿ ಇದರ ಹೊಣೆಯನ್ನು ವಹಿಸಿದ್ದಾರೆ. ಅಲ್ಲಿ ಯುವಕರನ್ನು ಅಪ್ರೆಂಟಿಸ್‌ಗಳನ್ನಾಗಿ ಸೇರಿಸಿಕೊಂಡು ಅವರಿಗೆ ಹಲವು ಕೈಗಾರಿಕೆಗಳಲ್ಲಿ ತರಬೇತನ್ನು ಕೊಡಲಾಗುತ್ತಿತ್ತು. ಅಲ್ಲಿ ತಯಾರಾದ ಹಲವು ಉಪಕರಣಗಳನ್ನು ಪೋಲಿಸ್ ಇಲಾಖೆಗೆ, ಕಾಫಿ ಬೆಳೆಗಾರರಿಗೆ ಮತ್ತು ಲೋಕೋಪಯೋಗಿ ಇಲಾಖೆಗಳಿಗೆ ಮಾರಲಾಗಿದೆ. ಎಲ್ಲಾ ಸರಕಾರಿ ಕೋಶಗಾರಗಳಿಗೆ (ಖಜಾನೆ) ಮತ್ತು ಬ್ಯಾಂಕ್‌ಗಳಿಗೆ ಬೇಕಾದ ಕಬ್ಬಿಣದ ಲಾಕರ್‌ಗಳನ್ನು ಬಾಸೆಲ್ ಮಿಶನ್ ವರ್ಕ್‌ಶಾಪ್‌ನಲ್ಲಿ ತಯಾರಿಸಲಾಗಿದೆ. ಅಲ್ಲದೆ ರೈತರ ಉಪಯೋಗಕ್ಕಾಗಿ ಹಟ್ಟಿಂಜರ್ ಹೊಸ ರೀತಿಯ ಕಬ್ಬಿಣದ "ನೀರು ಎತ್ತುವ ಯಂತ್ರ" (ರೇಚಕ ಯಂತ್ರ)ವನ್ನು ಕಂಡುಹಿಡಿದತು ಎಂಬ ಅಭಿಪ್ರಾಯವಿದೆ. ದಕ್ಷಿಣ ಕನ್ನಡದ ಫರಂಗಿಪೇಟೆಯಲ್ಲಿ ೧೮೭೯ರಲ್ಲಿ ಒಂದು ಚಿಕ್ಕ ಸೇತುವೆಯನ್ನು, ೧೯೦೩ರಲ್ಲಿ ಕಡಂಬಿಲ

ಸೇತುವೆಯನ್ನು ಬಾಸೆಲ್ ಮಿಶನ್ ಮೆಕ್ಯಾನಿಕಲ್ ವರ್ಕ್‌ಶಾಪ್ ನಿರ್ಮಿಸಿಕೊಟ್ಟ ನಂತರ ಅದು ಪುನಃ ಅದೇ ರೀತಿಯ ಇನ್ನೊಂದು ಸೇತುವೆ ನಿರ್ಮಾಣಕ್ಕಾಗಿ ಮದ್ರಾಸ್ ಪ್ರಾಂತ್ಯದ ಬ್ರಿಟಿಷ್ ಸರ್ಕಾರದಿಂದ ಗುತ್ತಿಗೆ ಪಡೆದಿದೆ. ಹೀಗೆ ಮದ್ರಾಸ್ ಪ್ರಾಂತ್ಯದ ಸರ್ಕಾರವು ತನ್ನ ಇಲಾಖೆಗಳಿಗೆ ಮತ್ತು ಬ್ಯಾಂಕುಗಳಿಗೆ ಬೇಕಾದ ಲಾಕರ್‌ಗಳನ್ನು ಪೂರೈಕೆ ಮಾಡಲು ಮಂಗಳೂರಿನ ಬಾಸೆಲ್ ಮಿಶನ್ ಮೆಕ್ಯಾನಿಕಲ್ ವರ್ಕ್‌ಶಾಪನ್ನು ಒಬ್ಬ ಪೂರೈಕೆದಾರನಾಗಿ ಆರಿಸಿಕೊಂಡಿದ್ದೇ, ಅದು ಗಳಿಸಿಕೊಂಡ ಕೀರ್ತಿಗೆ ಮತ್ತು ತನ್ನಲ್ಲಿ ತಯಾರಾಗುವ ವಸ್ತುಗಳ ಗುಣಮಟ್ಟವನ್ನು ಕಾಯ್ದುಕೊಂಡಿರುವುದಕ್ಕೆ ಒಂದು ಜ್ವಲಂತ ನಿದರ್ಶನವಾಗಿದೆ.[೯೬]

ಮಿಶನರಿಗಳು ತಾವು ನಡೆಸುತ್ತಿದ್ದ ರಾತ್ರಿ ಶಾಲೆಗಳಲ್ಲಿ ಕಾರ್ಮಿಕರಿಗೆ ಓದು ಬರಹ ಕಲಿಸಿಕೊಡುವುದರೊಂದಿಗೆ ಯಾಂತ್ರಿಕ ಕೌಶಲ್ಯಗಳನ್ನೂ ಹೇಳಿ ಕೊಡುತ್ತಿದ್ದರು. ಹೀಗೆ ತರಬೇತಿ ಪಡೆದ ಯಂತ್ರಗಾರ ಸಂಸ್ಥೆಯ ಅನೇಕ ಅಭ್ಯರ್ಥಿಗಳಿಗೆ ಉತ್ತಮ ಕೈಗಾರಿಕಾ ನೆಲೆಯಾಗಿದ್ದ ಬೊಂಬಾಯಿಯಲ್ಲಿ ಕೆಲಸ ಸಿಕ್ಕಿದೆ. ಕೈಗಾರಿಕೆಗಳನ್ನು ಸ್ಥಾಪಿಸುವ ಕ್ರೈಸ್ತರಿಗೆ ನೆರವಾಗಲೆಂದೇ ೧೯೧೮ರಲ್ಲಿ ಬಲ್ಮಠದಲ್ಲಿ ಮಂಗಳೂರು ಪ್ರೊಟೆಸ್ಟೆಂಟ್ ಕ್ರಿಶ್ಚಿಯನ್ ಕೋ-ಅಪರೇಟಿವ್ ಸೊಸೈಟಿ ಲಿಮಿಟೆಡ್ ಎಂಬ ಸಂಸ್ಥೆಯನ್ನು ಹುಟ್ಟು ಹಾಕಿದೆ.[೯೭] ಮಂಗಳೂರಿನ ಲೈಟ್ ಹೌಸ್ ಹಿಲ್‌ನಲ್ಲಿದ್ದ ಪ್ರಥಮ ಮತ್ತು ಜನಪ್ರಿಯ ಫೋಟೋ ಸ್ಟುಡಿಯೋದ ಒಡೆತನ ಇ.ಬಿ. ಸೋನ್ಸ್ ಅವರದು. ಅಲ್ಲದೆ ೧೯೨೦ ಮತ್ತು ೧೯೩೦ರ ಅವಧಿಯಲ್ಲಿ ದಕ್ಷಿಣ ಕನ್ನಡದ ರಸ್ತೆ ಸಾರಿಗೆ ಅಭಿವೃದ್ಧಿ ಕಾರ್ಯಕ್ಕೆ ಫಿಟ್ಟರ್ಸ್ ಮತ್ತು ಮೆಕಾನಿಕ್ಸ್‌ಗಳನ್ನು ಒದಗಿಸುವ ಮೂಲಕ ಈ ಸಂಸ್ಥೆಯ ಅಭ್ಯರ್ಥಿಗಳು ತಮ್ಮ ದೇಣಿಗೆಯನ್ನು ನೀಡಿದ್ದಾರೆ. ಆದರೆ ಬಾಸೆಲ್ ಮಿಶನ್ ಉದ್ಯಮಗಳು ಮೂಲಭೂತ ತಾಂತ್ರಿಕ ತಿಳಿವಳಿಕೆ ಮತ್ತು ಯಂತ್ರ ಚಾಲನೆಯ ಕೌಶಲ್ಯಗಳನ್ನು ಕಲಿಸಿದೆಯಾದರೂ, ವ್ಯಾಪಕ ನಿರ್ವಹಣಾ ಪರಿಪ್ರೇಕ್ಷೆಯನ್ನು ಅಥವಾ ಉನ್ನತ ತಾಂತ್ರಿಕ ಜ್ಞಾನವನ್ನು ಕಲಿಸಿಲ್ಲ. ಅದು ಉದ್ಯಮದೊಳಗೆ ಮಿಶನ್ ಕ್ರೈಸ್ತರ ನೇರ ಚಲನೆಯ ಮೇಲೆ ಪರಿಣಾಮ ಬೀರಿದೆ. ಮಿಶನ್ ಕಾರ್ಖಾನೆಗಳ ವ್ಯವಸ್ಥಾಪಕರುಗಳು ಯೂರೋಪಿಯನರಾಗಿದ್ದು ಕಾರ್ಮಿಕರು, ಮೇಲ್ವಿಚಾರಕ, ಮೇಸ್ತ್ರಿ ಹಂತವನ್ನು ಮಾತ್ರ ತಲುಪುವುದನ್ನು ನಿರೀಕ್ಷಿಸಲಾಗಿದೆ. ಅದು ಉದ್ದೇಶಪೂರ್ವಕ ನಿಯಮದ ಭಾಗವಾಗಿ ಗೋಚರಿಸುತ್ತದೆ. ಬಾಸೆಲ್ ಮಿಶನರಿಗಳ ಸ್ವಂತದ ಜನಾಂಗೀಯ ಧೋರಣೆ ತಂತ್ರಜ್ಞಾನದ ವರ್ಗಾವಣೆಯ ಕ್ಷೇತ್ರವನ್ನು ಕುಂದಿಸಿದೆಯಾದರೂ, ಅವರ ಕೈಗಾರಿಕಾ ಚಟುವಟಿಕೆಗಳು ಇದಕ್ಕೆ ಸಾಕಷ್ಟು ನೆರವನ್ನು ಒದಗಿಸಿವೆ ಎಂದು ಹೇಳಬಹುದು.[೯೮] ಯಂತ್ರೋಪಕರಣಗಳ ಕಾರ್ಯಾಗಾರವನ್ನು ಲಾಭದಾಯಕ ಸಂಪ್ರದಾಯದ ಪ್ರವರ್ತಕ ಶಕ್ತಿಯೆಂದು ಬಣ್ಣಿಸಬಹುದು. ಯಂತ್ರಗಾರ ಸಂಸ್ಥೆಗಳಲ್ಲಿ ಉಮೇದುದಾರರಾಗಿ ತರಬೇತಿ ಪಡೆದವರು ಜಿಲ್ಲೆಯ ಅನೇಕ ಭಾಗಗಳಲ್ಲಿ ಸ್ವಂತ ಘಟಕಗಳನ್ನು ಸ್ವತಂತ್ರವಾಗಿ ಸ್ಥಾಪಿಸಿಕೊಂಡಿದ್ದಾರೆ.[೯೯] ಪ್ರಸ್ತುತ ಪರಿಸ್ಥಿತಿಗೆ ತಕ್ಕುದಾದ ಬೆಂಕಿಯಲ್ಲಿ ಸುಡದ, ಕಳ್ಳರಿಂದ

ಅಪಹರಿಸಲಾಗದ 'ಅಯರ್ನ್ ಸೇಫ್ಸ್' ಅಥವಾ ಕಬ್ಬಿಣದ ಕಪಾಟುಗಳನ್ನು ತಯಾರಿಸಿ ಕೋರ್ಟು, ಕಚೇರಿ , ಬ್ಯಾಂಕ್, ಆಫೀಸ್ ಇತ್ಯಾದಿಗಳಿಗೆ ಒದಗಿಸಲಾಗಿದೆ. ಇವರಿಂದ ಪ್ರಭಾವಿತರಾಗಿ ಮಂಗಳೂರಿನಲ್ಲಿ 'ಸೈಂಟ್ ಜೋಸೆಫ್ಸ್ ಇಂಡಸ್ಟ್ರೀಸ್' ಹಾಗೂ 'ಮಂಗಳೂರು ಅಯರ್ನ್ ವರ್ಕ್ಸ್' ಎಂಬ ಕಬ್ಬಿಣದ ಕಾರ್ಯಾಗಾರಗಳು ಮತ್ತು ಸಣ್ಣ ಪುಟ್ಟ ಕಮ್ಮಾರಶಾಲೆಗಳು ಸ್ಥಾಪಿಸಲ್ಪವೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಇವೆಲ್ಲವುಗಳಿಗೆ ಬಾಸೆಲ್ ಮಿಶನ್ ಕಬ್ಬಿಣ ಕಾರ್ಖಾನೆಯು ತವರುಮನೆಯಾಗಿದೆ.[೧೦೦]

## ೫.೮. ಸಂತ ಜೋಸೆಫರ ಕೈಗಾರಿಕಾ ಕಾರ್ಯಾಗಾರ (ವರ್ಕ್‌ಶಾಪ್)

ಮಂಗಳೂರಿನ ಜೆಪ್ಪುವಿನಲ್ಲಿ ಸಂತ ಜೋಸೆಫರ ಕೈಗಾರಿಕಾ ವರ್ಕ್‌ಶಾಪ್ ಇದೆ. ಯೇಸುಸಭೆಯ ಗುರುಗಳು ಮತ್ತು ಸಹೋದರರು (ಬ್ರದರ್ಸ್) ಅದನ್ನು ಸೆಮಿನರಿಯ ವಠಾರದಲ್ಲಿ ಆರಂಭಿಸಿದ್ದರಿಂದ ಆ ವರ್ಕ್‌ಶಾಪಿಗೆ 'ಸೆಮಿನರಿಯ ವರ್ಕ್‌ಶಾಪ್' ಎಂದು ಕರೆಯುತ್ತಿದ್ದರು. ಮಂಗಳೂರು ಧರ್ಮಪ್ರಾಂತ್ಯ ಕಾರ್ಮೆಲೈಟ್ ಧರ್ಮಗುರುಗಳ ಅಧೀನದಲ್ಲಿದ್ದಾಗ ಕಾರ್ಮೆಲೈಟ್ ಗುರು ಫಾ । ಪೌವ್ಲ್ ಎಂಬವರು ೧೮೭೫ರಲ್ಲಿ ಕ್ರೈಸ್ತ ಧರ್ಮ ಸ್ವೀಕರಿಸಿದವರಿಗಾಗಿ ಒಂದು ಆಶ್ರಮವನ್ನು ಜೆಪ್ಪುವಿನಲ್ಲಿ ಆರಂಭಿಸಿದ್ದರು. ಧರ್ಮಪ್ರಾಂತ್ಯದ ಆಡಳಿತ ಕಾರ್ಮೆಲೈಟ್‌ರಿಂದ ಯೇಸುಸಭೆಯವರಿಗೆ ಹಸ್ತಾಂತರಗೊಂಡಾಗ ಆಶ್ರಮದ ಜವಾಬ್ದಾರಿಯನ್ನು ೧೮೭೮ರಲ್ಲಿ ಯೇಸುಸಭೆಯ ಫಾ। ದಿಯಾಮಾಂತಿ ವಹಿಸಿಕೊಂಡರು. ಅವರು ಗಂಡಸರಿಗೆ ಮತ್ತು ಹೆಂಗಸರಿಗೆ ಪ್ರತ್ಯೇಕ ಮನೆಗಳನ್ನು ಕಟ್ಟಿ ಆ ಆಶ್ರಮಕ್ಕೆ ಸಂತ ಜೋಸೆಪರ ಆಶ್ರಮ ಎಂದು ನಾಮಕರಣ ಮಾಡಿದರು. ದಿನಗಳು ಕಳೆದಂತೆ ಆ ಬಡ ನಿರ್ಗತಿಕ ಜನರ ಸಂಖ್ಯೆ ಹೆಚ್ಚುತ್ತಲೇ ಬಂದುದರಿಂದ ಕೆಲವು ಕುಟುಂಬಗಳಿಗೆ ಸೆಮಿನರಿಯ ಹಿತ್ತಲಿನಲ್ಲಿ ಬಿಡಾರಗಳನ್ನು ಕಟ್ಟಲಾಗಿದೆ. ಈಗಾಗಲೇ ಆಶ್ರಮದಲ್ಲಿ ಅನಾಥ ಗಂಡುಮಕ್ಕಳಿಗೆ ಆಶ್ರಯ ನೀಡಿ ಪ್ರಾಥಮಿಕ ಶಿಕ್ಷಣದ ಅವಕಾಶವನ್ನು ಕಲ್ಪಿಸಿದ್ದರು ಮತ್ತು ಅವರ ಶಿಕ್ಷಣ ಮುಗಿಯುತ್ತಲೇ ಕೆಲಸವನ್ನು ಹುಡುಕಿಕೊಂಡು ಹೊರಹೋಗುತ್ತಿದ್ದರು. ಅವರನ್ನು ಆಶ್ರಮದಲ್ಲಿಟ್ಟುಕೊಂಡೇ ಜೀವನಕ್ಕೊಂದು ವ್ಯಾಪ್ತಿಯನ್ನು ಅಲ್ಲಿಯೇ ಕಲಿಸಿದರೆ ಒಳ್ಳೆಯದೆಂದು ಫಾ। ದಿಯಾಮಾಂತಿಯವರು ಭಾವಿಸಿದರು. ಆ ಉದ್ದೇಶದಿಂದಲೇ ೧೮೮೯ರಲ್ಲಿ ಒಬ್ಬ ಸಮಗಾರನನ್ನು ನೇಮಿಸಿ ಇಬ್ಬರು ಹುಡುಗರನ್ನು ತರಬೇತಿಗಾಗಿ ಅವರ ಕೈಗೊಪ್ಪಿಸಿದರು.[೧೦೧] ಜೆಪ್ಪುವಿನ ಬೂಟ್ಸ್ ಮತ್ತು ಶೂ ವಿಭಾಗವು ಕಾರ್ಯಾಗಾರದಿಂದ ಪೂರೈಸಲಾಗದಷ್ಟು ಬೇಡಿಕೆಗಳನ್ನು ಪಡೆಯುತ್ತಿದೆ. ಅದು ತಾನು ಬಳಸುವ ವಸ್ತು ಮತ್ತು ಅವರ ಕಾರ್ಯನೈಪುಣ್ಯದಿಂದ ಗ್ರಾಹಕರಲ್ಲಿ ತೃಪ್ತಿಯನ್ನು ಮೂಡಿಸಿದೆ[೧೦೨] ಎಂಬ ವರದಿಯು ಕಾರ್ಮಿಕರ ಕಾರ್ಯದಕ್ಷತೆ ಮತ್ತು ಗುಣಮಟ್ಟಕ್ಕೆ ಸಾಕ್ಷಿಯಾಗಿದೆ. ಅಂತೆಯೇ, ಎರಡು ವರ್ಷಗಳ ಬಳಿಕ (೧೮೯೧)

ಮರಗೆಲಸವನ್ನು ಆರಂಭಿಸಿದ್ದಾರೆ. ಒಬ್ಬ ಬಡಗಿಯನ್ನು ಕೆಲಸಕ್ಕಿಟ್ಟು ಅವನ ಕೆಳಗೆ ೫ ಹುಡುಗರು ಕೆಲಸವನ್ನು ಕಲಿಯಲಾರಂಭಿಸಿದರು. ದಕ್ಷಿಣ ಕನ್ನಡದ ಕ್ರೈಸ್ತರು ಹಿಂದಿನಿಂದಲೂ ಮರಗೆಲಸದಲ್ಲಿ ನಿಸ್ಸೀಮರು. ಕ್ರೈಸ್ತರು ಬಡಗಿ ಕೆಲಸವನ್ನು, ಒಂದು ವೃತ್ತಿಯಾಗಿ, ಸ್ವೀಕರಿಸುವಂತೆ ಮಾಡಿದವರು ಕ್ರೈಸ್ತ ಮಿಶನರಿಗಳು. ಮಿಶನರಿಗಳು ಆರಂಭಿಸುತ್ತಿದ್ದ ಪ್ರತಿಯೊಂದು ಕೈಗಾರಿಕಾ ಕಾರ್ಯಾಗಾರಗಳಲ್ಲಿ ಮತ್ತು ಶಾಲೆಗಳಲ್ಲಿ ವೈವಿಧ್ಯಮಯ ಪೀಠೋಪಕರಣಗಳನ್ನು ತಯಾರಿಸುವ ತರಬೇತಿಯನ್ನು ಮತ್ತು ಕೌಶಲ್ಯಗಳನ್ನು ಕಲಿಸುತ್ತಿದ್ದರು. ಈ ರೀತಿಯಲ್ಲಿ ತರಬೇತಿ ಹೊಂದಿದ ಕ್ರೈಸ್ತರು ಮುಂದೆ ಸ್ವ-ಸಾಮರ್ಥ್ಯದಿಂದ ಸಣ್ಣ ಕೈಗಾರಿಕೆಗಳನ್ನು ಹಾಗೂ ಅಂಗಡಿ-ಮುಂಗಟ್ಟುಗಳನ್ನು ಸ್ಥಾಪಿಸಿ ಕಠಿಣ ಪರಿಶ್ರಮದಿಂದ ತಮ್ಮ ವೃತ್ತಿಯನ್ನು ಸ್ಥಿರಗೊಳಿಸಿದ್ದಾರೆ. ಆ ಬಳಿಕ ತಮ್ಮ ಕೈಗಾರಿಕೆಗಳಲ್ಲಿ, ಕಾರ್ಯಾಗಾರಗಳಲ್ಲಿ ಮತ್ತು ಅಂಗಡಿ ಮಳಿಗೆಗಳಲ್ಲಿ ತಮ್ಮವರಿಗೆ ಮತ್ತು ಇತರರಿಗೆ ಉದ್ಯೋಗ ನೀಡಿ, ಅವರ ಜೀವನಕ್ಕೊಂದು ಆಧಾರವಾಗಿದ್ದಾರೆ ಮಾತ್ರವಲ್ಲದೆ ಈ ವೃತ್ತಿಯ ವ್ಯಾಪಿಸುವಿಕೆಗೆ ಕಾರಣವಾದರು. ಆದುದರಿಂದಲೇ ಇಂದು ಎಲ್ಲೆಡೆ ಹೆಚ್ಚಿನ ಸೋಪಾ ತಯಾರಿಸುವ ಉದ್ಯಮ ಮತ್ತು ಮರದ ಪೀಠೋಪಕರಣಗಳ ಅಂಗಡಿಗಳನ್ನು ಕ್ರೈಸ್ತರು ನಡೆಸುತ್ತಿದ್ದಾರೆ. ಇವರಿಂದ ಪ್ರಭಾವಿತರಾಗಿ ಇತ್ತೀಚಿನ ದಿನಗಳಲ್ಲಿ ಇತರರೂ ಈ ವೃತ್ತಿಯನ್ನೂ ಆರಂಭಿಸುತ್ತಿರುವುದು ಗಮನಾರ್ಹವಾದ ಅಂಶವಾಗಿದೆ. ವೃತ್ತಿಯಲ್ಲಿ ಮೆಕ್ಯಾನಿಕ್ ಆಗಿದ್ದ ಬ್ರ। ವಿಶ್ವಾಸಂರವರು ತಮಗೆ ತಿಳಿದಿದ್ದ ತವರ, ಕಂಚು ಮತ್ತು ತಗಡಿನ ಕೆಲಸವನ್ನು ಕೆಲವು ಹುಡುಗರಿಗೆ ಕಲಿಸುವಾಗ ಫಾ। ದಿಯಾಮಾಂತಿಯವರು ಪೈಂಟಿಂಗ್, ಚಿತ್ರಕಲೆ ಮತ್ತು ಆವೆ ಮಣ್ಣಿನಿಂದ ವಿಗ್ರಹ ಮಾಡುವ ಕೆಲಸವನ್ನು ಇನ್ನು ಕೆಲವರಿಗೆ ಕಲಿಸಿಕೊಟ್ಟಿದ್ದಾರೆ. ಕಲ್ಲಿಕೋಟೆಯಿಂದ ಕೆಲಸ ಹುಡುಕಿಕೊಂಡು ಬಂದ ಕಬ್ಬಿಣ ಕೆಲಸದ ಆಗಾ ಪಿತುಸ್ ಮೆಡೀನಾ ಎಂಬವರನ್ನು ನೇಮಕ ಮಾಡಿಕೊಂಡು ಅವನ ಮೇಲುಸ್ತುವಾರಿಯಲ್ಲಿ ಒಬ್ಬ ಹುಡುಗನನ್ನು ತರಬೇತಿಗಾಗಿ ಇಟ್ಟರು. ಆಗಾ ಪಿತುಸ್ ಮೆಡೀನಾರವರು ಮುಂದೆ ಸಂತ ಜೋಸೆಫರ ಕಾರ್ಯಾಗಾರದ ಪ್ರಥಮ ನಿರ್ದೇಶಕರಾಗಿದ್ದ ಬ್ರ। ಫೊಲೀನಿಯವರ ಆಪ್ತ ಸಹಾಯಕರಾಗಿ ಸೇವೆ ಸಲ್ಲಿಸಿದ್ದರು.

೧೮೯೦ರಲ್ಲಿ ಪ್ರಕಟವಾದ ಫಾ। ದಿಯಾಮಾಂತಿಯವರ ವರದಿಯಲ್ಲಿ ಹೀಗೆ ಹೇಳಲಾಗಿದೆ: "ಎರಡು ವರ್ಷಗಳ ಹಿಂದೆ ನಮ್ಮ ಹುಡುಗರು ಪ್ರಾಯದಲ್ಲಿ ಬಹಳ ಸಣ್ಣವರಾದುದ್ದರಿಂದ ಮತ್ತು ವಿವಿಧ ವೃತ್ತಿಗಳನ್ನು ನಮ್ಮ ವಠಾರದಲ್ಲಿ ಕಲಿಯಲು ಕಷ್ಟ ಸಾಧ್ಯವಾದುದ್ದರಿಂದ ಬಹು ಕಡಿಮೆ ಮಂದಿ ಹುಡುಗರಿಗೆ ಮಾತ್ರ ಈ ತರಬೇತಿ ಸಿಗುತ್ತಿತ್ತು. ಈಗ ಐದಾರು ವಿವಿಧ ವೃತ್ತಿ ಕೇಂದ್ರಗಳಲ್ಲಿ ನಮ್ಮ ಸುಮಾರು ೩೦ ಹುಡುಗರು ಕೆಲಸದ ತರಬೇತಿಯನ್ನು ಪಡೆಯುತ್ತಿದ್ದಾರೆ ಮತ್ತು ಸಮಾಜದ ಯೋಗ್ಯ ಸದಸ್ಯರಾಗಲು ಮತ್ತು ತಮ್ಮ ಶ್ರಮದಿಂದ ತಮ್ಮ ಅನುದಿನದ ಆಹಾರವನ್ನು ಗಳಿಸಲು ತಯಾರಾಗುತ್ತಾರೆಂದು ಹೇಳಲು

ಬಹಳ ಸಂತೋಷವಾಗುತ್ತದೆ. ಈಗ ಈ ಹುಡುಗರಲ್ಲಿ ದರ್ಜಿಗಳು, ಮೇಣದ ಬತ್ತಿ ತಯಾರಿಸುವವರು, ಸಮಗಾರರು, ತಗಡಿನ ಕೆಲಸದವರು, ಕಮ್ಮಾರರು, ಬಡಗಿಗಳು ಮತ್ತು ನೇಕಾರರಿದ್ದಾರೆ. ಹುಡುಗರಿಗೆ ಮಾತ್ರವಲ್ಲ ನಮ್ಮ ಹುಡುಗಿಯರಿಗೂ ಕನ್ನಡ ಓದಲು, ಬರೆಯಲು, ಗಣಿತ, ಹೊಲಿಗೆ, ಕಸೂತಿ ಮತ್ತು ಸಾಮಾನ್ಯ ಅಡುಗೆ ಮಾಡಲು ನಾವು ಕಲಿಸುತ್ತೇವೆ”.[೧೦೩] ಹೀಗೆ ಕಾರ್ಯಾಗಾರದಲ್ಲಿ ಹುಡುಗರಿಗೆ ವಿವಿಧ ವೃತ್ತಿ ಕೌಶಲ್ಯಗಳನ್ನು ಕಲಿಸಿ ತಮ್ಮ ತರಬೇತಿಯ ಬಳಿಕ ಸ್ವತಂತ್ರ ಜೀವನವನ್ನು ನಡೆಸಲು ಹಾಗೂ ಸ್ವಂತ ಕೈಗಾರಿಕೆಗಳನ್ನು ಆರಂಭಿಸಲು, ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ೧೯೦೯ರಲ್ಲಿ ಕಬ್ಬಿಣ ಕೆಲಸದ ವಿಭಾಗದಲ್ಲಿ ಸುಧಾರಣೆ ಮಾಡುವ ಸಲುವಾಗಿ ಕಲ್ಲಿಕೋಟೆಯ ಒಬ್ಬ ಇಂಜಿನಿಯರನನ್ನು ನೇಮಕ ಮಾಡಲಾಗಿದೆ. ೧೯೧೨ರಲ್ಲಿ ಒಂದು ಸ್ಟೀಂ ಎಂಜಿನನ್ನು ಸ್ಥಾಪಿಸಿ ಕೆಲಸದ ವಿಧಾನದಲ್ಲಿ ಸುಧಾರಣೆ ತಂದಿದ್ದಾರೆ, ಅಲ್ಲದೆ, ಕಬ್ಬಿಣ ಕರಗಿಸುವ ಸಾಧನಕ್ಕೆ ಅಗತ್ಯವಿದ್ದ ಎಣ್ಣೆಯ ಎಂಜಿನ್ ಜೋಡಿಸಲಾಗಿದೆ. ಈ ರೀತಿಯಲ್ಲಿ ೧೯೨೦ರ ಸಮಯದಲ್ಲಿ ವರ್ಕ್‌ಶಾಪಿನಲ್ಲಿ ಕೇವಲ ನಾಲ್ಕೇ ಮೆಶಿನ್‌ಗಳಿದ್ದರೂ, ೪೦ ಕಾರ್ಮಿಕರು ದುಡಿಯುತ್ತಿದ್ದರು. ಇದೇ ಸಮಯದಲ್ಲಿ ಕಾರ್ಯಾಗಾರದ ನಿರ್ದೇಶಕರಾದ ಬ್ರ। ಫೊಲೀನಿಯವರು ಇಟಲಿಗೆ ತೆರಳಿ ಅಲ್ಲಿಂದ ೧೯ ಹೊಸ ಮೆಶಿನ್‌ಗಳನ್ನೂ ತಂದದ್ದು ಮಾತ್ರವಲ್ಲದೆ ಬ್ರ। ನಾಲಾತೊರವರನ್ನು ಕಾರ್ಯಾಗಾರದಲ್ಲಿ ಸಹಾಯಕರಾಗಿ ದುಡಿಯಲು ಕರೆತಂದರು. ಹೀಗೆ, ಸುಮಾರು ೧೯೨೯ರ ಹೊತ್ತಿಗೆ ವರ್ಕ್‌ಶಾಪನ್ನು ಇತರ ಸಹಾಯವಿಲ್ಲದೆ ತನ್ನದೇ ಗಳಿಕೆಯಿಂದ ನಡೆಸಿಕೊಂಡು ಹೋಗಲು ಸಾಧ್ಯವಾಗಿದೆ.[೧೦೪]

೧೯೩೯ರಲ್ಲಿ ಎರಡನೇ ಮಹಾಯುದ್ಧ ಆರಂಭವಾದಾಗ ಕಾರ್ಯಾಗಾರದ ಕೆಲಸ ಹೆಚ್ಚಾಗಿ ಲಾಭ ವೃದ್ಧಿಗೊಂಡಿದೆ. ಆ ಲಾಭದಿಂದ ಒಂದು ಸಾ ಮಿಲ್ಲನ್ನು (ಮರ ಸಿಗಿಯುವ ಯಂತ್ರ) ಕಾರ್ಯಾಗಾರಕ್ಕೆ ಖರೀದಿಸಲಾಯಿತು. ಅಂದಿನಿಂದ ಈ ವರ್ಕ್‌ಶಾಪ್ ನಿಧಾನವಾಗಿಯಾದರೂ ಪ್ರಗತಿಯ ಮೆಟ್ಟಿಲೇರುತ್ತಾ ಸಾಗಿದೆ. ಆದರೆ ವ್ಯಾಪಾರದೊಂದಿಗೆ ದಾನ ಧರ್ಮ ಎಂಬ ಅಂಶಗಳು ಬೆರೆತುಕೊಂಡಿರುವುದರಿಂದ ಪ್ರಗತಿಯ ವೇಗ ಕುಂಠಿತವಾಗಿದೆ ಎಂಬುದು ವ್ಯವಸ್ಥಾಪಕರ ಅಭಿಪ್ರಾಯವಾಗಿದೆ. ಲಾಭ ಮಾಡುವ ಉದ್ದೇಶದಿಂದ ಕಾರ್ಯಾಗಾರದ ಸ್ಥಾಪನೆ ಮಾಡಿದುದ್ದಲ್ಲ ಎಂಬುದು ಕಾರ್ಮಿಕರ ಕಲ್ಯಾಣಕ್ಕಾಗಿ ಧರ್ಮಗುರುಗಳು ಹಮ್ಮಿಕೊಂಡಿರುವ ಸಹಕಾರಿ ಸಂಘ, ಮರಣನಿಧಿ, ರೋಗಿಗಳ ನಿಧಿ, ಅಕ್ಕಿ ಸ್ಟೋರ್, ಕ್ಲಬ್, ವಾದ್ಯ, ಔಷಧಾಲಯ, ಆಶ್ರಮ, ಗುರುಗಳ ಧರ್ಮಾರ್ಥ ಸೇವೆ ಮುಂತಾದ ಯೋಜನೆಗಳಿಂದ ಸ್ಪಷ್ಟವಾಗುತ್ತದೆ. ವರ್ಕ್‌ಶಾಪ್ ಅಧೀನದಲ್ಲಿರುವ ಮನೆಗಳನ್ನು ಕಾರ್ಮಿಕರಿಗೆ ಚಿಲ್ಲರೆ ಅಥವಾ ನಾಮವಕಾಸ್ತೆ ಬಾಡಿಗೆಗೆ ಕೊಟ್ಟಿರುವುದು ಅಥವಾ ಮನೆ ಕಟ್ಟಲು ಸುಲಭ ಸಾಲ ಯೋಜನೆ, ಕಾರ್ಮಿಕರ ಕಲ್ಯಾಣಕ್ಕಾಗಿರುವ ಇತರ ಸೇವಾ ಯೋಜನೆಗಳಾಗಿವೆ. ಇಂದಿನ ಕಾಲದಲ್ಲಿ ಬ್ಯಾಂಕ್‌ಗಳು ಮತ್ತು ಸಹಕಾರಿ

ಸಂಘಗಳು ನೀಡುತ್ತಿರುವ ನಾನಾ ವಿಧದ ಸಾಲ ಯೋಜನೆಗಳಿಗೆ ಇದು ಸ್ಫೂರ್ತಿಯಾಗಿದೆ ಎಂದು ನನ್ನ ಅಭಿಪ್ರಾಯವಾಗಿದೆ. ಅಲ್ಲದೆ, ಹಲವು ಕಾರ್ಮಿಕರಿಗೆ ಜಾಗ ಕ್ರಯಕ್ಕೆ ತೆಗೆದುಕೊಳ್ಳಲು ಮತ್ತು ಮನೆಕಟ್ಟಲು ಬಡ್ಡಿ ರಹಿತ ಸಾಲ ಕೊಟ್ಟು ಅವರು ಸಾಲವನ್ನು ಪ್ರತೀ ತಿಂಗಳು ಸ್ವಲ್ಪ ಸ್ವಲ್ಪ ಹಿಂದಿರುಗಿಸುವ ಸೌಲಭ್ಯವನ್ನು ವರ್ಕ್‌ಶಾಪ್ ಮಾಡಿಕೊಟ್ಟಿದೆ. ಇಂತಹ ಯೋಜನೆಗಳು ಇಂದಿನ ದಿನಗಳಲ್ಲಿ ಬ್ಯಾಂಕುಗಳು ಮತ್ತು ಸರ್ಕಾರಿ ಮತ್ತು ಸರ್ಕಾರೇತರ ಸಂಘಟನೆಗಳು ಹಮ್ಮಿಕೊಳ್ಳುತ್ತಿವೆ. ಆದರೆ ಐವತ್ತು ವರ್ಷಗಳ ಹಿಂದೆಯೇ ಇಂತಹ ಬಹುಮುಖಿ ಯೋಜನೆಗಳನ್ನು ಕಾರ್ಯಾಗತಗೊಳಿಸಿ ಬಡಬಗ್ಗರಿಗೆ, ನಿರ್ಗತಿಕರಿಗೆ 'ಕುಟುಂಬಕ್ಕೊಂದು ಸೂರು" ಮಾದರಿಯಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಪರೋಕ್ಷವಾಗಿ ಕಾರಣರಾಗಿದ್ದಾರೆ. ವರ್ಕ್‌ಶಾಪಿನಲ್ಲಿ ದುಡಿಯುವ ಸುಮಾರು ೨೦೦ ಕಾರ್ಮಿಕರಿಗೆ ಕೈತುಂಬಾ ಸಂಬಳ ನೀಡಿ ವರ್ಷಕ್ಕೆ ಮೂರು ತಿಂಗಳ ಬೋನಸ್ ನೀಡಿ ಕಾರ್ಯಾಗಾರದ ಇಂಜಿನಿಯರಿಂಗ್, ಸಾಮಿಲ್, ಪ್ರತಿಮೆ ಮತ್ತು ಸ್ಮಾರಕಗಳನ್ನು ತಯಾರಿಸುವ ವಿಭಾಗಗಳಲ್ಲಿ ಕೆಲಸ ನೀಡುತ್ತಿದ್ದಾರೆ. ಹಂಚಿನ ಕಾರ್ಖಾನೆಗಳಿಗೆ, ಸಾ ಮಿಲ್ಲುಗಳಿಗೆ, ಎಣ್ಣೆಯ, ಕಬ್ಬಿನ ಗಾಣ ಮತ್ತು ಗೇರು ಬೀಜದ ಕಾರ್ಖಾನೆಗಳಿಗೆ ಬೇಕಾದ ಪರಿಕರಗಳನ್ನು ತಯಾರು ಮಾಡುವ ಈ ಕಾರ್ಯಾಗಾರ ಭಾರತದಲ್ಲಿ ತುಂಬಾ ಹೆಸರುವಾಸಿಯಾಗಿದೆ.[೧೦೫] ಮಹಾಯುದ್ಧಗಳ ಸಮಯದಲ್ಲಿ ಸೇನೆ ಹಾಗೂ ನೌಕಾ ಪಡೆಯ ಸ್ಥಳೀಯ ಹಾಗೂ ಕೈಗಾರಿಕಾ ಬೇಡಿಕೆಗಳನ್ನು ಈಡೇರಿಸುವುದರೊಂದಿಗೆ ಸೇತುವೆ ಮತ್ತು ಮೋರಿಗಳ ನಿರ್ಮಾಣವನ್ನೂ ಕೈಗೆತ್ತಿಕೊಂಡಿತ್ತು.[೧೦೬] ಈ ಮೂಲಕ ವಸಾಹತು ಸರ್ಕಾರದ ಕಷ್ಟದ ದಿನಗಳಲ್ಲಿ ಅವರಿಗೆ ನೆರವಾಗುವುದರೊಂದಿಗೆ ಸ್ವಾಮಿ ನಿಷ್ಠೆಯನ್ನು ಮೆರೆದಿದ್ದಾರೆ. ಪ್ರಸ್ತುತ ಫೌಂಡ್ರಿ ವಿಭಾಗ, ಕ್ಲಾಸಿಕ್ ವುಡನ್ ಪ್ಯಾಟರ್ನ್ಸ್, ಮೆಶಿನ್ ಶಾಪ್, ಫಿಟ್ಟಿಂಗ್ ಮತ್ತು ಜೋಡಣಾ ವಿಭಾಗ, ಚೇಸಿಸ್ ಪುನರ್ ಆಕಾರ ವಿಭಾಗ, ಆಟೋ ಮೊಬೈಲ್ ರಿಪೇರಿ ಮತ್ತು ಸರ್ವಿಸ್ ಸ್ಟೇಶನ್, ಕಾರ್ಪೆಂಟರಿ ವಿಭಾಗ, ವಿಗ್ರಹ ಮಾಡುವ ಹಾಗೂ ಕೈಗಾರಿಕಾ ತರಬೇತಿ ಕೇಂದ್ರವನ್ನು ಸಂತ ಜೋಸೆಫರ ಕಾರ್ಯಾಗಾರ ಒಳಗೊಂಡಿದೆ.[೧೦೭]

ಮಂಗಳೂರು ನಗರದ ಜೆಪ್ಪು ಸೈಂಟ್ ಜೋಸೆಫ್ ಕೈಗಾರಿಕಾ ತಾಂತ್ರಿಕ ಸಂಸ್ಥೆಯಲ್ಲಿ ಕಾರ್ಪೆಂಟರ್, ಕಟ್ಟಿಂಗ್ ಮತ್ತು ಹೊಲಿಗೆ (ಮಹಿಳೆಯರಿಗೆ), ಡೀಸೆಲ್ ಮೆಕ್ಯಾನಿಕ್, ಮೆಶಿನಿಸ್ಟ್, ಟರ್ನರ್, ಫಿಟ್ಟರ್, ಮೋಟಾರು ವಾಹನ ಮೆಕ್ಯಾನಿಕ್, ತರಬೇತಿ ನೀಡಲಾಗುತ್ತಿದೆ. 'ಸೆಮಿನರಿ ವರ್ಕ್‌ಶಾಪ್', ಕೈಗಾರಿಕಾ ತಾಂತ್ರಿಕ ತರಬೇತಿ ಸಂಸ್ಥೆಗೆ ತರಬೇತಿಯ ಸಂಪನ್ಮೂಲವಾಗಿದೆ. ಇಲ್ಲಿಯ ಸಂಸ್ಥೆಯಲ್ಲಿ ತರಬೇತಿ ಪಡೆದ ಹಾಗೂ ಬೇರೆ ಸಂಸ್ಥೆಗಳಲ್ಲಿ 'ನ್ಯಾಷನಲ್ ಸರ್ಟಿಫಿಕೇಟ್ ಇನ್ ಒಕೇಶನಲ್ ಟ್ರೈನಿಂಗ್' ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಸಂತ ಜೋಸೆಫರ ಅಸೈಲಂ ಇಂಡಸ್ಟ್ರೀಯಲ್ ವರ್ಕ್‌ಶಾಪ್‌ನಲ್ಲಿ ಅಪ್ರೆಂಟಿಸ್ ತರಬೇತಿಗೆ ಅವಕಾಶ ಕಲ್ಪಿಸಲಾಗುತ್ತಿದೆ. ಸಿಮೆಂಟ್ ಡೋರ್ ಮೋಲ್ಡ್,

ಸಿಲಿಕಾನ್ ಬಾಕ್ಸ್ (ಶವ ದಹನ ಉಪಕರಣ), ಎಲ್ಲಾ ರೀತಿಯ ಯಂತ್ರಗಳ ಬಿಡಿ ಭಾಗಗಳ ತಯಾರಿ, ಮೆಶಿನಿಂಗ್ ಮತ್ತು ಫಿಟ್ಟಿಂಗ್ ಮಾಡುವ ವ್ಯವಸ್ಥೆ ಇದೆ. ಭಾರತದ ನಗರ ಪ್ರದೇಶಗಳಲ್ಲಿ ಶವವನ್ನು ವಿದ್ಯುತ್ ಶವಗಾರಗಳಲ್ಲಿ ಸುಡುವ ಪದ್ದತಿ ಇದೆ. ಆ ರೀತಿ ಸುಡುವುದರಿಂದ ಉತ್ತರ ಕ್ರಿಯೆಗೆ ಅವಶ್ಯವಿರುವ ಬೂದಿ ದೊರೆಯುವುದಿಲ್ಲ. ಆ ಸಮಸ್ಯೆಯನ್ನು ಮನಗಂಡ ಸಂತ ಜೋಸೆಫರ ಕಾರ್ಯಾಗಾರ, ನವೀನ ಮಾದರಿಯ ಶವ ದಹನ ಉಪಕರಣವನ್ನು ಸಂಶೋಧಿಸಿದೆ. ಈ ಪ್ರಕಿಯೆಯಲ್ಲಿ, ಶವವನ್ನು ಕಟ್ಟಿಗೆಯೊಂದಿಗೆ ಸುಡುವುದರಿಂದ ಉತ್ತರ ಕ್ರಿಯೆಗೆ ಅಗತ್ಯವಿರುವ ಅಸ್ಥಿ ಅಥವಾ ಬೂದಿ ಪಡೆಯದಾಗಿದೆ. ಶವ ದಹನ ಉಪಕರಣದ ತಯಾರಿಕೆಯ ಪೇಟೆಂಟ್ ಹೊಂದಿರುವ ಸೈಂಟ್ ಜೋಸೆಫ್ ವರ್ಕ್‌ಶಾಪ್ ಭಾರತದಾದ್ಯಂತ ಈ ಉಪಕರಣವನ್ನು ಪೂರೈಸಿ ಸಹಕರಿಸುತ್ತಿದೆ.[೧೦೮]

ಮದ್ರಾಸಿನಲ್ಲಿ ೧೯೦೩-೧೯೦೪ರಲ್ಲಿ ಏರ್ಪಡಿಸಿದ್ದ ಕೈಗಾರಿಕಾ ಮತ್ತು ಕಲಾ ಪ್ರದರ್ಶನದಲ್ಲಿ, ಕಥೋಲಿಕ ಕ್ರೈಸ್ತರು ಭಾಗವಹಿಸಿ ಅಲ್ಲಿ ಪ್ರದರ್ಶಿಸಿದ್ದ ವಸ್ತುಗಳಿಗೆ ಪದಕಗಳು, ಬಹುಮಾನಗಳು ಮತ್ತು ಪ್ರಶಂಸಾ ಪತ್ರಗಳನ್ನು ಪಡೆದಿದ್ದಾರೆ.[೧೦೯] ಕಥೋಲಿಕ ಕ್ರೈಸ್ತ ಸಮಾಜದ ಯಶಸ್ವಿ ಕೈಗಾರಿಕೋದ್ಯಮಿಗಳಲ್ಲಿ 'ಸೋಜಾ ಸಹೋದರರು' ಅಗ್ರಗಣ್ಯರು. ಇವರು ನಡೆಸುತ್ತಿದ್ದ ಕೆಲವು ಸಂಸ್ಥೆಗಳು ಸೋಜಾ ಅಲ್ಯೂಮಿನಿಯಂ, ಸೋಜಾ ಟ್ರೇಡಿಂಗ್ ಕಂಪೆನಿ, ಹಿಂದೂಸ್ತಾನ್ ಮೆಟಲ್ ರೋಲಿಂಗ್ ಮಿಲ್ಸ್, ಗ್ರೇಟ್ ಇಂಡಿಯಾ ಫೈನಾನ್ಸ್ ಎಂಡ್ ಇನ್‌ವೆಸ್ಟ್‌ಮೆಂಟ್ಸ್, ಕೆನರಾ ಕ್ಯಾಶ್ಯೂ ಇಂಡಸ್ಟ್ರೀಸ್, ಸೋಜಾ ಸೇಲ್ಸ್ ಕಾರ್ಪೊರೇಶನ್, ಸೋಜಾ ಇಲೆಕ್ಟ್ರೋನಿಕ್ಸ್, ಸೋಜಾ ಫರ್ನಿಚರ್ ಮತ್ತು ಗ್ಲೋಬ್ ಇಂಟರ್ ನ್ಯಾಶನಲ್ ಟ್ರಾವೆಲ್ಸ್. ಈ ಸಂಸ್ಥೆಗಳಲ್ಲಿ ಎಲ್ಲ ವರ್ಗದ ಮತ್ತು ಜಾತಿಯ ಸುಮಾರು ೧೫೦೦ ಕಾರ್ಮಿಕರು ದುಡಿಯುತ್ತಿದ್ದಾರೆ. ಇಲ್ಲಿ ದುಡಿಯುವ ಹೆಚ್ಚಿನ ಕಾರ್ಮಿಕರು ಅಶಿಕ್ಷಿತ ಮಹಿಳೆಯರಾಗಿದ್ದು ಬೇರೆ ಯಾವ ಕೆಲಸದಲ್ಲಿಯೂ ಸಿಗದಷ್ಟು ಸಂಬಳ ಮತ್ತು ಇತರ ಸವಲತ್ತುಗಳನ್ನು ಗಳಿಸುವುದರಿಂದ ಕುಟುಂಬ ನಿರ್ವಹಣೆಗೆ ಆಧಾರವಾಗುತ್ತಿದ್ದಾರೆ.[೧೧೦]

## ೫.೯. ಕಾಫಿ ಸಂಸ್ಕರಣಾ ಉದ್ಯಮ

೧೮೪೮ರಲ್ಲಿ ಎ.ಜೆ.ಸಲ್ಡಾನ್ಹಾರವರು ಆರಂಭಿಸಿದ 'ಬೋಳೂರು ಕಾಫಿ ಕ್ಯೂರಿಂಗ್ ವರ್ಕ್ಸ್', ಕಥೋಲಿಕ ಕ್ರೈಸ್ತರ ಪ್ರಪ್ರಥಮ ಕಾರ್ಖಾನೆಯಾಗಿದೆ. ಋತುಮಾನದಲ್ಲಿ, ಅಂದರೆ ಡಿಸೆಂಬರ್‌ನಿಂದ ಎಪ್ರಿಲ್‌ವರೆಗೆ ಈ ಉದ್ಯೋಗದಲ್ಲಿ ತೊಡಗಿಸಿಕೊಳ್ಳುತ್ತಿದ್ದವರ ಸಂಖ್ಯೆ ೧,೬೦೩.[೧೧೧] ೧೯೯ರಲ್ಲಿ ಪಿ.ಎಫ್. ಎಕ್ಸ್. ಸಲ್ಡಾನ್ಹಾ ಆಂಡ್ ಸನ್ಸ್ ಸಂಸ್ಥೆಯವರು 'ಹೈಲೆಂಡ್ ಕಾಫಿ ವರ್ಕ್ಸ್' ಆರಂಭಿಸಿದರು. ಆ ಸಂಸ್ಥೆಯಲ್ಲಿ ವರ್ಷಕ್ಕೆ ೩,೫೦೦ ಟನ್ ಕಾಫಿ ಸಂಸ್ಕರಣೆ ಮಾಡಲಾಗುತ್ತಿತ್ತು. ಆ ಉದ್ಯಮಗಳಿಂದಾಗಿ ತಮ್ಮ ಮತ್ತು ತಮ್ಮ

ಕುಟುಂಬದ ಜೀವನದೊಂದಿಗೆ ನೂರಾರು ಕುಟುಂಬಗಳಿಗೆ ಅನುದಿನದ ಆಹಾರವನ್ನು ಗಳಿಸಲು ಸಾಧ್ಯವಾಗಿದೆ. ಅವುಗಳಿಂದಾಗಿ ಸಮಾಜದ ಅಭಿವೃದ್ಧಿಯಾಗಿದೆ. ನಿರುದ್ಯೋಗದ ಸಮಸ್ಯೆ ಸ್ವಲ್ಪ ಮಟ್ಟಿಗೆ ನಿವಾರಣೆಯಾಗಿದೆ.[೧೧೨]

**೫.೧೦. ಕೊಡೆ ಉದ್ಯಮ**

ಇಪ್ಪತ್ತನೇ ಶತಮಾನದ ಎರಡನೇ ದಶಕದಲ್ಲಿ ಬೆಂದೂರಿನ ಎ.ಆರ್. ಡಿಸೋಜಾರವರು 'ಪೊಂಪೈ ಅಂಬ್ರೆಲ್ಲಾ ಮ್ಯಾನುಫೆಕ್ಚರಿಂಗ್ ಕಂಪನಿ' ಹಾಗೂ ಎಲಿಯಾಸ್ ಪಿಂಟೋರವರು 'ಡೆಕ್ಕನ್ ಅಂಬ್ರೆಲ್ಲಾ ಮಾರ್ಟ್' ಎಂಬ ಕೊಡೆ ತಯಾರಿಕಾ ಉದ್ಯಮ ಆರಂಭಿಸಿ ಇತರರಿಗೆ ಆ ಉದ್ಯಮದಲ್ಲಿ ತೊಡಗಿಸಿಕೊಳ್ಳಲು ಪ್ರೇರಣೆಯಾಗಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಳೆಗಾಲದಲ್ಲಿ ವಿಪರೀತ ಮಳೆಯಾಗುವುದರಿಂದ ಕೊಡೆಯ ಉದ್ಯಮದ ಅವಶ್ಯಕತೆ ಬಹಳ ಇತ್ತು. ಇಂದು ಜಿಲ್ಲೆಯಲ್ಲಿ ಹಲವಾರು ಕಂಪನಿಗಳು ವಿವಿಧ ಮಾರ್ಕಿನ ಕೊಡೆಗಳನ್ನು ತಯಾರಿಸಿ ಜನರಿಗೆ ಸ್ಪರ್ಧಾತ್ಮಕ ದರದಲ್ಲಿ ಮಾರಾಟ ಮಾಡಿ ಜೀವನ ನಡೆಸುತ್ತಿದ್ದರೆ, ಅದಕ್ಕೆ ಮೂಲ ಕಾರಣರು ಕಥೋಲಿಕ ಕ್ರೈಸ್ತ ಸಮುದಾಯದ ಎ.ಆರ್.ಡಿಸೋಜ ಮತ್ತು ಕುಟುಂಬಸ್ಥರು.[೧೧೩]

**೫.೧೧. ಬೇಕರಿ ಉದ್ಯಮ**

ಬೇಕರಿ ಉದ್ಯಮದಲ್ಲಿಯೂ ಕಥೋಲಿಕ ಕ್ರೈಸ್ತರು ತಮ್ಮನ್ನು ತೊಡಗಿಸಿಕೊಂಡು ದುಡಿಯುತ್ತಿದ್ದಾರೆ. ಮಂಗಳೂರಿನ ಬಲ್ಮಠದಲ್ಲಿ ಕಥೋಲಿಕ ಕ್ರೈಸ್ತರು ತಮ್ಮ ಮೊದಲ ಬೇಕರಿಯನ್ನು ೧೯೦೫ರಲ್ಲಿ 'ಎಂ. ವಾಸ್ ಆಂಡ್ ಸನ್ಸ್' ಎಂಬ ಹೆಸರಿನಲ್ಲಿ ಆರಂಭಿಸಿದರು. ತರುವಾಯ ೧೯೧೮ರಲ್ಲಿ 'ಎಫ್. ಡಿಕೋಸ್ತಾ ಆಂಡ್ ಸನ್ಸ್' ಹಾಗೂ ೧೯೨೫ರಲ್ಲಿ 'ಎಂ. ಡಿಸೋಜಾ ಆಂಡ್ ಸನ್ಸ್' ಬೇಕರಿಗಳು ಮಂಗಳೂರಿನಲ್ಲಿ ಆರಂಭವಾಯಿತು. ಬೇಕರಿ ಉದ್ಯಮದಿಂದ ಸ್ಫೂರ್ತಿಯನ್ನು ಪಡೆದು ಇತರರೂ ಕಾರ್ಯೋನ್ಮುಖರಾದರು. ಇವರಲ್ಲಿ ಮುಖ್ಯವಾಗಿ ಫಳ್ನೀರಿನ ಸೈಂಟ್ ಜೋಸೆಫ್ಸ್ ಬೇಕರಿ, ಕಂಕನಾಡಿಯ ಕ್ರಾಸ್ತಾ ಬೇಕರಿ, ಬಿಜೈಯ ಪಿಂಟೋ ಬೇಕರಿ, ಜೆಪ್ಪುವಿನ ಇಲೈಟ್ ಬೇಕರಿ, ಸುರತ್ಕಲ್ಲಿನ ಸೈಂಟ್ ಆ್ಯಂಟನಿಸ್ ಬೇಕರಿ, ಪುತ್ತೂರಿನ ಪ್ರಶಾಂತ್ ಬೇಕರಿ,ಉಡುಪಿಯ ಆಲ್ವಿನ್ ಬೇಕರಿ, ಗೋವಾ ಬೇಕರಿ ಇತ್ಯಾದಿಗಳು ಗ್ರಾಹಕರ ಅಗತ್ಯತೆಗಳನ್ನು ಈಡೇರಿಸುತ್ತಿವೆ.[೧೧೪]

## ೫.೧೨. ಹೋಟೆಲ್ ಮತ್ತು ಕೇಟರಿಂಗ್ ಉದ್ಯಮ

ಹೋಟೆಲ್ ಉದ್ಯಮವನ್ನು ಹಂಪನಕಟ್ಟೆಯಲ್ಲಿ ಇನಾಸ್ ಪಿರೇರಾರವರು ೧೯೨೧ರಲ್ಲಿ ಆರಂಭಿಸಿದರು. ಅಂತೆಯೇ, ಅಲ್ಬುಕರ್ಕ್ ಕುಟುಂಬದವರ ಉಳ್ಳಾಲದ 'ಸಮ್ಮರ್ ಸ್ಯಾಂಡ್ಸ್', ಎಡ್ವಿನ್ ಲೋಬೋರ 'ಹೋಟೆಲ್ ಪ್ರೆಸಿಡೆಂಟ್', ಕಂಕನಾಡಿಯ 'ಹೋಟೆಲ್ ಕೋಸ್ತಾ', ಹಾಲಿವುಡ್ ರೆಸ್ಟೋರೆಂಟ್, ಮತ್ತು ಜೆಪ್ಪುವಿನ 'ಹೋಟೆಲ್ ಮಂಗಳಾ' ಮಂಗಳೂರಿನ ಹೆಸರಾಂತ ಹೋಟೆಲ್ ಉದ್ದಿಮೆಗಳಾಗಿವೆ.[೧೧೫] ಕೇಟರಿಂಗ್ ಉದ್ದಿಮೆ ಯಲ್ಲಿ ಹೆಸರು ಮಾಡಿದ ಎಂ. ಡಿಸೋಜ ಆಂಡ್ ಸನ್ಸ್ ಸಂಸ್ಥೆಯವರು ೧೯೬೮ರಲ್ಲಿ ಈ ಉದ್ದಿಮೆಗೆ ಪಾದಾರ್ಪಣೆ ಮಾಡಿದರು. ಈ ಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವ ಇತರರೆಂದರೆ: ತೋಮಸ್ ಕುಕ್, ಜಿ.ಡಿ.ಎಸ್., ಈರೋಡ್ಸ್, ಬ್ಲೂಬರ್ಡ್ಸ್, ಪತ್ರಾವೊ, ಎವರೆಸ್ಟ್ ಜೊಜೊ , ಸಿಕ್ವೇರಾ, ಳೆಸ್ಟರ್, ಜ್ಯೋತಿ, ಕ್ರಾಸ್ತಾ, ಅನಿಲ್, ಸಿಟಿ ಕೇಟರರ್ಸ್ ಇತ್ಯಾದಿ. ಕೇಟರಿಂಗ್ ಉದ್ದಿಮೆಯಿಂದಾಗಿ ಸಮಾರಂಭ ಏರ್ಪಾಡಿಸುವವರ ಹೊರೆ ಕಡಿಮೆಯಾಗಿರುವುದು ಮಾತ್ರವಲ್ಲದೆ ಇತರರಿಗೆ ಅವಲಂಬಿಸಿಕೊಂಡಿರುವುದು ಕಡಿಮೆಯಾಗಿದೆ. ಕೇಟರಿಂಗ್ ಉದ್ದಿಮೆ ಎಲ್ಲಾ ವರ್ಗದ ಜನರಿಗೆ ಉದ್ಯೋಗ ಅವಕಾಶ ಕಲ್ಪಿಸಿದೆ. ಅಲ್ಲದೆ, ಹಲವರು ತಮ್ಮ ಸ್ವಂತ ಉದ್ದಿಮೆಗಳನ್ನು ಸ್ಥಾಪಿಸಲು ಉತ್ತಮ ಅವಕಾಶವನ್ನು ಒದಗಿಸಿ ಕೊಟ್ಟಿದೆ. ಕೇಟರಿಂಗ್ ಕ್ಷೇತ್ರದಲ್ಲಿ ಏರ್ಪಟ್ಟಿರುವ ಸ್ಪರ್ಧೆಯಿಂದಾಗಿ ಶುಚಿಯಾದ ಮತ್ತು ರುಚಿಕರವಾದ ಆಹಾರವನ್ನು ಸ್ಪರ್ಧಾತ್ಮಕ ದರದಲ್ಲಿ ಪಡೆಯುವ ಅವಕಾಶ ಗಿರಾಕಿಗಳಿಗೆ ದೊರೆತಿದೆ.[೧೧೬]

## ೫.೧೩. ಗೇರು ಸಂಸ್ಕರಣಾ ಕಾರ್ಖಾನೆ

ಗೋಡಂಬಿ ಸಂಸ್ಕರಣಾ ಉದ್ದಿಮೆಯು ಶತಮಾನಕ್ಕಿಂತಲೂ ಪುರಾತನವಾದ ಹಿನ್ನಲೆ ಹೊಂದಿದ್ದರೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಉದ್ಯಮದ ಚಾಲನೆ ೧೯೩೦ರ ದಶಕದಲ್ಲಿ ಆಗಿರುವುದು ಕಂಡುಬರುತ್ತದೆ. ಗೇರು ಮರವು ಆಫ್ರಿಕಾ ಖಂಡದ ಉಷ್ಣವಲಯದಲ್ಲಿ ಯಥೇಚ್ಛವಾಗಿ ಬೆಳೆಯುವ ಬೆಳೆ. ಪೋರ್ಚುಗೀಸರು ಅದನ್ನು ಗೋವೆಗೆ ತಂದು ನೆಟ್ಟು ಬೆಳೆಸಿದರು. ಅಂದಿನಿಂದ ಅದು ಪಶ್ಚಿಮ ಕರಾವಳಿಯಲ್ಲಿ ಧಾರಾಳವಾಗಿ ಬೆಳೆದುಕೊಂಡು ಬರುತ್ತಿದೆ. ತುಳು ಜನರು ಅದರ ಹಣ್ಣನ್ನು 'ಗೋಂಕು" (ಗೋವೆ ಕುಕ್ಕು ಅಥವಾ ಗೋವೆಯ ಮಾವು) ಹಾಗೂ ಅದರ ಬೀಜವನ್ನು ಪಂಕೊರ್ಟೆ (ಪರಂಗಿಕೊಟ್ಟೆ= ಫರೆಂಗಿಯವರ ಬೀಜ) ಎಂದು ಕರೆಯುತ್ತಾರೆ. ಪ್ರಾರಂಭದಲ್ಲಿ ಐಮನ್ ಮತ್ತು ಆರ್ನೋನ್ ಎಂಬ ಬಾಸೆಲ್ ಮಿಶನ್ ಸಹೋದರರು ಗೇರು ಬೀಜವನ್ನು ಪರದೇಶಗಳಿಗೆ ರಫ್ತು ಮಾಡುತ್ತಿದ್ದರು. ಆದರೆ ಅವರು ಆ ವ್ಯಾಪಾರವನ್ನು ಹೆಚ್ಚು ಮುಂದುವರಿಸಲು ಸಾಧ್ಯವಾಗಲಿಲ್ಲ.[೧೧೭] ಆದುದರಿಂದ ಇತರರು

ಅದನ್ನು ಮುಂದುವರಿಸಿ ಅಭಿವೃದ್ಧಿ ಪಡಿಸಿದರು. ೧೯೨೪ರಲ್ಲಿ ಬಾಸೆಲ್ ಮಿಶನ್ ಕ್ರೈಸ್ತರು 'ಪಿಯರ್‌ಲೆಸ್ಸಿ ಆಂಡ್ ಕಂಪೆನಿ ಲಿಮಿಟೆಡ್' ಎಂಬ ಹೆಸರಿನ ಮೊತ್ತ ಮೊದಲ ಗೇರುಬೀಜ ಕಾರ್ಖಾನೆಯನ್ನು ಸ್ಥಾಪಿಸಿದರು.[೧೧೮] ಗೋಡಂಬಿ ಉದ್ದಿಮೆಯಲ್ಲಿ ತೊಡಗಿಸಿಕೊಂಡ ಪ್ರಪ್ರಥಮ ಕಥೋಲಿಕ ಕ್ರೈಸ್ತರೆಂದರೆ ಬಾಲ್ತಾಜಾರ್ ಫೆರ್ನಾಂಡಿಸ್. ಅವರು ೧೯೩೫ರಲ್ಲಿ ಕೇರಳದ ಕ್ವಿಲೋನಿಗೆ ತೆರಳಿ ಈ ಉದ್ದಿಮೆಯ ಬಗ್ಗೆ ಮಾಹಿತಿ ಪಡೆದು ೧೯೩೯ರಲ್ಲಿ ಅಲ್ಲಿಯೇ ತಮ್ಮ ಸ್ವಂತ ಉದ್ದಿಮೆಯನ್ನು ಆರಂಭಿಸಿದರು. ತರುವಾಯ ತಾಯ್ನಾಡಿಗೆ ಮರಳಿದ ಅವರು ತಮ್ಮ ಸಹೋದರರೊಡಗೂಡಿ 'ಫೆರ್ನಾಂಡಿಸ್ ಬ್ರದರ್ಸ್' ಎಂಬ ಸಂಸ್ಥೆಯನ್ನು ಸ್ಥಾಪಿಸಿ ೧೯೮೦ರವರೆಗೆ ಅದನ್ನು ಮುನ್ನಡೆಸಿದ್ದಾರೆ. ೧೯೮೦ರ ದಶಕದಲ್ಲಿ ರಾಜ್ಯದಲ್ಲಿಯೇ ಅತ್ಯಂತ ದೊಡ್ಡ ಕಾರ್ಖಾನೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದ 'ಫೆರ್ನಾಂಡಿಸ್ ಬ್ರದರ್ಸ್' ಸಂಸ್ಥೆಯನ್ನು ೧೯೮೮ರಲ್ಲಿ ಪುತ್ತೂರಿನ ಸೋಜಾ ಬ್ರದರ್ಸ್‌ಗೆ ಹಸ್ತಾಂತರಿಸಿದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಮಾರು ೧೮೦ ಗೋಡಂಬಿ ಸಂಸ್ಕರಣಾ ಕಾರ್ಖಾನೆಗಳಿದ್ದವು.[೧೧೯] ಗೇರು ಉದ್ದಿಮೆಯು ಅಭಿವೃದ್ಧಿ ಹೊಂದಿದ್ದರಿಂದ ಜಿಲ್ಲೆಯ ಎಲ್ಲಾ ವರ್ಗದ ಮಹಿಳಾ ಕಾರ್ಮಿಕರಿಗೆ ಕೆಲಸ ಸಿಕ್ಕಿದೆ. ಈ ಕೈಗಾರಿಕೆಯ ಮೂಲಕ ಮಹಿಳಾ ಕಾರ್ಮಿಕರು ಬೇರೆ ಕಡೆಗಳಲ್ಲಿ ಸಂಪಾದಿಸುವುದಕ್ಕಿಂತ ಹೆಚ್ಚು ಸಂಪಾದಿಸುವಂತಾಗಿದೆ. ಬೇರೆ ಯಾವ ಕೈಗಾರಿಕೆಗಳಿಗಿಂತಲೂ ಈ ಕೈಗಾರಿಕೆಯ ಮೂಲಕ ಕಾರ್ಮಿಕರಿಗೆ ಖಾಯಂ ಕೆಲಸ ಸಿಗುವುದರಿಂದ ನಿರುದ್ಯೋಗದ ಸಮಸ್ಯೆ ತಕ್ಕಮಟ್ಟಿಗೆ ನಿವಾರಣೆಯಾಗಿದೆ.[೧೨೦] ಕಾರ್ಖಾನೆಯ ನಿಯಮಗಳು ಕಾರ್ಮಿಕರಲ್ಲಿ ಶಿಸ್ತು, ಸಮಯ ಪ್ರಜ್ಞೆ, ಶುಚಿತ್ವ, ಆರ್ಥಿಕ ಸ್ವಾವಲಂಬನೆಯಂತಹ ಗುಣಗಳನ್ನು ಬೆಳೆಸಿದೆ. ಒಟ್ಟಾರೆಯಾಗಿ ಹೇಳುವುದಾದರೆ ಮಹಿಳೆಯರು ಮನೆಯ ನಾಲ್ಕು ಗೋಡೆಗಳಿಗೆ ಸೀಮಿತವಾಗಿರದೆ ಸ್ವತಂತ್ರವಾಗಿ ದುಡಿಯಲು ಮತ್ತು ಸ್ತ್ರೀ ಸಬಲೀಕರಣಕ್ಕೆ ಉತ್ತಮ ಅವಕಾಶವನ್ನು ಕಲ್ಪಿಸಿದೆ.

**೫.೧೪.ಕೃಷಿ**

ಕೆನರಾ ಜಿಲ್ಲೆಯು ಕೃಷಿಗೆ ಯೋಗ್ಯವಾದ ಪ್ರದೇಶವಾಗಿದೆ. ಇಲ್ಲಿನ ಮುಖ್ಯ ಬೆಳೆಗಳೆಂದರೆ ಭತ್ತ, ಅಡಿಕೆ, ಕರಿಮೆಣಸು, ಏಲಕ್ಕಿ, ತೆಂಗು, ಮರಮುಟ್ಟುಗಳು ಮತ್ತು ಗಂಧದ ಎಣ್ಣೆ. ಇಲ್ಲಿ ಅರೇಬಿಯಾ, ಕಛ್, ಬಾಂಬೆ, ಮಲಬಾರ್ ಮತ್ತು ಗೋವೆಯೊಂದಿಗೆ ವ್ಯಾಪಾರ ನಡೆಯುತ್ತದೆ. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಕರಾವಳಿ ತೀರದ ಸಾಕಷ್ಟು ಪಾಳುಬಿದ್ದ ಜಮೀನನ್ನು ಖರೀದಿಸಿದ ಕಥೋಲಿಕ ಕ್ರೈಸ್ತರು ಮೆಣಸು, ರಾಗಿ, ಬೆಟ್ಟದ ಭತ್ತ (hill rice), ಗೆಣಸು ಇತ್ಯಾದಿ ಬೆಳೆಗಳನ್ನು ಬೆಳೆಸತೊಡಗಿದರು. ಮಂಗಳೂರಿನಲ್ಲಿ ಕೆಲವರು ವಾಣಿಜ್ಯ ಬೆಳೆಗಳ ಕೃಷಿಯಲ್ಲಿ ಕೂಡಾ ತೊಡಗಿಸಿಕೊಂಡಿದ್ದಾರೆ. ಈ ವಾಣಿಜ್ಯ ಬೆಳೆಗಳಲ್ಲಿ ಮಲ್ಲಿಗೆ ಮತ್ತು ಇತರ ಪರಿಮಳಭರಿತ ಹೂಗಳ ಕೃಷಿಗಾರಿಕೆ ಇದೆ.[೧೨೧] ದಿವಾನ್ ಬಹಾದುರ್ ಸತುರ್ನೈನ್ ಲೂಪಿಸ್ ಮಥಾಯಸ್ ಎಂಬವರು, ಸ್ಥಳೀಯ ಕೈಗಾರಿಕೆಗಳನ್ನು ಉತ್ತೇಜಿಸುವ

ಉದ್ದೇಶದಿಂದ ಪ್ರಾಯೋಗಿಕ ಪ್ರದರ್ಶನ ಫಾರ್ಮ್(ತೋಟ)ಗಳನ್ನು ಕಾರ್ಕಳದ ಸುರಾಲ್ ಎಂಬಲ್ಲಿ ಆರಂಭಿಸಿ ಅಲ್ಲಿ ನೆಲಗಡಲೆ, ಮಾರಿಷಿಯಸ್ ಕಬ್ಬು, ರಬ್ಬರ್, ಕರಿಮೆಣಸು ಇತ್ಯಾದಿ ಬೆಳೆಸಿದರು. ಅದೇ ರೀತಿ, ಮಂಗಳೂರಿನಲ್ಲಿ ಶುಂಠಿ ಸಂರಕ್ಷಿಸುವ ಮತ್ತು ಉಪ್ಪಿನಕಾಯಿ ಕಾರ್ಖಾನೆಗಳು ಹಾಗೂ ಕಾರ್ಕಳದಲ್ಲಿ ಸುಣ್ಣ ಮತ್ತು ಎಲುಬಿನ ಪುಡಿ ತಯಾರಿಸುವ ಕಾರ್ಖಾನೆಗಳನ್ನು ಸ್ಥಾಪಿಸಿ ಅಸಹಾಯಕ ವಿಧವೆಯರಿಗೆ ಮತ್ತು ಬಡ ಕಾರ್ಮಿಕರಿಗೆ ಉದ್ಯೋಗ ನೀಡಿದರು. ತೋಟಗಾರಿಕೆಯಲ್ಲಿ ತುಂಬಾ ಆಸಕ್ತಿ ಹೊಂದಿದ ಸತುರ್ನೈನರು ತಮ್ಮ ಪೂರ್ವಿಕರಿಂದ ಪಡೆದ ಸಣ್ಣ ಕಾಫಿ ತೋಟವನ್ನು ಅಭಿವೃದ್ಧಿ ಪಡಿಸಿದ್ದು ಮಾತ್ರವಲ್ಲದೆ ಇತರ ಐದು ಕಾಫಿ ತೋಟಗಳನ್ನು, ಒಂದು ಏಲಕ್ಕಿ ತೋಟವನ್ನು ಹಾಗೂ ೩೦೦ ಎಕರೆಗಳ ಚಹಾ ತೋಟವನ್ನು ಹೊಂದಿದ್ದರು. ಮೈಸೂರು ರಾಜ್ಯದಲ್ಲಿ ಚಹಾ ಬೆಳೆದ ಮೊದಲ ಭಾರತೀಯ ಎಂಬ ಕೀರ್ತಿಗೆ ಪಾತ್ರರಾಗಿದ್ದರು. ಇವರು ಚಿಕ್ಕಮಗಳೂರಿನ ಕೆಳಗೂರಿನಲ್ಲಿ ಸರ್ಕಾರದಿಂದ ಪಡೆದ ಅರಣ್ಯ ಭೂಮಿಯಲ್ಲಿ ೧೯೨೬ರಲ್ಲಿ ಚಹಾ ಬೆಳೆದು ಇತರಿಗೆ ಅನುಕರಣೀಯರೆನಿಸಿಕೊಂಡರು. ೧೯೪೦ರಲ್ಲಿ ಸತುರ್ನೈನ್‌ರವರು ದೈವಾಧೀನರಾದಾಗ ಆ ವೃತ್ತಿಯನ್ನು ಅವರ ಮಗ ಎಡ್ವರ್ಡ್ ಜಾನ್ ಮಥಾಯಸ್‌ರವರು ಮುಂದುವರಿಸಿ, ಕರ್ನಾಟಕದಾದ್ಯಂತ 'ಕೆಳಗೂರು ಚಹಾ'ವನ್ನು ಪ್ರಸಿದ್ಧಿ ಪಡಿಸಿದರು. ಚಹಾ, ಕಾರ್ಮಿಕ ಅವಲಂಬಿತ ಉದ್ದಿಮೆಯಾಗಿರುವುದರಿಂದ ಹಲವರಿಗೆ ಉದ್ಯೋಗ ಅವಕಾಶ ಸಿಕ್ಕಿದೆ. ಎಸ್ಟೇಟಿನ ಕಾರ್ಮಿಕರಿಗೆ ಅವಶ್ಯವಿರುವ ಎಲ್ಲಾ ಸೌಕರ್ಯಗಳನ್ನು ಆಡಳಿತ ಮಂಡಳಿಯವರು ಒದಗಿಸಿಕೊಟ್ಟಿರುವುದರಿಂದ ಕಾರ್ಮಿಕರು ಸಂತೃಪ್ತರಾಗಿ ಕೆಲಗೂರು ಎಸ್ಟೇಟನ್ನು 'ದೇವರಿತ್ತ ಜಾಗ' ಎಂದು ಪರಿಗಣಿಸಿದ್ದಾರೆ.[೧೨೨] ಹೀಗೆ, ಕರಾವಳಿ ಕ್ರೈಸ್ತರು ಕೃಷಿ ಉದ್ದಿಮೆಗೆ ಮುಖ್ಯವಾಗಿ, ವಾಣಿಜ್ಯ ಬೆಳೆಗಳಾದ ಕಾಫಿ ಮತ್ತು ಚಹಾದ ಅಭಿವೃದ್ಧಿಯಲ್ಲಿ ಮತ್ತು ಆ ಮೂಲಕ ಉದ್ಯೋಗ ಸೃಷ್ಟಿಯಲ್ಲಿ ತಮ್ಮ ಸೇವೆಯನ್ನು ಜಿಲ್ಲೆಗೆ ನೀಡಿದ್ದಾರೆ. ಆ ಕಾಲದಲ್ಲಿ ಉದ್ಯೋಗ ಅರಸಿ ಚಿಕ್ಕಮಗಳೂರು, ಶಿವಮೊಗ್ಗ ಹಾಗೂ ಕೊಡಗು ಜಿಲ್ಲೆಗಳಿಗೆ ವಲಸೆ ಹೋದ ಕರಾವಳಿಯ ಹಲವರು ತಮ್ಮ ಪರಿಶ್ರಮದ ಫಲವಾಗಿ ಎಸ್ಟೇಟ್ ಮಾಲಿಕರಾಗಿ ಹಾಗೂ ಉದ್ಯಮಿಗಳಾಗಿ ತಮ್ಮ ಸೇವೆಯನ್ನು ರಾಜ್ಯಕ್ಕೆ ಹಾಗೂ ದೇಶಕ್ಕೆ ಸಲ್ಲಿಸುತ್ತಿದ್ದಾರೆ. ಕಾಫಿ ಹಾಗೂ ಚಹಾ ಬೆಳೆಯಲು ಸೂಕ್ತವಾದ ಹವಾಮಾನ ಚಿಕ್ಕಮಗಳೂರು ಮತ್ತು ಸುತ್ತಮುತ್ತಲೂ ಇದೆ ಎಂಬ ಕಾರಣಕ್ಕಾಗಿ ಕರಾವಳಿ ಕ್ರೈಸ್ತರು ಅಲ್ಲಿ ಎಸ್ಟೇಟುಗಳನ್ನು ಸ್ಥಾಪಿಸಿದರು. ಹೀಗೆ ಜಿಲ್ಲೆಯ ಹೊರಗೆ ವಾಣಿಜ್ಯ ಬೆಳೆಗಳನ್ನು ಪರಿಚಯಿಸುವ ಮೂಲಕ ಅಲ್ಲಿ ಮುಂದೆ ಇಂತಹ ಬೆಳೆ ಬೆಳೆಯಲು ಸ್ಥಳೀಯರಿಗೆ ಸ್ಫೂರ್ತಿಯಾಗಿದ್ದಾರೆ. ಈಗ ಮೂಡಿಗೆರೆ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ 'ಟೀ ಎಸ್ಟೇಟ್'ಗಳು ಹುಟ್ಟಿಕೊಂಡಿದ್ದರೆ ಅದಕ್ಕೆ ಕರಾವಳಿ ಕ್ರೈಸ್ತರು ಮೂಲ ಕಾರಣವಾಗಿದ್ದಾರೆ. ಅಲ್ಲದೆ, ಕೆನರಾ ಜಿಲ್ಲೆಯ ಕಾರ್ಮಿಕರಿಗೆ ಉದ್ಯೋಗ ಅವಕಾಶವನ್ನೂ, ಒಳ್ಳೆಯ ಸಂಭಾವನೆಯನ್ನು ಪಡೆಯಲು

ಜಿಲ್ಲೆಯ ಹೊರಗೆ ಅವಕಾಶ ಮಾಡಿಕೊಟ್ಟಿದ್ದಾರೆ. ಅಂತೆಯೇ ನಿರುದ್ಯೋಗ ಸಮಸ್ಯೆ ನಿವಾರಣೆಗೆ ಇದೂ ಕೂಡಾ ಒಂದು ಮಾರ್ಗೋಪಾಯವಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಹೆಚ್ಚಿನ ಬಾಸೆಲ್ ಮಿಶನ್ ಕ್ರೈಸ್ತರು ಬೇಸಾಯಗಾರರಾಗಿದ್ದರು. ಹೆಚ್ಚಿನವರು ತಮ್ಮ ಪೂರ್ವಜರ ವೃತ್ತಿಯನ್ನು ತೊರೆದು ಇತರ ವೃತ್ತಿಗಳನ್ನು ಕೈಗೊಂಡದ್ದು ಸ್ಥಳೀಯ ಕ್ರೈಸ್ತರ ಬಡಸ್ಥಿತಿಗೆ ಮುಖ್ಯ ಕಾರಣವಾಗಿದೆ. ಹಲವಾರು ಮಿಶನರಿಗಳು ವ್ಯವಸಾಯದ ಕಡೆಗೆ ಗಮನ ಹರಿಸಿ ಕ್ರೈಸ್ತರ ಆರ್ಥಿಕ ಸ್ಥಿತಿ ಬಲಪಡಿಸಲು ಪ್ರಯತ್ನಪಟ್ಟಿದ್ದಾರೆ. ಕುಂದಾಪುರದ ಕಾಳಾವರದಲ್ಲಿ ಒಂದು ಕೃಷಿ ಕ್ಷೇತ್ರವನ್ನು ಪ್ರಾರಂಭಿಸಲು ಆಲೋಚಿಸುತ್ತಿರುವಾಗ ಮೊದಲ ಮಹಾಯುದ್ಧ ಪ್ರಾರಂಭವಾಗಿ ಆ ಕೆಲಸ ನಿಂತು ಹೋಯಿತು. ಕೆನರೀಸ್ ಇವಾಂಜಲಿಕಲ್ ಮಿಶನ್ನಿನ ಕಾಲದಲ್ಲಿ ಸರಕಾರದ ಕೃಷಿ ಇಲಾಖೆಯವರ ಪ್ರೇರಣೆಯಿಂದ ಮೂಡಬಿದ್ರೆಯಲ್ಲಿರುವ ಮಿಶನ್ ಫಾರ್ಮನ್ನು ೧೯೨೬ರಲ್ಲಿ ತೆರೆಯಲಾಗಿದೆ. ೧೯೨೭-೧೯೨೮ರ ಅವಧಿಯಲ್ಲಿ ಕೃಷಿ ಇಲಾಖೆಯವರ ಪ್ರೇರಣೆಯಿಂದ ೨೦೦೦ ತೆಂಗಿನ ಸಸಿಗಳನ್ನು ನೆಡಲಾಗಿದೆ. ೧೯೨೮ರಲ್ಲಿ ಬಾಸೆಲ್ ಮಿಶನ್, ವ್ಯವಸಾಯದ ತರಬೇತು ಹೊಂದಿದ ಮೇಲ್ವಿಚಾರಕನೊಬ್ಬನನ್ನು ನೇಮಿಸಿದೆ. ಅಂದಿನಿಂದ ಲಾಭದ ವಿಷಯ ಕೈಬಿಟ್ಟು ವ್ಯವಸಾಯದ ಶಿಕ್ಷಣವನ್ನು ಸರ್ವರಿಗೂ ನೀಡಬೇಕೆಂಬ ಸಂಕಲ್ಪ ಮಾಡಿದೆ. ವಿವಿಧ ಬೆಳೆಗಳನ್ನು ಬೆಳೆಸುವುದು, ವ್ಯವಸಾಯದ ಶಿಕ್ಷಣ ಕೊಡುವುದು, ಬಡ ಕ್ರೈಸ್ತರಿಗೆ ಕೆಲಸ ನೀಡಿ ಆಶ್ರಯಿಸುವುದು ಇದರ ಮುಖ್ಯ ಉದ್ದೇಶವಾಗಿದೆ.[೧೨೩] ಮೂಡಬಿದ್ರೆಯ ಬಾಸೆಲ್ ಮಿಶನ್ ಫಾರ್ಮ್ ದೀರ್ಘ ಕಾಲದವರೆಗೆ ಬಾಳಿಕೆ ಬರುವಂತಹ ಸೀ ಐಲ್ಯಾಂಡ್ ಹತ್ತಿಯನ್ನು ದೊಡ್ಡ ಪ್ರಮಾಣದಲ್ಲಿ ಯಶಸ್ವಿಯಾಗಿ ಬೆಳೆಸಿದ ಮೊದಲ ಸಂಸ್ಥೆಯಾಗಿದೆ. ಇದಲ್ಲದೆ, ಬೆಟ್ಟದ ಭತ್ತ, ಅನನಾಸು, ಕೋಕೋ ಮತ್ತು ಅನೇಕ ವಾಣಿಜ್ಯ ಬೆಳೆಗಳನ್ನು ಕೂಡಾ ಯಶಸ್ವಿಯಾಗಿ ಇಲ್ಲಿ ಬೆಳೆಸಲಾಗಿದೆ. ಈ ಫಾರ್ಮ್ ಮತ್ತು ಬೆಳೆಗಳ ಉದಾಹರಣೆಯನ್ನು ಅನೇಕ ಹಳ್ಳಿಗಳು ಅನುಸರಿಸಲಾರಂಭಿಸಿವೆ.[೧೨೪]

೧೯೩೦ರಲ್ಲಿ ಕೃಷಿ ಶಾಲೆಯನ್ನು ಸ್ಥಾಪಿಸಿ, ಪ್ರತಿ ೨ ೧/೨ ವರ್ಷಗಳಿಗೊಮ್ಮೆ ೪ ಕ್ರೈಸ್ತ ಮಕ್ಕಳನ್ನು ಈ ಶಾಲೆಗೆ ಸೇರಿಸಿ ಅವರನ್ನು ಕೃಷಿ ಕ್ಷೇತ್ರದಲ್ಲಿ ತರಬೇತಿಗೊಳಿಸಲಾಗುತ್ತಿದೆ. ಇದರಿಂದ ಕೃಷಿಯ ಬಗ್ಗೆ ಯುವಕರಲ್ಲಿದ್ದ ತಿರಸ್ಕಾರ ಭಾವವನ್ನು ತೊಡೆದು ಹಾಕಲು ಸಹಕಾರಿಯಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಉತ್ತಮ ಫಲಕೊಡುವ ಹೊಸ ಬೆಳೆಗಳ ಬೀಜಗಳನ್ನು, ಹಣ್ಣು ಹಂಪಲುಗಳ ಗಿಡಗಳನ್ನು ಒದಗಿಸಿಕೊಡುವ ಕೆಲಸವನ್ನು ಕೃಷಿಶಾಲೆ ಕೈಗೊಂಡಿದೆ. ಜನರಿಗೆ ತಕ್ಕ ತರಬೇತಿ ಕೊಟ್ಟು ಬಂಜರಾಗಿದ್ದ ಭೂಮಿಯನ್ನು ಸಾಗುವಳಿ ಮಾಡಿಸಿ ಉದಾಸೀನಭಾವ, ನಿರುದ್ಯೋಗ ಮತ್ತು ಬಡತನಗಳನ್ನು ಹೊರಗಟ್ಟುವ ಯತ್ನವನ್ನು ಕೃಷಿ ಕ್ಷೇತ್ರ ಮಾಡುತ್ತಿದೆ. ಹಸಿದಿರುವವರಿಗೆ ಒಂದು ಹೊತ್ತು ಉಣ್ಣ

ಕೊಡುವುದಕ್ಕಿಂತಲೂ ಹಸಿದಿರುವವರು ಸದಾ ತಮ್ಮ ಆಹಾರವನ್ನು ಸಂಪಾದಿಸಿಕೊಳ್ಳುವ ಮಾರ್ಗೋಪಾಯವನ್ನು ಕಲಿಸಿಕೊಟ್ಟದ್ದು ಬಾಸೆಲ್ ಮಿಶನ್ನಿನ ದೇಶ ಸೇವೆಗೆ ಕೈಗನ್ನಡಿಯಾಗಿದೆ.[೧೨೫]

೨೦ನೇ ಶತಮಾನದ ಐವತ್ತರ ದಶಕದಲ್ಲಿ ಕೃಷಿ ಶಾಲೆ ವೇಗವನ್ನು ಪಡೆದುಕೊಂಡು, 'ಹೆಚ್ಚು ಆಹಾರ ಬೆಳೆಯಿರಿ' ಆಂದೋಲನದಲ್ಲಿ ಬಹಳ ಮುಖ್ಯ ಪಾತ್ರ ವಹಿಸುವುದರಲ್ಲಿ ಮುಂಚೂಣಿಯಲ್ಲಿ ಕಾಣಿಸಿಕೊಂಡಿದೆ. ಈ ಸಂಸ್ಥೆ ಸಲ್ಲಿಸಿದ ಮೌಲ್ಯಯುತ ಸೇವೆಯನ್ನು ಪರಿಗಣಿಸಿ ಸರಕಾರ ಈ ಸಂಸ್ಥೆಗೆ ಅನೇಕ ಕೃಷಿ ಸಮಿತಿಗಳಲ್ಲಿ - ಅಖಿಲ ಭಾರತ ಮಟ್ಟದಿಂದ ಗ್ರಾಮಮಟ್ಟದವರೆಗೆ - ಸ್ಥಾನವನ್ನು ನೀಡಿದೆ. ಇಂದು ಈ ಸಂಸ್ಥೆ ಅನೇಕ ಪ್ರಾಂತ್ಯಗಳಿಗೆ, ದಕ್ಷಿಣದಲ್ಲಿ ಅಂಡಮಾನ್ ದ್ವೀಪದಿಂದ ಹಿಡಿದು ಉತ್ತರದ ದಂಡಕಾರಣ್ಯ ಮತ್ತು ಗುಜರಾತ್‌ಗೆ ಅಪ್ಪಟ ಕೃಷಿ ವಸ್ತುಗಳನ್ನು ಪೂರೈಸುತ್ತಿದೆ. ಎಲ್ಲಾ ವ್ಯವಹಾರಗಳಲ್ಲಿ ಕ್ರೈಸ್ತ ತತ್ವಗಳ ಅನ್ವಯಿಕೆಯು ಇಡೀ ದೇಶದ ವಿಶ್ವಾಸವನ್ನು ಗೆದ್ದುಕೊಂಡಿದೆ. ಹೀಗೆ ದೇಶದ ವಿವಿಧ ಭಾಗಗಳ ಜನರು ಕೃಷಿಕಾರ್ಯಗಳಿಗೆ ಸಂಬಂಧಿಸಿದ ಸೂಚನೆಗಳು ಮತ್ತು ಮಾರ್ಗದರ್ಶನಕ್ಕೆ ಈ ಸಂಸ್ಥೆಯನ್ನು ಸಂಪರ್ಕಿಸುತ್ತಾರೆ.[೧೨೬] ಹೀಗೆ ಬಾಸೆಲ್ ಮಿಶನ್ ತನ್ನ ಮೂಡಬಿದ್ರೆಯ ಫಾರ್ಮ್, ಕಾರ್ಕಳದ ಪರ್ಪಲೆಯಲ್ಲಿರುವ ಕ್ರಿಸ್ತ ಸೇವಕಿ ಆಶ್ರಮ, ಮೂಲ್ಕಿಯ ಹೆಣ್ಣುಮಕ್ಕಳ ಅನಾಥಾಲಯ, ಪುತ್ತೂರಿನ ಗಂಡು ಮಕ್ಕಳ ಅನಾಥಾಲಯ, ಮತ್ತು ಗದಗಿನಲ್ಲಿರುವ ಮಿಸ್ಟರ್ ಪಾಲ್ಸಟರ್ ಅವರ ಸಮರ್ಥ ಮಾರ್ಗದರ್ಶನದ ಕೃಷಿ ವಸಾಹತು ಇತ್ಯಾದಿಗಳು ಭಾರತದ ಕೃಷಿ ಕ್ಷೇತ್ರದ ಪ್ರಗತಿಗೆ ಕ್ರೈಸ್ತ ಮಿಶನರಿ ಸಂಸ್ಥೆಗಳ ನಿಜವಾದ ವ್ಯಾವಹಾರಿಕ ಕೊಡುಗೆಗಳಾಗಿವೆ.[೧೨೭] ಮಿಸ್ಟರ್ ಫಿಶರ್‌ರವರು ಬೈಲೂರಿನಲ್ಲಿ ಕಲ್ಲುಬಂಡೆಯ ಬರಡು ಭೂಮಿಯನ್ನು ಅದರೊಳಗೆ ಸುಪ್ತವಾಗಿದ್ದ ನೀರಿನ ಒರತೆಯನ್ನು ಶೋಧಿಸಿದ ನಂತರ ಫಲವತ್ತಾಗಿ ಮಾಡಿ ವರ್ಷಕ್ಕೆ ಎರಡು ಬೆಳೆಯನ್ನು ಬೆಳೆಯುತ್ತಿದ್ದಾರೆ.[೧೨೮] ವಾಮಂಜೂರಿಗೆ ಧರ್ಮಗುರುಗಳಾಗಿ ಬಂದ ಫಾ। ಎಡ್ವಿನ್ ಪಿಂಟೋರವರು ೧೯೭೦ರಲ್ಲಿ ಕೃಷಿ ಶಾಲೆಯನ್ನು ಆರಂಭಿಸಿ ಬಡ ಕುಟುಂಬದ ಕೃಷಿಕ ಮಕ್ಕಳಿಗೆ ತರಬೇತಿ ನೀಡಲು ಆರಂಭಿಸಿದರು. ಮುರಕಲ್ಲು ತುಂಬಿದ ಬೋಳುಗುಡ್ಡೆಗಳನ್ನು ಅಗೆದು ಗದ್ದೆಗಳನ್ನಾಗಿ ಪರಿವರ್ತಿಸಿ ಹತ್ತಿಪ್ಪತ್ತು ತೆರೆದ ಬಾವಿಗಳು, ಬೋರ್‌ವೆಲ್‌ಗಳನ್ನು ನಿರ್ಮಿಸಿ, ನೀರು ಇಂಗಿಸುವ ಕಾರ್ಯಕ್ರಮವನ್ನು ಕೈಗೊಂಡು ಬರಡು ಭೂಮಿಯಲ್ಲಿ ತೆಂಗು, ಭತ್ತ, ಬಾಳೆ, ಮಲ್ಲಿಗೆ, ಮೆಣಸು, ಅನಾನಸ್ ಮುಂತಾದ ಫಲವಸ್ತುಗಳನ್ನು ಬೆಳೆಸತೊಡಗಿದರು.[೧೨೯]

### ೫.೧೫. ವ್ಯಾಪಾರ:

ಮಿಶನ್ ವ್ಯಾಪಾರ ನಡೆಸುವುದು ಅದರಿಂದ ಪಡೆಯುವ ಲಾಭದಿಂದ ಮಿಶನ್ ಚಟುವಟಿಕೆಗಳಿಗೆ ನೆರವನ್ನು ಒದಗಿಸುವ ಒಂದೇ ಉದ್ದೇಶದಿಂದ ಅಲ್ಲವೆಂದು ಮಿಶನ್ ಸ್ಪಷ್ಟಪಡಿಸಿದೆ. ಕ್ರೈಸ್ತೇತರಿಗೆ ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳಲ್ಲಿ ನಿಜವಾದ ಕ್ರೈಸ್ತ ಕ್ರಮದಲ್ಲಿ ನಡೆದುಕೊಳ್ಳುವುದನ್ನು ಕಲಿಸುವುದು ಕೂಡಾ ತಮ್ಮ ಆ ಚಟುವಟಿಕೆಯ ಉದ್ದೇಶವಾಗಿದೆ. ಕಡಿಮೆ ಬೆಲೆಯ ವಸ್ತುಗಳ ವಿತರಣೆ, ಕ್ರೈಸ್ತೇತರರಲ್ಲಿ ಕ್ರೈಸ್ತ ಧರ್ಮದ ಕುರಿತು ಉತ್ತಮ ಅಭಿಪ್ರಾಯವನ್ನು ಹುಟ್ಟಿಸುವುದು ಮತ್ತು ಅದಕ್ಕೆ ಅವರನ್ನು ಸಿದ್ಧಗೊಳಿಸುವುದು ಕೂಡಾ ಅದರ ಉದ್ದೇಶಗಳಾಗಿವೆ. ಮಿಶನ್ ವ್ಯಾಪಾರ ಸಂಸ್ಥೆಗಳಲ್ಲಿ ವಂಚನೆ ಇಲ್ಲದ್ದರಿಂದ ಮಕ್ಕಳನ್ನು ಕೂಡಾ ವಸ್ತುಗಳ ಖರೀದಿಗೆ ಕಳುಹಿಸಬಹುದು ಎಂಬುದಾಗಿ ಮಿಶನರಿಗಳು ಕೂಡಾ ತಮ್ಮನ್ನು ತಾವೇ ಹೊಗಳಿಕೊಂಡಿದ್ದಾರೆ.[೧೩೦] ಪ್ರಾಮಾಣಿಕತೆಗೆ ಬಾಸೆಲ್ ಮಿಶನ್ ಸಂಸ್ಥೆ ಹೆಸರಾದ ಸಂಸ್ಥೆ ಎನ್ನುವುದಕ್ಕೆ ಇನ್ನೊಂದು ನಿದರ್ಶನ ಇದೆ. ೧೮೬೯ರಲ್ಲಿ ಜಿಲ್ಲೆಯ ಕಲೆಕ್ಟರ್ ರೆವಿನ್ಯೂ ಸ್ಟ್ಯಾಂಪ್‌ಗಳ ವಿಷಯದಲ್ಲಿ ಒಂದು ಮೋಸವನ್ನು ಪತ್ತೆ ಹಚ್ಚಿದ. ಈ ಮೋಸದಾಟದಲ್ಲಿ ಸರ್ಕಾರಿ ನೌಕರರು ಮತ್ತು ಜಿಲ್ಲೆಯ ಶ್ರೀಮಂತರೂ ಶಾಮೀಲಾಗಿ ರಾಜ್ಯ ಬೊಕ್ಕಸಕ್ಕೆ ಅಪಾರ ನಷ್ಟ ಉಂಟು ಮಾಡಿದ್ದರು. ಕಲೆಕ್ಟರ್ ತತ್‌ಕ್ಷಣ ಯಾರಲ್ಲಿಯೂ ವಿವರಣೆ ಕೇಳದೆ ರೆವಿನ್ಯೂ ಸ್ಟ್ಯಾಂಪ್ ಮಾರಾಟ ಹೊಣೆಯನ್ನು ಬಾಸೆಲ್ ಮಿಶನ್ ಟ್ರೇಡಿಂಗ್ ಸಂಸ್ಥೆಗೆ ವಹಿಸಿಕೊಟ್ಟನು.[೧೩೧] ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಪ್ರಾರಂಭದಲ್ಲಿ ಮಿಶನ್ ನಿಲುದಾಣಗಳಿಗೆ ಮತ್ತು ಮಿಶನರಿಗಳಿಗೆ ಅವಶ್ಯಕ ವಸ್ತುಗಳನ್ನು ಪೂರೈಸುವುದರದಲ್ಲಿ ವ್ಯಾವಹಾರಿಕ ಚಟುವಟಿಕೆಗಳು ತಮ್ಮ ಗಮನವನ್ನು ಕೇಂದ್ರವಾಗಿಟ್ಟುಕೊಂಡಿದ್ದರೂ, ಕ್ರಮೇಣ ಮಿಶನ್ ತನ್ನ ಕಾರ್ಯವನ್ನು ವಿಸ್ತರಿಸಿಕೊಂಡು ಭಾರತದಲ್ಲಿ ಉದ್ಯೋಗದಲ್ಲಿದ್ದಂತಹ ಯೂರೋಪಿಯನ್ನರಿಗೆ ಮತ್ತು ಬ್ರಿಟಿಷ್ ಪ್ರಜೆಗಳಿಗೆ ಕೂಡಾ ಅವಶ್ಯಕ ವಸ್ತುಗಳನ್ನು ಪೂರೈಸತೊಡಗಿದೆ.[೧೩೨]

೧೯ನೇ ಶತಮಾನಕ್ಕಿಂತ ಹಿಂದೆ ದಕ್ಷಿಣ ಕನ್ನಡದ ಆರ್ಥಿಕತೆಯು ಭಾರತದ ಇತರ ಪ್ರದೇಶಗಳಂತೆ ಮುಖ್ಯವಾಗಿ ವ್ಯವಸಾಯದ ಮೇಲೆ ಅವಲಂಭಿತವಾಗಿತ್ತು. ಕೈಗಾರಿಕೆಗಳ ಸ್ಥಾಪನೆಗೆ ಆಸಕ್ತಿ ತೋರದ ಬ್ರಿಟಿಷರು ಕೆನರಾ ಅದಕ್ಕೆ ಯೋಗ್ಯವಾದ ಸ್ಥಳವಲ್ಲ ಎಂಬ ಭಾವನೆಯನ್ನು ತಳೆದಿದ್ದರು. ಜಿಲ್ಲೆಯಲ್ಲಿ ಸುರಿಯುವ ಅಧಿಕ ಮಳೆ ಹಾಗೂ ನೈಸರ್ಗಿಕ ಸಂಪನ್ಮೂಲಗಳ ಕೊರತೆ, ಕೆನರಾ ಜಿಲ್ಲೆ ಕೈಗಾರಿಕೆಗಳ ಸ್ಥಾಪನೆಗೆ ಯೋಗ್ಯವಲ್ಲ ಎಂಬ ನಿರ್ಧಾರಕ್ಕೆ ಬರಲು ಮುಖ್ಯ ಕಾರಣವಾಗಿದೆ. ಸಾಮ್ರಾಜ್ಯಶಾಹಿ ಬರಹಗಾರರು ಯೂರೋಪ್ ಮಾತ್ರ ಕೈಗಾರಿಕೆಗಳ ಆರಂಭಕ್ಕೆ ಸೂಕ್ತ ಪ್ರದೇಶವೆಂದು ತಮ್ಮ

ಬರವಣಿಗೆಗಳಲ್ಲಿ ಬಿಂಬಿಸಿದರು. ೧೮೫೦ರ ಸಮಯದಲ್ಲಿ ಕೆನರಾದ ಕಲೆಕ್ಟರ್ ಆಗಿದ್ದ ಎಫ್.ಎನ್ ಮಾಲ್ಟ್‌ಬಿಯವರು ಕೆನರಾವನ್ನು 'ಚಿನ್ನದ ಮೊಟ್ಟೆ ಇಡುವ ಕೋಳಿ' ಎಂದು ಪರಿಗಣಿಸಿದ್ದರು.[೧೩೨]

ಬ್ರಿಟಿಷ್ ಸರಕಾರದ ಆಡಳಿತಾತ್ಮಕ ಮತ್ತು ವಾಣಿಜ್ಯ ಚಟುವಟಿಕೆಗಳು ಮತ್ತು ವಿಭಿನ್ನ ವೃತ್ತಿ ಗುಂಪುಗಳ ಬಹುಮುಖಿ ಕಾರ್ಯಬಂಧಗಳು ಮತ್ತು ಕ್ರೈಸ್ತ ಮಿಶನರಿಗಳು, ನಗರ ಪ್ರದೇಶದ ಮಿತಿಮೀರಿದ ಬೆಳವಣಿಗೆಗೆ ದಾರಿ ಮಾಡಿದೆ. ಹಳೆ ಪ್ರದೇಶಗಳು ಕ್ರಿಯಾಶೀಲವಾಗಿರುವುದರೊಂದಿಗೆ, ಅಭಿವೃದ್ಧಿ ಹೊಂದಿದ್ದ ವ್ಯಾಪಾರ ಮತ್ತು ಕಲೆಗಳು, ಶಿಕ್ಷಣ ಮತ್ತು ಕೈಗಾರಿಕೆಗಳಿಂದ ಅನೇಕ ಹೊಸ ಪ್ರದೇಶಗಳು ಕೂಡಾ ತಲೆಯೆತ್ತಿವೆ. ವಸಾಹತು ಕೈವಶ ಮಾಡಿಕೊಂಡ ಸಮಯದಲ್ಲಿ ಮಂಗಳೂರಿನ ಅನೇಕ ಭಾಗಗಳಲ್ಲಿ ಅರಣ್ಯವಿತ್ತು. ಆದರೆ ಭೂಸ್ವಾಧೀನದ ಬಯಕೆಯ ಒತ್ತಡವು ಈ ಪ್ರದೇಶದ ಅರಣ್ಯವನ್ನು ನಿಶ್ಶೇಷಗೊಳಿಸಿದೆ. ೧೭೯೯ರಲ್ಲಿ ಮಂಗಳೂರಿನಲ್ಲಿ ಮುಖ್ಯವಾಗಿ ಇದ್ದ ಪ್ರಾದೇಶಿಕ ಭಾಗಗಳೆಂದರೆ ಜೆಪ್ಪು, ಅತ್ತಾವರ, ಬಂದರು, ಬೋಳಾರ, ಕುದ್ರೋಳಿ, ರಥಬೀದಿ, ಕದ್ರಿ ಮತ್ತು ಕೊಡಿಯಾಲ್‌ಬೈಲ್. ಬಂದರ್ ಕೇಂದ್ರವಾಗಿದ್ದು ಇದರ ಸುತ್ತಲೂ ಮಂಗಳೂರು ಬೆಳೆದಿದೆ. ಆನಂತರದ ಹಂತಗಳಲ್ಲಿ ಕಂಕನಾಡಿ, ಬಲ್ಮಠ ಮತ್ತು ಹಂಪನಕಟ್ಟೆಯಂತಹ ಪ್ರದೇಶಗಳು ಮಂಗಳೂರಿನ ಪ್ರಮುಖ ಕೇಂದ್ರಗಳಾಗಿ ಉಗಮಿಸಿವೆ.[೧೩೪]

ಬಾಸೆಲ್ ಮಿಶನ್ ಅನೇಕ ಉದ್ದಿಮೆಗಳನ್ನು ಸ್ಥಾಪಿಸಿದೆ ಅವುಗಳಲ್ಲಿ ಗಮನಾರ್ಹವಾದುದು ಹಂಚು ತಯಾರಿಕೆ ಮತ್ತು ಮುದ್ರಣ. ಬಾಸೆಲ್ ಮಿಶನ್ ಬಳಸಿದ ತಂತ್ರಜ್ಞಾನವನ್ನು ಆಧುನಿಕ ಕಾಲದಲ್ಲಿ ಕೂಡಾ ಅನುಕರಿಸಲಾಗಿಲ್ಲ.[೧೩೫] ಕೈಗಾರಿಕಾ ಬೆಳವಣಿಗೆಯು ದೂರಗಾಮಿತ್ವದ ಆರ್ಥಿಕ ಮತ್ತು ಸಾಮಾಜಿಕ ಪರಿಣಾಮಗಳನ್ನು ಹೊಂದಿದೆ. ಜನಸಂಖ್ಯೆಗೆ ಸಂಬಂಧಿಸಿದಂತೆ, ಅದು ಅಗಾಧ ಪ್ರಮಾಣದ ವಲಸೆಯನ್ನೊಳಗೊಂಡ ಜನಸಂಖ್ಯಾ ಬೆಳವಣಿಗೆಯ ವೇಗವನ್ನು ಹೆಚ್ಚಿಸಿದೆ. ೧೯ನೇ ಶತಮಾನದ ಪ್ರಾರಂಭದಲ್ಲಿ ಕಾರ್ಮಿಕ ಸಮುದಾಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇದ್ದವರು ಗ್ರಾಮೀಣ ಪ್ರದೇಶಗಳ ಮತ್ತು ನಗರದ ಸುತ್ತುಮುತ್ತಲಿನ ಭೂರಹಿತ ಕಾರ್ಮಿಕರು ಮತ್ತು ಕುಶಲಕರ್ಮಿಗಳು. ಕೈಗಾರಿಕೆಗಳ ಸ್ಥಾಪನೆಯೊಂದಿಗೆ ನಗರದ ಸ್ವರೂಪದಲ್ಲಿ ಆಸಕ್ತಿದಾಯಕ ಬದಲಾವಣೆಗಳು ಮೂಡಿಬರಲಾರಂಭಿಸಿದವು. ಹೊಸ ಉದ್ದಿಮೆಗಳನ್ನು ನಗರದ ಅಂಚುಗಳು ಮತ್ತು ಹೊರವಲಯದಲ್ಲಿ ಸ್ಥಾಪಿಸಲಾಗಿದೆ. ಕಾರ್ಮಿಕರು ಕೂಡಾ ಕಾರ್ಖಾನೆಗಳ ಸುತ್ತಮುತ್ತಲಿನ ಪ್ರದೇಶಗಳಲ್ಲಿ ವಾಸಿಸಲಾರಂಭಿಸಿದ್ದಾರೆ. ಕಾರ್ಖಾನೆಗಳನ್ನು ಹಿಂದಿನ ಗ್ರಾಮೀಣ ಪ್ರದೇಶಗಳ ಒಳಗೆ ಅಥವಾ ನಗರದ ಅಂಚಿನಲ್ಲಿ ಸ್ಥಾಪಿಸಲಾಗಿದೆ. ಕಾರ್ಖಾನೆಗಳು ಸ್ಥಾಪನೆಗೊಳ್ಳುವ ಮೊದಲು ಆ ಪ್ರದೇಶವು ಕೃಷಿಕರ ನೆಲೆಯಾಗಿತ್ತು. ಕಾರ್ಖಾನೆಗಳ ಸ್ಥಾಪನೆ ಮತ್ತು ಕಾರ್ಮಿಕರ

ವಾಸಸ್ಥಾನಗಳಿಂದಾಗಿ, ಗ್ರಾಮೀಣ ಪ್ರದೇಶಗಳು ನಗರದ ವ್ಯಾಪ್ತಿಗೆ ಒಳಪಡಲಾರಂಭಿಸಿದವು. ಹೀಗೆ ಭೌತಿಕ ನಗರೀಕರಣ ನಡೆಯಲಾರಂಭಿಸಿತು.[೧೩೬]

ಬಾಸೆಲ್ ಮಿಶನಿನ ಸಾಮಾಜಿಕ ಮತ್ತು ಕೈಗಾರಿಕಾ ಚಟುವಟಿಕೆಗಳಲ್ಲಿ ಮಹಿಳೆಯರು ಅನೇಕ ವಿಧಗಳಿಂದ ಭಾಗವಹಿಸಿದ್ದಾರೆ. ಮೊದಲ ಹಂತಗಳಲ್ಲಿ ನೇಯ್ಗೆ ಘಟಕಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದವರು ಮಹಿಳೆಯರೇ. ಈ ಘಟಕಗಳ ಕಸೂತಿ ವಿಭಾಗಗಳ ಮೂಲಾಧಾರವಾಗಿ ಮುಂದುವರಿದವರು ಮಹಿಳೆಯರು. ಬಾಸೆಲ್ ಮಿಶನ್ ಚಟುವಟಿಕೆಗಳಿಂದ ಸ್ತ್ರೀ ಸ್ವಾತಂತ್ರ್ಯಕ್ಕೆ ಉಂಟಾಗಿರುವ ಪರಿಣಾಮದ ಪ್ರಮಾಣವನ್ನು ಪರೀಕ್ಷಿಸುವ ಪ್ರಶ್ನೆಯನ್ನು ಎತ್ತಬೇಕಾಗಿದೆ. ದಕ್ಷಿಣ ಕನ್ನಡದ ಸಾಂಪ್ರಾದಾಯಿಕ ಸಮಾಜಗಳಲ್ಲಿ, ಬಂಟರಂತಹ ಮಾತೃಪ್ರಧಾನ ಜಾತಿಗಳಲ್ಲಿ ಆಸ್ತಿಗಳ ನಿರ್ವಹಣೆಯಲ್ಲಿ ಮಹಿಳೆಯರು ಕ್ರಿಯಾಶೀಲ ಪಾತ್ರಗಳನ್ನು ನಿರ್ವಹಿಸಿದ್ದಾರೆ. ಈ ಜಾತಿಗಳ ಮಹಿಳೆಯರಿಗೆ ಕೂಡು ಕುಟುಂಬಗಳ ಆಸ್ತಿಗಳಲ್ಲಿ ಅಧಿಕೃತ ಹಕ್ಕು ಇದ್ದವು. ಇಂತಹ ಮಹಿಳೆಯರು ಕ್ರೈಸ್ತ ಧರ್ಮ ಸ್ವೀಕರಿಸಿದ ನಂತರ ಈ ರೀತಿಯ ಸ್ಥಾನಮಾನವನ್ನು ಪಡೆದಿರಲಿಕ್ಕಿಲ್ಲ. ಆದರೆ ಮಧ್ಯಮ ಮತ್ತು ಕೆಳಜಾತಿಯವರು ಕ್ರೈಸ್ತ ಧರ್ಮ ಸ್ವೀಕರಿಸಿದ ಬಳಿಕ ಅವರ ಸ್ಥಾನಮಾನದಲ್ಲಿ ಬದಲಾವಣೆಯಾಗಿದೆ. ಹಿಂದೆ ಅವರಿಗೆ ಮೂಲಭೂತ ಶಿಕ್ಷಣವನ್ನಾಗಲೀ ಅಥವಾ ಉದ್ಯೋಗವನ್ನಾಗಲೀ ಪಡೆಯಲು ಇದ್ದುದು ಸೀಮಿತ ದಾರಿಗಳು ಮಾತ್ರ. ಈ ರೀತಿಯ ಜಾತಿಗಳಿಗೆ ಅಗತ್ಯವಿರುವ ಶಿಕ್ಷಣ ಮತ್ತು ಉದ್ಯೋಗ ಎರಡನ್ನೂ ಬಾಸೆಲ್ ಮಿಶನ್ ನೀಡಿದೆ. ಸಂಪ್ರದಾಯಸ್ಥ ಹಿಂದೂ ಸಮಾಜದಲ್ಲಿ ವಿಧವೆ ಅಥವಾ ಒಂಟಿ ಹೆಂಗಸನ್ನು ಸ್ವೀಕರಿಸಲಾಗುವುದಿಲ್ಲ. ಅವರನ್ನು ಅಪಶಕುನವೆಂದು ಪರಿಗಣಿಸಲಾಗುತ್ತದೆ. ಕೈಗಾರಿಕಾ ಘಟಕಗಳ ಅವ್ಯೆಯಕ್ತಿಕ ಪರಿಸರದಲ್ಲಿ ಅಪಾರ ಸಂಖ್ಯೆಯಲ್ಲಿ ವಿಭಿನ್ನ ಹಿನ್ನಲೆಯುಳ್ಳ ಮಹಿಳೆಯರು ಬದುಕುತ್ತಾ, ಕೆಲಸ ಮಾಡುತ್ತಾ ಇರುವುದು ಒಂಟಿ ಹೆಂಗಸಿಗೆ ಅಂಟಿಕೊಂಡಿದ್ದ ಕಳಂಕವನ್ನು ನಿವಾರಿಸಿದೆ ಮತ್ತು ಪುನರ್ವಿವಾಹದ ಅವಕಾಶಗಳನ್ನು ಹೆಚ್ಚಿಸಿದೆ.

ಬಾಸೆಲ್ ಮಿಶನಿನ ಚಟುವಟಿಕೆಗಳ ಫಲವಾಗಿ ಮಾನವ ಸಂಪನ್ಮೂಲಗಳ ನಿರ್ವಹಣೆ ಮತ್ತು ಲೆಕ್ಕವನ್ನಿಡುವ ಪದ್ಧತಿಗಳು ದಕ್ಷಿಣ ಕನ್ನಡದ ಜನರಿಗೆ ಪರಿಚಯವಾಯಿತು. ಬಾಸೆಲ್ ಮಿಶನ್ ಚಲಾವಣೆಗೆ ತಂದ ಕೆಲವು ಪದ್ಧತಿಗಳೆಂದರೆ: ನೇಮಕಾತಿ, ತರಬೇತಿ, ಶಿಸ್ತು ಅಳವಡಿಕೆ ಮತ್ತು ದುಡಿಮೆಯ ಉನ್ನತ ಮಟ್ಟದ ತಜ್ಞತೆ. ಇವುಗಳು ಸಾಂಪ್ರದಾಯಿಕ ಉತ್ಪಾದನಾ ಪದ್ಧತಿಗಳಿಂದ ಮೂಲಭೂತವಾಗಿ ಭಿನ್ನವಾಗಿದೆ.[೧೩೭] ಈ ಹೊಸ ರೀತಿಯ ಕೈಗಾರಿಕಾ ಸಂಘಟನೆಯ ಶ್ರೇಷ್ಠ ಲಕ್ಷಣಗಳೆಂದರೆ: ಉದ್ಯೋಗದ ಅತ್ಯಂತ ಉನ್ನತ ಮಟ್ಟದ ವೃತ್ತಿ ಪರತ್ವ, ಅನೇಕ ವಿಚಾರಗಳ ಕುರಿತು ವ್ಯವಸ್ಥಾಪಕರ ಸೂಕ್ಷ್ಮ ಗ್ರಾಹಿತ್ವ, ಅದರಲ್ಲಿ ನಿರ್ದಿಷ್ಟವಾಗಿ ಮಾರುಕಟ್ಟೆಯಲ್ಲಿನ ಬೇಡಿಕೆ ಸ್ವರೂಪವನ್ನು ಹೊಂದಿಕೊಂಡು ಸೂಕ್ಷ್ಮವಾದ

ಬದಲಾವಣೆಗಳನ್ನು ನಡೆಸುವುದು ಇತ್ಯಾದಿ. ಜಾತಿಯಾಧಾರಿತವಲ್ಲದ, ಉನ್ನತ ಮಟ್ಟದ ಉತ್ಪಾದನೆ ಮತ್ತು ದುಡಿಮೆಯನ್ನು ಗುರಿಯಾಗಿಟ್ಟುಕೊಂಡು ಹುಟ್ಟಿಕೊಂಡಿರುವ ಪರ್ಯಾಯ ವಿಧದ ಉತ್ಪಾದನಾ ಸಂಬಂಧವು ಬಾಸೆಲ್ ಮಿಶನಿನ ಕೈಗಾರಿಕಾ ಚಟುವಟಿಕೆಗಳ ಫಲವಾಗಿದೆ. ಬಾಸೆಲ್ ಮಿಶನ್ ಉದ್ಯಮಗಳು ಮಾದರಿಯನ್ನು ಒದಗಿಸಿವೆ ಮತ್ತು ಆ ಮಾದರಿಯನ್ನು ನಂತರದ ಭಾರತೀಯ ಕೈಗಾರಿಕಾ ಸಂಸ್ಥೆಗಳು ಬಳಸಿವೆ.

ಬಾಸೆಲ್ ಮಿಶನ್ ಮುದ್ರಣಾಲಯದಲ್ಲಿ ಮುದ್ರಿಸಿದ ಪುಸ್ತಕಗಳನ್ನು ಕನ್ನಡ ಜಿಲ್ಲೆಯಲ್ಲಿರುವ ಶಾಲಾ- ಕಾಲೇಜುಗಳಿಗೆ ಮಾರಾಟ ಮಾಡುವುದಕ್ಕಾಗಿ ಬಾಸೆಲ್ ಮಿಶನ್ಸ್ ಬುಕ್ ಡಿಪೊ ಎಂಬ ಪುಸ್ತಕದ ಅಂಗಡಿಯನ್ನು ಬಾಸೆಲ್ ಮಿಶನ್ ಮೊತ್ತ ಮೊದಲನೆ ಬಾರಿಗೆ ಆರಂಭಿಸಿದೆ. ಇದನ್ನು ಅನುಸರಿಸಿ ಈಗ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹಲವು ಸ್ಥಳೀಯ ಪುಸ್ತಕದಂಗಡಿಗಳು ತಲೆ ಎತ್ತಿವೆ. ಬಾಸೆಲ್ ಮಿಶನ್ ಪ್ರಚಾರಕ್ಕೆ ತಂದ ನೇಯ್ಗೆ ಮತ್ತು ಬನಿಯನ್ ಪ್ರವೃತ್ತಿಗಳಿಂದ ಸಾವಿರಾರು ಜನರು ನೇಯ್ಗೆ ವೃತ್ತಿಯನ್ನು ಕಲಿತುಕೊಂಡರು ಮತ್ತು ಅನೇಕರು ಸ್ವತಂತ್ರವಾದ ನೇಯ್ಗೆ ಕಾರ್ಖಾನೆಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಬಾಸೆಲ್ ಮಿಶನ್ ಸ್ಥಾಪಿಸಿದ ಆ ನೇಯ್ಗೆ ಕಾರ್ಖಾನೆಗಳಿಂದ ಬಹಳಷ್ಟು ಅಭಿವೃದ್ಧಿ ಯಾಗಿದೆ ಎಂಬುದಕ್ಕೆ ಜಿಲ್ಲೆಯಲ್ಲಿದ್ದ ಕೈಮಗ್ಗಗಳೂ, ನೇಯ್ಗೆ ಕಾರ್ಖಾನೆಗಳೂ ಬಲವಾದ ಸಾಕ್ಷಿಗಳಾಗಿವೆ. ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ ಉನ್ನತ ಶಿಕ್ಷಣವನ್ನು ಪಡೆಯಲು ಅಸಮರ್ಥರಾದ ತರುಣರಿಗೆ ಹೊಲಿಗೆ ಕೆಲಸ ಕಲಿಸುತ್ತಿದ್ದರು. ಹೀಗೆ ಹೊಲಿಗೆ ವೃತ್ತಿಯಲ್ಲಿ ಪ್ರವೀಣರನ್ನಾಗಿ ಮಾಡಿದ ಬಳಿಕ ತಮ್ಮ ಜೀವನೋಪಾಯವನ್ನು ತಾವು ಸ್ವತಂತ್ರವಾಗಿಯೇ ಮಾಡಿಕೊಂಡಿರುವಂತೆ ಬಾಸೆಲ್ ಮಿಶನ್‌ನವರು ಪ್ರೋತ್ಸಾಹಿಸಿದ್ದಾರೆ. ಈಗ ಅಲ್ಲಲ್ಲಿ ನೂರಾರು ದರ್ಜಿಗಳು ಹೊಲಿಗೆ ವೃತ್ತಿಯನ್ನು ಮಾಡಿಕೊಂಡು ತಮ್ಮ ಜೀವನ ನಡೆಸುವುದಕ್ಕೆ ಸಾಧ್ಯವಾಗಿದ್ದರೆ ಅದಕ್ಕೆ ಪರೋಕ್ಷವಾಗಿ ಬಾಸೆಲ್ ಮಿಶನ್ ಕಾರಣವಾಗಿದೆ.

ಕಥೋಲಿಕ ಕ್ರೈಸ್ತ ಮಿಶನರಿಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಾಸೆಲ್ ಮಿಶನರಿಗಳಂತೆ ಯಾವುದೇ ಹಂಚಿನ ಕಾರ್ಖಾನೆಯ ಸ್ಥಾಪನೆಯಲ್ಲಿ ನೇರವಾಗಿ ತೊಡಗಿಸಿಕೊಳ್ಳಲಿಲ್ಲ. ಕೊಡಿಯಲ್‌ಬೈಲ್ ಪ್ರೆಸ್ ಮತ್ತು ಸಂತ ಜೋಸೆಫರ ಕೈಗಾರಿಕಾ ಕಾರ್ಯಗಾರವನ್ನು ಮಿಶನರಿಗಳು ಆರಂಭಿಸಿದ ಹಿಂದಿನ ಉದ್ದೇಶ ಸ್ಥಳೀಯ ಕ್ರೈಸ್ತರಿಗೆ ಉದ್ಯೋಗವಕಾಶವನ್ನು ಕಲ್ಪಿಸುವುದು ಮತ್ತು ಸ್ವಾವಲಂಬಿ ಜೀವನ ನಡೆಸಲು ಬೇಕಾದ ವಾತಾವರಣವನ್ನು ನಿರ್ಮಿಸುವುದು. ಕಥೋಲಿಕ ಕ್ರೈಸ್ತರು ದಕ್ಷಿಣ ಕನ್ನಡದಲ್ಲಿ ೧೬ನೇ ಶತಮಾನದಿಂದಲೇ ಜೀವಿಸುತ್ತಿದ್ದರಿಂದ ಅವರು ಕೃಷಿ, ತೋಟಗಾರಿಕೆ, ಕಂಚು, ಕಬ್ಬಿಣ, ತಾಮ್ರ ಮುಂತಾದ ಉದ್ದಿಮೆಗಳಲ್ಲಿ ತೊಡಗಿಸಿಕೊಂಡು ತಮ್ಮ ಜೀವನೋಪಾಯ ನಡೆಸುತ್ತಿದ್ದರು. ಗ್ರಾಮೀಣ ಪ್ರದೇಶದ ಜನರು ಕೃಷಿಯನ್ನೇ ಅವಲಂಬಿಸಿಕೊಂಡಿದ್ದರು. ನಗರದ ವಿದ್ಯಾವಂತ ಕ್ರೈಸ್ತರು ವಸಾಹತು

ಸರ್ಕಾರದಲ್ಲಿ ನಾನಾ ಹಂತದ ಹುದ್ದೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದರು. ಆದುದರಿಂದ ಜನರು ಉದ್ಯೋಗಕ್ಕಾಗಿ ಮಿಶನರಿಗಳಿಗೆ ಅವಲಂಬಿಸಿರಬೇಕಾಗಿರಲಿಲ್ಲ. ನಗರದ ಶ್ರೀಮಂತ ಕ್ರೈಸ್ತ ಮನೆತನಗಳು ಹೀಗಾಗಲೇ ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಆಸಕ್ತಿ ತೋರಿಸಲಾರಂಭಿಸಿದ್ದವು. ಪರಿಣಾಮವಾಗಿ ಹಲವಾರು ಕೈಗಾರಿಕೆಗಳು ಬಾಸೆಲ್ ಮಿಶನ್ ಮಾದರಿಯಲ್ಲಿ ಹುಟ್ಟಿಕೊಂಡವು. ಒಂದು ಕಾಲದಲ್ಲಿ ಮಂಗಳೂರಿನಲ್ಲಿದ್ದ ಹೆಂಚಿನ ಕಾರ್ಖಾನೆಗಳಲ್ಲಿ ಹೆಚ್ಚಿನವು ಕ್ರೈಸ್ತರದಾಗಿದ್ದವು. ಗೋವಾದಿಂದ ವಲಸೆ ಬಂದ ಕ್ರೈಸ್ತರು ತಮ್ಮೊಂದಿಗೆ ತಾವು ಕಲಿತ ವೃತ್ತಿ ಕೌಶಲ್ಯಗಳನ್ನು ತಂದು ಜಿಲ್ಲೆಯಾದ್ಯಂತ ಹರಡಿದರು. ೧೯೩೫ಕ್ಕಿಂತ ಮೊದಲೇ ಪುತ್ತೂರಿನಲ್ಲಿ ಎರಡು ತಾಮ್ರ ಕಾರ್ಖಾನೆಗಳಿದ್ದ ಬಗ್ಗೆ ಮಾಹಿತಿ ದೊರೆಯುತ್ತದೆ.[೧೩೮] ಇಂದಿಗೂ ತಾಮ್ರ ಪಾತ್ರೆಗಳ ಉತ್ಪಾದನೆ ಮತ್ತು ಮಾರಾಟದಲ್ಲಿ ತೊಡಗಿರುವ ಅದೆಷ್ಟೋ ಕುಟುಂಬಗಳು ರಾಜ್ಯದಾದ್ಯಂತ ಮತ್ತು ಹೊರ ರಾಜ್ಯಗಳಾದ ಬಾಂಬೆ, ಗುಜರಾತ್, ತಮಿಳುನಾಡು, ಕೇರಳ, ಆಂಧ್ರಪ್ರದೇಶ ಮುಂತಾದ ಸ್ಥಳಗಳಲ್ಲಿ ಹರಡಿಕೊಂಡಿದ್ದಾರೆ. ಗೇರುಬೀಜದ ಸಂಸ್ಕರಣೆ, ಪ್ಲಾಂಟೇಶನ್ ಉದ್ದಿಮೆಗಳಲ್ಲಿ ಜಿಲ್ಲೆಯಲ್ಲಿ ಮಾತ್ರವಲ್ಲದೆ ರಾಜ್ಯ ಮತ್ತು ಹೊರ ರಾಜ್ಯಗಳಲ್ಲಿಯೂ ತಮ್ಮ ಉತ್ಪನ್ನಗಳಿಗೆ ಹೆಸರುವಾಸಿಯಾಗಿದ್ದಾರೆ. ಅಲ್ಯೂಮಿನಿಯಂ ವಸ್ತುಗಳ ಉತ್ಪಾದನೆಯಲ್ಲಿ ಸೋಜಾ ಸಹೋದರರು ಜಿಲ್ಲೆಯಲ್ಲಿಯೇ ಆದ್ಯರೆಂಬ ಗೌರವಕ್ಕೆ ಪಾತ್ರರಾಗಿದ್ದಾರೆ. ಕೃಷಿ ಪ್ರಧಾನ ಜಿಲ್ಲೆಯಾಗಿರುವ ದಕ್ಷಿಣ ಕನ್ನಡ ಇಂದು ಕೈಗಾರಿಕೆಯಲ್ಲಿ ಮುಂದುವರಿದಿದ್ದರೆ ಇದರಲ್ಲಿ ಕಥೋಲಿಕರ ಕೊಡುಗೆ ಬಹಳಷ್ಟು ಇದೆ ಎಂಬುದೇ ನನ್ನ ಅನಿಸಿಕೆಯಾಗಿದೆ.

# ಕೊನೆ ಟಿಪ್ಪಣಿ

೧. ವಿಶಾಂರ್ಝ್ ಪಿಂಟೋ, "ಮೈಗ್ರೇಶನ್ ಆಫ್ ದ ಕಥೋಲಿಕ್ಸ್ ಆಫ್ ಸೌತ್ ಕೆನರಾ ಅಂಡ್ ಇಟ್ಸ್ ಸೋಶಿಯೊ – ಇಕಾನಾಮಿಕ್ ಡೈಮೆನ್ಶನ್ಸ್ (೧೯೦೦-೧೯೮೦)" ಅಪ್ರಕಟಿಕ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ ೨೦೦೯ ಪುಟಗಳು ೩೯,೪೦

೨. ಅದೇ ಪುಟಗಳು ೪೧,೪೨

೩. ಸಾಮ್ಯುವೆಲ್ ಗಾಬ್ರಿಯಲ್ ರೋಸಿತ್, "ದಕ್ಷಿಣ ಕನ್ನಡ ಜಿಲ್ಲೆಯ ಕೈಗಾರೀಕರಣದಲ್ಲಿ ಬಾಸೆಲ್ ಮಿಶನ್ನಿನ ಕೊಡುಗೆ (೧೮೩೪-೧೯೧೪)", ಅಪ್ರಕಟಿತ ಬಿ.ಡಿ. ಸಂಪ್ರಬಂಧ, ಕರ್ನಾಟಕ ಥಿಯೋಲಾಜಿಕಲ್ ಕಾಲೇಜು, ಬಲ್ಮಠ, ಮಂಗಳೂರು, ೨೦೦೭, ಪುಟ ೧೩

೪. ಅದೇ, ಪುಟ ೧೪

೫. ಅದೇ, ಪುಟ ೯

೬. ಅದೇ, ಪುಟಗಳು ೯, ೧೦

೭. ರಾಮಚಂದ್ರ ಉಚ್ಚಿಲ್, "ಬಾಸೆಲ್ ಮಿಶನ್‌ನವರ ಉದ್ಯಮ ಸಾಹಸ", *ಸಾಪ್ತಾಹಿಕ ಉದಯವಾಣಿ*, ೩೦ ನವೆಂಬರ್ ೧೯೭೫, ಪುಟ ೧

೮. ಪೀಟರ್ ವಿಲ್ಸನ್ ಪ್ರಭಾಕರ್, "ದಿ ಬಾಸೆಲ್ ಮಿಶನ್ ಇನ್ ಸೌತ್ ಕೆನರಾ ೧೮೩೪-೧೯೪೭" ಅಪ್ರಕಟಿತ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು ೧೯೮೮, ಪುಟಗಳು ೧೯೧, ೧೯೨

೯. ಬಿ.ಎಂ.ಆರ್. – ೧೮೮೦, ಪುಟಗಳು ೮೬, ೮೭; "ನೋಟ್ಸ್ ಆಫ್ ಅದರ್ ಚರ್ಚಸ್ ಆಂಡ್ ಸೊಸೈಟಿಸ್", *ಹಾರ್ವೆಸ್ಟ್ ಫೀಲ್ಡ್*, ಜುಲೈ ೧೮೮೦, ಪುಟ ೨೭

೧೦. ಎ. ವೆಂಗರ್, "ದ ರಿಲೇಶನ್ಸ್ ಆಫ್ ಮಿಶನರಿಸ್ ಟು ಕನ್ವರ್ಟ್ಸ್ ಇನ್ ಸೆಕ್ಯೂಲರ್ ಮ್ಯಾಟರ್", ರಿಪೋರ್ಟ್ ಆಫ್ ದ ಜನರಲ್ ಮಿಶನರಿ ಕಾನ್ಫರೆನ್ಸ್ ಹೆಲ್ಡ್ ಎಟ್ ಅಲಹಾಬಾದ್ ೧೮೭೨-೧೮೭೩, ಮದ್ರಾಸ್ ೧೮೭೩, ಪುಟ ೩೩೫

೧೧. ಅದೇ, ಪುಟ ೩೩೫

೧೨. ಅದೇ, ಪುಟ ೩೩೫; ಜೋಸೆಫ್ ಮುಲ್ಲರ್, "ಮಿಶನ್ಸ್ ಇನ್ ಸೌತ್ ಇಂಡಿಯಾ", ಲಂಡನ್: ಡಬ್ಲ್ಯು ಹೆಚ್ ಡಾಲ್ಟನ್ ಕಾಕ್ಸ್ ಪುವರ್ ಸ್ಟ್ರೀಟ್, ೧೮೫೪, ಪುಟ ೧೫೦

೧೩. ಅದೇ, ಪುಟ ೩೩೫; ಜೋಸೆಫ್ ಮುಲ್ಲರ್, ಪೂರ್ವೋಕ್ತ, ಪುಟಗಳು ೧೭೦-೧೭೧

೧೪. ಹೆನ್ರಿ ಎಸ್ ವಿಲ್ಸನ್, "ಬಾಸೆಲ್ ಮಿಶನ್ಸ್ ಇಂಡಸ್ಟ್ರೀಯಲ್ ಎಂಟರ್‌ಪ್ರೈಸಸ್ ಇನ್ ಸೌತ್ ಕೆನರಾ ಆಂಡ್ ಇಟ್ಸ್ ಇಂಪಾಕ್ಟ್ ಬಿಟ್ವೀನ್ ೧೮೩೪-೧೯೧೪", ಇಂಡಿಯನ್ ಚರ್ಚ್ ಹಿಸ್ಟರಿ ರಿವ್ಯೂ, ೧೪, ನಂ.೨, ೧೯೮೦, ಪುಟ ೧೦೨

೧೫. ಕ್ಯಾಥರಿನ್ ಸ್ಟೆಂರ್ಝ್ಲ್, ಪೂರ್ವೋಕ್ತ, ಪುಟ ೩೯

೧೬. ಅದೇ, ಪುಟ ೪೧

೧೭. ಅದೇ, ಪುಟ ೪೨

೧೮. ಅದೇ, ಪುಟಗಳು ೪೨-೪೪

೧೯. ಅದೇ, ಪುಟ ಗಳು ೪೭, ೪೮

೨೦. ಅದೇ, ಪುಟಗಳು ೪೯, ೫೦

೨೧. ಬಿ.ಎಂ.ಆರ್.- ೧೮೭೩ ಪುಟ ೭೦

೨೨. ಜೈ ಪ್ರಕಾಶ್ ರಾಘವಯ್ಯ, "ಬಾಸೆಲ್ ಮಿಶನ್ ಇಂಡಸ್ಟ್ರೀಸ್ ಇನ್ ಮಲಬಾರ್ ಆಂಡ್ ಸೌತ್ ಕೆನರಾ: ೧೮೩೪-೧೯೧೪ ಎ ಸ್ಟಡಿ ಆಫ್ ಇಟ್ಸ್ ಸೋಶಿಯಲ್ ಅಂಡ್ ಇಕಾನಾಮಿಕ್ ಇಂಪಾಕ್ಟ್", ನ್ಯೂಡೆಲ್ಲಿ, ೧೯೯೦, ಪುಟ ೫

೨೩. ಅದೇ, ಪುಟಗಳು ೧೦, ೧೧

೨೪. ಅದೇ, ಪುಟಗಳು ೨೦ - ೨೨

೨೫. ಅದೇ, ಪುಟ ೨೬

೨೬. ಪೀಟರ್ ವಿಲ್ಸನ್ ಪ್ರಭಾಕರ್, "ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್" ಪುತ್ತೂರು: ಕನ್ನಡ ಸಂಘ, ವಿವೇಕಾನಂದ ಕಾಲೇಜು, ೧೯೮೯, ಪುಟಗಳು ೨೮, ೨೯

೨೭. ಸಾಮ್ಯುವೆಲ್ ಗಾಬ್ರಿಯೆಲ್ ರೋನಿತ್ ಪೂರ್ವೋಕ್ತ, ಪುಟಗಳು ೧೬, ೧೭

೨೮. ಮೋಹನಕೃಷ್ಣ ರೈ, ಕೆ. "ವಸಾಹತುಶಾಹಿ ಮತ್ತು ನಗರೀಕರಣ ವಸಾಹತು ಕರ್ನಾಟಕದ ನಗರ ಅನುಭವಗಳು" ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೦೭, ಪುಟಗಳು ೧, ೨

೨೯. ಅದೇ, ಪುಟ ೩

೩೦. ಅದೇ, ಪುಟ ೫೩

೩೧. ಸಾಮ್ಯುವೆಲ್ ಗ್ರಾಬ್ರಿಯೆಲ್ ರೋಸಿತ್, ಪೂರ್ವೋಕ್ತ, ಪುಟ ೧೭

೩೨. ಕ್ಯಾಥರಿನ ಸ್ಟೆಂರ್ಝ್ಲ್, ಪೂರ್ವೋಕ್ತ, ಪುಟಗಳು ೩೦, ೩೧

೩೩. ಸಾಮ್ಯುವೆಲ್ ಗಾಬ್ರಿಯೆಲ್ ರೋಸಿತ್, ಪೂರ್ವೋಕ್ತ, ಪುಟಗಳು ೧೮, ೧೯

೩೪. ಅದೇ, ಪುಟಗಳು ೩೨ - ೩೫
೩೫. ಮಾರ್ಕ್ ವಾಲ್ಡಾರ್, "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮಸಭೆಯ ಪಾತ್ರ", ಮೂಲ್ಕಿ : ಅಡ್ಯನಡ್ಕ ಕೃಷ್ಣಭಟ್ ( ಸಂಪಾದಿಸಿದ) *ಸುದರ್ಶನ* , ಡಾ.ತೋನ್ಸೆ ಮಾದವ ಅನಂತ ಪೈ ಅಭಿನಂದನಾ ಗ್ರಂಥ, ವಿಜಯ ಕಾಲೇಜ್, ೧೯೭೭, ಪುಟ ೩೮೯
೩೬. ಗೀತಾ ಎಸ್. ನಂದಿಹಾಳ, *ಕನ್ನಡಕ್ಕೆ ಬಾಸೆಲ್ ಮಿಶನರಿಗಳ ಕೊಡುಗೆ*, ಧಾರವಾಡ : ಪ್ರಿನ್ಸಿಪಾಲ್ ಕಿಟ್ಟೆಲ್ ಆರ್ಟ್ಸ್ ಕಾಲೇಜು ೨೦೦೩, ಪುಟಗಳು ೨೨೫, ೨೨೬
೩೭. ಸಾಮ್ಯುವೆಲ್ ಗಾಬ್ರಿಯೆಲ್ ರೋನಿತ್, ಪೂರ್ವೋಕ್ತ, ಪುಟ ೧೮
೩೮. ಸಿಬಾಂತಿ ಪದ್ಮನಾಭ, "ಪ್ರಿಸರ್ವಿಂಗ್ ಫೂಟ್ ಪ್ರಿಂಟ್ಸ್" *ಸಿಟಿ ಹೆರಾಲ್ಡ್ (ಡೆಕ್ಕನ್ ಹೆರಾಲ್ಡ್)*, ೮ ಸೆಪ್ಟೆಂಬರ್ , ೨೦೦೭
೩೯. ಗೀತಾ ಎಸ್. ನಂದಿಹಾಳ, ಪೂರ್ವೋಕ್ತ, ಪುಟಗಳು ೨೨೭ - ೨೨೮
೪೦. ರಾಮಚಂದ್ರ ಉಚ್ಚಿಲ್, ಪೂರ್ವೋಕ್ತ, ಪುಟ ೬
೪೧. ಜಿ.ಪಿ. ಬಸವರಾಜು, "ಕನ್ನಡ ಪತ್ರಿಕೋದ್ಯಮದ ಮೊದಲ ಹೆಜ್ಜೆ: ಮಂಗಳೂರ ಸಮಾಚಾರ", ಸುಧಾ ೫ ಫೆಬ್ರವರಿ ೧೯೮೯, ಪುಟ ೬೩
೪೨. ಗೀತಾ ಎಸ್. ನಂದಿಹಾಳ, ಪೂರ್ವೋಕ್ತ, ಪುಟ ೨೨೩
೪೩. ಬಿ.ಎಂ.ಆರ್ - ೧೮೫೮, ಪುಟ ೪೩
೪೪. ಹೆನ್ರಿ ಎಸ್. ವಿಲ್ಸನ್, ಪೂರ್ವೋಕ್ತ, ಪುಟ ೯೬
೪೫. ಪೀಟರ್ ವಿಲ್ಸನ್ ಪ್ರಭಾಕರ್, "ದ ಬಾಸೆಲ್ ಮಿಶನ್ ಇನ್ ಸೌತ್ ಕೆನರಾ (೧೮೩೪-೧೯೪೭)", ಅಪ್ರಕಟಿತ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ೧೯೮೮ ಪುಟಗಳು ೧೫೮,೧೫೯
೪೬. ಬಿ.ಎಂ.ಆರ್ - ೧೮೫೮ ಪುಟ ೪೨
೪೭. ರಾಮಚಂದ್ರ ಉಚ್ಚಿಲ್, ಪೂರ್ವೋಕ್ತ, ಪುಟ ೬
೪೮. ವೈದಿಕ ಮಿತ್ರ, ಜನವರಿ ೧೯೧೪, ಪುಟಗಳು ೯, ೧೦
೪೯. ಸೆಲಿನ್ ವಾಸ್, "ದ ಕಾಂಟ್ರಿಬ್ಯೂಷನ್ ಆಫ್ ದ ಕ್ರಿಶ್ಚನ್ ಮಿಶನರೀಸ್ ಟು ಜರ್ನಲಿಸಂ ಇನ್ ಸೌತ್ ಕೆನರಾ" ಎ ಡಜರ್ಟೇಶನ್ ಸಬ್ಮಿಟೆಡ್ ಟು ದ ಡಿಪಾರ್ಟ್‌ಮೆಂಟ್ ಆಫ್ ಮಾಸ್ ಕಮ್ಯುನಿಕೇಶನ್ ಅಂಡ್ ಜರ್ನಲಿಸಂ, ಮ್ಯಾಂಗಲೊರ್ ಯುನಿವರ್ಸಿಟಿ, ೧೯೯೨. : ಪುಟಗಳು ೨೬, ೨೭
೫೦. ಬಸವರಾಜ್ ಸಂಪಳ್ಳಿ, "ಕನ್ನಡ ಪತ್ರಿಕಾರಂಗಕ್ಕೆ ನಾಂದಿ ಹಾಡಿದ ಹರ್ಮನ್", *ಪ್ರಜಾವಾಣಿ*, ೧೯ ಡಿಸೆಂಬರ್, ೨೦೧೦, ಪುಟ ೨
೫೧. ಫಾ। ಸಿಲ್ವೆಸ್ಟರ್ ಮಿನೇಜಸ್, " ಅಮ್ಚೆಂ ಕೊಡಿಯಾಲ್ ಬೈಲ್ ಪ್ರೆಸ್ (ಕೊಂಕಣಿ) ಫಾ। ಎ.ಎಫ್. ಡಿ.ಸೋಜಾ , ರಾಕಣೊ (ಕೊಂಕ್ಣಿ) ರಾಕ್ಣೊ ಬೆಳ್ಳಿಹಬ್ಬದ ಸಂಚಿಕೆ, ಕೊಡಿಯಾಲ್ ಬೈಲ್ ಪ್ರೆಸ್, ಮಂಗಳೂರು, ೧೯೬೩, ಪುಟ ೧೫೧
೫೨. ಸೆಲಿನ್ ವಾಸ್, "ದ ಕಾಂಟ್ರಿಬ್ಯೂಷನ್ ಆಫ್ ಕ್ರಿಶ್ಚಿಯನ್ ಮಿಶನರೀಸ್ ಟು ಜರ್ನಲಿಸಂ ಇನ್ ಸೌತ್ ಕೆನರಾ" ಅಪ್ರಕಟಿತ ಸಂಪ್ರಬಂಧ, ಮಾಸ್ ಕಮ್ಯೂನಿಕೇಶನ್ ಆಂಡ್ ಜರ್ನಲಿಂ ಡಿಪಾರ್ಟ್‌ಮೆಂಟ್ , ಮ್ಯಾಂಗಲೂರ್ ಯೂನಿವರ್ಸಿಟಿ, ೧೯೯೨, ಪುಟ ೧೭
೫೩. ಬಿ.ಎಂ.ಆರ್- ೧೮೮೩, ಪುಟ ೨೧
೫೪. ಎಡಿಟೋರಿಯಲ್ ಬೋರ್ಡ್ 'ದ ಮ್ಯಾಂಗಲೂರ್ ಮ್ಯಾಗಝಿನ್' ಸಂಪುಟ ೪, ೧೯೦೭ ಪುಟ ೧೦೨
೫೫. ಎಡಿಟೋರಿಯಲ್ ಬೋರ್ಡ್ 'ದ ಮ್ಯಾಂಗಲೂರ್ ಮ್ಯಾಗಝಿನ್' ಸಂಪುಟ ೨, ೧೯೦೩ ಪುಟ ೩೩೯
೫೬. ಎಡಿಟೋರಿಯಲ್ ಬೋರ್ಡ್ ಸೈಂಟ್ ಅಲೋಶಿಯಸ್ ಆ್ಯನ್ವಲ್ ೧೯೪೧-೧೯೪೨, ಪುಟ ೫೬
೫೭. ಸಿಲ್ವೆಸ್ಟರ್ ಪಿಂಟೋ, "ಕೈಗಾರಿಕ್ ಕ್ಷೇತ್ರಾಂತ್ ಕೊಂಕಣಿ ಕಥೋಲಿಕ್ , ರಾಕ್ಣೊ ಸಂಪದಕೀಯ , ಪೂರ್ವೋಕ್ತ, ಪುಟ ೨೨೩
೫೮. ಮುದ್ರಣಾಲಯಗಳ ಮಾಲಕರ ಸಂದರ್ಶನದಿಂದ ಸಂಗ್ರಹಿಸಿದ ಮಾಹಿತಿ
೫೯. ಪಿ.ಡಬ್ಲ್ಯು.ಪಿ., ಪೂರ್ವೋಕ್ತ, ಪುಟ ೧೯೭
೬೦. ಅದೇ, ಪುಟಗಳು ೧೯೯, ೨೦೦
೬೧. ಅದೇ , ಪುಟ ೨೦೦
೬೨. ಬಿ.ಎಂ.ಆರ್- ೧೮೫೯ ಪುಟಗಳು ೨೧, ೨೨
೬೩. ಪಿ.ಡಬ್ಲ್ಯು.ಪಿ. ಪೂರ್ವೋಕ್ತ, ಪುಟ ೨೦೦
೬೪. ಬಿ.ಎಂ.ಆರ್ - ೧೮೪೯ ಪುಟಗಳು ೧೩, ೧೪
೬೫. ಜೈ ಪ್ರಕಾಶ್ ರಾಘವಯ್ಯ , ಪೂರ್ವೋಕ್ತ, ಪುಟ ೪೧
೬೬. ಅದೇ, ಪುಟಗಳು ೪೪, ೪೬
೬೭. ರುಡೋಲ್ಫ್ ಹೆಚ್. ಫಿಶರ್ , "ಮಿಶನ್ ಅಂಡ್ ಮಾರ್ಡನೈಜೇಶನ್ : ದಿ ಬಾಸೆಲ್ ಮಿಶನ್ ಪ್ಯಾಕ್ಟರಿಸ್: ಆ್ಯಸ್ ಏಜೆಸ್ಸಿಸ್ ಆಫ್ ಸೋಶಿಯಲ್ ಚೇಂಜ್ (೧೮೫೦-೧೯೧೪)" ಮಂಗಳೂರು: ಗಾಡ್ವಿನ್ ಶಿರಿ (ಸಂಪಾದಿಸಿದ) *ಹೋಲ್ನೆಸ್ ಇನ್ ಕ್ರೈಸ್ಟ್*, ೧೯೮೫, ಪುಟ ೨೧೦
೬೮. ರಾಮಚಂದ್ರ ಉಚ್ಚಿಲ್, ಪೂರ್ವೋಕ್ತ, ಪುಟ ೪೧
೬೯. ಜೈ ಪ್ರಕಾಶ್ ರಾಘವಯ್ಯ , ಪುಟಗಳು ೩೨- ೩೪; ಕೇಶವ ಕುಡ್ಲ, "ಬಾಸೆಲ್ ಮಿಶನ್ ೧೭೫ ___ ಇತಿಹಾಸದತ್ತ ಚಿತ್ರ ಪಯಣ", *ತರಂಗ*, ೨ ಡಿಸೆಂಬರ್ ೨೦೦೯, ಪುಟಗಳು ೫೫,೫೬; ಪಿ.ಡಬ್ಲ್ಯು.ಪಿ., "ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್" ಪುತ್ತೂರು: ಕನ್ನಡ ಸಂಘ, ವಿವೇಕಾನಂದ ಕಾಲೇಜು, ೧೯೮೯, ಪುಟಗಳು ೩೨, ೩೩, ರಾಮಚಂದ್ರ ಉಚ್ಚಿಲ್, ಪೂರ್ವೋಕ್ತ ಪುಟ ೧
೭೦. ರಾಮಚಂದ್ರ ಉಚ್ಚಿಲ್, ಪೂರ್ವೋಕ್ತ, ಪುಟ ೧

೭೧. ಪಿ.ಡಬ್ಲ್ಯು.ಪಿ., ಪೂರ್ವೋಕ್ತ, ಪುಟಗಳು ೨೩, ೨೪
೭೨. ಜೈ ಪ್ರಕಾಶ್ ರಾಘವಯ್ಯ, ಪೂರ್ವೋಕ್ತ, ಪುಟಗಳು ೩೨ - ೩೪
೭೩. ಹೆರಾಲ್ಡ್ ಎ. ಸ್ಟುವರ್ಟ್, ಮದ್ರಾಸ್ ಡಿಸ್ಟ್ರಿಕ್ಟ್ ಮಾನ್ಯುವೆಲ್ಸ್ - *ಸೌತ್ ಕೆನರಾ* – ಸಂಪುಟ ೨, ಮದ್ರಾಸ್: ಮದ್ರಾಸ್ ಗವರ್ನಮೆಂಟ್ ಪ್ರೆಸ್, ೧೮೯೫, ಪುಟ ೨೩೦
೭೪. ಜೈಪ್ರಕಾಶ್ ರಾಘವಯ್ಯ, ಪೂರ್ವೋಕ್ತ, ಪುಟಗಳು ೬೫ - ೭೦
೭೫. ಅದೇ, ಪುಟಗಳು ೭೧, ೭೨
೭೬. ಬಿ.ಎಂ.ಆರ್. – ೧೮೫೭ ಪುಟ ೧೦
೭೭. ವಿಶಾಂಜ್ ಪಿಂಟೋ ಪೂರ್ವೋಕ್ತ ಪುಟ ೬೭ ; ಪಿ.ಡಬ್ಲ್ಯು.ಪಿ., "ಮಂಗಳೂರು ಹಂಚುಗಳು", ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೧೯೯೯, ಪುಟ ೪; ಜೈ ಪ್ರಕಾಶ್ ರಾಘವಯ್ಯ ಪುಟಗಳು ೩೩, ೩೫
೭೮. ಲೆತಿಸಿಯಾ ಮೊಂತೇರೊ "ಇಕಾನಾಮೀಸ್ ಅಂಡ್ ಗ್ರೋಥ್ ಪೊಟೆಂಶಿಯಲ್ ಆಫ್ ದ ಟೈಲ್ ಇಂಡಸ್ಟ್ರಿ ಆಫ್ ದಕ್ಷಿಣ ಕನ್ನಡ" ಅಪ್ರಕಟಿತ ಮಹಾಪ್ರಬಂಧ, ವಾಣಿಜ್ಯ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ,ಮಂಗಳೂರು ೧೯೮೯, ಪುಟ ೯
೭೯ ಅದೇ, ಪುಟಗಳು ೧೧, ೧೨
೮೦. ಸತ್ಯವ್ರತ, ಸಂ. ೨
೮೧. ಪಿ.ಡಬ್ಲ್ಯು.ಪಿ., ಪೂರ್ವೋಕ್ತ, ಪುಟ ೭
೮೨. ಬಿ.ಎಂ.ಆರ್.- ೧೮೮೬, ಪುಟ ೯೨
೮೩. ಎಡಿಟೋರಿಯಲ್ ಬೋರ್ಡ್ ಸೈಂಟ್ ಎಲೋಶಿಯಸ್ ಕಾಲೇಜ್ ಆ್ಯನ್ವಲ್ (೧೯೪೧-೧೯೪೨), ಪುಟ ೫
೮೪. ಎಡಿಟೋರಿಯಲ್ ಬೋರ್ಡ್ 'ಮ್ಯಾಂಗಲೂರ್ ' ದಿ ಮಂಥ್ಲಿ ಆರ್ಗನ್ ಆಫ್ ಕಥೋಲಿಕ್ ಅಸೋಶಿಯೇಷನ್ ಆಫ್ ಸೌತ್ ಕೆನರಾ', ೧೨ ಫೆಬ್ರವರಿ, ೧೯೪೮, ಪುಟ ೧೭೦
೮೫. ಕ್ಯಾಥರಿನ ಸ್ಟೆಂಝ್ಲ್ಸ್, ಪೂರ್ವೋಕ್ತ, ಪುಟ ೫೨
೮೬. ರುಡೋಲ್ಫ್ ಹೆಚ್. ಫಿಶರ್, ಪೂರ್ವೋಕ್ತ, ಪುಟಗಳು ೨೦೬, ೨೦೭
೮೭. ಅದೇ, ಪುಟಗಳು ೨೦೮, ೨೦೯
೮೮. ಅದೇ, ಪುಟಗಳು ೨೧೦, ೨೧೧
೮೯. ಅದೇ, ಪುಟಗಳು ೨೧೨, ೨೧೩
೯೦. ಅದೇ, ಪುಟ ೨೧೪
೯೧. ಮೋಹನ್ ಕೃಷ್ಣ ರೈ, ಪೂರ್ವೋಕ್ತ, ಪುಟ ೧೩೪
೯೨. ಸಿಲ್ವೆಸ್ಟರ್ ಪಿಂಟೊ, ಪೂರ್ವೋಕ್ತ, ಪುಟ ೨೨೨
೯೩. ಐ.ಜೆ.ಎಸ್. ಶೇಟ್, "ದಿ ಸಾಗಾ ಆಫ್ ಮ್ಯಾಂಗಲೂರ್ ಟೈಲ್ಸ್" *ಸಂಡೆ ಹೆರಾಲ್ಡ್*
೯೪. ಸಿಲ್ವೆಸ್ಟರ್ ಪಿಂಟೊ, ಪೂರ್ವೋಕ್ತ, ಪುಟ ೨೨೩
೯೫. ಐ.ಜೆ.ಎಸ್. ಶೇಟ್, ಪೂರ್ವೋಕ್ತ
೯೬. ಬಿ.ಎಂ.ಆರ್ – ೧೮೭೮, ಪುಟ ೭೧; ಬಿ.ಎಂ.ಆರ್. -೧೮೮೦ ಪುಟ ೮೯; ಪಿ.ಡಬ್ಲ್ಯು.ಪಿ, "ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್", ಪೂರ್ವೋಕ್ತ, ಪುಟಗಳು ೩೪, ೩೫; ಬಿ.ಎಂ.ಆರ್. - ೧೯೧೨, ಪುಟ ೩೩, ಬಿ.ಎಂ.ಆರ್. - ೧೯೧೩, ಪುಟ ೮೭
೯೭. ಮೋಹನ್ ಕೃಷ್ಣ ರೈ, ಕೆ. "ಅರ್ಬನೈಜೇಷನ್ ಆಫ್ ಮ್ಯಾಂಗಲೊರ್ ಎ ಕೊಲೊನಿಯಲ್ ಎಕ್ಸ್ ಪೀರಿಯನ್ (೧೭೯೯-೧೯೪೭) ", ಅಪ್ರಕಟಿತ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೨೦೦೩, ಪುಟ ೧೩೨; ಮೋಹನ್ ಕೃಷ್ಣ ರೈ, "ವಸಾಹತುಶಾಹಿ ಮತ್ತು ನಗರೀಕರಣ", ಪುಟಗಳು ೫೩ – ೬೬
೯೮. . ಜೈ ಪ್ರಕಾಶ್ ರಾಘವಯ್ಯ, ಪೂರ್ವೋಕ್ತ, ಪುಟಗಳು ೭೬, ೭೭; ಬಿ.ಎಂ.ಆರ್. – ೧೯೦೯, ಪುಟಗಳು ೬೬, ೬೭
೯೯.ಪಿ.ಡಬ್ಲ್ಯು.ಪಿ., "ದ ಬಾಸೆಲ್ ಮಿಸನ್ ಇನ್ ಸೌತ್ ಕೆನರಾ ೧೮೩೪-೧೯೪೭", ಪೂರ್ವೋಕ್ತ, ಪುಟ ೨೦೨
೧೦೦ . ಕ್ರಿಶ್ಚನ್ ಅರ್ನ್ಸ್ಟ್, "ಬಾಸೆಲ್ ಮಿಶನ್ ಕೈಗಾರಿಕೆಗಳ ಇತಿಹಾಸವು", *ಪಂಚಕಜ್ಜಾಯ,* ೧೩ನೇ ಕರ್ನಾಟಕ ಸಾಹಿತ್ಯ ಸಮ್ಮೇಳನ, ಕೆನರೀಸ್ ಮಿಶನ್ ಪ್ರೆಸ್ ಅಂಡ್ ಬುಕ್ ಡಿಪೊ, ಮಂಗಳೂರು, ೧೯೨೭, ಪುಟಗಳು ೫ - ೧೫
೧೦೧ . ಎ.ಎಫ್.ಡಿ.ಸೋಜಾ, "ಸಾಂ ಜುಜೆಚೊ ಆಸ್ರೋ ಆನಿ ಕಾಮಾಸ್ಥಳ್" ಎ.ಎಫ್.ಡಿ.ಸೋಜಾ, ರಾಕಣೊ ೨೫ (ಕೊಂಕಣಿ), ಬೆಳ್ಳಿಹಬ್ಬದ ಸಂಚಿಕೆ, ೧೯೬೩, ಪುಟಗಳು ೧೦೩, ೧೦೪
೧೦೨. ' ದಿ ಮ್ಯಾಂಗಲೂರ್ ಮ್ಯಾಗಝಿನ್ ' ಸಂಪುಟ ೨, ೧೯೦೩, ಪುಟ ೩೭೭
೧೦೩. ಅದೇ , ಪುಟಗಳು ೧೦೪, ೧೦೫
೧೦೪ . ಅದೇ, ಪುಟ ೧೦೫
೧೦೫ . ಅದೇ, ಪುಟ ೧೦೬
೧೦೬. ಸಂತ ಜೋಸೆಫರ ಎಸೈಲಮ್ ಇಂಡಸ್ಟ್ರಿಯಲ್ ವರ್ಕ್‌ಶಾಪ್‌ನ ವ್ಯವಸ್ಥಾಪಕರಾದ ಬ್ಲಾನಿ ಲೋಬೊರವರೊಂದಿಗೆ ೧೫ ಜುಲೈ ೨೦೧೨ರಂದು ನಡೆಸಿದ ಸಂದರ್ಶನದಿಂದ ವೇಳೆ ಸಂಗ್ರಹಿಸಿದ ಮಾಹಿತಿ.

೧೦೭. ಅದೇ,
೧೦೮. ಅದೇ,
೧೦೯. 'ದಿ ಮ್ಯಾಂಗಲೂರ್ ಮ್ಯಾಗಝಿನ್' ಸಂಪುಟ ೨ ೧೯೦೩ ಪುಟ ೨೯
೧೧೦. ಫಾ। ಸಿಲ್ವೆಸ್ಟರ್ ಪಿಂಟೊ, ಪೂರ್ವೋಕ್ತ, ಪುಟ ಪುಟಗಳು ೨೨೩, ೨೨೪
೧೧೧. ವಿಶಾಂಜ್ ಪಿಂಟೋ ಪೂರ್ವೋಕ್ತ ಪುಟ ೬೭.
೧೧೨. ಫಾ। ಸಿಲ್ವೆಸ್ಟರ್ ಪಿಂಟೊ, ಪೂರ್ವೋಕ್ತ, ಪುಟ ೨೨೨
೧೧೩. ಅದೇ, ಪುಟ ೨೨೩
೧೧೪. . ಅದೇ, ಪುಟ ೨೨೪
೧೧೫. ಅದೇ, ಪುಟಗಳು ೨೨೪, ೨೨೫
೧೧೬. ಅದೇ, ಪುಟ ೨೨೫
೧೧೭. *ಕ್ರೈಸ್ತ ಹಿತವಾದಿ* - ಸಂಪುಟ ೭, ಮಂಗಳೂರು ೧೯೩೧, ಪುಟಗಳು ೧೬೩, ೧೬೪
೧೧೮. ಫಾ। ಮಾರ್ಕ್ ವಾಲ್ಡಾರ್, ಪೂರ್ವೋಕ್ತ, ಪುಟ ೩೮೮
೧೯೬. ಫಾ। ಸಿಲ್ವೆಸ್ಟರ್ ಪಿಂಟೋ, ಪೂರ್ವೋಕ್ತ, ಪುಟ ೨೨೬
೧೨೦. *ಕ್ರೈಸ್ತ ಹಿತವಾದಿ*, ಪೂರ್ವೋಕ್ತ, ಪುಟಗಳು ೧೬೩, ೧೬೪
೧೨೧. ವಿಶಾಂಝ್ ಪಿಂಟೋ, ಪೂರ್ವೋಕ್ತ, ಪುಟ ೬೫; ಫಾ। ಪಿಯೂಸ್ ಫಿಡೆಲಿಸ್ ಪಿಂಟೋ, "ಕ್ರಿಶ್ಚಿಯಾನಿಟಿ ಇನ್ ಸೌತ್ ಕೆನರಾ", ಫಾ। ರೋನಾಲ್ಡ್ ಕುಟಿನ್ಹೊ, (ಸಂಪಾದಿಸಿದ) 'ಏಕತಾ' ಪೂರ್ವೋಕ್ತ, ಪು ೧೨
೧೨೨. ಎಡಿಟೋರಿಯಲ್ ಬೋರ್ಡ್ ಪ್ಲಾಟಿನಂ ಜೂಬಿಲಿ ಸೆಲೆಬ್ರೇಷನ್ ಸಾವೆನಿಯರ್, ' ಮ್ಯಾಂಗಲೂರ್ 'ಮಂಥ್ಲಿ ಆರ್ಗನ್ ಆಫ್ ದಿ ಸೌತ್ ಕೆನರಾ ಕಥೋಲಿಕ ಅಸೋಸಿಯೇಷನ್, ಮೇ ೧೯೯೦, ಪುಟಗಳು ೨೯-೨೨
೧೨೩. *ಕರ್ನಾಟಕ ಕ್ರೈಸ್ತ ಬಂಧು* ಸಂಪುಟ ೨, ಅಕ್ಟೋಬರ್ ೧೯೨೩, ಪುಟಗಳು ೧೫೭, ೧೫೮
೧೨೪. ಎ.ಜಿ.ಸೋನ್ಸ್, "ಕ್ರಿಶ್ಚಯನ್ ಮಿಶನರಿ ವರ್ಕ್ ಎಂಡ್ ಅಗ್ರಿಕಲ್ಚರ್ ಇನ್ ಇಂಡಿಯ", ಎಡಿಟೋರಿಯಲ್ ಬೋರ್ಡ್ ಸಿ.ಎಸ್.ಐ ಬೆಥಾನ್ಯ ಚರ್ಚ್, ಪರ್ಪಲೆ, ಕಾರ್ಕಳ, ಸೆಂಟಿನರಿ ಸೆಲೆಬ್ರೇಷನ್ ಸೊವಿನಿಯರ್, ೧೯೭೧, ಪುಟಗಳು ೩೨, ೩೩
೧೨೫. *ಕರ್ನಾಟಕ ಕ್ರೈಸ್ತ ಬಂಧು*, ಪೂರ್ವೋಕ್ತ, ಪುಟಗಳು ೧೫೭, ೧೫೮
೧೨೬. ಎ.ಜಿ.ಸೋನ್ಸ್, ಪೂರ್ವೋಕ್ತ, ಪುಟಗಳು ೩೨, ೩೩;
೧೨೭. ಎ.ಜಿ.ಸೋನ್ಸ್, ಪೂರ್ವೋಕ್ತ, ಪುಟಗಳು ೩೨, ೩೩; ಪಿ.ಡಬ್ಲ್ಯು.ಪಿ. ಪೂರ್ವೋಕ್ತ ಪುಟಗಳು ೨೦೯, ೨೧೦
೧೨೮. ಬಿ.ಎಂ.ಆರ್. - ೧೯೧೧ ಪುಟ ೫೮
೧೨೯. ಬೆನೆಟ್ ಜಿ ಅಮ್ಮನ್ನ, "ವಾಮಂಜೂರು ಪರಿಸರ ಮತ್ತು ಪ್ರೊಟೆಸ್ಟೆಂಟ್ ಕ್ರೈಸ್ತರ ಸಿ.ಎಸ್.ಐ.ಪೀಟರ್ ಸ್ಮಾರಕ ಸಭೆ", ಪೀಟರ್ ಸ್ಮಾರಕ ದೇವಾಲಯ ಸ್ಮರಣ ಸಂಚಿಕೆ, ಮಂಗಳೂರು, ೨೦೧೧, ಪುಟ ೩೨
೧೩೦. ಜೈ ಪ್ರಕಾಶ್ ರಾಘವಯ್ಯ, ಪೂರ್ವೋಕ್ತ, ಪುಟ ೩೬
೧೩೧. ರಾಮಚಂದ್ರ ಉಚ್ಚಿಲ್, ಪೂರ್ವೋಕ್ತ, ಪುಟ ೭
೧೩೨. ಜೈ ಪ್ರಕಾಶ್ ರಾಘವಯ್ಯ, ಪೂರ್ವೋಕ್ತ, ಪುಟ ೩೬
೧೩೩. ಡೆನಿಸ್ ಫೆರ್ನಾಂಡಿಸ್, ಪೂರ್ವೋಕ್ತ ಪುಟಗಳು ೨೫, ೨೬
೧೩೪. ಮೋಹನ್ ಕೃಷ್ಣ ರೈ, ಕೆ. "ಅರ್ಬನೈಜೇಷನ್ ಆಫ್ ಮ್ಯಾಂಗಲೂರ್ ಎ ಕೊಲೊನಿಯಲ್ ಎಕ್ಸ್‌ಪೀರಿಯನ್ (೧೭೯೯-೧೯೪೭)", ಅಪ್ರಕಟಿತ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೨೦೦೩, ಪುಟ ೩೬
೧೩೫. ಮೋಹನ್ ಕೃಷ್ಣ ರೈ, ಕೆ "ಅರ್ಬನೈಜೇಶನ್, ಆಫ್ ಮ್ಯಾಂಗಲೋರ್ ಎ ಕೊಲೋನಿಯಲ್ ಎಕ್ಸ್‌ಪೀರಿಯನ್ಸ್ (೧೭೯೯-೧೯೪೭)", ಪೂರ್ವೋಕ್ತ, ಪುಟ ೧೨೬
೧೩೬. ಅದೇ, ಪುಟ ೧೩೪
೧೩೭. ಜೈ ಪ್ರಕಾಶ್ ರಾಘವಯ್ಯ, ಪೂರ್ವೋಕ್ತ, ಪುಟಗಳು ೭೭, ೭೮
೧೩೮. ಜೆ. ಎಫ್. ಹಾಲ್, *ಮದ್ರಾಸ್ ಡಿಸ್ಟ್ರಿಕ್ಟ್ ಗಜಟಿಯರ್, ಸಪ್ಲಿಮೆಂಟ್ ಟು ದ ಡಿಸ್ಟ್ರಿಕ್ಟ್ ಮ್ಯಾನುವೆಲ್ಸ್ ಫಾರ್ ಸೌತ್ ಕೆನರಾ ಡಿಸ್ಟ್ರಿಕ್ಟ್*, ಮದ್ರಾಸ್: ೧೯೩೮, ಪುಟ ೩೮೮

# ಅಧ್ಯಾಯ-೬

# ಕ್ರೈಸ್ತರ ಸಾಮಾಜಿಕ ಸ್ಪಂದನೆ-ಸ್ಥಳೀಯರ ಪ್ರತಿಕ್ರಿಯೆ

## ಅಧ್ಯಾಯ – ೬

## ಕ್ರೈಸ್ತರ ಸಾಮಾಜಿಕ ಸ್ಪಂದನೆ - ಸ್ಥಳೀಯರ ಪ್ರತಿಕ್ರಿಯೆ

ಕಥೋಲಿಕರ ಮತ್ತು ಬಾಸೆಲ್ ಮಿಶನ್‌ನ ಉದ್ದೇಶಗಳು ಒಂದೇ. ಆದರೆ ಇವರಲ್ಲಿರುವ ವ್ಯತ್ಯಾಸವೆಂದರೆ, ಬಾಸೆಲ್ ಮಿಶನ್ ಮತಪ್ರಚಾರಕರು ಹೊಸದಾಗಿ ಕ್ರೈಸ್ತ ಧರ್ಮ ಸ್ವೀಕರಿಸಿದವರ ಅಂದರೆ ಬಹುಪಾಲು ಬಿಲ್ಲವರನ್ನು ಮೇಲಕ್ಕೆತ್ತುವ ಕಾರ್ಯಗಳನ್ನು ನಡೆಸಿದರೆ, ಕಥೋಲಿಕರು ಈಗಾಗಲೇ ಸ್ಥಾಪನೆಗೊಂಡಿರುವ ಕಥೋಲಿಕ ಸಮಾಜಕ್ಕಾಗಿ ಮತ್ತು ಹೊಸದಾಗಿ ಕ್ರೈಸ್ತ ಧರ್ಮ ಸ್ವೀಕರಿಸಿದವರ ಒಳಿತಿಗಾಗಿ ದುಡಿದಿದ್ದಾರೆ. ದಕ್ಷಿಣ ಕನ್ನಡದ ಅಸ್ಪೃಶ್ಯ ಜಾತಿಗಳಾದ ಪರಾಯ ಮತ್ತು ಕೊರಗರನ್ನು ಕ್ರೈಸ್ತ ಮತ ಸ್ವೀಕರಿಸುವಂತೆ ಮಾಡುವುದು ಮತ್ತು ಅವರ ಉದ್ಧಾರ ಈ ಎರಡೂ ಸಮುದಾಯಗಳ ಪ್ರಯತ್ನಗಳಾಗಿವೆ. ಕೆನರಾ ಮಿಶನ್ ಕ್ಷೇತ್ರದ ಪೂರ್ವಿಕರು ಗೋವಾದ ಫ್ರಾನ್ಸಿಸ್ಕನ್ ಧರ್ಮಗುರುಗಳು. ಅವರು ೧೬ನೇ ಶತಮಾನದಿಂದಲೇ ಚರ್ಚ್‌ಗಳನ್ನು ಹಾಗೂ ಇಗರ್ಜಿ ಶಾಲೆಗಳನ್ನು ಸ್ಥಾಪಿಸಿ, ತಮ್ಮ ಸಮುದಾಯದ ಧಾರ್ಮಿಕ ಮತ್ತು ಬೌದ್ಧಿಕ ಅಗತ್ಯಗಳನ್ನು ಪೂರೈಸಿದ್ದಾರೆ. ಮುಂದೆ ಧರ್ಮಪ್ರಾಂತ್ಯ ಕಾರ್ಮೆಲೈಟ್ ಧರ್ಮಗುರುಗಳ ನಿರ್ವಹಣೆಗೆ ಒಳಪಟ್ಟಾಗ, ಅವರೂ ಸಹಾ ಈ ಮೊದಲು ಕೈಗೊಂಡಿದ್ದ ಸೇವಾ ಕಾರ್ಯಗಳನ್ನು ಮುಂದುವರಿಸಿದ್ದಾರೆ. ಆದ್ದರಿಂದ ೧೮೩೪ರಲ್ಲಿ ಬಾಸೆಲ್ ಮಿಶನ್ ಮಂಗಳೂರಿಗೆ ಆಗಮಿಸಿ ಸುವಾರ್ತಾ ಪ್ರಸಾರ ಆರಂಭಿಸಿದಾಗ ಈಗಾಗಲೇ ಕ್ರೈಸ್ತ ಧರ್ಮಕ್ಕೆ ತೆರೆದುಕೊಂಡಿದ್ದ ಜಿಲ್ಲೆಯಲ್ಲಿ ಅದು ಕಷ್ಟವಾಗಲಿಲ್ಲ. ಆದರೆ ಬಾಸೆಲ್ ಮಿಶನರಿಗಳು ವಿಶೇಷವಾಗಿ ಬ್ರಾಹ್ಮಣರ ಹಗೆಯನ್ನು ಎದುರಿಸಬೇಕಾಗಿ ಬಂದದ್ದನ್ನೋ ನಿಜ.[೧]

ಬಾಸೆಲ್ ಮಿಶನ್ ತನ್ನ ಸುವಾರ್ತಾ ಪ್ರಸಾರ ಕಾರ್ಯಕ್ಕಾಗಿ ದಕ್ಷಿಣ ಕನ್ನಡದಲ್ಲಿ ಪರಭಾವ ಮತ್ತು ವಿರೋಧ ಎರಡನ್ನೂ ಎದುರಿಸಿದೆ. ಸಮಾಜದ ಕೆಳಸ್ತರದ ಜನರು ಸುವಾರ್ತಾ ಪ್ರಸಾರ ಕಾರ್ಯವನ್ನು ಅನೇಕ ಕಾರಣಗಳಿಂದ ಬೆಂಬಲಿಸಿ, ಕೆಲವರು ಹೊಸ ಮತವನ್ನು ಸ್ವೀಕರಿಸಿದ್ದಾರೆ. ವೈಯಕ್ತಿಕವಾಗಿ ಸ್ಥಳೀಯರು ಮಿಶನರಿಗಳನ್ನು ಮತ್ತು ಅವರ ಚಟುವಟಿಕೆಗಳನ್ನು ಸ್ವಾಗತಿಸಿದ್ದಾರೆ. ಅಲ್ಲದೆ ಜಿಲ್ಲೆಯಲ್ಲಿ ಅವರ ವಾಸ್ತವ್ಯಕ್ಕೆ ಹೆಚ್ಚಿನ ಪ್ರತಿರೋಧವನ್ನು ವ್ಯಕ್ತಪಡಿಸಿಲ್ಲ.[೨] ಆದರೆ, ಅವರ ಸುವಾರ್ತಾ ಪ್ರಸಾರ ಚಟುವಟಿಕೆಗಳನ್ನು ಬ್ರಾಹ್ಮಣರ ಮತ್ತು ಹಿಂದೂ ಸಮುದಾಯದ ಇತರ ಸಂಪ್ರದಾಯಸ್ಥ ವರ್ಗದವರ ನೇತೃತ್ವದಲ್ಲಿ ವಿರೋಧಿಸಲಾಗಿದೆ. ೧೯ನೇ ಶತಮಾನದ ಆದಿಭಾಗದಲ್ಲಿ ನಡೆದಂತಹ ಹೆಚ್ಚಿನ

ಪ್ರತಿಭಟನೆಗಳು ನಿಮ್ನ ವರ್ಗದ ಮೇಲಿನ ಅಭಿಮಾನದಿಂದಲ್ಲ; ಬದಲಾಗಿ ಕ್ರೈಸ್ತ ಧರ್ಮ ಸ್ವೀಕರಿಸಿದರೆ ದಲಿತರು ತಮ್ಮ ತೋಟ-ಗದ್ದೆಗಳಲ್ಲಿ ದುಡಿಯಲು ಸಿಗಲಿಕ್ಕಿಲ್ಲ ಎಂಬ ಸರ್ವೇ ಸಾಮಾನ್ಯ ಭಯಭೀತಿಯಿಂದ. ಇದಕ್ಕೆ ಪೂರಕ ಎನ್ನುವಂತೆ ಹೊಸದಾಗಿ ಕ್ರೈಸ್ತ ಧರ್ಮ ಸ್ವೀಕರಿಸಿದವರಿಗೆ ಬಾಸೆಲ್ ಮಿಶನ್, 'ಮಿಶನ್ ಕಾಂಪೌಂಡ್'ನಲ್ಲಿ ಯಾವುದಾದರೊಂದು ಕೈಗಾರಿಕೆಯಲ್ಲಿ ಉದ್ಯೋಗವನ್ನು ನೀಡಿ ತಮ್ಮ ಅಧೀನದಲ್ಲಿ ಇರಿಸಿಕೊಳ್ಳುತ್ತಿತ್ತು.

ರೆವೆ. ಹೆಬಿಕ್ ಮಂಗಳೂರಿನಲ್ಲಿ ಪ್ರಬೋಧನೆ ಪ್ರಾರಂಭಿಸಿದಾಗ ಅವರ ವಿರುದ್ಧ ಘೋಷಣೆಗಳನ್ನು ಕೂಗಿ ಅವರ ಮೇಲೆ ಸೆಗಣಿ ಹಾಗೂ ಕಲ್ಲು ಹೊಡೆದು ಅವರಿಗೆ ಅಡ್ಡಿಪಡಿಸಲಾಗಿದೆ. ಆಗ ಜಿಲ್ಲಾ ನ್ಯಾಯಾಧೀಶರಾಗಿದ್ದ ಅಂಡರ್‌ಸನ್ ಅವರು ಕೆಲ ಕಾಲ ಯಾವುದೇ ಕಾನೂನು ಕ್ರಮ ತೆಗೆದುಕೊಳ್ಳಲು ಹಿಂಜರಿದರು.[೩] ಏಕೆಂದರೆ ಬ್ರಿಟಿಷ್ ಸರ್ಕಾರ, ಭಾರತೀಯರ ಯಾವುದೇ ಆಂತರಿಕ ವಿಚಾರಗಳಲ್ಲಿ ಹಸ್ತಕ್ಷೇಪ ಮಾಡದಿರಲು ನಿರ್ಧರಿಸಿತ್ತು. ಹೀಗೆ, ಮಿಶನರಿಗಳ ವಿರುದ್ಧ ನಡೆಯುತ್ತಿದ್ದ ಪ್ರತಿಭಟನೆಗಳನ್ನು ಮುಖ್ಯವಾಗಿ ಬ್ರಾಹ್ಮಣ ವರ್ಗದವರು ಪ್ರಯೋಜಿಸುತ್ತಿದ್ದರು. ೧೮೪೫ರಲ್ಲಿ ಉಪದೇಶಿಗಳಾದ ಡೇನಿಯಲ್ ಅಮ್ಮನ್ನ ಹಾಗೂ ಐಸಾಕ್ ಸೋನ್ಸ್‌ರವರು ಮೂಲ್ಕಿಯಲ್ಲಿ ಪ್ರಬೋಧನೆಗಾಗಿ ಹೋಗಿದ್ದರು. ಆಗ ಅಲ್ಲಿಯ ಜನರು ತಮ್ಮ ಬೋಧನೆಯಲ್ಲಿ ದುಡಿಯದೇ ಬದುಕುವ ದಾರಿ ತೋರಿಸಬೇಕು ಎಂದು ಹಟ ಹಿಡಿದು ಅವರನ್ನು ತಡೆದರು.[೪] ಪ್ರಾರಂಭದ ಆ ಕೆಲವು ಪ್ರತಿಭಟನೆಗಳು ಮೇಲ್ವರ್ಗದವರ ಪ್ರಚೋಧನೆಯಿಂದ ನಡೆದಿರುವುದು ಸ್ಪಷ್ಟವಾಗಿ ತಿಳಿಯುತ್ತದೆ, ಮಾತ್ರವಲ್ಲದೆ ಶಾಂತಿ ಸುವ್ಯವಸ್ಥೆಯ ಜವಾಬ್ದಾರಿ ಹೊತ್ತ ಬ್ರಿಟಿಷ್ ಸರ್ಕಾರದ ನಿರ್ಲಿಪ್ತ ಧೋರಣೆ ಕೂಡಾ ಅನಾವರಣಗೊಳ್ಳುತ್ತದೆ.

೧೮೭೦ರ ಎಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ನಗರದ ಬೇರೆ ಬೇರೆ ಭಾಗಗಳಲ್ಲಿ ಬೆಂಕಿ ಕಾಣಿಸಿಕೊಂಡಿತು. ಬಲ್ಮಠದ ಮಿಶನ್ ಆವರಣದೊಳಗೇ ಎರಡು ಬಾರಿ ಬೆಂಕಿ ಸಂಭವಿಸಿ ರೆವೆ. ಬ್ರಿಗೆಲ್ ಹಾಗೂ ರೆವೆ. ಡೈಮಲ್ ಹ್ಯೂಬರ್ ಅವರ ಮನೆಗಳನ್ನು ಭಸ್ಮಗೊಳಿಸಿದೆ. ಅಂತೆಯೇ ಎರಡನೇ ಬಾರಿಯ ಬೆಂಕಿ, ಮಿಶನರಿಗಳ ಕುದುರೆ ಲಾಯವನ್ನು ಹಾಗೂ ಒಂದು ಕುದುರೆಯನ್ನೂ ಸಹ ಸಜೀವವಾಗಿ ದಹಿಸಿತು.[೫] ಉದ್ದೇಶಪೂರ್ವಕವಾಗಿ ಬೆಂಕಿ ಹಚ್ಚುವ ಮೂಲಕ ಮಿಶನರಿಗಳ ಮನಸ್ಸಿನಲ್ಲಿ ದಿಗಲು ಉಂಟುಮಾಡುವುದು ಆ ಘಟನೆಯ ಹಿಂದೆ ಇದ್ದ ಮುಖ್ಯ ಉದ್ದೇಶವಾಗಿತ್ತು. ೧೮೭೫ರಲ್ಲಿ ಮಂಗಳೂರಿನ ಕದ್ರಿಯಲ್ಲಿ ಬೋಧಿಸುತ್ತಿದ್ದ ಮಿಶನರಿಗಳ ಮೇಲೆ ದೊಡ್ಡ ತಮ್ಮಟೆ ಒಂದನ್ನು ಉರುಳಿಸಿ ಬ್ರಾಹ್ಮಣರಿಂದ ಉತ್ತೇಜಿಸಲ್ಪಟ್ಟ ೮ ಜನರ ಗುಂಪೊಂದು ಪೋಲಿಸರ ಎದುರಿನಲ್ಲಿಯೇ ಮಿಶನರಿಗಳನ್ನು ಥಳಿಸಿದೆ.[೬] ೧೮೭೮ರಲ್ಲಿ ನ್ಯೂಬ್ಲಿಂಗ್ ಮತ್ತು ಗೆಂಗ್ನಾಗೆಲ್ ಎಂಬಿಬ್ಬರು ಮಿಶನರಿಗಳಿಗೆ ತಮ್ಮ ಪ್ರವಾಸದ ಬೋಧನೆಯ

ಸಮಯದಲ್ಲಿ ಕೆರ್ಗಿ, ಮಾವಿನಕುಳಿ, ಮುರ್ಡೇಶ್ವರ ಮತ್ತು ಬೈಲೂರು ಗ್ರಾಮಗಳ ಜನರು ಭಯಭೀತರಾಗಿ ನೋಡುತ್ತಿದ್ದರು. ಹೀಗಿರುವಾಗ ಆ ಗ್ರಾಮದ ಒಬ್ಬ ವ್ಯಕ್ತಿ ತನ್ನ ಹೊಟ್ಟೆಯನ್ನು ತೋರಿಸಿ, "ಇದೇ ನನ್ನ ದೇವರು, ಇದು ತುಂಬಿದ್ದರೆ ಸ್ವರ್ಗ ಮತ್ತು ಖಾಲಿಯಾಗಿದ್ದರೆ ನರಕ' ಎಂದು ಹಾಸ್ಯಪೂರಿತನಾಗಿ ಹೇಳುತ್ತಿದ್ದನು.[೭] ಇದರಿಂದ ತಿಳಿಯುವುದೇನೆಂದರೆ, ಜನರು ಸ್ವರ್ಗ-ನರಕಗಳ ಬಗ್ಗೆ ಚಿಂತಿತರಾಗಿರಲಿಲ್ಲ ಬದಲಾಗಿ ತಮ್ಮ ಅನುದಿನದ ಆಹಾರದ ಬಗ್ಗೆ ಚಿಂತಾಕ್ರಾಂತರಾಗಿದ್ದರು. ಅಂತೆಯೇ, ಆಧ್ಯಾತ್ಮಿಕ ವಿಚಾರಗಳ ಬಗ್ಗೆ ಚಿಂತಿಸುತ್ತಿರಲಿಲ್ಲ, ಆದರೆ ಲೌಕಿಕ ಜೀವನದ ಬಗ್ಗೆ ಹೆಚ್ಚು ಆಸಕ್ತಿ ಹೊಂದಿದ್ದರು ಎಂಬುದು ಇದರಿಂದ ತಿಳಿಯುತ್ತದೆ.

ಅಷ್ಟಮಠಗಳ ನಗರ ಉಡುಪಿಯಲ್ಲಿ ಮಿಶನರಿಗಳಿಗೆ ತೀವ್ರ ಪ್ರತಿರೋಧ ವ್ಯಕ್ತವಾಗಿದೆ. ೧೮೫೫ರಲ್ಲಿ ಬಾಸೆಲ್ ಮಿಶನ್ ತನ್ನ ಠಾಣ್ಯವನ್ನು ಉಡುಪಿಯಲ್ಲಿ ತೆರೆಯುವುದಕ್ಕೆ ನಗರದ ಪ್ರಭಾವಿ ಬ್ರಾಹ್ಮಣರು ವಿರೋಧವನ್ನು ವ್ಯಕ್ತಪಡಿಸಿದ್ದಾರೆ. ಅಲ್ಲಿಗೆ ಹೋದ ಮಿಶನರಿಗಳು ಹಿಂಸೆ ಮತ್ತು ಅನೇಕ ವಿಧದ ಕಿರುಕುಳಗಳಿಗೆ ಬಲಿಪಶುವಾಗಬೇಕಾಯಿತು. ಅವರ ಕುಡಿಯುವ ನೀರನ್ನು ವಿಷಯುಕ್ತಗೊಳಿಸಲಾಗಿದೆ. ಜರ್ಮನ್ ಮಿಶನರಿ ಕೆಮರಾರ್‌ಗೆ ಕಲ್ಲಿನಿಂದ ಹೊಡೆದರು. ೧೮೫೭ರ ಕ್ರಿಸ್‌ಮಸ್ ಆಚರಣೆಯ ಹಿಂದಿನ ದಿನ ಮಿಶನರಿಗಳ ಬಂಗ್ಲೆಗೆ ಬೆಂಕಿ ಹಚ್ಚಿದ್ದು ಮಾತ್ರವಲ್ಲದೆ, ಇಡೀ ದೇವಾಲಯವನ್ನು ಧ್ವಂಸಗೊಳಿಸಲಾಯಿತೆನ್ನಲಾಗುತ್ತದೆ. ಕೆಮರಾರ್ ಅವರು ಅನುವಾದಿಸುತ್ತಿದ್ದ ಹೊಸ ಒಡಂಬಡಿಕೆಯ ತುಳು ಅನುವಾದ ಸಂಪೂರ್ಣವಾಗಿ ಬೆಂಕಿಗೆ ಆಹುತಿಯಾಯಿತು.[೮]

ಕಾರ್ಕಳದಲ್ಲಿ ಮಿಶನರಿಯಾಗಿ ಸೇವೆ ಸಲ್ಲಿಸುತ್ತಿದ್ದ ಸ್ಕೈಬಲ್‌ರವರ ಪ್ರಕಾರ ಬ್ರಾಹ್ಮಣರು ಯೇಸುವಿನ ಹೆಸರನ್ನು ಕೂಡಾ ಕೇಳಲು ಬಯಸುವುದಿಲ್ಲ. ಅವರು ಯೇಸುವನ್ನು ದೇವರ ಮಗ ಎಂದು ಕರೆಯುವುದು ದೈವನಿಂದೆಯಾಗುತ್ತದೆ ಎಂಬ ಅಭಿಪ್ರಾಯವನ್ನು ಹೊಂದಿದ್ದರು ಎಂದು ಹೇಳುತ್ತಾರೆ. ಆದರೆ ವಿಜ್ಞಾನ ಮತ್ತು ಧರ್ಮದ ಮಹತ್ವವನ್ನು ಅರಿತಿದ್ದ ಅವರು ಹೆಚ್ಚಿನ ಸಂಖ್ಯೆಯಲ್ಲಿ ಶಾಲೆಗಳನ್ನು ತೆರೆದು ಯುವಕರಿಗೆ ಅರಿವು ಮೂಡಿಸುವುದರೊಂದಿಗೆ ಪರೀಕ್ಷೆಗೆ ಅವರನ್ನು ಅಣಿಯಾಗಿಸುವುದು ನಿಜವಾದ ಮಿಶನರಿ ಸೇವೆ ಎಂದು ಪರಿಗಣಿಸಿದ್ದರು.[೯] ಕ್ರೈಸ್ತ ಮತ ಸ್ವೀಕಾರವನ್ನು ವಿರೋಧಿಸುತ್ತಿದ್ದ ಅವರು, ಆಧುನಿಕ ಶಿಕ್ಷಣ ಮತ್ತು ವಿಜ್ಞಾನದ ಉಪಯುಕ್ತತೆ ಹಾಗೂ ಮಿಶನರಿಗಳು ನಡೆಸುತ್ತಿದ್ದ ಶಿಕ್ಷಣ ಸಂಸ್ಥೆಗಳ ಗುಣಮಟ್ಟವನ್ನು ಚೆನ್ನಾಗಿ ಅರಿತಿದ್ದರು. ಆದುದರಿಂದಲೇ ಜಿಲ್ಲೆಯಲ್ಲಿ ಶಾಲಾ-ಕಾಲೇಜುಗಳು ಪ್ರಾರಂಭಗೊಂಡಾಗ ಅದರ ಲಾಭವನ್ನು ಪಡಕೊಂಡವರಲ್ಲಿ ಬ್ರಾಹ್ಮಣರು ಅಗ್ರಸ್ಥಾನದಲ್ಲಿ ನಿಲ್ಲುತ್ತಾರೆ. ಪಾಶ್ಚಿಮಾತ್ಯ ಶಿಕ್ಷಣ ಅವರಿಗೆ ಉದ್ಯೋಗ ಅವಕಾಶ ಮತ್ತು ಸಮಾಜದಲ್ಲಿ ಗೌರವದ ಸ್ಥಾನಮಾನವನ್ನು

ತಂದು ಕೊಡುತ್ತದೆ ಎಂಬ ಅರಿವು ಬೇರೆಲ್ಲಾ ಸಮುದಾಯಗಳಿಗಿಂತ ಸ್ವಲ್ಪ ಜಾಸ್ತಿಯೇ ಇತ್ತು ಎಂದರೂ ತಪ್ಪಾಗಲಾರದು.

೧೮೯೪ರಲ್ಲಿ ಬಂಟ್ವಾಳದಲ್ಲಿ ಬೋಧಿಸುತ್ತಿರುವಾಗ ಯುವಕನೊಬ್ಬ ಮಿಶನರಿ ವಾಲ್ಟರವರ ಹತ್ತಿರ ವಿಶ್ವ ಧರ್ಮ ಸಮ್ಮೇಳನದ ಬಗ್ಗೆ ಉಲ್ಲೇಖಿಸುತ್ತಾ ಅಲ್ಲಿ ವಿವೇಕಾನಂದರ ಭಾಷಣ ಅಮೇರಿಕನ್ನರಲ್ಲಿ ಮೂಡಿಸಿರುವ ಪ್ರಭಾವ ಕ್ರೈಸ್ತ ಧರ್ಮದ ಪ್ರಸಿದ್ಧಿಗೆ ಬಲವಾದ ಪ್ರಹಾರವೆಂಬ ಅರ್ಥದಲ್ಲಿ ವಾದಿಸುತ್ತಿದ್ದನು.[೧೦] ೧೮೯೩ರಲ್ಲಿ ದೂರದ ಅಮೇರಿಕಾದ ಚಿಕಾಗೋನಲ್ಲಿ ನಡೆದಿರುವ ಆ ಸಮ್ಮೇಳನ ಬಂಟ್ವಾಳದಂತಹ ಗ್ರಾಮೀಣ ಪ್ರದೇಶಕ್ಕೆ ಅಷ್ಟು ಬೇಗ ತಲುಪಿ ಅಲ್ಲಿಯ ಯುವಕರಲ್ಲಿ ಉಂಟು ಮಾಡಿರುವ ಸಂಚಲನ ಪ್ರಶಂಸನೀಯ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಜನರಲ್ಲಿ ರಾಜಕೀಯ ಪ್ರಜ್ಞೆ ವಿಕಸನಗೊಂಡು, ಆಧ್ಯಾತ್ಮಿಕ ರಾಷ್ಟ್ರೀಯತೆಯ ರೂಪವನ್ನು ಪಡೆದು ದೇಶದ ಆಧ್ಯಾತ್ಮಿಕ ಪರಂಪರೆಯನ್ನು ಹೆಮ್ಮೆಯಿಂದ ಕಾಣತೊಡಗಿದ್ದರು. ಹೀಗಿರುವಾಗ, ಕಾಸರಗೋಡಿನಲ್ಲಿ ವಯಸ್ಸಾದವರೊಬ್ಬರು ಯೇಸು ಕ್ರಿಸ್ತನ ಜಾತಿ ಯಾವುದು ಎಂಬುದಾಗಿ ಪ್ರಶ್ನಿಸಿದರು. ಮುಂದುವರಿದು, ಯೇಸು ವೃತ್ತಿಯಲ್ಲಿ ಕುರುಬನಾಗಿರುವುದರಿಂದ ಅವರು ಕೆಳವರ್ಗದ ಜನರ ಗುರುವಾಗಿರುವರು. ಆದುದರಿಂದ ಅವರನ್ನು ನಮ್ಮ ಮಧ್ಯವರ್ತಿಯಾಗಿ ಸ್ವೀಕರಿಸಲು ಸಾಧ್ಯವಿಲ್ಲ ಎಂದು ಖಡಾ ಖಂಡಿತವಾಗಿ ಹೇಳಿದರು.[೧೧]

ಆದರೆ, ಎಲ್ಲಾ ಕಡೆ ಮಿಶನರಿಗಳು ವಿರೋಧಗಳನ್ನು ಎದುರಿಸಬೇಕಾಗಿರಲಿಲ್ಲ. ಕಾಸರಗೋಡಿನಲ್ಲಿ ಒಂದು ಕಡೆ ಮಿಶನರಿ ವಾಲ್ಟರ್ ಬೋಧಿಸುತ್ತಿರುವಾಗ, ಜನರಲ್ಲಿ ಒಬ್ಬ ಎದ್ದು ನಿಂತು " ಈ ರೀತಿಯ ಬೋಧನೆ ನಮಗೆ ಬೇಕು. ಹೊಸ ಒಡಂಬಡಿಕೆ ಓದಿದ ಬಳಿಕ ಯೇಸು ಕ್ರಿಸ್ತನೊಂದಿಗೆ ಹೋಲಿಸಬಲ್ಲ ಬೇರೊಬ್ಬ ದೇವರಿಲ್ಲ ಎಂದು ಮನವರಿಕೆಯಾಗಿದೆ. ಆದುದ್ದರಿಂದ, ಅವರನ್ನೇ ನಾನು ನಂಬುತ್ತೇನೆ ಮತ್ತು ಅನುದಿನ ಆರಾಧಿಸುತ್ತೇನೆ" ಎಂದು ಹೇಳಿದನು.[೧೨] ಹೀಗೆ, ಮಿಶನರಿಗಳ ಧರ್ಮ ಪ್ರಸಾರಣೆಗೆ ಸಾಮಾಜಿಕ ವಿರೋಧ ಇದ್ದರೂ ವೈಯಕ್ತಿಕ ನೆಲೆಯಲ್ಲಿ ಜನರು ಕ್ರೈಸ್ತ ಧರ್ಮವನ್ನು ಸ್ವಾಗತಿಸಿದ್ದಾರೆ. ೧೮೮೦ರ ವೇಳೆಗೆ ಜಿಲ್ಲೆಯ ಬೇರೆ ಬೇರೆ ಕಡೆಗಳಲ್ಲಿ ಕೆಲವೊಂದು ಕ್ರೈಸ್ತ ಮತ ಸ್ವೀಕಾರಗಳು ನಡೆದಿವೆ. ಮುಖ್ಯವಾಗಿ ಪಾದೂರಿನ ಹತ್ತಿರದ ಮಡಂಬು ಎಂಬಲ್ಲಿನ ದೈವಸ್ಥಾನದ ೨೪ರ ಹರೆಯದ ಪುರೋಹಿತನ ಹಾಗೂ ಸಾಂತೂರಿನ ದೈವಸ್ಥಾನದ ಪುರೋಹಿತನ ಕ್ರೈಸ್ತಮತ ಸ್ವೀಕಾರವನ್ನು ಮೂಲ್ಕಿಯ ಪಾಸ್ಟರ್ ಆಗಿದ್ದ ರೆವೆ. ಓಟ್ ನೆರವೇರಿಸಿದರು.[೧೩] ಆದರೆ, ೧೮೮೩ರಲ್ಲಿ ಮಂಗಳೂರಿನ ಸಾರಸ್ವತ ಬ್ರಾಹ್ಮಣ ವರ್ಗದ ಪ್ರಭಾವಿ ವ್ಯಕ್ತಿಯಾಗಿದ್ದ ಮಂಕಿ ರಾಮರಾವ್ ಮತ್ತು ಅವರ ಮಗ ದೀಕ್ಷಾಸ್ನಾನ ಪಡೆಯುವಾಗ ನಗರದ ಓಂದೂ ಸಮುದಾಯದ ೨೦೦-೩೦೦ ಜನರು ಬಲ್ಮಠದ ಶಾಂತಿ ದೇವಾಲಯದಲ್ಲಿ ಹಾಜರಿದ್ದು

ಕಾರ್ಯಕ್ರಮವನ್ನು ಸಂತೋಷದಿಂದ ವೀಕ್ಷಿಸಿದ್ದರು. ಇದು ಮಿಶನರಿಗಳ ಅಭಿಪ್ರಾಯದಂತೆ ಆರಂಭದಲ್ಲಿದ್ದ ಸ್ವ-ಮತಾಭಿಮಾನ ಕಾಲಕ್ರಮೇಣ ಸ್ವಲ್ಪಮಟ್ಟಿಗೆ ಕಡಿಮೆಯಾಗಿರುವುದಕ್ಕೆ ಸಾಕ್ಷಿಯಾಗಿದೆ.[೧೪] ರೆವೆ. ಗೆಂಗ್ನಾಗೆಲ್‌ರವರ ಸಂಗಡ ತಮ್ಮ ಯಾತ್ರಾ ಪ್ರಸಂಗಗಳನ್ನು ನೀಡುತ್ತಾ ಜಿಲ್ಲೆಯ ಹೊರಗೆ ಕೂಡಾ ಹೋಗುತ್ತಿದ್ದರು. ಇಂತಹ ಒಂದು ಸಂದರ್ಭದಲ್ಲಿ ಅವರು ಅದ್ವೈತ ತತ್ವಗಳ ಪ್ರತಿಪಾದಕರ ಮುಖ್ಯ ಕೇಂದ್ರವಾದ ಶೃಂಗೇರಿಗೆ ತಲುಪಿದರು. ಹಿಂದೆ ಆ ರೀತಿಯಲ್ಲಿ ಕ್ರೈಸ್ತ ಧರ್ಮ ಪ್ರಸಾರಕ್ಕಾಗಿ ಬಂದವರು ತೀವ್ರ ಪ್ರತಿರೋಧ ಎದುರಿಸಬೇಕಾಗಿ ಬಂದಿತ್ತು. ಆದರೆ ೧೮೮೨ರ ಅವಧಿಯಲ್ಲಿ ಶೃಂಗೇರಿಯ ಜನರ ಧೋರಣೆಯಲ್ಲಿ ಸಾಕಷ್ಟು ಬದಲಾವಣೆಯಾಗಿತ್ತು. ಮಠದ ಏಜೆಂಟರುಗಳು ಮಿಶನರಿಗಳಿಗೆ ಅಗತ್ಯವಿರುವ ರಕ್ಷಣೆಯನ್ನು ನೀಡಿ ಧರ್ಮ ಪ್ರಸಾರಕ್ಕೆ ಅನುವು ಮಾಡಿಕೊಟ್ಟರು.[೧೫] ಆ ರೀತಿಯಲ್ಲಿ ಬದಲಾಗಿರುವ ಧೋರಣೆಗೆ ಮಿಶನರಿಗಳು ಯಾವುದೇ ರೀತಿಯ ಸ್ಪಷ್ಟ ಕಾರಣಗಳನ್ನು ನೀಡಿಲ್ಲ. ಅಂದ ಮಾತ್ರಕ್ಕೆ ಕ್ರೈಸ್ತ ಧರ್ಮ ಪ್ರಸಾರಕ್ಕೆ ಮಠದವರು ಪೋಷಣೆ ನೀಡಿದರು ಎಂಬ ಅಭಿಮತಕ್ಕೆ ಬರುವುದು ತಪ್ಪಾಗಬಹುದು. ಹಾಗಾದರೆ, ಆ ಧೋರಣೆಯನ್ನು ಮಠದ ಮುಖಂಡರು ಮಿಶನರಿಗಳಿಗೆ ತೋರಿದ ಔದಾರ್ಯ ಅಥವಾ ಕೃಪೆ ಎಂದು ಪರಿಗಣಿಸಬಹುದು. ನನ್ನ ಅಭಿಪ್ರಾಯದ ಪ್ರಕಾರ, ೧೮೩೪ರಿಂದಲೂ ಕ್ರೈಸ್ತ ಮತ ಪ್ರಸಾರ ಮಾಡುತ್ತಿರುವ ಬಾಸೆಲ್ ಮಿಶನ್‌ನವರು ಪರಿಶಿಷ್ಟ ಜಾತಿ ಮತ್ತು ಪಂಗಡದವರನ್ನು (ಪಂಚಮ) ಕ್ರೈಸ್ತ ಧರ್ಮಕ್ಕೆ ಸ್ವೀಕರಿಸಿಕೊಳ್ಳುವುದಕ್ಕೆ ಹಿಂದೇಟು ಹಾಕಿದ್ದರಿಂದ ನಿರೀಕ್ಷಿತ ಮಟ್ಟದಲ್ಲಿ ಅನುಯಾಯಿಗಳನ್ನು ಪಡೆಯಲು ಸಾಧ್ಯವಾಗಲಿಲ್ಲ. ಅಲ್ಲದೆ ಅವರು ೧೮೮೨ರ ಹೊತ್ತಿಗೆ ಕ್ರೈಸ್ತ ಧರ್ಮ ಪರಿವರ್ತನೆ ಮಾಡಿದವರ ಸಂಖ್ಯೆ ನಗಣ್ಯವಾದ್ದರಿಂದ ಅವರು ಶೃಂಗೇರಿಗೆ ಹೋಗಿ ಕ್ರೈಸ್ತ ಧರ್ಮ ಪ್ರಸಾರ ಮಾಡಿದರೂ ಅಷ್ಟೊಂದು ದೊಡ್ಡ ವ್ಯತ್ಯಾಸ ಆಗಲಿಕ್ಕಿಲ್ಲವೆಂಬ ಧೈರ್ಯದಿಂದ ಮಠದ ಸಿಬ್ಬಂದಿಗಳು ಮಿಶನರಿಗಳನ್ನು ಪ್ರೀತ್ಯಾಧಾರಗಳಿಂದ ಸ್ವಾಗತಿಸಿರುವ ಸಾಧ್ಯತೆಗಳಿವೆ. ಬಾಸೆಲ್ ಮಿಶನ್ ಬಗ್ಗೆ ಸ್ವಲ್ಪ ಒಲವು ಇರುವ ಕೆಲವು ಸ್ಥಳೀಯ ಹಿಂದೂಗಳು ರೆವೆ. ಜಾಸ್ ಎಂಬ ಮಿಶನರಿ ಬೋಧಕನಿಗೆ ೧೮೯೨ರಲ್ಲಿ ಪತ್ರವೊಂದನ್ನು ಬರೆದು ಕೆಳವರ್ಗದವರು ಇಸ್ಲಾಂ ಧರ್ಮವನ್ನು ಸ್ವೀಕರಿಸುವ ಮೊದಲು ಅವರನ್ನು ಕ್ರೈಸ್ತ ಧರ್ಮಕ್ಕೆ ಪರಿವರ್ತನೆ ಮಾಡಿಕೊಳ್ಳಬೇಕೆಂದು ವಿನಂತಿಸಿಕೊಂಡರು. ಜೊತೆಗೆ ಕೈಗಾರಿಕೆಯಲ್ಲಿ ಮತ್ತು ಸುವಾರ್ತೆ ಸಾರೋಣದಲ್ಲಿ ಇನ್ನೂ ಹೆಚ್ಚಿನವರಿಗೆ ಅವಕಾಶ ಕಲ್ಪಿಸಿಕೊಡಬೇಕೆಂದು ಮನವಿ ಮಾಡಿಕೊಂಡರು. ಈ ರೀತಿಯಲ್ಲಿ ಕ್ರೈಸ್ತ ಧರ್ಮಕ್ಕೆ ಆದ್ಯತೆ ನೀಡುವ ಅವರ ಅಭಿಪ್ರಾಯ ವೈಯಕ್ತಿಕವಾಗಿದ್ದು, ಯಾವುದೇ ರೀತಿಯ ಹಿಂದೂ-ಮುಸ್ಲಿಂ ಮತೀಯ ವೈರತ್ವದ ಪರಿಣಾಮವಾಗಿ ಹುಟ್ಟಿಕೊಂಡಿರುವುದಲ್ಲ. ಹಿಂದೂಗಳು ಮುಸ್ಲಿಮರನ್ನು ಮ್ಲೇಚ್ಛಗಳೆಂದು ಪರಿಗಣಿಸುತ್ತಿದ್ದರಿಂದ; ಬ್ರಿಟಿಷರೊಂದಿಗಿನ ಸಂಬಂಧ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವದಿಂದ ಕ್ರೈಸ್ತರು ಆದ್ಯತೆ ಪಡೆದರೆ ವಿನಹ ಯಾವುದೇ ತಾತ್ವಿಕ ನೆಲೆಯ ಆಧಾರದ ಮೇಲೆ ಅಲ್ಲ ಎಂಬುದನ್ನು

ಗಮನದಲ್ಲಿಟ್ಟುಕೊಳ್ಳ ಬೇಕಾಗಿದೆ.[೧೬] ಉದ್ಯೋಗ ಪಡೆದು ಜೀವನದಲ್ಲಿ ಏಳಿಗೆ ಪಡೆಯಬಹುದೆಂಬ ಮನುಷ್ಯ ಸಹಜ ಬಯಕೆಯೂ ಸಹ ಅವರನ್ನು ಕ್ರೈಸ್ತ ಧರ್ಮದ ತೆಕ್ಕೆಗೆ ಸೆಳೆಯಿತು. ಇದರಿಂದ ತಿಳಿದುಕೊಳ್ಳಬೇಕಾಗಿರುವ ಅಂಶವೇನೆಂದರೆ ೧೯ನೇ ಶತಮಾನದ ಕೊನೆಯಲ್ಲಿಯೂ ಕೂಡಾ ಕೆಳವರ್ಗದವರ ಮೂಲಭೂತ ಅವಶ್ಯಕತೆಗಳಾದ ಅನ್ನ, ಬಟ್ಟೆ ಮತ್ತು ಆಶ್ರಯಕ್ಕೊಂದು ಸೂರು ಒದಗಿಸಿಕೊಡುವ ಕೆಲಸವನ್ನು ಬಾಸೆಲ್ ಮಿಶನ್ ಆಗಲೀ, ಕಥೋಲಿಕ ಮಿಶನ್ ಆಗಲೀ ತೆಗೆದುಕೊಂಡಿರಲಿಲ್ಲ. ಪರಿಶಿಷ್ಟ ಜಾತಿ ಮತ್ತು ಪಂಗಡದವರ ಬಗ್ಗೆ ಕಿಂಚಿತ್ತು ಕಾಳಜಿ ವಹಿಸಿದ್ದರೆ, ಅದು ೨೦ನೇ ಶತಮಾನದಲ್ಲಿ ಎಂಬುದು ರುಜುವಾತಾಗುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತ ಧರ್ಮ ಪ್ರಸಾರ ಮತ್ತು ಬೆಳವಣಿಗೆಗೆ ಆರ್ಥಿಕ ಕಾರಣಗಳೂ ಬಹು ಮುಖ್ಯವಾಗಿವೆ. ಉಡುಪಿಯ ಪಾಸ್ಟರ್‌ರಾಗಿದ್ದ ಗೇಬ್ರಿಯಲ್ ಬಂಗೇರವರ ಮನೆ ಭೇಟಿಯ ವೇಳೆಯಲ್ಲಿ ಒಬ್ಬರು, ನಾವು ತಮ್ಮ ಜಾತಿಯನ್ನು ತೊರೆಯಲು ವಸ್ತು ಅಥವಾ ಹಣದ ರೂಪದಲ್ಲಿ ಕೊಡುಗೆಗಳನ್ನು ನಿರೀಕ್ಷಿಸುವುದಾಗಿ ಹೇಳಿದರು. ೧೯೦೦ರಲ್ಲಿ ಬಸ್ರೂರಿನಲ್ಲಿ ಮಿಶನರಿ ಸ್ಟೀಯರ್‌ರವರನ್ನು ಭೇಟಿಯಾದ ವ್ಯಕ್ತಿಯೊಬ್ಬರು ನನಗೆ ಹೊಟ್ಟೆ ತುಂಬಿದರೆ ಸಾಕು; ಸ್ವರ್ಗ ಮತ್ತು ಶಾಶ್ವತ ಸುಖ ನಗಣ್ಯ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇನ್ನೊಬ್ಬ ವ್ಯಕ್ತಿ ನನಗೆ ನೂರು ರೂಪಾಯಿ ನೀಡಿದರೆ ೨೦ ಜನರನ್ನು ಕ್ರೈಸ್ತ ಮತ ಸ್ವೀಕರಿಸಲು ಸಿದ್ಧಪಡಿಸುತ್ತೇನೆ. ಆದರೆ ಅವರು ಕ್ರೈಸ್ತ ಧರ್ಮ ಸ್ವೀಕರಿಸಬೇಕಾದರೆ ಅವರಿಗೆ ದುಡಿಮೆ ಇಲ್ಲದೆ ಆಹಾರ ದೊರೆಯಬೇಕು ಎಂಬ ಷರತ್ತನ್ನು ಒಡ್ಡಿದನು.[೧೭] ಆದುದರಿಂದ, ಆ ಸಮಯದಲ್ಲಿ ಇದ್ದ ಬಡತನ ಜನರನ್ನು ಧರ್ಮಕ್ಕಿಂತ ಜೀವನ ಮುಖ್ಯ ಎಂಬ ತತ್ವವನ್ನು ರೂಢಿಸಿಕೊಳ್ಳುವಂತೆ ಕಲಿಸಿದೆ. ಜಿಲ್ಲೆಯ ಜನರು ಪರಲೋಕದ ಜೀವನಕ್ಕಿಂತಲೂ ಇಹಲೋಕದ ಜೀವನಕ್ಕೆ ಹೆಚ್ಚಿನ ಮಹತ್ವ ನೀಡಿರುವಂತಹದ್ದು ಸ್ಪಷ್ಟವಾಗಿ ಗೋಚರಿಸುತ್ತದೆ.

೨೦ನೇ ಶತಮಾನದ ಆದಿ ಭಾಗದಲ್ಲಿ ಮಿಶನರಿ ಸೇವೆ ಮುಖ್ಯವಾಗಿ ದಲಿತ ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡದವರೊಂದಿಗೆ ಅವ್ಯಾಹತವಾಗಿ ನಡೆದಿದೆ ಎಂಬುದು ಕಾಸರಗೋಡಿನಿಂದ ವರದಿ ಮಾಡುತ್ತಿದ್ದ ರೆವೆ. ಬಕ್ಲೆಯವರಿಂದ ತಿಳಿದು ಬರುತ್ತದೆ. ಅವರು ವರದಿ ಮಾಡಿರುವಂತೆ ಕಾಸರಗೋಡಿನ ವ್ಯಕ್ತಿಯೊಬ್ಬರು ಮಿಶನರಿಯವರೊಂದಿಗೆ ಮಾತನಾಡುತ್ತಾ ತುಳಿತಕ್ಕೊಳಪಟ್ಟವರ ಉದ್ಧಾರ ಮಿಶನರಿಗಳಿಂದಲೇ ಸಾಧ್ಯ ಎಂಬುದಾಗಿ ಹೇಳಿರುವುದು ಮಿಶನ್ ಸೇವಾ ಕಾರ್ಯಕ್ಕೆ ಲಭಿಸಿರುವ ಜನಮನ್ನಣೆಯಾಗಿದೆ,[೧೮] ಮೂಲ್ಕಿಯಲ್ಲಿ ಉಪದೇಶಿಯಾಗಿದ್ದ ಇಬೆಲ್‌ರವರ ಹತ್ತಿರ ಕ್ರೈಸ್ತ ಧರ್ಮ ಸ್ವೀಕರಿಸಲು ಮಾಡಿರುವ ಸಾಲವನ್ನೆಲ್ಲಾ ತೀರಿಸಿ ಎರಡೊತ್ತು ಅನ್ನ ಹಾಕಬೇಕೆಂಬ ಷರತ್ತನ್ನು ವಿಧಿಸಲಾಗಿದೆ.[೧೯] ವಿಶೇಷವೇನೆಂದರೆ ಬಾಸೆಲ್ ಮಿಶನ್ ಇಂತಹ ಯಾವ ಷರತ್ತುಗಳನ್ನೂ

ಒಪ್ಪಿಕೊಳ್ಳುತ್ತಿರಲಿಲ್ಲ ಮಾತ್ರವಲ್ಲ ಒಮ್ಮೆ ಕ್ರೈಸ್ತರಾದ ನಂತರ ಸಭೆಯ ನಿಯಮಗಳಿಗೆ ಸಂಪೂರ್ಣರಾಗಿ ವಿಧೇಯರಾಗಿರಬೇಕೆಂದು ಇಚ್ಛಿಸುತ್ತಿದ್ದರು. ಸಭೆಯ ನಿಯಮಗಳನ್ನು ಉಲ್ಲಂಘಿಸಿದ ಪಕ್ಷದಲ್ಲಿ ಯಾವುದೇ ಕ್ರಮಕ್ಕೂ ಹೇಸುತ್ತಿರಲಿಲ್ಲ. ಆದುದರಿಂದ ಕೆಲವೊಮ್ಮೆ, ವರ್ಷ ಒಂದಕ್ಕೆ ಕ್ರೈಸ್ತ ಮತ ಸ್ವೀಕರಿಸಿದವರಿಗಿಂತಲೂ, ಬಹಿಷ್ಕಾರಗೊಂಡವರ ಸಂಖ್ಯೆ ಅಧಿಕವಾಗಿರುತ್ತಿತ್ತು.

ಈ ರೀತಿಯಲ್ಲಿ ಬಾಸೆಲ್ ಮಿಶನ್ ಸುವಾರ್ತಾ ಕಾರ್ಯಕ್ಕೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಿಶ್ರ ಪ್ರತಿಕ್ರಿಯೆ ವ್ಯಕ್ತವಾಗಿದೆ. ಆದರೆ ಈ ಎಲ್ಲಾ ಪ್ರತಿಭಟನೆಗಳಲ್ಲಿ ಮೇಲ್ವರ್ಗದ ಬ್ರಾಹ್ಮಣರು ಮುಂಚೂಣಿಯಲ್ಲಿರುವುದು ವಿಶೇಷವಾಗಿದೆ. ಸಮಾಜದ ಕೆಳವರ್ಗದವರು ಮಾತ್ರ ಧರ್ಮ ಪ್ರಸಾರವನ್ನು ಸ್ವಾಗತಿಸಿರುವುದು ಉಲ್ಲೇಖಾರ್ಹವಾದರೂ, ಅವರ ಮತ ಪರಿವರ್ತನೆಗೆ ೨೦ನೇ ಶತಮಾನದ ಪ್ರಾರಂಭದವರೆಗೆ ಪ್ರಾಮಾಣಿಕ ಪ್ರಯತ್ನ ಮಾಡದೇ ಇರುವುದು ಮಿಶನರಿಗಳ ದ್ವಂದ್ವ ನೀತಿಗೆ ಹಿಡಿದಿರುವ ಕೈಗನ್ನಡಿಯಾಗಿದೆ.

### ೬.೧. ಬ್ರಹ್ಮಸಮಾಜದ ಪಾತ್ರ

ಮಂಗಳೂರಿನಲ್ಲಿ ಬ್ರಹ್ಮ ಸಮಾಜದ ಶಾಖೆಯನ್ನು ೧೮೭೦ರಲ್ಲಿ ಸುವಾರ್ತಾ ಪ್ರಸಾರಣೆಯನ್ನು ತಡೆಯುವ ಉದ್ದೇಶದಿಂದ ಸ್ಥಾಪಿಸಲಾಗಿದೆ. ಅನೇಕ ಮಂದಿ ಇದರತ್ತ ಸಾಗದಿದ್ದರೂ, ಮಂಗಳೂರಿನ ಬಿಲ್ಲವ ಸಮುದಾಯದ ಮುಖಂಡ ಅರಸಪ್ಪ ತನ್ನ ಹದಿನಾಲ್ಕು ಅನುಯಾಯಿಗಳೊಂದಿಗೆ ಬ್ರಹ್ಮ ಸಮಾಜವನ್ನು ಸೇರಿದ್ದಾರೆ. ಮತಪ್ರಸಾರದ ಚಟುವಟಿಕೆಗಳ ಕುರಿತು ಬಿಲ್ಲವರ ದ್ವಂದ್ವ ಧೋರಣೆ ಸ್ಪಷ್ಟವಾಗಿದೆ. ೧೮೬೯-೧೮೭೫ರ ನಡುವೆ ನೂರಾರು ಬಿಲ್ಲವರು ಕ್ರೈಸ್ತ ಧರ್ಮ ಸ್ವೀಕರಿಸಿ ಬಾಸೆಲ್ ಮಿಶನ್ ಚರ್ಚ್ ಸೇರಿದ್ದಾರೆ. ಇನ್ನೊಂದೆಡೆ ಅದೇ ಅವಧಿಯಲ್ಲಿ ಮಂಗಳೂರಿನಲ್ಲಿ ಬ್ರಹ್ಮ ಸಮಾಜವನ್ನು ಸ್ಥಾಪಿಸುವುದರ ಮೂಲಕ ಅವರು ಸಂಘಟಿತ ರೀತಿಯಲ್ಲಿ ಮತ ಪ್ರಚಾರಕರ ಚಟುವಟಿಕೆಗಳನ್ನು ವಿರೋಧಿಸಿದ್ದಾರೆ. ಆ ಸಮಯದಲ್ಲಿ ಕ್ರೈಸ್ತ ಧರ್ಮ ಸ್ವೀಕಾರ ಕಾರ್ಯ ನಡೆದಿರುವುದು ಹೆಚ್ಚಾಗಿ ಮೂಲ್ಕಿ, ಉಚ್ಚಿಲ, ಪಡೂರು, ಮೂಡೂರು, ಶಿರ್ವಾ ಮೊದಲಾದ ಗ್ರಾಮೀಣ ಪ್ರದೇಶಗಳಲ್ಲಿ ಹಾಗೂ ಕ್ರೈಸ್ತ ಧರ್ಮ ಸ್ವೀಕರಿಸಿದವರು ಅನಕ್ಷರಸ್ಥರು ಮತ್ತು ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದವರು. ಮತ ಪ್ರಚಾರಕರ ಚಟುವಟಿಕೆಗಳಿಗೆ ಬ್ರಹ್ಮ ಸಮಾಜದ ಮೂಲಕ ವಿರೋಧ ವ್ಯಕ್ತಗೊಂಡದ್ದು ಮಂಗಳೂರಿನಂತಹ ನಗರ ಪ್ರದೇಶಗಳಲ್ಲಿ, ಇಲ್ಲಿಯ ಜನರು ಸುಶಿಕ್ಷಿತರು. ಆ ದಿನಗಳಲ್ಲಿ ನಗರ ಪ್ರದೇಶದವರು ದೈನಂದಿನ ಆಗುಹೋಗುಗಳ ಜೊತೆ ಸಂಪರ್ಕವನ್ನು ಇಟ್ಟುಕೊಳ್ಳುತ್ತಿದ್ದರು ಮತ್ತು ಅವರು ರಾಜಕೀಯ ಮತ್ತು ಆಧ್ಯಾತ್ಮಿಕ ರಾಷ್ಟ್ರೀಯತಾ ಭಾವನೆಯನ್ನು ಬೆಳೆಸಿಕೊಂಡಿದ್ದರು. ಹೀಗಾಗಿ, ೧೮೬೯-೧೮೭೫ರ ನಡುವೆ ಗ್ರಾಮೀಣ ಪ್ರದೇಶಗಳ ನೂರಾರು ಬಿಲ್ಲವರು ಕ್ರೈಸ್ತ ಧರ್ಮ ಸ್ವೀಕರಿಸಿರುವುದು ಮತ್ತು

ನಗರ ಪ್ರದೇಶದವರು ಬ್ರಹ್ಮ ಸಮಾಜವನ್ನು ಸಂಘಟಿಸುವ ಮೂಲಕ ಮಿಶನರಿ ಕಾರ್ಯಕ್ಕೆ ಪ್ರತಿರೋಧ ತೋರಿಸಿದ್ದು ಸಹಜವೇ ಆಗಿದೆ.[೨೦]

೧೯೦೩ರಲ್ಲಿ ಬ್ರಹ್ಮ ಸಮಾಜದ ಮತಪ್ರಚಾರಕರಾಗಿದ್ದ ಭಾಯಿ ಬಲದೇವ್ ನಾರಾಯಣರವರು ಮುಂಬೈಯಿಂದ ಮಂಗಳೂರಿಗೆ ಬಂದರು. ಅಲ್ಲದೆ, ಮತ್ತೊಬ್ಬ ಥಿಯೋಸೋಫಿಸ್ಟ್ ಕುಂದಾಪುರಕ್ಕೆ ಬಂದು ಮಿಶನರಿಗಳ ಬೋಧನೆಗೆ ವಿರುದ್ಧವಾಗಿ ಬ್ರಹ್ಮ ಸಮಾಜದ ತತ್ವಗಳನ್ನು ಬೋಧಿಸಿದರು. ಅದೇ ವೇಳೆಯಲ್ಲಿ, ಬ್ರಹ್ಮ ಸಮಾಜದ ಅನುಯಾಯಿಗಳು ಕ್ರೈಸ್ತ ಪದ್ಧತಿಗಳು ಮತ್ತು ಸಂಸ್ಥೆಗಳನ್ನು ಅನುಕರಿಸಲು ಪ್ರಾರಂಭಿಸಿದರು. ಹೊಸ ಗುಂಪಿಗೆ ನವ ಜನಾಂಗಗಳನ್ನು ಪಡೆಯುವುದಕ್ಕಾಗಿ ಅವರು ನಿಯಮಿತ ಪ್ರಾರ್ಥನೆಗಳನ್ನು ಪರಿಚಯಿಸಿದರು. ಬ್ರಹ್ಮಸಮಾಜದ ಮಹಿಳಾ ಸದಸ್ಯರು, ಸುವಾರ್ತಾ ಮಹಿಳೆಯರ ( ಬೈಬಲ್ ವಿಮನ್) ಹಾಗೆ ಮನೆ ಮನೆಗೆ ಭೇಟಿ ನೀಡಿ ಸಮುದಾಯದ ಸಂಪ್ರದಾಯಸ್ಥ ಮಹಿಳಾ ವಿಭಾಗದ ಮೇಲೆ ಪ್ರಭಾವ ಬೀರುವ ಪ್ರಯತ್ನ ನಡೆಸಿದರು. ಜಿಲ್ಲೆಯಲ್ಲಿ ಮಿಶನರಿಗಳ ಹೆಚ್ಚುತ್ತಿರುವ ಪ್ರಭಾವವನ್ನು ನಿಯಂತ್ರಿಸುವುದಕ್ಕಾಗಿ ಅವರು ಇದನ್ನೆಲ್ಲಾ ಮಾಡಿದ್ದಾರೆ. ಬ್ರಹ್ಮ ಸಮಾಜವು ಮತಪ್ರಸಾರ ಕಾರ್ಯವನ್ನು ನಿಯಂತ್ರಿಸುವ ಪ್ರಯತ್ನವನ್ನು ನಡೆಸಿದರೂ, ಅದರ ಕೆಲವು ಸದಸ್ಯರು ಕ್ರೈಸ್ತ ಧರ್ಮ ಸ್ವೀಕರಿಸಿದರು. ೧೮೮೦ರಲ್ಲಿ ಮಂಗಳೂರು ಬ್ರಹ್ಮ ಸಮಾಜದ ಸ್ಥಾಪಕರಾಗಿದ್ದ ಅರಸಪ್ಪನ ಸೋದರಳಿಯ ಎನ್. ಎಸ್. ಜಾನ್ ಬಾಬು ಬಾಸೆಲ್ ಮಿಶನ್ ಚರ್ಚಿನ ಸದಸ್ಯರಾದರು. ಸ್ವತಃ ಬ್ರಹ್ಮ ಸಮಾಜವೇ ಅನೇಕ ಕ್ರೈಸ್ತ ಪದ್ಧತಿಗಳನ್ನು ಮತ್ತು ರೀತಿ ನೀತಿಗಳನ್ನು ತನ್ನಲ್ಲಿ ಅಳವಡಿಸಿಕೊಂಡು, ಆ ಮೂಲಕ ಕ್ರೈಸ್ತ ಧರ್ಮದ ಕುರಿತು ಉತ್ತಮ ತಿಳುವಳಿಕೆಯನ್ನು ಒದಗಿಸಿತು. ಬ್ರಹ್ಮೋಗಳಿಗೆ ಸಮಾಜ ಮತ್ತು ಕ್ರೈಸ್ತ ಧರ್ಮದ ನಡುವೆ ಯಾವುದೇ ವ್ಯತ್ಯಾಸ ಗೋಚರಿಸಲಿಲ್ಲ, ಹೀಗಾಗಿ ಜಾನ್ ಬಾಬುರವರಂತಹ ವ್ಯಕ್ತಿಗಳು ಕ್ರೈಸ್ತ ಧರ್ಮವನ್ನು ಸ್ವೀಕರಿಸಿದ್ದಾರೆ. ಬ್ರಹ್ಮ ಸಮಾಜವನ್ನು ಜಿಲ್ಲೆಗೆ ಕರೆತಂದ ಉದ್ದೇಶವೇನೆಂದರೆ ಬಾಸೆಲ್ ಮಿಶನ್ನಿನ ಮತಪ್ರಸಾರ ಮಹತ್ವಾಕಾಂಕ್ಷೆಗಳ ವಿರುದ್ಧ ಬುರುಜನ್ನು (ರಕ್ಷಾಕವಚ) ಕಟ್ಟುವುದು. ಅದರ ಯಶಸ್ಸನ್ನು ಈ ಆಯ್ದ ಪ್ರದೇಶಗಳಲ್ಲಿ ಕಂಡುಕೊಳ್ಳುವುದು ಕಷ್ಟವಾಗಿದ್ದರೂ, ಕೆಲವರು ಕ್ರೈಸ್ತ ಧರ್ಮವನ್ನು ಸ್ವೀಕರಿಸಲು ಇದು ಪ್ರೇರಣೆ ನೀಡಿದಕ್ಕೆ ಸಾಕಷ್ಟು ನಿದರ್ಶನಗಳಿವೆ.[೨೧]

## ೬.೨. ಕೂಟ್ ದಂಗೆ (೧೮೩೦-೧೮೩೧)

ಕೆನರಾದಲ್ಲಿ ವಸಾಹತು ಆಡಳಿತ ಸ್ಥಾಪನೆಯಾಗುವ ಮೊದಲೇ ಕ್ರೈಸ್ತರ ಒಂದು ವರ್ಗ ಈಸ್ಟ್ ಇಂಡಿಯಾ ಕಂಪೆನಿಯ ಸೇವೆಗಳಲ್ಲಿ ಸೇರಿಕೊಂಡಾಗಿತ್ತು.[೨೨] ಎನ್. ಶ್ಯಾಮ್ ಭಟ್‌ರವರ ಪ್ರಕಾರ ವಸಾಹತು ಸರ್ಕಾರ ಓದು-ಬರಹ ಬಲ್ಲಂತಹ ಬ್ರಾಹ್ಮಣರು, ಕೊಂಕಣಿಗಳು(ಸಾರಸ್ವತರು), ಕ್ರೈಸ್ತರು ಮತ್ತು ಸ್ವಲ್ಪ ಮಟ್ಟಿಗೆ ಬಂಟರನ್ನು ಆಡಳಿತದ ಬೇರೆ ಬೇರೆ ಇಲಾಖೆಗಳಲ್ಲಿ ನೇಮಕ ಮಾಡಿಕೊಳ್ಳುತ್ತಿದ್ದರು.[೨೩] ಕ್ರೈಸ್ತ

ಸಮುದಾಯದವರು ಧಾರ್ಮಿಕ ಅಲ್ಪಸಂಖ್ಯಾತರಾದರೂ ಇತರ ಸಮುದಾಯಗಳಿಗೆ ಹೋಲಿಸಿದರೆ ಸಾಕಷ್ಟು ಮಂದಿ ಆಡಳಿತದ ವಿವಿಧ ಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿದ್ದರು.[೨೪] ಉದಾಹರಣೆಗೆ ೧೮೩೧ರಲ್ಲಿ ಮರಣ ಹೊಂದಿದ ಮಾರ್ಟಿನ್ ಪ್ರಭುರವರು ಜಿಲ್ಲೆಯ ಉನ್ನತ ಹುದ್ದೆ ಅಂದರೆ ಜಿಲ್ಲಾ ಕೋರ್ಟಿನಲ್ಲಿ ಶಿರೆಸ್ತೇದಾರ್ ಆಗಿದ್ದರು.[೨೫] ಮ್ಯಾನುವೆಲ್ ಕೊಯಿಲೊರವರು ಕಲೆಕ್ಟರರ ಕಚೇರಿಯಲ್ಲಿ ನೈಬ್ ಶಿರೆಸ್ತೇದಾರ್ ಆಗಿದ್ದರು. ೧೮೩೧ರ ಬಂಡಾಯಗಾರರು ಕಲೆಕ್ಟರರಿಗೆ ಭಿನ್ನವತ್ತಳೆಯೊಂದನ್ನು ಸಲ್ಲಿಸಿ ಮ್ಯಾನುವೆಲ್ ಮತ್ತು ಸ್ಥಳೀಯ ಕ್ರೈಸ್ತ ನೌಕರರನ್ನು ಕೆಲಸದಿಂದ ತೆಗೆದು ಹಾಕಬೇಕೆಂದು ಕೇಳಿಕೊಂಡರು. ಇದರಿಂದ ಕ್ರೈಸ್ತರು ಕಲೆಕ್ಟರ್ ಕಚೇರಿಯಲ್ಲಿ ಪ್ರಭಾವ ಹೊಂದಿದ್ದರು ಎಂಬುದು ಸ್ಪಷ್ಟವಾಗುತ್ತದೆ.[೨೬] ಆದರೆ ವಸಾಹತು ಸೇವೆಯನ್ನು ಸೇರಿದವರಲ್ಲಿ ಬೆರಳೆಣಿಕೆಯಷ್ಟೇ ಉನ್ನತ ಸ್ಥಾನವನ್ನು ಪಡೆದಿದ್ದಾರೆ. ಇದು 'ಕೂಟ್ ದಂಗೆ'ಯಿಂದ ಸ್ಪಷ್ಟವಾಗುತ್ತದೆ. ಬ್ರಾಹ್ಮಣರ ಪ್ರಚೋಧನೆಯಲ್ಲಿ 'ಕೂಟ್' ಪ್ರತಿಭಟನಕಾರರಲ್ಲಿದ್ದ ಕ್ರೋಧ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಅವರ ಹಾಜರಾತಿಯಲ್ಲಿ ವ್ಯಕ್ತಗೊಂಡಿದೆ. ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ನಡೆದ ಎರಡು ವರ್ಗಗಳ ನಡುವಿನ ಆಸಕ್ತಿಗಳ ಘರ್ಷಣೆ ಅಭಿವ್ಯಕ್ತಿಸುವುದೇನೆಂದರೆ, ಬಂಧನದಿಂದ ಹಿಂದಿರುಗಿ ಬಂದ ಕೆಲವೇ ಸಮಯದಲ್ಲಿ ವಿದ್ಯಾವಂತ ಕ್ರೈಸ್ತ ವರ್ಗವು ಆ ಕಾಲದ ಸಹಚರಿಗಳ ರಾಜಕೀಯದಲ್ಲಿ ಎಷ್ಟು ಪರಿಣತವಾಗಿತ್ತು ಎನ್ನುವುದನ್ನು. ಹೀಗೆ ಬ್ರಿಟಿಷರು ಕೆನರಾವನ್ನು ಆಕ್ರಮಿಸಿಕೊಂಡ ನಂತರ ಶಿಕ್ಷಣವನ್ನು ಪಡೆದಂತಹ ಕ್ರೈಸ್ತರು ಸರಕಾರಿ ಸೇವೆಗಳನ್ನು ಸೇರಿದ್ದಾರೆ. ಅಷ್ಟೇ ಅಲ್ಲ, ಸಾಮಾನ್ಯವಾಗಿ ಸರಕಾರಿ ಸ್ಥಾನಗಳನ್ನು ತುಂಬುತ್ತಿದ್ದ ಸಂಪ್ರದಾಯಸ್ಥ ವರ್ಗದ ಏಕಸ್ವಾಮ್ಯತೆಗೆ ಕೂಡಾ ಇವರು ಭಂಗ ತಂದಿದ್ದಾರೆ.[೨೭] ರೈತರ ಕೂಟ (ಗುಂಪು, ಸಭೆ) ಕೆನರಾದಲ್ಲಿ ೧೮೩೦-೩೧ರಲ್ಲಿ ನಡೆಸಿದ ಆ ದಂಗೆಯನ್ನು ಹತ್ತಿಕ್ಕಿದ ಬಳಿಕ ಸರ್. ಜಾನ್ ಸ್ಟೋಕ್ಸ್‌ರವರ ನೇತೃತ್ವದ ತಂಡ ತನಿಖೆಯೊಂದನ್ನು ನಡೆಸಿ ಸಲ್ಲಿಸಿದ ವರದಿಯಲ್ಲಿ ಬ್ರಾಹ್ಮಣರ ಪ್ರಚೋದನೆಯಿಂದ ದಂಗೆ ನಡೆಯಿತು ಎಂಬ ವಿಚಾರವನ್ನು ಬಯಲಿಗೆಳೆದರು. ಕಥೋಲಿಕ ಕ್ರೈಸ್ತರು ಉನ್ನತ ಸ್ಥಾನಗಳನ್ನು ಮುಖ್ಯವಾಗಿ ಕಂದಾಯ ಇಲಾಖೆಯಲ್ಲಿ ಅಲಂಕರಿಸಿರುವುದನ್ನು ಹಾಗೂ ಬ್ರಿಟಿಷ್ ನೀತಿಯನ್ನು ಪ್ರತಿಭಟಿಸಿ ಆ ದಂಗೆ ಸಂಘಟಿಸಲಾಗಿದೆ ಎನ್ನಲಾಗುತ್ತದೆ. 'ಕೂಟ್' ದಂಗೆಯ ನಂತರ ಕೆನರಾದ ಕಲೆಕ್ಟರಾಗಿದ್ದ ಕೆಮರೂನ್‌ರವರು ಸಾರ್ವಜನಿಕ ಸೇವೆಯಿಂದ ಸಾಕಷ್ಟು ಮಂದಿ ಕಥೋಲಿಕರನ್ನು ಬಿಡುಗಡೆಗೊಳಿಸಿದರು.[೨೮] ಇತರ ವರ್ಗಗಳು ಜವಾಬ್ದಾರಿಯುತವಾದ ಸ್ಥಾನವನ್ನು ಅಲಂಕರಿಸುವುದನ್ನು ಸಹಿಸದ ಮೇಲ್ವರ್ಗದವರು 'ಕೂಟ್ ದಂಗೆ' ಸಂಘಟಿಸುವ ಮೂಲಕ ತಮ್ಮ ಉದ್ದೇಶವನ್ನು ಈಡೇರಿಸಿಕೊಂಡಿದ್ದಾರೆ.

೬.೩. ಮೂಲ್ಕಿ ಚಳುವಳಿ

ತುಳುನಾಡಿನಲ್ಲಿ ಬಾಸೆಲ್ ಮಿಶನ್‌ನಿಂದ ಸ್ಥಾಪಿತವಾದ ಸಭೆಗಳಲ್ಲಿ ಮಂಗಳೂರು ಮತ್ತು ಉಡುಪಿಗಳನ್ನು ಬಿಟ್ಟರೆ ಮೂಲ್ಕಿಗೆ ಮಹತ್ವದ ಸ್ಥಾನವಿದೆ. ಸ್ಥಳಿಕ ಸಭೆಯಾಗಿ ಮಾತ್ರವಲ್ಲ ಉಚ್ಚಿಲ, ಪಾಂಗಾಳ ಗುಡ್ಡೆ ಹಾಗೂ ಒಳಪ್ರದೇಶಗಳಾದ ಸಾಂತೂರು, ಕುತ್ಯಾರು, ಪಾದೂರು ಈ ಮೊದಲಾದ ಸ್ಥಳಗಳಿಗೆ ಮೂಲ್ಕಿಯು ಮುಖ್ಯ ಠಾಣೆಯಾಗಿದ್ದು ಅಲ್ಲಿಂದಲೇ ಅವುಗಳ ಮೇಲ್ವಿಚಾರಣೆಯು ನಡೆಯುತ್ತಿತ್ತು. ಮಂಗಳೂರಿನ ನಂತರ ಕದಿಕೆಯಲ್ಲಿ ಕ್ರೈಸ್ತ ಸಭೆ ಬೆಳೆದ ಕೂಡಲೇ ಮೂಲ್ಕಿಯಲ್ಲಿ ದೊಡ್ಡ ಪ್ರಮಾಣದ ಕ್ರೈಸ್ತ ಸಮುದಾಯವೊಂದು ಸುಮಾರು ೧೮೪೫ರ ನಂತರ ಅಸ್ಥಿತ್ವಕ್ಕೆ ಬಂದಿದೆ.[೨೯] ಕೃಷಿ ಪ್ರಧಾನವಾದ, ಜಾತಿ ವ್ಯವಸ್ಥೆಯ ಬಿಗು ಹಿಡಿತವಿರುವ ಹಾಗೂ ವಿರಳ ಜನಸಾಂದ್ರತೆಯಿರುವ ಆ ಹಳ್ಳಿ ಪರಿಸರದಲ್ಲಿ ಮಂಗಳೂರಿನಲ್ಲಿ ಮಾಡಿದ ಪ್ರಯೋಗವನ್ನು (ವಿಶೇಷವಾಗಿ ಉದ್ಯೋಗವಕಾಶವನ್ನು ಕಲ್ಪಿಸುವುದರಲ್ಲಿ) ಅಲ್ಲಿ ಮಾಡಲು ಅಸಾಧ್ಯವೆಂದು ಮಿಶನರಿಗಳಿಗೆ ಮನದಟ್ಟಾಗಿತ್ತು. ಹಾಗಾಗಿ ಕೃಷಿ ಭೂಮಿಯನ್ನು ಬಾಸೆಲ್ ಮಿಶನ್ ಹೆಸರಲ್ಲಿ ಖರೀದಿಸಿ ಅದನ್ನು ಗೇಣಿ ರೂಪದಲ್ಲಿ ಕ್ರೈಸ್ತರಿಗೆ ಹಾಗೂ ಕ್ರೈಸ್ತೇತರರಿಗೂ ಕೊಡಲಾಯಿತು. ಹೀಗೆ ಮೂಲ್ಕಿ ಪರಿಸರದಲ್ಲಿ ಬಾಸೆಲ್ ಮಿಶನ್, ಮಿಶನರಿ ಚಟುವಟಿಕೆಗಳೊಂದಿಗೆ ಜಮೀನ್ದಾರನ ರೂಪವನ್ನೂ ಪಡೆಯಿತು.[೩೦]

ಐರೋಪ್ಯರು ಹಾಗೂ ಭಾರತೀಯರೊಳಗಿನ ಪರಸ್ಪರ ಸಂಬಂಧಗಳ ಸಮಸ್ಯೆ ಹಾಗೂ ಭಾರತೀಯ ಕ್ರೈಸ್ತರ ಸ್ವಾಯತ್ತೆ, ಸ್ವಾತಂತ್ರ್ಯ ಆಂದೋಲನಗಳಿಗೆ ನೂರೈವತ್ತು ವರ್ಷಗಳ ಹಿಂದೆಯೇ ಮೂಲ್ಕಿ ಭೂಮಿಕೆಯಾಗಿತ್ತು. ಸೋಜಿಗದ ವಿಷಯವೆಂದರೆ ೧೮೫೭ರ ಚಳುವಳಿ ಸಮಯದಲ್ಲೇ ಮೂಲ್ಕಿ ಮತ್ತು ಆಸುಪಾಸಿನ ಸಭೆಗಳಲ್ಲಿ ಒಂದು ಬಂಡಾಯ ನಡೆದಿತ್ತು. ಆ ಕುರಿತು ಬಾಸೆಲ್ ಮಿಶನ್ನಿನ ಇತಿಹಾಸಕಾರ, ವಿಲ್‌ಹೆಲ್ಮ್ ಶ್ಲಟ್ಟರ್ ಎಂಬವರು ಇಂಡಿಯಾದಲ್ಲಿ ನಡೆದ ಚಳುವಳಿಯ ಗಾಳಿ ಮೂಲ್ಕಿಯಲ್ಲೂ ಬೀಸಿತ್ತು ಎಂದು ಬರೆದಿದ್ದಾರೆ. ಮೂಲ್ಕಿ ಪರಿಸರದ ಜನರು ಕ್ರೈಸ್ತರಾಗಿ ಸುಮಾರು ಒಂದು ದಶಕ ಕಳೆದಿದ್ದು, ಅವರು ಐರೋಪ್ಯ ಮಿಶನರಿಗಳ ಪಾಲನೆ, ಮೇಲ್ವಿಚಾರಣೆಗಳಲ್ಲಿ ಸಭೆಗಳನ್ನು ನಡೆಸುತ್ತಿದ್ದರು. ಮಿಶನರಿಗಳ ದೃಷ್ಟಿಯಲ್ಲಿ ಈ ದೇಶಿಯ ಕ್ರೈಸ್ತರು ವಿಶ್ವಾಸದಲ್ಲಿ, ಧಾರ್ಮಿಕ ಜ್ಞಾನದಲ್ಲಿ ಆಧ್ಯಾತ್ಮಿಕತೆಯಲ್ಲಿ ಹಾಗೂ ನೈತಿಕ ಮೌಲ್ಯಗಳಲ್ಲಿ ಇನ್ನೂ ಅಪ್ರಬುದ್ಧರು. ಯೋಗ್ಯ ಮಾರ್ಗದರ್ಶನ, ಶಿಸ್ತು ಇನ್ನೂ ಅವರಿಗೆ ಬೇಕು. ಇವು ಮಿಶನರಿ ಪಾಲನೆ, ವಿಧೇಯತೆಗಳಿಂದ ಮಾತ್ರ ಸಾಧ್ಯ ಎಂಬ ಭಾವನೆ ಇತ್ತು. ಕ್ರೈಸ್ತರ ಪಾಲನೆ ಮತ್ತು ಸುವಾರ್ತಾ ಪ್ರಸಾರದಲ್ಲಿ ಸಹಾಯ ಮಾಡಲು ಉಪದೇಶಿಗಳನ್ನು ನೇಮಕ ಮಾಡಲಾಗಿತ್ತು. ೧೮೫೭ರಲ್ಲಿ ಉಪದೇಶಿಯೊಬ್ಬನನ್ನು ವರ್ಗಾಯಿಸುವ ಪ್ರಸಂಗ ಬಂದಾಗ ಅವನು ಅದಕ್ಕೆ ಒಪ್ಪದ ಕಾರಣ ಅವನನ್ನು ಅವಿಧೇಯತೆ ಕಾರಣದಿಂದ ಕೆಲಸದಿಂದ ವಜಾ ಮಾಡಲಾಯಿತು.

ಇದು ವಿವಾದಕ್ಕೆ ತಿರುಗಿ ಉಪದೇಶಿಯ ಪಕ್ಷಕ್ಕೆ ಸ್ವಜಾತಿಯವರು ಸೇರಿಕೊಂಡರು.[೩೧] ಮಿಶನರಿಗಳ ಎಚ್ಚರಿಕೆ ಹಾಗೂ ಒತ್ತಾಯ ಅವರ ಮನಸ್ಸಿನಲ್ಲಿ ಯಾವುದೇ ಪರಿಣಾಮ ಬೀರಲು ಸಫಲವಾಗಲಿಲ್ಲ. ಕೆಮರರ್ ಮತ್ತು ಹೌಸರ್ ಎಂಬಿಬ್ಬರು ಮಿಶನರಿಗಳು ಕ್ರೈಸ್ತ ಅವಿಧೇಯತನಕ್ಕೆ ಕಠಿಣ ಶಿಕ್ಷೆ ಕೊಡಲು ಮುಂದಾದರು. ಮಿಶನರಿಗಳಿಗೆ ಅವಿಧೇಯರಾದವರ ಹಾಗೂ ಹೊರ ಹಾಕಲ್ಪಟ್ಟ ಉಪದೇಶಿಗಳೊಂದಿಗೆ ಗುರುತಿಸಿಕೊಂಡ ಕ್ರೈಸ್ತರನ್ನು ಕ್ರಿಸ್ತನಿಂದ ದೂರ ಸರಿದ ಜನರೆಂದು ಪರಿಗಣಿಸಿ ಸಮುದಾಯದಿಂದ ಹೊರ ಹಾಕಲಾಯಿತು. ಅವರು ವಿನಮ್ರವಾಗಿ ದೈನ್ಯತಾ ಭಾವನೆಯಿಂದ, ಮಾಡಿದ ಪಾಪಕ್ಕೆ ಪ್ರಾಯಶ್ಚಿತ ಮಾಡುವವರೆಗೆ, ಅವರ ದೇವರ ಭಯವಿಲ್ಲದ, ಕಪಟತನದ ದಾರಿಯನ್ನು ಬಿಡುವವರೆಗೆ ಅವರಿಗೆ ಹಾಗೂ ಅವರ ಮಕ್ಕಳಿಗೆ ಬೈಬಲ್ ಬೋಧನೆ, ಪವಿತ್ರಸ್ನಾನ ಹಾಗೂ ರಾತ್ರಿ ಭೋಜನ ಕೊಡಲಾಗುವುದಿಲ್ಲ ಎಂದು ಹೇಳಿ ಸಭಾಗೃಹವನ್ನು ಮುಚ್ಚಲಾಯಿತು. ಸಭೆಯ ಜಮೀನಿನಲ್ಲಿ ವಾಸ ಮಾಡುವವರನ್ನು ಆರು ತಿಂಗಳೊಳಗೆ ಖಾಲಿ ಮಾಡುವಂತೆ ಆಜ್ಞಾಪಿಸಲಾಯಿತು ಇದರಿಂದ ತತ್ತರಿಸಿದ ಮೂಲ್ಕಿಯ ಕ್ರೈಸ್ತರು ಒಟ್ಟಾಗಿ ಬಾಸೆಲ್‌ನಲ್ಲಿರುವ ಗೃಹ ಸಮಿತಿಗೆ ಪತ್ರ ಬರೆದರೂ ಅಲ್ಲಿಂದ ಬಂದ ಉತ್ತರವು ಮೂಲ್ಕಿಯ ಕ್ರೈಸ್ತರಿಗೆ ನಿರಾಶದಾಯಕವಾಗಿತ್ತು. ಯಾಕೆಂದರೆ ಅದು ಮಿಶನರಿಗಳ ಪರವಾಗಿತ್ತು. ಮಾತ್ರವಲ್ಲದೆ ಹೊರಹಾಕಲ್ಪಟ್ಟ ಉಪದೇಶಿಗಳು ಹಾಗೂ ಕ್ರೈಸ್ತರು ಮಿಶನರಿಗಳೊಡನೆ ಬಹಿರಂಗ ಕ್ಷಮೆ ಕೇಳಬೇಕೆಂದು ಅದರಲ್ಲಿ ತಿಳಿಸಲಾಯಿತು. ಮಿಶನಿನ ಮೇಲೆ ಸಂಪೂರ್ಣ ಅವಲಂಬಿತರಾಗಿದ್ದ ಬಹಿಷ್ಕೃತರಾಗಿದ್ದ ಕ್ರೈಸ್ತರಲ್ಲಿ ಹೆಚ್ಚಿನವರು ನಿರ್ವಾಹವಿಲ್ಲದೆ ತಪ್ಪೊಪ್ಪಿ ತಿರುಗಿ ಸಭೆಗೆ ಸೇರಿಕೊಂಡು ಮಿಶನರಿಗಳಿಗೆ ವಿಧೇಯರಾಗಬೇಕಾಯಿತು. ಅಲ್ಲದೇ ೧೮೬೫ರಲ್ಲಿ ಮೂಲ್ಕಿ ಚರ್ಚಿನ ಸದಸ್ಯರು ಅವಿಧೇಯತೆ ತೋರಿದರು ಎಂಬ ಕಾರಣಕ್ಕಾಗಿ ಬಹಳಷ್ಟು ಸದಸ್ಯರನ್ನು ಹೊರಹಾಕಲಾಗಿದೆ. ೧೮೬೬ರಲ್ಲಿ ಗುಡ್ಡೆಯ ಕ್ರೈಸ್ತರು 'ಫ್ರೀ ಚರ್ಚ್ ಆಫ್ ಸೌತ್ ಕೆನರಾ'ಕ್ಕೆ ಸೇರಿದರು ಹಾಗೂ ಆ ಕ್ರೈಸ್ತರು ಮದ್ರಾಸಿನ ಬಿಷಪರಿಗೆ ತಮ್ಮನ್ನು ಅವರ ಗುಂಪಿನಲ್ಲಿ ಸೇರಿಸಿಕೊಳ್ಳಬೇಕೆಂದು ಮನವಿ ಮಾಡಿಕೊಂಡಿದ್ದರು.[೩೨]

ನರಕ ಲೋಕದ ಯಾತನೆಯಿಂದ ಪಾರಾಗಲು ಕ್ರೈಸ್ತ ಧರ್ಮಕ್ಕೆ ಸೇರುವುದೊಂದೇ ದಾರಿ ಎಂದು ಬೋಧನೆ ಮಾಡಿದಂತಹ ಮಿಶನರಿಗಳು ಆ ಧರ್ಮವನ್ನು ಅನುಸರಿಸಲು ಮುಂದಾದವರಿಗೆ ಕ್ರೈಸ್ತ ಧರ್ಮದ ಬೋಧನೆಗಳನ್ನು ಪಾಲಿಸುವುದರೊಂದಿಗೆ ವಿದೇಶಿ ಮಿಶನರಿಗಳಿಗೆ ವಿಧೇಯರಾಗಿರಬೇಕಿತ್ತು. ಅವಿಧೇಯ ಹಿಂಬಾಲಕರಿಗೆ ಕ್ರೈಸ್ತ ಸಭೆಗಳಲ್ಲಿ ಯಾವಾಗಲೂ ಸ್ಥಾನವಿರಲಿಲ್ಲ. ಸಭೆಯಲ್ಲಿ ಸಮಾನತೆಯನ್ನು ಬೋಧಿಸುವ ಮಿಶನರಿಗಳು ಎಂದೂ ಸಭೆಯ ಅಂಗವಾಗಿರದೆ ಹೊರಗಿನಿಂದ ಮಾರ್ಗದರ್ಶನ ಮಾಡುವ ಶಿಕ್ಷಕರಾಗಿಯೇ ಉಳಿದರು.ಇಲ್ಲಿನ ಕ್ರೈಸ್ತರೊಂದಿಗೆ ಅವರು ಎಂದೂ

ಬೆರೆಯಲಿಲ್ಲ. ಉಪದೇಶಿಗಳು, ಪಾಸ್ಟರ್‌ಗಳು ಎಂದೂ ಮಿಶನರಿಯೊಂದಿಗೆ ಸಮಾನತೆಯನ್ನು ಹೊಂದುವಂತಿರಲಿಲ್ಲ. ವಸಾಹತುಶಾಹಿಯ ಕಾಲದಲ್ಲಿ ಭಾರತಕ್ಕೆ ಬಂದ ಎಲ್ಲಾ ತರಹದ ಮಿಶನರಿಗಳಿಗೂ ಇದು ಅನ್ವಯವಾಗುತ್ತದೆ. ಹೀಗೆ, ಮಿಶನರಿಗಳ ವಿರುದ್ಧ ಕ್ರೈಸ್ತೇತರರು ಮಾತ್ರವಲ್ಲದೆ ಉಪದೇಶಿಗಳು, ಪಾಸ್ಟರ್‌ಗಳು ಹಾಗೂ ಸಾಮಾನ್ಯ ಜನರೂ ಪ್ರತಿರೋಧವನ್ನು ವ್ಯಕ್ತಪಡಿಸುತ್ತಿದ್ದರು. ಕಥೋಲಿಕ ಜನ ಪ್ರತಿನಿಧಿಗಳು ಕಾರ್ಮೆಲೈಟ್ ಧರ್ಮಗುರುಗಳ ಬದಲಾಗಿ ಮಂಗಳೂರು ಧರ್ಮಪ್ರಾಂತ್ಯಕ್ಕೆ ಯೇಸು ಸಭೆಯವರನ್ನು ಕಳುಹಿಸಿಕೊಡಬೇಕೆಂಬ ಮನವಿಯನ್ನು ಜಗದ್ಗುರುಗಳಿಗೆ ಸಲ್ಲಿಸಿದ ಸಂದರ್ಭದಲ್ಲಿ ಅವರ ದೂರು ಏನಿತ್ತೆಂದರೆ, “ ಅವರು (ಕಾರ್ಮೆಲೈಟ್ಸ್) ನಮ್ಮಿಂದ ಮತ್ತು ನಮ್ಮನ್ನು ಆಳುವವರಿಂದ ಗಮನಾರ್ಹ ರೀತಿಯಲ್ಲಿ ಪ್ರತ್ಯೇಕವಾಗಿ ಇರಬಯಸುವವರಾಗಿದ್ದಾರೆ. ಪ್ರತಿಯೊಂದು ಸಂದರ್ಭದಲ್ಲಿ ಅವರು ಜನಾಂಗ, ಭಾಷೆ ಮತ್ತು ನಡವಳಿಕೆಯಲ್ಲಿ ನಮ್ಮಿಂದ ದೂರವಿರುವವರೆಂಬುದನ್ನು ತೋರಿಸಿಕೊಳ್ಳುತ್ತಾರೆ_.” [೩೩] ಎಂಬುದಾಗಿತ್ತು. ಸಾಮಾನ್ಯ ಜನರೂ ಗುರುತಿಸುವಷ್ಟರ ಮಟ್ಟಿಗೆ ಮಿಶನರಿಗಳು ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಂಡಿದ್ದರು ಎಂಬುದು ವಿಶೇಷವಾಗಿದೆ.

ಸಸಿಹಿತ್ಲು ಪೂಜಾರಿಯ ಮತಾಂತರದ ಪರಿಣಾಮವಾಗಿ ಕದಿಕೆಯ ಜನರಲ್ಲಿ ಅಸಹನೆ ಉಂಟಾಗಿ ಕದಿಕೆಯ ಮಿಶನ್ ಶಾಲೆಯು ಆಘಾತವನ್ನು ಎದುರಿಸಬೇಕಾಯಿತು. ಪಡುಬಿದ್ರೆಯ ಹತ್ತಿರ ಗ್ರೀನ್‌ರವರು ಶಾಲೆಯೊಂದನ್ನು ಸ್ಥಾಪಿಸಿದ್ದರು. ಈ ಶಾಲೆಯಲ್ಲಿ ಮೊದಲು ೩೮ ಹುಡುಗರು ಇದ್ದರು. ಆದರೆ ಮೂಲ್ಕಿಯ ಹಬ್ಬವೊಂದರಲ್ಲಿ ಬಿಲ್ಲವ ಜಾತಿಯ ಗುರಿಕಾರ ಜಾರಿಗೊಳಿಸಿದ ಸಾರ್ವಜನಿಕ ನಿರ್ಣಯದ ಪರಿಣಾಮವಾಗಿ ೧೬ ಹುಡುಗರಷ್ಟೇ ಹಿಂದೆ ಉಳಿದು, ಬೇರೆ ಹುಡುಗರೆಲ್ಲರೂ ಶಾಲೆಯನ್ನು ಬಿಟ್ಟು ಹೋದರು.[೩೪] ೧೮೪೩ನೇ ಇಸವಿಯ ಕೊನೆಯ ದಿನದಂದು ಬ್ರಾಹ್ಮಣರಾಗಿದ್ದ ಆನಂದ ರಾವ್ ಕೌಂಡಿನ್ಯ ಅವರ ಕ್ರೈಸ್ತಮತ ಸ್ವೀಕಾರ ಮತ್ತು ಇತರ ಇಬ್ಬರು ಬ್ರಾಹ್ಮಣ ಸ್ನೇಹಿತರಾದ ಭಗವಂತ ರಾವ್ ಮತ್ತು ಮುಕುಂದ ರಾವ್ ಅವರ ಮತಾಂತರದ ಒಲವು ಜನರಲ್ಲಿ ಎಚ್ಚರಿಕೆಯನ್ನು ಮೂಡಿಸಿತು. ಇದರಿಂದ ರಥಬೀದಿ ಶಾಲೆಯ ಹಾಜರಾತಿ ಸಾಕಷ್ಟು ಇಳಿಮುಖವಾಯಿತು.[೩೫]

ಬ್ರಾಹ್ಮಣ ಹುಡುಗಿಯರಿಗಾಗಿ ಬಾಸೆಲ್ ಮಿಶನ್ ೧೮೫೫ ಮತ್ತು ೧೮೫೭ರಲ್ಲಿ ಎರಡು ಪ್ರತ್ಯೇಕ ಶಾಲೆಗಳನ್ನು ಮಂಗಳೂರಿನಲ್ಲಿ ಸ್ಥಾಪಿಸಿತು. ಅಲ್ಲದೆ ೧೮೮೨ರಲ್ಲಿ ಉಡುಪಿಯಲ್ಲಿ ಇನ್ನೊಂದು ಬ್ರಾಹ್ಮಣ ಹುಡುಗಿಯರ ಶಾಲೆಯನ್ನು ತೆರೆಯಲಾಯಿತು. ಬಾಸೆಲ್ ಮಿಶನ್ ಬ್ರಾಹ್ಮಣ ಹುಡುಗಿಯರಿಗಾಗಿಯೇ ಪ್ರತ್ಯೇಕವಾಗಿ ಆ ಶಾಲೆಗಳನ್ನು ತೆರೆಯಲು ಕಾರಣ ಅವರಲ್ಲಿ ಸುವಾರ್ತೆಯನ್ನು ಪ್ರಸಾರ ಮಾಡಿ ಮಿಶನರಿ ಪ್ರಭಾವವನ್ನು ಬಲಗೊಳಿಸುವುದಾಗಿದೆ. ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್ನಿಗೆ ವಿರೋಧ

ವ್ಯಕ್ತಗೊಂಡದ್ದು ಬ್ರಾಹ್ಮಣ ಸಮುದಾಯದಿಂದ ಮಾತ್ರ. ಹೀಗಾಗಿ ಅದನ್ನು ಮೀರುವ ಉದ್ದೇಶದಿಂದಲೇ ಈ ಕ್ರಮಗಳನ್ನು ವಿನ್ಯಾಸಗೊಳಿಸಲಾಗಿತ್ತು. ಮಂಗಳೂರಿನ ಬ್ರಾಹ್ಮಣ ಹುಡುಗಿಯರ ಶಾಲೆಯನ್ನು ಕಾರಣಾಂತರದಿಂದ ಬಾಸೆಲ್ ಮಿಶನ್ ಮುಚ್ಚಿದಾಗ, ಮಂಗಳೂರಿನ ಬ್ರಾಹ್ಮಣರು ಬಾಸೆಲ್ ಮಿಶನ್ ಸೊಸೈಟಿಯ ಗೃಹ ಸಮಿತಿಗೆ ಮನವಿಯೊಂದನ್ನು ಸಲ್ಲಿಸಿ ಹುಡುಗಿಯರ ಶಾಲೆಯನ್ನು ಮತ್ತೆ ಪ್ರಾರಂಭಿಸಬೇಕೆಂಬ ಬೇಡಿಕೆ ಮುಂದಿಟ್ಟಿದ್ದರು. ಮನವಿಯಲ್ಲಿ ಅವರು ಹೇಳಿದ್ದೇನೆಂದರೆ, ಮಂಗಳೂರಿಗೆ ಬಾಸೆಲ್ ಮಿಶನ್ ಬರುವ ಮೊದಲು ಪಶ್ಚಿಮದ ನಾಗರಿಕತೆಯ ಕುರಿತು ಸ್ಥಳೀಯರು ಕತ್ತಲಲ್ಲಿ ಇದ್ದರು. ಬಾಸೆಲ್ ಮಿಶನ್ ಭೇಟಿಯಿಂದ ಸ್ಥಳೀಯರಿಗೆ ಸ್ವಲ್ಪ ಮಟ್ಟಿಗೆ ಜ್ಞಾನೋದಯವಾಗಿದೆ. ಇದಕ್ಕಿಂತ ಹೆಚ್ಚಿನದನ್ನು ಪಡೆಯಲು ಮಿಶನ್ ತನ್ನ ಶಾಲೆಯನ್ನು ಮಂಗಳೂರಿನಲ್ಲಿ ನಡೆಸುವುದು ಅವರಿಗೆ ಬೇಕಾಗಿತ್ತು. ಅಷ್ಟು ಮಾತ್ರವಲ್ಲದೆ, ಕೆಲವು ಬ್ರಾಹ್ಮಣರು ಸಾರ್ವಜನಿಕ ಸೇವಾ ಕ್ಷೇತ್ರದಲ್ಲಿ ಉನ್ನತ ಹುದ್ದೆಗಳಲ್ಲಿ ಇರುವುದಕ್ಕೆ ಅವರು ಮಿಶನ್ನಿನ ಶಾಲೆಗಳಲ್ಲಿ ಪಡೆದ ಶಿಕ್ಷಣವೇ ಕಾರಣವೆಂದು ಮನಗಂಡ ಅವರು ಮಂಗಳೂರಿನಲ್ಲಿ ಮಹಿಳಾ ಶಿಕ್ಷಣವನ್ನು ಖಾಯಂಗೊಳಿಸುವಂತೆಯೂ ಶಿಕ್ಷಣ ಪೂರ್ಣ ರೀತಿಯದ್ದಾಗಿದ್ದು ಅವರಿಗೆ ಹೆಚ್ಚು ಉಪಯುಕ್ತವಾಗುವಂತೆಯೂ, ಈ ಕಾರ್ಯಕ್ಕೆ ತಾವು ಕೃತಜ್ಞರಾಗಿ ಇರುತ್ತೇವೆಂದು ಕೂಡಾ ಅವರು ಮಿಶನ್‌ನಲ್ಲಿ ತಿಳಿಸಿದ್ದಾರೆ.[೨೬] ಆದ್ದರಿಂದ ಬಾಸೆಲ್ ಮಿಶನ್, ಕ್ರೈಸ್ತರಿಗೆ ಮಾತ್ರವಲ್ಲದೆ, ಕ್ರೈಸ್ತೇತರಾದ ಬ್ರಾಹ್ಮಣ ವರ್ಗದ ಹುಡುಗಿಯರ ಶಿಕ್ಷಣಕ್ಕೂ ಅವಕಾಶವನ್ನು ಮಾಡಿಕೊಟ್ಟಿತ್ತು ಎಂದು ತಿಳಿಯುತ್ತದೆ. ಹಾಗೆಯೇ, ಶಿಕ್ಷಣದಿಂದ ಜನರಿಗೆ ಉದ್ಯೋಗ ಅವಕಾಶಗಳೂ ಸಾಕಷ್ಟು ಪ್ರಮಾಣದಲ್ಲಿ ಆಗಿದೆ ಎಂಬ ವಿಚಾರ ಬ್ರಾಹ್ಮಣರು ಗೃಹ ಸಮಿತಿಗೆ ಬರೆದ ಮನವಿಯ ಮುಖಾಂತರ ಖಾತ್ರಿಯಾಗುತ್ತದೆ. ಬಾಸೆಲ್ ಮಿಶನ್ ಶಿಕ್ಷಣ ಕ್ಷೇತ್ರದಲ್ಲಿ ಸಾಧಿಸಿದ ಯಶಸ್ಸನ್ನು ಗಮನಿಸಿ ಎರಡು ಪ್ರತಿಸ್ಪರ್ಧಿ ಶಾಲೆಗಳು ತಲೆಯೆತ್ತಿದ್ದವು. ಇದರಲ್ಲಿ ಒಂದು ಶಾಲೆ ಯೇಸು ಸಭೆಯವರ ಸೈಂಟ್ ಅಲೋಶಿಯಸ್ ಕಾಲೇಜು ಹಾಗೂ ನಗರಸಭೆಯವರ ಸರ್ಕಾರಿ ಕಾಲೇಜು (Govt. Normal School). ಮಿಶನ್ ಶಾಲೆಗಳ ಹೆಚ್ಚುತ್ತಿರುವ ಪ್ರಭಾವವನ್ನು ತಡೆಯಲು ಸ್ಥಳೀಯ ಪತ್ರಿಕೆಯೊಂದು ನೀಡಿದ ಕರೆ ಹೀಗಿದೆ: " ಭಾರತದ ರಾಷ್ಟ್ರೀಯ ಹೆಮ್ಮೆಯೇ ಮಿಶನ್ ಶಾಲೆಯನ್ನು ಅಲುಗಾಡಿಸಲು ಎಚ್ಚರವಾಗು. ಇದು ಉನ್ನತ ಜಾತಿ- ಶಿಕ್ಷಣಕ್ಕೆ ತಾತ್ಕಾಲಿಕ ಸಹಾಯಕನಾಗುವುದಕ್ಕೆ ಮತ್ತು ಕೆಲವು ಸಮಯದವರೆಗೆ ' ಜಾತಿ ಭ್ರಷ್ಟರ ಕಾರ್ಯ'ವನ್ನು ನಡೆಸುವುದಕ್ಕೆ ಮಾತ್ರ ಅರ್ಹವಾಗಿದೆ. ಸಂಭ್ರಮದ ದಿನಗಳು ಬರಲಿವೆ. ಆಗ 'ಇಂಗ್ಲೆಂಡಿನ ಸ್ವಮತಾಭಿಮಾನ'ವು ಎಷ್ಟು 'ಕುಗ್ಗಿಕೊಳ್ಳುವುದೆಂದರೆ' ಮಿಶನರಿ ಸಂಸ್ಥೆಗಳಿಗೆ ನೀಡುವ ದೇಣಿಗೆಗಳು ಜಾತಿ ಭ್ರಷ್ಟರ ಶಿಕ್ಷಣದ ಅಗತ್ಯಗಳಿಗೆ ಕೂಡಾ ಸಾಲದೇ ಹೋಗಬಹುದು. ಮಿಶನರಿಗಳು, ಶಿಕ್ಷಣ ಸಂಸ್ಥೆಗಳ ಮೂಲಕ ಜ್ಞಾನ ದೇಗುಲದ ಬಾಗಿಲನ್ನು ತೆರೆದು ಜನರಲ್ಲಿ ಅರಿವನ್ನು ಮೂಡಿಸತೊಡಗಿದಾಗ ವಿಚಲಿತರಾದ ಕೆಲವರು ಅದನ್ನು ತಡೆಯುವ ಪ್ರಯತ್ನ

ಮಾಡಿರುವುದು ಇದರಿಂದ ರುಜುವಾತ್ತಾಗುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಿಶನ್ ನಿರ್ವಹಿಸುತ್ತಿರುವ ಎರಡು ಪ್ರೌಢಶಾಲೆಗಳು ಕ್ರೈಸ್ತರಿಗಿಂತ, ಕ್ರೈಸ್ತೇತರಿಗೆ ಹೆಚ್ಚು ಉಪಯುಕ್ತವಾಗಿವೆ. ಈ ಶಾಲೆಯ ಹೆಬ್ಬಾಗಿಲನ್ನು ದಾಟಿ ಹೋಗಿರುವ ಕ್ರೈಸ್ತೇತರರು ನಂತರದ ದಿನಗಳಲ್ಲಿ ಕ್ರೈಸ್ತಮತದ ಪ್ರಗತಿಗೆ ಅತ್ಯಂತ ಹೆಚ್ಚಿನ ತಡೆಯನ್ನು ಒಡ್ಡಿದ ಬ್ರಹ್ಮ ಸಮಾಜ, ಆರ್ಯ ಸಮಾಜ ಮತ್ತು ಥಿಯೋಸೋಫಿಕಲ್ ಸೊಸೈಟಿಯಂತಹ ಸಂಸ್ಥೆಗಳ ಸ್ಥಾಪನೆಗೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ.[೩೭]

ಮಿಶನ್ ಶಾಲೆಯೊಂದರ ಧರ್ಮ ಬೋಧನೆಗೆ ಕೆಲವರಿಂದ ವಿರೋಧ ವ್ಯಕ್ತಪಟ್ಟಿದ್ದು ೧೮೬೭ರಲ್ಲಿ ಸರಕಾರಿ ಶಾಲೆ ಪ್ರಾರಂಭವಾಗುವುದಕ್ಕೆ ಅವಕಾಶ ಮಾಡಿಕೊಟ್ಟಿದೆ. ಹೊಸ ಸರಕಾರಿ ಶಾಲೆಯ ವಿಷಯದ ನವೀನತೆಯ ಕಾರಣವಾಗಿ ಅದು ತುಂಬಿ ಹೋಯಿತು. ಹಳೆಯ ಮಿಶನ್ ಶಾಲೆ ಸುಮಾರಾಗಿ ಖಾಲಿಯಾಗಿಯೇ ಬಿಟ್ಟಿತು. ಆದುದರಿಂದ ಗೃಹಸಮಿತಿಯು ಅವಲೋಕನ ನಡೆಸಿದ ನಂತರ ಆಂಗ್ಲ-ದೇಶೀ ಭಾಷೆಯ ಶಾಲೆಯನ್ನು ಮುಚ್ಚುವಂತೆ ಶಿಫಾರಸು ಮಾಡಿತು.[೩೮] ಧಾರ್ಮಿಕ ಶಿಕ್ಷಣಕ್ಕೆ ಜನರಿಂದ ವಿರೋಧ ವ್ಯಕ್ತಗೊಂಡದ್ದರಿಂದ ಮಿಶನ್ನಿನವರು ಆಂಗ್ಲ-ದೇಶೀ ಭಾಷಿಕ ಶಾಲೆಯನ್ನು ಮುಚ್ಚಬೇಕಾಗಿ ಬಂತು ಎಂದು ೧೮೬೬ರಿಂದ ೧೮೬೯ರ ವರೆಗಿನ ವರದಿಗಳು ತಿಳಿಸುತ್ತವೆ.[೩೯] ಮಿಶನರಿಗಳ ಇಂಗ್ಲಿಷ್ ಶಾಲೆಗೆ ಬಹಳ ತೊಂದರೆಗಳಾದವು. ಶಾಲೆಯಲ್ಲಿ ಹಾಜರಾತಿ ಗಮನಾರ್ಹವಾಗಿ ಇಳಿಯಿತು. ಐದು ವರ್ಷಗಳ ನಂತರ ಅದು ಎಂದೂ ಚೇತರಿಸಿಕೊಳ್ಳಲೇ ಇಲ್ಲ.[೪೦] ಜಾತಿ ಪೂರ್ವಾಗ್ರಹದಿಂದಾಗಿ ಮೂಲ್ಕಿಯ ನಗರಶಾಲೆ ಬಿಕ್ಕಟ್ಟಿನಲ್ಲಿದೆ. ಉನ್ನತ ಜಾತಿಯವರೆಂದು ಹೇಳಿಕೊಳ್ಳುವವರು, ಅದರಲ್ಲಿಯೂ ಕೊಂಕಣಿಗಳು ತಮ್ಮ ಮಕ್ಕಳನ್ನು ಬಿಲ್ಲವ ಮಕ್ಕಳೊಂದಿಗೆ ಕುಳಿತುಕೊಳ್ಳಲು ಬಿಡದೆ ಅವರಿಗೆ ಪ್ರತ್ಯೇಕ ವ್ಯವಸ್ಥೆ ಕಲ್ಪಿಸಬೇಕೆಂದು ಒತ್ತಾಯ ಮಾಡುತ್ತಿದ್ದಾರೆ.[೪೧] ಬಸ್ರೂರಿನ ರೆವೆ. ಗೆಂಗ್ನಾಗೆಲ್‌ರವರು ೧೮೯೪ರಲ್ಲಿ ಈ ರೀತಿ ವರದಿ ಮಾಡುತ್ತಾರೆ: "ಮಿಶನ್ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳುಹಿಸುವ ಜನರ ಭಯ ನಿಧಾನವಾಗಿ ಮಾಯವಾಗುತ್ತಿದೆ. ವಿದ್ಯಾರ್ಥಿಗಳ ಹಾಜರಾತಿ ಹೆಚ್ಚು ನಿಯಮಿತಗೊಳ್ಳುತ್ತಿದೆ. ಮೂರ್ತೆದಾರರು ಇನ್ನೂ ತಮ್ಮ ಮಕ್ಕಳನ್ನು ಕಳುಹಿಸಲು ಹೆದರುತ್ತಿದ್ದಾರೆ. ಒಂದಲ್ಲಾ ಒಂದು ರೀತಿಯಿಂದ ಮಿಶನರಿಗಳು ತಮ್ಮ ಮಕ್ಕಳನ್ನು ಕರೆದೊಯ್ದು ಕ್ರೈಸ್ತರಾಗಿ ಮಾಡಬಹುದೆಂದು ಅವರ ಆಲೋಚನೆ. ೧೮೯೩ರಲ್ಲಿ ಮಿಶನ್ ಕೈಲಕೇರಿಯಲ್ಲಿ ಶಾಲೆಯೊಂದನ್ನು ತೆರೆದಿತ್ತು, ಆದರೆ ಇವತ್ತಿಗೂ ಈ ಶಾಲೆಗೆ ಬರುವ ಮಕ್ಕಳ ಸಂಖ್ಯೆ ಬಹಳ ಕಡಿಮೆ. ಏಕೆಂದರೆ, ತಮ್ಮ ಮಕ್ಕಳ ಮೇಲೆ ಮಿಶನರಿಗಳು ಗುಟ್ಟಿನಲ್ಲಿ ಮಂತ್ರ ಮಾಡಬಹುದೆಂಬ ಹೆದರಿಕೆ ಇನ್ನೂ ಅಗಾಧವಾಗಿದೆ.[೪೨] ೧೯೦೩ರಲ್ಲಿ ಬ್ರಹ್ಮ ಸಮಾಜ 'ವೆಸ್ಟ್ ಕೋಸ್ಟ್ ಸ್ಪೆಕ್ಟೇಟರ್' ಪತ್ರಿಕೆಯಲ್ಲಿ ಜನರು ತಮ್ಮ ಮಕ್ಕಳನ್ನು ಮಿಶನ್ ಶಾಲೆಗಳಿಗೆ ಕಳುಹಿಸಬಾರದೆಂಬ ಎಚ್ಚರಿಕೆಯನ್ನು ನೀಡಿತ್ತು. ಮಿಶನ್ನಿನವರು ಶಾಲೆಗಳನ್ನು ಸ್ಥಾಪಿಸುವುದರ ಕುರಿತು ಅದು ಇಂಗ್ಲಿಷ್

ಇರಬಹುದು ಅಥವಾ ದೇಶೀ ಭಾಷೆಯದಿರಬಹುದು ಅವರು ಕಟ್ಟಾ ವಿರೋಧಿಗಳಾಗಿದ್ದರು. ಈ ಅಂಜಿಕೆಯು ಕಾರಣವಿಲ್ಲದ್ದು ಅಲ್ಲವೆಂಬುದನ್ನು ಹಿಂದಿನ ವರ್ಷದ ಘಟನೆ ತೋರಿಸಿಕೊಟ್ಟಿತ್ತು. ಜೂನ್ ತಿಂಗಳಲ್ಲಿ ಐದು ಮಂದಿ ಹುಡುಗರು ಕ್ರೈಸ್ತರಾಗುವ ಬಯಕೆಯನ್ನು ವ್ಯಕ್ತಪಡಿಸಲು ಮುಂದೆ ಬಂದಿದ್ದರು. ಇದಕ್ಕನುಗುಣವಾಗಿ ಮಂಗಳೂರಿನಲ್ಲಿ ಬ್ರಹ್ಮ ಸಮಾಜದ ಪ್ರತಿನಿಧಿ ಮಿಶನ್ನಿನ ಶಾಲೆಯೊಂದರ ಹತ್ತಿರವೇ ಇನ್ನೊಂದು ಶಾಲೆಯನ್ನು ಪ್ರಾರಂಭಿಸಿ ತಮ್ಮ ಮಕ್ಕಳನ್ನು ಮಿಶನ್ ಶಾಲೆಗೆ ಕಳುಹಿಸದಂತೆ ತಮ್ಮ ಅನುಯಾಯಿಗಳಿಗೆ ಎಚ್ಚರಿಕೆಯನ್ನು ನೀಡಿದ್ದರು. ಅನಿಬೆಸೆಂಟ್‌ರವರು ಮಿಶನ್ ಶಾಲೆಗಳಲ್ಲಿ ಹಿಂದೂ ಧರ್ಮದ ನಿಂದನೆಯನ್ನು ಮಾಡಲಾಗುತ್ತದೆ ಮತ್ತು ಅವರ ನೈತಿಕತೆಯನ್ನು ಕುಂದಿಸಲಾಗುತ್ತದೆ ಎಂಬ ಕಾರಣಕ್ಕಾಗಿ ಹಿಂದೂಗಳಿಗೆ ತಮ್ಮ ಸ್ವಂತ ಶಾಲೆಗಳನ್ನು ಸ್ಥಾಪಿಸುವಂತೆ ಕರೆ ನೀಡಿದ್ದರು. ಅವರು 'ಜರ್ನಲ್ ಆಫ್ ಎಜುಕೇಷನ್' ನಲ್ಲಿ ಬರೆದಿರುವುದು ಹೀಗಿದೆ: "ಕಳೆದ ವಿಶ್ಲೇಷಣೆಯಲ್ಲಿ ತಿಳಿದು ಬಂದ ವಿಚಾರದ ಪ್ರಕಾರ ಮಿಶನರಿಗಳ ಶಿಕ್ಷಣವು ತನ್ನ ಉತ್ಕೃಷ್ಟತೆ ಮತ್ತು ಲೋಕೋಪಕಾರಿ ಗುಣವನ್ನು ಹೊಂದಿರುವುದಾದರೂ ಅದರ ಉದ್ದೇಶವು ಮತಾಂತರವಾಗಿದೆ....ಪ್ರಸ್ತುತ ಸನ್ನಿವೇಶದಲ್ಲಿ ಎಲ್ಲ ಕಡೆಗಳಲ್ಲಿ ಮಿಶನ್ ಶಾಲೆಗಳ ವಿರುದ್ಧ ಪ್ರಗತಿಪರ ಹಿಂದೂಗಳಲ್ಲಿ ಪ್ರಬಲ ಭಾವನೆಯಿದೆ......ಇದು ಎಲ್ಲೆಡೆಗಳಲ್ಲಿ ತಲೆಯೆತ್ತುತ್ತಿರುವ 'ರಾಷ್ಟ್ರೀಯ ಸಂಸ್ಥೆ'ಗಳೆಂದು ಕರೆಯಲ್ಪಡುವಂಥವೇ ಆಗಿವೆ". ಸಮಾಜ ಸ್ಥಾಪನೆಯ ಮುಖ್ಯ ಉದ್ದೇಶವು ಬೆಳೆಯುತ್ತಿರುವ ಮಿಶನರಿಗಳ ಮತಪ್ರಸಾರ ಕಾರ್ಯವನ್ನು ನಿಯಂತ್ರಿಸುವುದಾಗಿದೆ. ಆದರೆ ಅನೇಕ ಕ್ರೈಸ್ತ ಸಂಪ್ರದಾಯಗಳನ್ನು ಮತ್ತು ರೂಢಿಗಳನ್ನು ಸ್ವತಃ ಸಮಾಜವೇ ಅಳವಡಿಸಿಕೊಂಡು ಕ್ರೈಸ್ತ ಧರ್ಮದ ಕುರಿತು ಉತ್ತಮ ತಿಳುವಳಿಕೆಯನ್ನು ಒದಗಿಸಿದೆ.[೪೩]

ಅನೇಕ ಕಡೆಗಳಲ್ಲಿ ಕ್ರೈಸ್ತೇತರ ಸಮುದಾಯದವರು ತಾವು ಇರುವಲ್ಲಿ ಶಾಲೆಯನ್ನು ಸ್ಥಾಪಿಸುವುದಕ್ಕೆ ಮಿಶನರಿಗಳಿಗೆ ಸಮ್ಮತಿ ಪೂರ್ವಕ ಪ್ರೋತ್ಸಾಹ ನೀಡಿದ್ದಾರೆ. ಹೀಗಾಗಿ, ಮಿ. ದಿಗೆಲ್ ಅವರು ಹೊನ್ನಾವರದಿಂದ ಕೆಲವೇ ಅಂತರದಲ್ಲಿರುವ ಅನಿಲ್‌ಗೋಡುವಿನಿಂದ ಹೀಗೆ ವರದಿ ಮಾಡುತ್ತಾರೆ, "ಜಮೀನುದಾರರೂ ಕೂಡ ಆಗಿರುವ ಆ ಪ್ರದೇಶದ ಮೂರ್ತೆದಾರರು ಉತ್ತಮವಾದ ಮತ್ತು ಆರೋಗ್ಯಕರ ಪರಿಸರದಲ್ಲಿ ಒಂದು ಅಚ್ಚುಕಟ್ಟಾದ ಶಾಲಾ ಕಟ್ಟಡವನ್ನು ಮತ್ತು ಶಾಲೆಯ ಶಿಕ್ಷಕರಿಗಾಗಿ ಒಂದು ಸಣ್ಣ ಮನೆಯನ್ನು ಕೂಡಾ ಕಟ್ಟಿಸಿಕೊಟ್ಟಿದ್ದಾರೆ. ಎಲ್ಲಕ್ಕಿಂತ ಹೆಚ್ಚು ಪ್ರಶಂಸನೀಯ ವಿಚಾರವೇನೆಂದರೆ, ಅವರು ತಮ್ಮ ಮಕ್ಕಳನ್ನು ನಿಯಮಿತವಾಗಿ ಶಾಲೆಗೆ ಕಳುಹಿಸುತ್ತಿದ್ದಾರೆ."[೪೪]

ಬಾಸೆಲ್ ಮಿಶನ್ನಿನ ಬಲವಾದ ಪ್ರಚಾರಕ್ಕೆ ಪ್ರತಿಕ್ರಿಯೆಯ ಸ್ವರೂಪದಲ್ಲಿ ಬ್ರಹ್ಮ ಸಮಾಜ ಮಂಗಳೂರಿನಲ್ಲಿ ಜನ್ಮ ತಳೆದು, ಗಣ್ಯ ದೇಶಭಕ್ತ ಸಮಾಜ ಸೇವಕರಾದ ಕುದ್ಮುಲ್ ರಂಗರಾವ್, ಕಾರ್ನಾಡ್ ಸದಾಶಿವರಾಯರಂತವರ ಸೃಷ್ಟಿಗೆ ಕಾರಣವಾಗಿದೆ. ಇದೇ ರೀತಿ, ಮಾರ್ಗರೇಟ್ ಕಸಿನ್ಸ್

ಎಂಬ ಗಣ್ಯ ವಿದೂಷಿ ಥಿಯೋಸೋಫಿಕಲ್ ಸೊಸೈಟಿಯ ಮೂಲಕ ಮಂಗಳೂರಿಗೆ ಬಂದು ಮಹಿಳೆಯರ ಪುರೋಗಮನಕ್ಕೆ ದುಡಿದರು. ಕಸಿನ್ಸ್‌ರವರು, ಕಮಲಾದೇವಿ ಚಟ್ಟೋಪಾಧ್ಯಾಯರಂತಹ ಬಾಲವಿಧವೆಯನ್ನು ನಾಟಕ ರಂಗಕ್ಕೆ ಎಳೆದು ತಂದು ಅವರ ಪುನರ್ವಿವಾಹಕ್ಕೆ ಬೆಂಬಲ ನೀಡಿ ಮಹಿಳಾ ಪುರೋಗಮನ ಚಳುವಳಿಗೂ, ಮುಂದೆ ಕಾರ್ಮಿಕ ರಂಗದಲ್ಲಿ ಆಕೆ ದುಡಿಯಲು ಪ್ರೇರಣೆ ನೀಡಿದರು. ಮಿಶನರಿಗಳ ಪ್ರಚಾರದ ಪ್ರತಿಕ್ರಿಯೆಯಿಂದ ಉಂಟಾದ ಹಿಂದೂ ಜಾಗೃತಿಯ ಒಂದು ಮುಖವೇ 'ಕೆನರಾ ಹಿಂದೂ ಪರ್ಮನೆಂಟ್ ಫಂಡ್'. ಇದು ಮುಂದೆ ಕೆನರಾ ಬ್ಯಾಂಕ್ ಎಂಬ ಖ್ಯಾತಿ ಪಡೆದು ಜಿಲ್ಲೆಯ ಬ್ಯಾಂಕಿಂಗ್ ಕ್ಷೇತ್ರದ ಪ್ರಗತಿಗೆ ಅಪಾರ ಕೊಡುಗೆಯನ್ನು ನೀಡುತ್ತಿದೆ.[೪೫]

ಬಿಷಪ್ ಮೈಕಲ್ ಆ್ಯಂಟನಿಯವರ ಕಾಲಾವಧಿಯಲ್ಲಿ , ಮಿಲಾಗ್ರಿಸ್ ಶಾಲಾ ಸಮಿತಿಯವರಿಗೆ ಮತ್ತು ಬಿಷಪರಿಗೆ ಹೆಣ್ಣು ಮಕ್ಕಳ ಶಾಲೆಯೊಂದನ್ನು ೧೮೫೯ರಲ್ಲಿ ಆರಂಭಿಸಿದಾಗ ಮನಸ್ತಾಪ ಉಂಟಾಯಿತು. ಕಡೆಗೆ ಬಿಷಪರ ಆಜ್ಞೆಯಂತೆ ಶಾಲೆಯನ್ನು ಮುಚ್ಚಬೇಕಾಯಿತು. ಅದರಿಂದ ಬೇಸರಗೊಂಡ ಮಿಲಾಗ್ರಿಸ್‌ನ ಶಾಲಾ ಸಮಿತಿಯವರು ಬಿಷಪ್ ಮೈಕಲ್ ಮೂಲಕ ಮಂಗಳೂರಿಗೆ ಬಂದು ಬೋಳಾರದಲ್ಲಿ ಸೈಂಟ್ ಮೇರಿಸ್ ಶಾಲೆ ಸ್ಥಾಪಿಸಿದ ಬ್ರದರ್ಸ್‌ಗಳಿಗೆ, ಶಾಲೆ ಸಾಕಷ್ಟು ಕೇಂದ್ರಭಾಗದಲ್ಲಿ ಇಲ್ಲ ಎಂಬ ನೆಪವೊಡ್ಡಿ ವಿರೋಧಿಸಿದರು. ಕಡೆಗೆ ಅವರು ಆ ಶಾಲೆಯನ್ನು ಮುಚ್ಚಿ ಕೇರಳಕ್ಕೆ ತೆರಳಿದರು.[೪೬] ಹೀಗೆ ಕಥೋಲಿಕ ಕ್ರೈಸ್ತರು ಹೆಚ್ಚಿನ ಸಂದರ್ಭಗಳಲ್ಲಿ ಧರ್ಮಗುರುಗಳೊಂದಿಗೆ ಕೈ ಜೋಡಿಸಿ ಸಮಾಜ ಸೇವೆ ಹಾಗೂ ಇತರ ಸಮಾಜ ಸುಧಾರಣಾ ಕೆಲಸಗಳನ್ನು ಕೈಗೊಂಡಿದ್ದರೂ , ಕೆಲವೊಮ್ಮೆ ತಮ್ಮ ಸ್ವಾತಂತ್ರ್ಯವನ್ನು ಕಸಿದುಕೊಂಡಾಗ ಧಾರ್ಮಿಕ ಮುಖಂಡರ ವಿರುದ್ಧವೂ ಧ್ವನಿ ಎತ್ತಿರುವುದು ಕಂಡು ಬರುತ್ತದೆ.

### ೬.೪. ಕಲ್ಯಾಣಪುರ ಸ್ಕೀಜ್ಮ್ (ವಿಭಜನೆ)

- ಪೋರ್ಚುಗಲ್ಲಿನ ರಾಜ ಹಾಗೂ ಜಗದ್ಗುರುಗಳ ನಡುವೆ ಆದ ಒಪ್ಪಂದದ ಪ್ರಕಾರ, ಪೋರ್ಚುಗೀಸರು 'ಪದ್ರುವಾದೊ' ಅಥವಾ 'ಪೋಷಣಾಧಿಕಾರ'ವನ್ನು ಪಡೆದಿದ್ದರು . ಅಂದರೆ ತಮ್ಮ ಸಾಮ್ರಾಜ್ಯದೊಳಗೆ ಸುವಾರ್ತಾ ಪ್ರಸಾರ ಹಾಗೂ ಕ್ರೈಸ್ತ ಧರ್ಮ ಸ್ವೀಕರಿಸಿದವರ ಧಾರ್ಮಿಕ ಅಗತ್ಯಗಳನ್ನು ಪೂರೈಸುವ ಅಧಿಕಾರ. ಆದರೆ ೧೭ನೇ ಶತಮಾನದಲ್ಲಿ ಪೋರ್ಚುಗೀಸರ ಪ್ರಾಬಲ್ಯ ಕಡಿಮೆಯಾಗಿ ಜನರ ಧಾರ್ಮಿಕ ಅಗತ್ಯತೆಗಳನ್ನು ಪೂರೈಸುವ ನಿಟ್ಟಿನಲ್ಲಿ ಸ್ವಲ್ಪ ತೊಡಕಾಯಿತು. ಅಂತಹ ಪರಿಸ್ಥಿತಿಯಲ್ಲಿ ಜಗದ್ಗುರುಗಳು ಕೆನರಾ ಜಿಲ್ಲೆಯ ಸೌವಾರ್ತಿಕ ಸೇವೆಯನ್ನು ನೋಡಿಕೊಳ್ಳಲು ವ್ಯಾಟಿಕನ್‌ನಿಂದ ' ಪ್ರೊಪಗಾಂಡ ಫೈಡ್' ಎಂಬ ಧಾರ್ಮಿಕ ಸಂಸ್ಥೆಯೊಂದನ್ನು ನೇಮಿಸಿದರು.[೪೭] ಪರಿಸ್ಥಿತಿ ಹೀಗಿರುವಾಗ, ೧೮೩೭ರಲ್ಲಿ

ಪೋರ್ಚುಗೀಸ್ ಸರ್ಕಾರದಲ್ಲಿ ಎರಡು ಪಂಗಡಗಳು ಹುಟ್ಟಿ, ಒಂದು ಪಂಗಡದವರು ಸಾಂತಾ ರೀಟಾ ಕರ್ವಾಲೊ ಎಂಬುವವರನ್ನು ಗೋವಾದ ಆರ್ಚ್ ಬಿಷಪರಾಗಿ ನೇಮಕ ಮಾಡಿದರು. ಇವರ ನೇಮಕಾತಿಯನ್ನು ಜಗದ್ಗುರುಗಳು ಒಪ್ಪಿಕೊಳ್ಳಲಿಲ್ಲ. ಆದರೆ, ಇದ್ಯಾವುದರ ಅರಿವು ಇಲ್ಲದ ಮುಗ್ಧ ಜನರು ಕರ್ವಾಲೊರವರನ್ನೇ ತಮ್ಮ ಆರ್ಚ್ ಬಿಷಪರೆಂದು ಒಪ್ಪಿಕೊಂಡಿದ್ದರು. ಆಗ ಬೊಂಬಾಯಿಯ ಆರ್ಚ್ ಬಿಷಪರು ನಡೆದಿರುವ ಸಂಗತಿಯನ್ನು ಮನವರಿಕೆ ಮಾಡಿಕೊಡಲಾಗಿ ಕೆನರಾದ ಕ್ರೈಸ್ತರಲ್ಲಿ ಎರಡು ಪಂಗಡಗಳಾಯಿತು. ಒಂದು ಪಂಗಡ ತಮ್ಮ ನಿಷ್ಠೆಯನ್ನು ಗೋವಾದ ಆರ್ಚ್ ಬಿಷಪರಿಗೆ ಮುಂದುವರಿಸಿದರೆ, ಇನ್ನೊಂದು ಪಂಗಡ ಜಗದ್ಗುರುಗಳ ಆಜ್ಞೆಯಂತೆ ವೆರಾಪೋಲಿಯ ಬಿಷಪರ ಅಧೀನದಲ್ಲಿರಲು ಬಯಸಿದರು.[೪೮] ಹೀಗೆ, ಕೆನರಾ ಜಿಲ್ಲೆಯ ಕೆಲವು ಚರ್ಚುಗಳು ಗೋವಾ ಆರ್ಚ್ ಬಿಷಪರ ಅಧೀನದಲ್ಲಿ, ಹಾಗೂ ೧೬ ಚರ್ಚುಗಳು ವೆರಾಪೋಲಿ ಬಿಷಪರ ಕೈಕೆಳಗೆ ಉಳಿದವು. ಅಂತೆಯೇ ಕಲ್ಯಾಣಪುರದ ಕ್ರೈಸ್ತರಲ್ಲಿಯೂ ಎರಡು ಪಂಗಡಗಳುಂಟಾಗಿ ಒಂದು ಪಂಗಡದವರು ಮೌಂಟ್ ರೋಜರಿ ಚರ್ಚ್ ಕಟ್ಟಿಕೊಂಡು ತಮ್ಮ ನಿಷ್ಠೆಯನ್ನು ವೆರಾಪೋಲಿ ಬಿಷಪರಿಗೆ ತೋರಿಸತೊಡಗಿದರು. ಆದರೆ ಇನ್ನೊಂದು ಪಂಗಡ ಇನ್ನೂ ಸಹ ತಮ್ಮ ಸಂಬಂಧವನ್ನು ಗೋವಾ ಆರ್ಚ್ ಬಿಷಪರೊಂದಿಗೆ ಮುಂದುವರಿಸಿಕೊಂಡು ಕಲ್ಯಾಣಪುರ ಮಿಲಾಗ್ರಿಸ್ ಚರ್ಚಿನಲ್ಲಿ ಉಳಿದರು. ಕಡೆಗೆ ೧೮೮೬ರಲ್ಲಿ ಪೋಪರಿಗೆ ಮತ್ತು ಪೋರ್ಚುಗಲ್ಲಿನ ರಾಜನ ನಡುವೆ ಏರ್ಪಟ್ಟ ಒಪ್ಪಂದದಂತೆ ಕೆನರಾ ಜಿಲ್ಲೆಯನ್ನು ಮಂಗಳೂರಿನ ಅಪೋಸ್ತಲಿಕ್ ವಿಕಾರ್ ಅವರ ಅಧೀನಕ್ಕೊಪ್ಪಿಸಲಾಯಿತು. ಆದರೆ, ಸಮಸ್ಯೆ ಇಲ್ಲಿಗೇ ಕೊನೆಗೊಳ್ಳಲಿಲ್ಲ, ಬದಲಾಗಿ ಪರಿಸ್ಥಿತಿ ಇನ್ನೂ ಬಿಗಡಾಯಿಸಿತು. ಕಾರಣ ಆ ಸಮಯದಲ್ಲಿ ಕಲ್ಯಾಣಪುರದ ಮಿಲಾಗ್ರಿಸ್ ಚರ್ಚಿನ ಧರ್ಮಗುರುಗಳಾದ ಫಾ। ಡೇವಿಡ್ ಪಿರೇರಾ ಎಂಬವರು, ಮಿಲಾಗ್ರಿಸ್ ಚರ್ಚಿನ ಕ್ರೈಸ್ತರನ್ನು ಗೋವಾದ ಆರ್ಚ್ ಬಿಷಪರ ಕೈ ಕೆಳಗೇ ಉಳಿಯಲು ಉತ್ತೇಜನ ನೀಡಿದರು.[೪೯] ಇದರಿಂದ ಮುಗ್ಧ ಜನರು ಮಂಗಳೂರು ಬಿಷಪರ ವಿರುದ್ಧ ಪ್ರತಿಭಟನೆ ನಡೆಸಿ, ನ್ಯಾಯಕ್ಕಾಗಿ ಕೋರ್ಟ್ ಮೆಟ್ಟಿಲೇರಿದರು. ಆದರೆ ನ್ಯಾಯಾಲಯದಲ್ಲಿ ಮಂಗಳೂರು ಧರ್ಮಪ್ರಾಂತ್ಯದ ಪರವಾಗಿ ತೀರ್ಮಾನ ಬಂದದ್ದರಿಂದ ಅನಿವಾರ್ಯವಾಗಿ ಮಿಲಾಗ್ರಿಸ್‌ನ ಜನರು ತಮ್ಮ ನಿಷ್ಠೆಯನ್ನು ಬದಲಾಯಿಸಬೇಕಾಯಿತು. ಇದನ್ನೊಪ್ಪದ ಜನರು ಚರ್ಚಿನಿಂದ ಬಹಿಷ್ಕಾರಗೊಂಡು ತಮ್ಮ ಮಾತೃ ಚರ್ಚಿನಿಂದ ಒಲ್ಲದ ಮನಸ್ಸಿನಲ್ಲಿ ಬೇರ್ಪಡಬೇಕಾಯಿತು. ಈ ಒಂದು ಘಟನೆಯನ್ನು ಚರ್ಚ್ ಇತಿಹಾಸದಲ್ಲಿ 'ಕಲ್ಯಾಣಪುರ ಸಿಜ್ಮ್' ಅಥವಾ 'ಕಲ್ಯಾಣಪುರ ಒಡಕು' ಎಂದು ಕರೆಯಲಾಗುತ್ತದೆ.[೫೦]

ಮೇಲಿನ ಘಟನೆಯಿಂದ ಧರ್ಮದಲ್ಲಿ ರಾಜಕೀಯ ನುಸುಳಿದರೆ ಆಗುವ ಪರಿಣಾಮ ಎಂತಹದು ಎಂದು ತಿಳಿಯುತ್ತದೆ. ಕಲ್ಯಾಣಪುರ ಪ್ಯಾರಿಷ್ ೧೬ನೇ ಶತಮಾನದ ಉತ್ತರಾರ್ಧದಲ್ಲಿ ಹುಟ್ಟಿಕೊಂಡಿತ್ತು.

ಕೆನರಾ ಜಿಲ್ಲೆ ಗೋವಾದ ಮಹಾ ಧರ್ಮಪ್ರಾಂತ್ಯಕ್ಕೆ (ಆರ್ಚ್ ಡಯಾಸಿಸ್) ಸೇರಿದ್ದರಿಂದ ಕಲ್ಯಾಣಪುರದ ಕ್ರೈಸ್ತರ ಆಧ್ಯಾತ್ಮಿಕ ಅಗತ್ಯಗಳನ್ನು ಗೋವಾದ ಅಥವಾ ದೇಶೀ ಧರ್ಮಗುರುಗಳು ಈಡೇರಿಸುತ್ತಿದ್ದರು. ಆದುದ್ದರಿಂದ ಸಹಜವಾಗಿ ಗೋವಾದ ಧರ್ಮಗುರುಗಳ ಬಗ್ಗೆ ಜಿಲ್ಲೆಯ ಜನರಿಗೆ ಅಪಾರ ಗೌರವವಿತ್ತು. ಹೀಗಿರುವಾಗ, ಜಗದ್ಗುರುಗಳು ಆದೇಶವೊಂದನ್ನು ಹೊರಡಿಸಿ ತಮ್ಮ ನಿಷ್ಠೆಯನ್ನು ಇಟಲಿಯ ವೆನಿಸ್ ಪ್ರಾಂತ್ಯದ ಯೇಸುಸಭೆಯ ಗುರುಗಳಿಗೆ ವರ್ಗಾಯಿಸಬೇಕೆಂದಾಗ ಸ್ಥಳೀಯರಿಗೆ ಇದು ಸ್ವಲ್ಪ ಕಷ್ಟವಾಗಿ ಪರಿಣಮಿಸಿತು. ಏಕೆಂದರೆ ಗೋವಾದ ಧರ್ಮಗುರುಗಳು ತಮ್ಮ ಪೂರ್ವಿಕರ ಕಾಲದಿಂದಲೂ, ಆಧ್ಯಾತ್ಮಿಕ ಹಾಗೂ ಲೌಕಿಕ ವಿಷಯಗಳಲ್ಲಿ, ಕಷ್ಟ-ನಷ್ಟಗಳ ಸಮಯದಲ್ಲಿ ಸಾಕಷ್ಟು ಧರ್ಮಗುರುಗಳ ಕೊರತೆ, ಸಾರಿಗೆ-ಸಂಪರ್ಕ ಮಾಧ್ಯಮಗಳ ಕೊರತೆ, ಧರ್ಮ ಪ್ರಾಂತ್ಯದ ವಿಶಾಲತೆ, ಭಾಷೆಯ ತೊಡಕು ಮುಂತಾದವುಗಳ ಹೊರತಾಗಿಯೂ ಇಲ್ಲಿಯ ಜನರಿಗಾಗಿ ಸಮರ್ಪಣೆಯ ಭಾವದಿಂದ ದುಡಿದಿದ್ದರು. ಕಲ್ಯಾಣಪುರದ ಕ್ರೈಸ್ತರು ಮಂಗಳೂರು ಧರ್ಮಪ್ರಾಂತ್ಯದ ವಿರುದ್ಧ ಪ್ರತಿಭಟಿಸಲು ಇತರ ಕಾರಣಗಳೂ ಇದ್ದವು. ಮಂಗಳೂರಿಗರ ಸಂಸ್ಕೃತಿ ಮತ್ತು ಭಾಷೆ ಕಲ್ಯಾಣಪುರದವರ ಭಾಷೆ ಮತ್ತು ಸಂಸ್ಕೃತಿಗಿಂತ ವಿಭಿನ್ನವಾಗಿತ್ತು. ನಗರ ವಾಸಿಗಳಾದ ಮಂಗಳೂರಿಗರು, ಗ್ರಾಮವಾಸಿಗಳನ್ನು ನಿಕೃಷ್ಟವಾಗಿ ನೋಡುತ್ತಿದ್ದರು.[೫೧] ಕ್ರಾಂತಿ ಕೆ. ಫರಾಯಸ್ ಅವರ ಪ್ರಕಾರ ಕಲ್ಯಾಣಪುರದ ಮಿಲಾಗ್ರಿಸ್ ಚರ್ಚಿನ ಮೇಲಿನ ಹಕ್ಕನ್ನು ಕಳೆದುಕೊಂಡ ಪದ್ರಾವದೊ ಅನುಯಾಯಿಗಳಿಗೆ ಬ್ರಹ್ಮಾವರದಲ್ಲಿ ಸ್ವತಂತ್ರ ಚರ್ಚನ್ನು ಸ್ಥಾಪಿಸುವುದಕ್ಕೆ ದಾರಿ ಸುಗಮವಾಯಿತು. ಇದು ರೋಮ್ ಮತ್ತು ಪೋರ್ಚುಗಲ್ ವಿರುದ್ಧ ಭಾರತೀಯ ಕ್ರೈಸ್ತ ಧರ್ಮಗುರುಗಳು ತೆಗೆದುಕೊಂಡ ಪ್ರಥಮ ವಿದೇಶಿ ವಿರೋಧಿ ಹೆಜ್ಜೆಯಾಗಿದೆ. ಇದು ಭಾರತೀಯತ್ವದ (Indianisation) ಕಡೆಗೆ ಸಾಗುವ ಚಳುವಳಿಯ ಪ್ರಾರಂಭವಾಗಿದೆ.[೫೨] ಕಲ್ಯಾಣಪುರ ಒಡಕಿಗೆ ಕ್ರೈಸ್ತರಲ್ಲಿದ್ದ ಜಾತಿ ವ್ಯವಸ್ಥೆಯೂ ಸಹ ಒಂದು ಬಹುಮುಖ್ಯ ಕಾರಣವಾಗಿದೆ. ಬಾಮೊಣ್ ಅಥವಾ ಚರೊಡಿಗಳಾಗಿ ತಮ್ಮ ತಮ್ಮ ಜಾತಿಗಳ ಕಡೆಗೆ ಅವರು ವ್ಯಕ್ತಪಡಿಸಿದ ಪ್ರಬಲ ಒಲವು ಪ್ಯಾರಿಶ್ ಎರಡು ಹೋಳಾಗಿರುವುದಕ್ಕೆ - ಮಿಲಾಗ್ರಿಸ್ ಚರ್ಚ್ (ಕೆಳ ಚರ್ಚ್- ಚರೊಡಿ ಚರ್ಚ್) ಮತ್ತು ಮೌಂಟ್ ರೋಜರಿ ಚರ್ಚ್ (ಮೇಲಿನ ಚರ್ಚ್ - ಬಾಮೊಣ್ ಚರ್ಚ್) ಸಾಕ್ಷಿಯಾಗಿದೆ. ಅಲ್ಲದೆ, ಕಲ್ಯಾಣಪುರದ ರೋಮನ್ ಕ್ರೈಸ್ತ ಸಮುದಾಯದ ದೊಡ್ಡ ವರ್ಗ ಸಿರಿಯನ್ ಆರ್ಥೋಡೊಕ್ಸ್ ಚರ್ಚ್‌ನ್ನು ಬ್ರಹ್ಮಾವರದಲ್ಲಿ ಸ್ಥಾಪಿಸಲು ಎಡೆಮಾಡಿಕೊಟ್ಟಿತು.[೫೩] ಅಧಿಕಾರ, ಧರ್ಮ, ಆಚರಣೆ, ಸಂಪ್ರದಾಯ, ತತ್ವ, ನೀತಿ ನಿಯಮಗಳ ಹೆಸರಿನಲ್ಲಿ ಇಂದಿಗೂ ಪ್ರತಿಭಟನೆಗಳು ಮುಂದುವರಿದಿದ್ದು, ಅತೃಪ್ತ ಗುಂಪಿನವರು ಮಾತೃ ಚರ್ಚುಗಳನ್ನು ತೊರೆದು ಪ್ರತ್ಯೇಕ ಚರ್ಚುಗಳು ಉದಾಹರಣೆಗೆ 'ನ್ಯೂ ಲೈಫ್ ಫೆಲೋಶಿಪ್, ಬೈಬಲ್ ಸೊಸೈಟಿ'ಇತ್ಯಾದಿ ಹುಟ್ಟಿಕೊಳ್ಳುತ್ತಿವೆ.

ಕಥೋಲಿಕ ಮಿಶನರಿಗಳೂ ಸಹ ಬ್ರಾಹ್ಮಣ ವರ್ಗದವರ ವಿರೋಧ ಮತ್ತು ಪ್ರತಿಭಟನೆಗಳನ್ನು ತಮ್ಮ ಸುವಾರ್ತಾ ಪ್ರಸಾರ ಮತ್ತು ಸಮಾಜಸೇವೆಯ ಕಾರ್ಯಗಳಲ್ಲಿ ಎದುರಿಸಬೇಕಾಗಿತ್ತು. ಯೇಸು ಸಭೆಯ ಫಾ। ಮಾಫೈರವರು ನೆಲ್ಲಿಕುಂಜೆಯಲ್ಲಿ ಮಿಶನರಿ ಕಾರ್ಯಗಳನ್ನು ಆರಂಭಿಸಿ, ಅದನ್ನು ಮುನ್ನಡೆಸಲು ಫಾ। ಡೆನಿಸ್ ಕೊಯಿಲೊರವರಿಗೆ ವಹಿಸಿದ್ದರು. ಅವರು ಸುರತ್ಕಲ್ಲಿನಲ್ಲಿ ಬ್ರಾಹ್ಮಣ ವರ್ಗದವರಿಂದ ತೀವ್ರ ತೆರನಾದ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಆದರೆ,ಇದ್ಯಾವುದರ ಬಗ್ಗೆ ಲಕ್ಷ್ಯ ಕೊಡದೆ ತಮ್ಮ ಮಿಶನರಿ ಕಾರ್ಯಗಳನ್ನು ಮುಂದುವರಿಸಿ ಕ್ರೈಸ್ತ ಮತ ಸ್ವೀಕರಿಸಿದವರ ಮತ್ತು ಇತರರ ಸೇವೆಯನ್ನು ಮಾಡಿದರು. [೫೪] ಕಾಲಕ್ರಮೇಣ ಪ್ರತಿಭಟನೆಗಳು ತಮ್ಮಷ್ಟಕ್ಕೆ ಕಡಿಮೆಯಾಯಿತು.

ಈ ರೀತಿಯಲ್ಲಿ ಕ್ರೈಸ್ತ ಮಿಶನರಿಗಳು ಸ್ಥಳೀಯರಿಂದ ತಮ್ಮ ಕಾರ್ಯಗಳಿಗೆ ಬೆಂಬಲ ಹಾಗೂ ವಿರೋಧ ಎರಡನ್ನೂ ಎದುರಿಸಬೇಕಾಗಿದೆ. ಆದರೆ ಈ ಎಲ್ಲಾ ಪ್ರತಿಭಟನೆಗಳು ಮೇಲ್ವರ್ಗದವರು ತಮ್ಮ ಹಿತಾಸಕ್ತಿಗಳನ್ನು ಕಾಪಾಡಲು ಮುಗ್ಧ ಜನರಿಂದ ಮಾಡಿಸಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಆದರೆ ಇಂತಹ ಎಲ್ಲಾ ವಿರೋಧಗಳನ್ನು ತಾಳ್ಮೆಯಿಂದ ಸಹಿಸಿಕೊಂಡ ಫಲವಾಗಿ ಧರ್ಮ ಪರಿವರ್ತನೆ, ಶಿಕ್ಷಣ, ಆರೋಗ್ಯ, ಸಮಾಜ ಸೇವೆ ಇತ್ಯಾದಿ ಕಾರ್ಯಗಳನ್ನು ಕೈಗೊಳ್ಳಲು ಸಾಧ್ಯವಾಗಿದೆ. ಆ ಮೂಲಕ, ಜಿಲ್ಲೆಯ ಸಮಗ್ರ ಬದಲಾವಣೆಯಲ್ಲಿ ಕ್ರೈಸ್ತರು ತಮ್ಮ ಅತ್ಯಮೂಲ್ಯ ಕೊಡುಗೆಗಳನ್ನು ಸಲ್ಲಿಸಿದ್ದಾರೆ.

## ಕೊನೆ ಟಿಪ್ಪಣಿ

೧. ಕ್ರಾಂತಿ ಕೆ. ಫರಾಯಸ್ *ದ ಕ್ರಿಶ್ಚಿಯನ್ ಇಂಪಾಕ್ಟ್ ಇನ್ ಸೌತ್ ಕೆನರಾ* , ಮುಂಬೈ: ಚರ್ಚ್ ಹಿಸ್ಟರಿ ಅಸೋಸಿಯೇಷನ್ ಆಫ್ ಇಂಡಿಯಾ, , ೧೯೯೯, ಪುಟಗಳು ೯೭, ೯೮

೨. ಪೀಟರ್ ವಿಲ್ಸನ್ ಪ್ರಭಾಕರ್, "ದಕ್ಷಿಣ ಕನ್ನಡದಲ್ಲಿ ಬಾಸೆಲ್ ಮಿಶನ್ ೧೮೩೪-೧೯೪೭", ಅಪ್ರಕಟಿತ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೮೮ ,ಪುಟ ೮೬

೩. ಜೆ.ಎನ್.ಥಾಮ್ಸನ್, *ಸಾಮ್ಯುವೆಲ್ ಹೆಬಿಕ್ ಆಫ್ ಇಂಡಿಯಾ, ಮಾಸ್ಟರ್ ಫಿಶರ್ ಆಫ್ ಮೆನ್*, ಕಟಕ್, ೧೯೦೫, ಪುಟಗಳು ೩೬, ೩೭

೪. ಅದೇ, ಪುಟ ೨೭

೫. ಬಿ.ಎಂ.ಆರ್. - ೧೮೬೦, ಪುಟಗಳು ೨೬, ೨೭

೬. ಬಿ.ಎಂ.ಆರ್. - ೧೮೭೧, ಪುಟ ೩೨

೭. ಬಿ.ಎಂ.ಆರ್. - ೧೮೭೬, ಪುಟ ೫೭

೮. ಬಿ.ಎಂ.ಆರ್. - ೧೮೮೦, ಪುಟಗಳು ೩೫, ೩೬

೯. ಬಿ.ಎಂ.ಆರ್. - ೧೮೮೭, ಪುಟ ೧೩

೧೦. ಬಿ.ಎಂ.ಆರ್. - ೧೮೯೫ , ಪುಟಗಳು ೭೪, ೭೫

೧೧. ಬಿ.ಎಂ.ಆರ್. - ೧೮೦೪ , ಪುಟ ೨೮

೧೨. ಬಿ.ಎಂ.ಆರ್. - ೧೮೭೬, ಪುಟ ೨೫

೧೩. ಬಿ.ಎಂ.ಆರ್ .- ೧೮೮೧, ಪುಟಗಳು ೨೮, ೨೯

೧೪. ಬಿ.ಎಂ.ಆರ್. - ೧೮೮೩ ಪುಟಗಳು ೧೬,೧೭

೧೫. ಬಿ.ಎಂ.ಆರ್ - ೧೮೮೩, ಪುಟಗಳು ೨೨, ೩೩

೧೬. ಬಿ.ಎಂ.ಆರ್. - ೧೮೯೨, ಪುಟಗಳು ೫೨, ೫೩

೧೭. ಬಿ.ಎಂ.ಆರ್. - ೧೯೦೦, ಪುಟ ೪೩

೧೮. ಬಿ.ಎಂ.ಆರ್. - ೧೯೦೮, ಪುಟಗಳು ೪೬, ೪೭

೧೯. ಬಿ.ಎಂ.ಆರ್. - ೧೯೦೬, ಪುಟ ೪೫

೨೦. ಪಿ.ಡಬ್ಲ್ಯು.ಪಿ., ಪೂರ್ವೋಕ್ತ, ಪುಟಗಳು ೮೭, ೮೮

೨೧. ಅದೇ, ಪುಟಗಳು ೮೯, ೯೦

೨೨. ವಿಶಾಂಝ್ ಪಿಂಟೋ, " ಮೈಗ್ರೇಶನ್ ಆಫ್‌ದ ಕ್ಯಾಥೋಲಿಕ್ಸ್ ಆಫ್ ಸೌತ್ ಕೆನರಾ ಆಂಡ್ ಇಟ್ಸ್ ಸೋಶಿಯೋ – ಇಕನಾಮಿಕ್ ಡೈಮೆನ್ಶನ್ಸ್ (೧೯೦೦-೧೯೮೦)", ಅಪ್ರಕಟಿತ ಮಹಾಪ್ರಬಂಧ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ೨೦೦೯, ಪುಟ ೫೪

೨೩. ಭಟ್, ಎನ್. ಶ್ಯಾಮ್, *ಸೌತ್ ಕೆನರಾ (೧೭೯೯-೧೮೬೦) ಎ ಸ್ಟಡಿ ಆಫ್ ಕೊಲೊನಿಯಲ್ ಅಡ್ಮಿನಿಸ್ಟ್ರೇಶನ್ ಆಂಡ್ ರೀಜನಲ್ ರೆಸ್ಪೋನ್ಸ್*, ನ್ಯೂಡೆಲ್ಲಿ: ಮಿತ್ತಲ್ ಪಬ್ಲಿಕೇಶನ್, ೧೯೯೮ ಪುಟ೨೧೧

೨೪. ಡೆನಿಸ್ ಫೆರ್ನಾಂಡಿಸ್, "ದ ತುಳು ವರ್ಲ್ಡ್ ಇನ್ ಯೂರೋಪಿಯನ್ ರೈಟಿಂಗ್ಸ್" ಅಪ್ರಕಟಿತ ಮಹಾಪ್ರಬಂಧ,ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೨೦೦೬, ಪುಟಗಳು ೬೨ - ೬೪

೨೫. ಸೆಲೆಕ್ಷನ್ ಫ್ರಂ ದ ರೆಕಾರ್ಡ್ ಆಫ್ ದ ಕಲೆಕ್ಟರ್ ಆಫ್ ಸೌತ್ ಕೆನರಾ. ರಿಪೋರ್ಟ್ ಆಫ್ ಮಿ. ಜಾನ್ ಸ್ಟೋಕ್ಸ್ ಆನ್ ರಿವಿಜನ್ ಆನ್ ಎಸೆಸ್ಮೆಂಟ್ ಆಂಡ್ ದ ಡಿಸ್ಟರ್ಬೆನ್ಸಸ್ ನೋನ್ ಆ್ಯಸ್ ಕೂಟ್ಸ್ ಇನ್ ಕೆನರಾ, ಮ್ಯಾಂಗಲೂರ್(೧೮೮೫), ಪುಟ ೧೨೧

೨೬. ಅದೇ ಪುಟ ೧೨

೨೭. ವಿಶಾಂಝ್ ಪಿಂಟೋ., ಪೂರ್ವೋಕ್ತ, ಪುಟಗಳು ೪೮, ೪೯, ೫೧, ೫೨

೨೮. ಡೆನಿಸ್ ಫೆರ್ನಾಂಡಿಸ್ , ಪೂರ್ವೋಕ್ತ, ಪುಟಗಳು ೬೩- ೬೪

೨೯. ಕ್ರಿ.ಲಾ. ಫುರ್ತಾಡೊ, "ಮೂಲ್ಕಿ ಚಳುವಳಿ" ಸಿ.ಎಸ್.ಐ. ಯುನಿಟಿ ದೇವಾಲಯ ಮೂಲ್ಕಿ, ಶತಮಾನೋತ್ತರ ಸ್ವರ್ಣ ಮಹೋತ್ಸವದ ಸ್ಮರಣ ಸಂಚಿಕೆ,೨೦೦೮, ಪುಟ ೭೪

೩೦. ಡೆನಿಸ್ ಫೆರ್ನಾಂಡಿಸ್, "ಅವಿಧೇಯತೆ ಹಾಗೂ ಸಭಾ ಬಹಿಷ್ಕಾರ: ಮೂಲ್ಕಿ ಸಭೆಯ ಘಟನೆಗಳು", ಸಿ.ಎಸ್.ಐ. ಯುನಿಟಿ ದೇವಾಲಯ ಮೂಲ್ಕಿ, ಶತಮಾನೋತ್ತರ ಸ್ವರ್ಣ ಮಹೋತ್ಸವದ ಸ್ಮರಣ ಸಂಚಿಕೆ, ೨೦೦೮, ಪುಟ ೯೬

೩೧. ಕ್ರಿ.ಲಾ. ಫುರ್ತಾದೊ, ಪೂರ್ವೋಕ್ತ, ಪುಟ ೭೪

೩೨. ಡೆನಿಸ್ ಫೆರ್ನಾಂಡಿಸ್, ಪೂರ್ವೋಕ್ತ, ಪುಟಗಳು ೯೬, ೯೭

೩೩. ಕ್ರಾಂತಿ ಕೆ.ಫರಾಯಸ್, ಪೂರ್ವೋಕ್ತ, ಪುಟ ೧೧೧

೩೪. ಬಿ.ಎಂ.ಆರ್.- ೧೮೪೩ ಪುಟಗಳು ೩೨, ೩೪

೩೫. ಬಿ.ಎಂ.ಆರ್.- ೧೮೪೪ ಪುಟಗಳು ೨೪, ೨೫

೩೬. ಪಿ.ಡಬ್ಲ್ಯು.ಪಿ. , ಪೂರ್ವೋಕ್ತ, ಪುಟಗಳು ೧೧೫ - ೧೧೬

೩೭. ಸತ್ಯವೃತ-ಸಂ.ಪುಟ ೩, ಆಗಸ್ಟ್, ೧೯೨೮ ಪುಟಗಳು ೯, ೧೦

೩೮. ಬಿ.ಎಂ.ಆರ್. - ೧೮೪೪, ಪುಟಗಳು ೨೩, ೨೪

೩೯. ಡೆನಿಸ್ ಫೆರ್ನಾಂಡಿಸ್, ಪೂರ್ವೋಕ್ತ, ಪುಟ ೨೧೨

೪೦. ಅದೇ, ಪುಟ ೨೪೩

೪೧. ಬಿ.ಎಂ.ಆರ್. - ೧೮೯೧ ಪುಟ ೩೯

೪೨. ಅದೇ, ಪುಟ ೪೬

೪೩. ಪಿ.ಡಬ್ಲ್ಯು.ಪಿ. , ಪೂರ್ವೋಕ್ತ, ಪುಟಗಳು ೮೯, ೯೦

೪೪. ಬಿ.ಎಂ.ಆರ್. - ೧೮೯೧, ಪುಟ ೩೧

೪೫. ಸೂರ್ಯನಾಥ್ ಕಾಮತ್, "ಕರ್ನಾಟಕದಲ್ಲಿ ಬಾಸೆಲ್ ಮಿಶನ್ನಿನ ಸಾಧನೆ", ಕಾಸ್ಡೆಡ್, ಕರ್ನಾಟಕ ಸದರ್ನ್ ಡಯಾಸಿಸ್ ಎಜುಕೇಷನ್ ಸೊಸೈಟಿ (ರಿ) ಬೆಳ್ಳಿಹಬ್ಬದ ಸಂಚಿಕೆ (೧೯೭೮-೨೦೦೧), ಮಂಗಳೂರು, ಪುಟ ಸಂಖ್ಯೆ ಇರುವುದಿಲ್ಲ.

೪೬. ವಿಶಾಂಝ್ ಪಿಂಟೋ, ಪುಟ ೫೪

೪೭. ದ ಮ್ಯಾಂಗಲೂರ್ ಮ್ಯಾಗಝೀನ್, ಸಂಪುಟ ೨, ೧೯೦೩, ಪುಟಗಳು ೨೭೩, ೨೭೪

೪೮. ವಿಶಾಂಝ್ ಪಿಂಟೋ, ಪೂರ್ವೋಕ್ತ,ಪುಟಗಳು ೩೦, ೩೧

೪೯. ಜೆರಾಲ್ಡ್ ಪಿಂಟೋ, "ಕೊಡಿಯಾಳ್ ದಿಯೆಸಜಿಚೆಂ ಸ್ಥಾಪನ್ ಆನಿ ವಿಂಗಡ್ ಜಾಲ್ಲಿಂ ಭಾಂವ್ಡಾಂ (ಕೊಂಕಣಿ)", *ಆಮ್ಚೊ ಸಂದೇಶ್*, ಕಥೋಲಿಕ ಸಭೆ ಕೊಂಕಣಿ ಮಾಸಿಕ ಪತ್ರಿಕೆ, ಮ್ಯಾಂಗಲೂರ್ ಅಕ್ಟೋಬರ್, ೨೦೧೧, ಪುಟಗಳು ೧೧,೧೩

೫೦. ಅದೇ, ಪುಟ ೧೩

೫೧. ಅದೇ, ಪುಟ ೧೩

೫೨. ಫ್ಲೋರಿನ್ ಡಿ'ಸಿಲ್ವಾ, "ದ ಒರಿಜಿನ್ ಆಫ್ ದ ಸಿರಿಯನ್ ಕ್ರಿಶ್ಚಿಯನ್ಸ್ ಎಟ್ ಬ್ರಹ್ಮಾವರ್ ಏಂಡ್ ಇಟ್ಸ್ ಕಲ್ಚರಲ್ ಸ್ಟಡಿ" ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ, ಅಳಗಪ್ಪ ವಿಶ್ವವಿದ್ಯಾನಿಲಯ,೨೦೦೮, ಪುಟ ೧೭

೫೩. 'ವಿನಯ್ ರಜತ್ ಡಿ, "ಕಾಸ್ಟ್ ಎಮೊಂಗ್ ಕ್ರಿಶ್ಚಿಯನ್ಸ್ – ಎ ಸ್ಟಡಿ ಆಫ್ ರೋಮನ್ ಕ್ಯಾಥೋಲಿಕ್ಸ್ ಆಫ್ ಕೋಸ್ಟಲ್ ಕರ್ನಾಟಕ" *ಸಮಾಜ ಶೋಧನಾ*, ಜರ್ನಲ್ ಆಫ್ ದ ಮ್ಯಾಂಗಲೂರ್ ಸೋಶಿಯೋಲಾಜಿ ಅಸೋಸಿಯೇಷನ್, ಮ್ಯಾಂಗಲೂರ್, ೨೦೦೧, ಪುಟ ೭೩

೫೪. ಕ್ರಾಂತಿ ಕೆ. ಫರಾಯಸ್, ಪೂರ್ವೋಕ್ತ,ಪುಟ ೧೩೫

# ಅಧ್ಯಾಯ – ೭

## ಅಧ್ಯಯನ ಫಲಿತಗಳು

ಭಾರತದಂತಹ ಬಹು ಸಂಸ್ಕೃತಿ ಹಾಗೂ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಹಿಂದುಳಿದವರಿಗೆ ಶಿಕ್ಷಣವು ಒಂದು ವರದಾನವಾಗಿದೆ. ದಕ್ಷಿಣ ಕನ್ನಡ ಜಿಲ್ಲೆ ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷ್ ಆಡಳಿತದಲ್ಲಿದ್ದಾಗ, ಭಾರತದೆಲ್ಲೆಡೆ ಇದ್ದಂತೆ ಶ್ರೇಣೀಕೃತ ಜಾತಿ ವ್ಯವಸ್ಥೆ ಹಾಗೂ ಅಸ್ಪೃಶ್ಯತೆ ಇಲ್ಲಿಯೂ ಅಸ್ತಿತ್ವದಲ್ಲಿತ್ತು. ಊಳಿಗಮಾನ್ಯ ವ್ಯವಸ್ಥೆ ಹಾಗೂ ಜಾತಿ ಪದ್ಧತಿಯೊಳಗಿನ ಅಸ್ಪೃಶ್ಯತೆಯಿಂದ ಎಲ್ಲರಿಗಿಂತ ಕೊನೆಯಲ್ಲಿ ಬರುವ ಪಂಚಮರು, ಪರಿಶಿಷ್ಟ ಜಾತಿ ಮತ್ತು ಪಂಗಡದವರು, ಮೇಲ್ಜಾತಿಯವರಿಂದ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕವಾಗಿ ಶೋಷಿತರಾಗಿದ್ದರು. ಇಲ್ಲಿನ ಜನರು ವರ್ಣ ವ್ಯವಸ್ಥೆಯಲ್ಲಿರುವ ತಮ್ಮ ಕುಲ ಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಅಕ್ಷರ ಜ್ಞಾನ ತರುವಂತಹ ಶಿಕ್ಷಣ ಕೇವಲ ಬ್ರಾಹ್ಮಣರ ಸೊತ್ತಾಗಿತ್ತು. ಇನ್ನುಳಿದ ಜಾತಿಗಳ ಕುಲ ಕಸುಬುಗಳಿಗೆ ಅಕ್ಷರ ಜ್ಞಾನದ ಅವಶ್ಯಕತೆಯಿರಲಿಲ್ಲ. ಇದಲ್ಲದೆ ದಕ್ಷಿಣ ಕನ್ನಡ ಜಿಲ್ಲೆಯ ಮೂಲ ನಿವಾಸಿಗಳೆಂದು ಪರಿಗಣಿಸಲ್ಪಡುವ ಪಂಗಡಗಳಾದ ಕೊರಗ, ಜೇನು ಕುರುಬ, ಮಲೆ ಕುಡಿಯ ಹಾಗೂ ಪರಿಶಿಷ್ಟ ಜಾತಿ ಮತ್ತು ಪಂಗಡದವರು ಕೃಷಿ ಪೂರ್ವ ಹಾಗೂ ತಾಂತ್ರಿಕತೆಯ ಪ್ರೌಢಿಮೆಯಿಲ್ಲದ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕುತ್ತಿದ್ದರು. ಆದ್ದರಿಂದ ಈ ವರ್ಗದ ಜನರು ಶತಮಾನಗಳಿಂದ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದ್ದರು. ಈ ಪಂಗಡಗಳಿಗೆ ಸೇರಿದವರು ಉತ್ತಮ ಬದುಕಿಗೆ ಬೇಕಾಗಿರುವ ಸಾಧನಗಳಿಂದ ಇಂದಿಗೂ ವಂಚಿತರಾಗಿದ್ದಾರೆ, ಇದಕ್ಕೆ ಕಾರಣ ಸುಧಾರಣೆಗಳನ್ನು ಹಾಗೂ ಸಮಾನತೆಯನ್ನು ಆಯ್ಕೆ ಮಾಡುವ ಹಕ್ಕು ಅಸ್ಪೃಶ್ಯರಿಗೆ ಇಲ್ಲದಿರುವುದು. ಇಂತಹ ಶೋಚನೀಯ ಪರಿಸ್ಥಿತಿಯಲ್ಲಿ ಇದೇ ಕಾಲಕ್ಕೆ ಕೇರಳದ ಶ್ರೀ ನಾರಾಯಣ ಗುರುಗಳ 'ಒಂದೇ ಜಾತಿ, ಒಂದೇ ಮತ, ಒಂದೇ ದೇವರು' ಎಂಬ ತತ್ವ ಜಿಲ್ಲೆಯ ಬ್ರಾಹ್ಮಣೇತರ ಜಾತಿ, ಅದರಲ್ಲೂ ಬಿಲ್ಲವರನ್ನು ಪ್ರೇರೇಪಿಸಿದರೂ ಅವರಿಗಿಂತ ಹೀನಾಯವಾಗಿ ಬದುಕುತ್ತಿದ್ದ ಕೊರಗ, ಮಲೆ ಕುಡಿಯ, ಜೇನು ಕುರುಬ ಹಾಗೂ ಪರಿಶಿಷ್ಟ ಜಾತಿ ಹಾಗೂ ಪಂಗಡಗಳನ್ನು ಯಾವುದೇ ರೀತಿಯಲ್ಲಿ ತಟ್ಟಿರಲಿಲ್ಲ ಎಂಬುದು ವಿಪರ್ಯಾಸ. ಅಂದರೆ ಕಟ್ಟುನಿಟ್ಟಿನ ಜಾತಿ ವ್ಯವಸ್ಥೆ ಇದ್ದಾಗಿನಿಂದ ನಡೆದು ಬರುತ್ತಿರುವ ಅದರ ವಿರುದ್ಧದ ಬಂಡಾಯ ಹಾಗೂ ಬಂಡಾಯ ತತ್ವಗಳು ಅತ್ಯಂತ ಕೆಳಸ್ತರದ ಪಂಗಡಗಳಲ್ಲಿ ಯಾವುದೇ ರೀತಿಯ ಪ್ರಭಾವವನ್ನು ಬೀರಿರಲಿಲ್ಲ. ಆಂಧ್ರಪ್ರದೇಶದ ದಲಿತ ವಿಚಾರವಾದಿ ಕಾಂಚ ಇಳಯ್ಯನವರು ಹೇಳುವಂತೆ ವರ್ಣ ವ್ಯವಸ್ಥೆಯಲ್ಲಿ ಬ್ರಾಹ್ಮಣರನ್ನು ಹೊರತುಪಡಿಸಿ ಉಳಿದ ಜಾತಿಯ ಯುವ ಜನಾಂಗಕ್ಕೆ

ಆಧ್ಯಾತ್ಮಿಕ, ರಾಜಕೀಯ ಹಾಗೂ ಗ್ರಹಸ್ಥಾಶ್ರಮವನ್ನು ಆಯ್ಕೆ ಮಾಡುವ ಹಕ್ಕಿರಲಿಲ್ಲ. ಇಂತಹ ಪಂಗಡಗಳಿಗೆ ಸೇರಿದವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅರ್ಧಕ್ಕಿಂತ ಜಾಸ್ತಿ ಜನಸಂಖ್ಯೆಯಲ್ಲಿದ್ದಾರೆ. ಇಲ್ಲಿನ ಮೂಲ ನಿವಾಸಿಗಳ ಸಮಸ್ಯೆಗಳಿಗೆ ಮೊದಲು ಸ್ಪಂದಿಸಿದವರು ಬಾಸೆಲ್ ಮಿಶನರಿಗಳು. ಬಾಸೆಲ್ ಮಿಶನ್‌ನವರು ಬರುವ ಮೊದಲೇ ಕಥೋಲಿಕ ಪಂಥದ ಕ್ರೈಸ್ತ ಧರ್ಮವು ಜಿಲ್ಲೆಯಲ್ಲಿ ಪ್ರಚಲಿತದಲ್ಲಿದ್ದರೂ ಕೆಳವರ್ಗದ ಜನರಿಗೆ ಹೇಳಿಕೊಳ್ಳುವಂಥ ಕೆಲಸವನ್ನೇನೂ ಮಾಡಿರಲಿಲ್ಲ. ಅಲ್ಲದೆ ಈ ಪಂಥಕ್ಕೆ ಸೇರಿದವರು ತಮ್ಮ ಮೂಲಧರ್ಮದ ಶ್ರೇಣೀಕೃತ ವ್ಯವಸ್ಥೆಯನ್ನು ಕಾಪಾಡಿಕೊಂಡು ಬಂದಿದ್ದಾರೆ.

ಕ್ರೈಸ್ತ ಸಮುದಾಯದ ಸಮಗ್ರ ಬೆಳವಣಿಗೆಗೆ ಆಧುನಿಕ ಶಿಕ್ಷಣವು ಮುಖ್ಯ ಧಾತುವಾಗಿದೆ. ಆದರೆ ೧೯ನೇ ಶತಮಾನದ ಪ್ರಾರಂಭದಲ್ಲಿ ಶಿಕ್ಷಣವು ಎಲ್ಲರಿಗೂ ಲಭ್ಯವಿರಲಿಲ್ಲ. ಮಂಗಳೂರಿನಲ್ಲಿ ಯೇಸುಸಭೆಯವರ ಮಹಾವಿದ್ಯಾಲಯ ಸ್ಥಾಪನೆಯಾಗುವುದಕ್ಕಿಂತ ಮೊದಲು ಕ್ರೈಸ್ತರು ಶಿಕ್ಷಣಾವಕಾಶಗಳನ್ನು ಮಂಗಳೂರಿನ ಪ್ರಾವಿನ್ಶಿಯಲ್ ಶಾಲೆ, ಕಲ್ಲಿಕೋಟೆಯ ಪ್ರಾವಿನ್ಶಿಯಲ್ ಶಾಲೆ ಮತ್ತು ಬಾಸೆಲ್ ಮಿಶನ್ ಶಾಲೆಗಳು ಇತ್ಯಾದಿಗಳನ್ನು ಬಳಸಿಕೊಂಡಿದ್ದಾರೆ. ೧೮೮೦ರಲ್ಲಿ ಸ್ಥಾಪನೆಯಾದ ಯೇಸುಸಭೆಯವರ ಮಹಾವಿದ್ಯಾಲಯ ಶ್ರೀಮಂತರಿಗೆ ಮತ್ತು ಮಧ್ಯಮವರ್ಗಗಳಿಗೆ ಶಿಕ್ಷಣವನ್ನು ಒದಗಿಸಿದೆ. ಗ್ರಾಮೀಣ ಪ್ರದೇಶಗಳ ಕ್ರೈಸ್ತರು ನಗರದಲ್ಲಿ ಲಭ್ಯವಿರುವ ಉನ್ನತ ಶಿಕ್ಷಣದ ಲಾಭವನ್ನು ಪಡೆಯುವ ಸ್ಥಿತಿಯಲ್ಲಿರಲಿಲ್ಲ. ಜಿಲ್ಲೆಯ ಒಳಭಾಗಗಳಲ್ಲಿ ಸಾರಿಗೆ ವ್ಯವಸ್ಥೆಯ ಅನುಪಸ್ಥಿತಿಯಲ್ಲಿ ಶಾಲೆಗಳ ಅಂತರ, ದೂರದ ಶಾಲೆಗಳಿಗೆ ಮಕ್ಕಳನ್ನು ಕಳುಹಿಸಲು ಹೆದರಿಕೊಳ್ಳುವುದು, ಮನೆಯಲ್ಲಿರುವ ದೊಡ್ಡ ಸಂಖ್ಯೆಯ ಮಕ್ಕಳಿಂದ ಮನೆಗೆಲಸ ಮಾಡಿಸಿಕೊಳ್ಳುವುದು, ಶಿಕ್ಷಣದ ಅನುಕೂಲತೆಯ ಕುರಿತು ಅರಿವಿಲ್ಲದಿರುವುದು ಇತ್ಯಾದಿಗಳು ಆ ಕಾಲದ ಶಿಕ್ಷಣದ ಮಂದಗತಿಯ ಪ್ರಗತಿಗೆ ಕೆಲವು ಕಾರಣಗಳು. ಹಳ್ಳಿಗಳಲ್ಲಿ ಉನ್ನತ ಶಿಕ್ಷಣದ ಅನುಕೂಲತೆಗಳನ್ನು ಬಳಸಿಕೊಂಡವರು ಭೂಮಾಲಿಕ ವರ್ಗದವರು ಮಾತ್ರ. ಈ ಪರಿಸ್ಥಿತಿಯಲ್ಲಿ ಕ್ರೈಸ್ತ ಸಮುದಾಯವು ಎರಡು ಕವಲುಗಳಾಗಿ ವಿಭಜಿಸಲ್ಪಟ್ಟಿತು. ಅವುಗಳೆಂದರೆ ಶ್ರೀಮಂತ ಮತ್ತು ಬಡವ, ನಗರವಾಸಿಗಳು ಮತ್ತು ಗ್ರಾಮವಾಸಿಗಳು, ಸುಶಿಕ್ಷಿತರು ಮತ್ತು ಅನಕ್ಷರಸ್ಥರು, ಇಂಗ್ಲಿಷ್ ಮಾತನಾಡುವವರು ಮತ್ತು ಕೊಂಕಣಿ ಮಾತನಾಡುವವರು. ಬಡವರು ಸಾಮಾನ್ಯವಾಗಿ ಹಳ್ಳಿಯಲ್ಲಿರುತ್ತಿದ್ದರು ಮತ್ತು ಶ್ರೀಮಂತರು ಮಂಗಳೂರಿನಂತಹ ನಗರದಲ್ಲಿ ವಾಸಿಸುತ್ತಿದ್ದರು.

ಮಿಶನರಿಗಳು ನಡೆಸುತ್ತಿದ್ದ ಆಂಗ್ಲ ಮಾಧ್ಯಮದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಯೂರೋಪ್ ಹಾಗೂ ಭಾರತದ ಮೇಲ್ವರ್ಗದ ವಿದ್ಯಾರ್ಥಿಗಳಿಗೆ ಮಾತ್ರ ಶಿಕ್ಷಣ ನೀಡುವ ಮೂಲಕ, ಇತರ ವರ್ಗಗಳು ಉನ್ನತ ಶಿಕ್ಷಣ ಹಾಗೂ ಸರ್ಕಾರಿ ಉದ್ಯೋಗ ಪಡೆಯುವ ಅವಕಾಶಗಳಿಂದ ವಂಚಿತರಾದರು.

ಹತ್ತೊಂಬತ್ತನೆ ಶತಮಾನದ ಆದಿಯಲ್ಲಿ ಮೇಲ್ವರ್ಗದವರ ಯಜಮಾನಿಕೆ ಮತ್ತು ಅಸ್ಪೃಶ್ಯತೆಯ ಕದಂಬ ಬಾಹುಗಳು ಆಳವಾಗಿ ಚಾಚಿದ ಆ ಕಾಲಘಟ್ಟದಲ್ಲಿ ಎಲ್ಲಾ ಜಾತಿಯ ಮಕ್ಕಳನ್ನು ಒಂದೇ ಕಡೆ ಕೂಡಿಸಿ ಪಾಠ ಹೇಳಿಕೊಡಲು ಶೂದ್ರ ಶಿಕ್ಷಕನನ್ನು ನೇಮಿಸುವ ಮೂಲಕ ಬ್ರಾಹ್ಮಣೇತರರೂ ಅವಕಾಶ ನೀಡಿದರೆ ಬ್ರಾಹ್ಮಣರಂತೆಯೇ ಅಥವಾ ಬ್ರಾಹ್ಮಣರಿಗಿಂತಲೂ ಉತ್ತಮವಾಗಿ ವಿದ್ಯಾದಾನ ಮಾಡಬಲ್ಲರು ಎಂಬುದನ್ನು ಜಗಜ್ಜಾಹೀರುಗೊಳಿಸಿದರು. ಅಂದು ಅವರು ಪ್ರಾರಂಭಿಸಿದ ಆ ಕ್ರಾಂತಿಕಾರಿ ನಿರ್ಧಾರದಿಂದ ಇಂದು ಎಲ್ಲಾ ವರ್ಗದವರು ಶಿಕ್ಷಕ-ಶಿಕ್ಷಕಿಯರಾಗಿ ಸೇವೆ ಸಲ್ಲಿಸುವ ಮತ್ತು ಆ ಮೂಲಕ ಶಿಕ್ಷಣದ ಸಾರ್ವತ್ರೀಕರಣದಲ್ಲಿ ಪಾಲ್ಗೊಳ್ಳುವಂತಾಗಿದೆ. ಮಹಿಳೆಯರು ಶಿಕ್ಷಣಕ್ಕೆ ಅರ್ಹರಲ್ಲ ಎಂಬ ಭಾವನೆ ಸಮಾಜದಲ್ಲಿ ಸರ್ವೆ ಸಾಮಾನ್ಯವಾಗಿದ್ದ ಅಂದಿನ ದಿನಗಳಲ್ಲಿ ಮಹಿಳೆಯರಿಗಾಗಿಯೇ ಶಾಲೆಗಳನ್ನು ಆರಂಭಿಸಿ ಅವರ ಸಬಲೀಕರಣಕ್ಕೆ ನೇರವಾಗಿ ಕಾರಣರಾಗಿರುವುದು ಮಿಶನರಿಗಳ ವಿಶಿಷ್ಟ ಕೊಡುಗೆಯಾಗಿದೆ. ಅವರು ಅಂದು ಹಾಕಿಕೊಟ್ಟ ಮೇಲ್ಪಂಕ್ತಿಯಲ್ಲಿ ಮುಂದೆ ಸಾಗಿದ ಇತರ ಧಾರ್ಮಿಕರು ಮತ್ತು ದಾನಶೀಲ ಶ್ರೀಸಾಮಾನ್ಯರು ಶಾಲೆಗಳನ್ನು ತೆರೆದು ಜಿಲ್ಲೆಯು ಇಂದು ಶಿಕ್ಷಣ ಕ್ಷೇತ್ರದಲ್ಲಿ ಅಗ್ರ ಪಂಕ್ತಿಯಲ್ಲಿ ನಿಲ್ಲಲು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಕಾರಣರಾಗಿದ್ದಾರೆ. ಶಿಕ್ಷಣ ಹಾಗೂ ಕೈಗಾರಿಕೆಗಳಂತಹ ಆವಿಷ್ಕಾರಗಳಿಂದಾಗಿ ಸಮಾಜದ ಎಲ್ಲಾ ವರ್ಗಗಳ ಜನರು ತಮ್ಮ ಹಿಂದಿನ ಮಡಿವಂತಿಕೆಯನ್ನು ತೊರೆದು ಮುಕ್ತವಾಗಿ ಬೆರೆಯಲು ಅಗತ್ಯವಾದ ವಾತಾವರಣವನ್ನು ಸೃಷ್ಟಿಸುವ ಮೂಲಕ ಅಸಮಾನತೆ ಮತ್ತು ಅಸ್ಪೃಶ್ಯತೆಯಂತಹ ಪಿಡುಗುಗಳನ್ನು ನಿರ್ಮೂಲನೆ ಮಾಡುವ ಪ್ರಯತ್ನ ಮಾಡಲಾಗಿದೆ.

ಜಿಲ್ಲೆಗೆ ಕಥೋಲಿಕ ಕ್ರೈಸ್ತರು ಹದಿನಾರನೇ ಶತಮಾನದಲ್ಲಿಯೇ ಆಗಮಿಸಿದ್ದರೂ, ಧರ್ಮಪ್ರಾಂತ್ಯದ ಅಗಾಧವಾದ ವಿಸ್ತೀರ್ಣತೆಯಿಂದಾಗಿ, ಭಾಷಾ ಸಮಸ್ಯೆಯಿಂದಾಗಿ, ಧರ್ಮಗುರುಗಳ ಕೊರತೆ ಹಾಗೂ ಸಂಪರ್ಕ ಮತ್ತು ಸಾರಿಗೆ ವ್ಯವಸ್ಥೆಯ ಅಸಮರ್ಪಕ ಅಭಿವೃದ್ಧಿಯಿಂದಾಗಿ ಜನರ ಆಧ್ಯಾತ್ಮಿಕ ಅಗತ್ಯತೆಗಳನ್ನು ಪೂರೈಸುವುದೂ ಸಹ ಒಂದು ಸವಾಲಾಗಿತ್ತು. ಪರಿಸ್ಥಿತಿ ಹೀಗಿದ್ದರೂ, ಧರ್ಮಗುರುಗಳು ಸ್ವ-ಇಚ್ಛೆಯಿಂದ ತಮ್ಮ ಸಮುದಾಯದ ಮಕ್ಕಳಿಗೆ ಓದು ಬರಹ ಕಲಿಸುವ ಉದ್ದೇಶದಿಂದ ಚರ್ಚ್ ಶಾಲೆಗಳನ್ನು ಸ್ಥಾಪಿಸಿ ಪೌರಾತ್ಯ ಮಾದರಿಯ ಶಿಕ್ಷಣ ನೀಡುತ್ತಿದ್ದರು. ಸಾಮಾನ್ಯವಾಗಿ, ಕಥೋಲಿಕ ಕ್ರೈಸ್ತ ಮಕ್ಕಳು ಕೃಷಿ ಹಿನ್ನಲೆ ಇರುವ ಕುಟುಂಬಗಳಿಂದ ಬರುತ್ತಿದ್ದರಾದ್ದರಿಂದ ಅವರಿಗೆ ಲಭಿಸುತ್ತಿದ್ದ ಮೂಲ ಶಿಕ್ಷಣದಲ್ಲೇ ತೃಪ್ತಿಪಟ್ಟುಕೊಳ್ಳಬೇಕಿತ್ತು. ಅಲ್ಲದೆ, ಆ ಕಾಲದಲ್ಲಿ ಆಧುನಿಕ ಶಿಕ್ಷಣದ ಪರಿಕಲ್ಪನೆ ಯಾರೊಬ್ಬರಲ್ಲಿಯೂ ಇರಲಿಲ್ಲ. ಆದರೆ, ಅಂದಿನ ದಿನಗಳಲ್ಲಿ ಶ್ರೀಸಾಮಾನ್ಯನಿಗೆ ಅತ್ಯಗತ್ಯವಿದ್ದ ಮೂಲಭೂತ ಶಿಕ್ಷಣ, ಧರ್ಮಗುರುಗಳ ಮುಖಾಂತರ ಲಭಿಸಿರುವುದಂತೂ ಸತ್ಯ ಸಂಗತಿಯಾಗಿದೆ.

ಭಾರತದಲ್ಲಿ ಪಾಶ್ಚಿಮಾತ್ಯ ಶಿಕ್ಷಣ ಜಾರಿಗೊಂಡ ತತ್‌ಕ್ಷಣ, ಮಂಗಳೂರಿನಲ್ಲಿ ಬಾಸೆಲ್ ಮಿಶನರಿಗಳು, ಪ್ರೊಟೆಸ್ಟೆಂಟ್ ಪಂಥವನ್ನು ಸ್ಥಾಪಿಸಲು ಹಾಗೂ ಜನರ ಅಜ್ಞಾನ ಮತ್ತು ಮೂಢನಂಬಿಕೆಗಳನ್ನು ದೂರವಿರಿಸಲು ಶಾಲೆಗಳನ್ನು ಮೊದಲ ಬಾರಿಗೆ ದೇಶೀ ಭಾಷೆಯಲ್ಲಿ ಆರಂಭಿಸಿದರು. ಇದರಿಂದ ಉತ್ತೇಜನಗೊಂಡ ಇತರ ಸಮುದಾಯಗಳೂ ಒಂದಾದ ಮೇಲೆ ಇನ್ನೊಂದು ಎಂಬಂತೆ ಶಾಲೆಗಳನ್ನು ಆರಂಭಿಸಿದರು. ಮುಖ್ಯವಾಗಿ ಕಥೋಲಿಕ ಧರ್ಮಗುರುಗಳು ಮತ್ತು ಧರ್ಮಭಗಿನಿಯರು ಇಂತಹ ಸೇವೆಯಲ್ಲಿ ಮುಂಚೂಣಿಯಲ್ಲಿದ್ದರು. ಪರಿಣಾಮವಾಗಿ ಬೆಂಗಳೂರು ನಗರ ಹೊರತುಪಡಿಸಿ, ಮಂಗಳೂರು ಅತ್ಯಂತ ಹೆಚ್ಚು ಶಿಕ್ಷಣ ಸಂಸ್ಥೆಗಳನ್ನು ಹೊಂದಿರುವ ನಗರ ಎಂಬ ಗೌರವಕ್ಕೆ ಪಾತ್ರವಾಯಿತು. ಅಂತೆಯೇ, ಕರ್ನಾಟಕ ರಾಜ್ಯದಲ್ಲಿಯೇ ಅತ್ಯಂತ ಹೆಚ್ಚು ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿರುವವರ ಸಾಲಿನಲ್ಲಿ ಮಂಗಳೂರಿನ ಕಥೋಲಿಕ ಶಿಕ್ಷಣ ಮಂಡಳಿಗೆ ಅಗ್ರಸ್ಥಾನ ದೊರೆತಿದೆ. ಬಾಸೆಲ್ ಮಿಶನ್ ಪ್ರಾರಂಭದಿಂದಲೇ ಕನ್ನಡ ಮಾಧ್ಯಮದ ಪ್ರಾಥಮಿಕ ಶಾಲೆಗಳ ಸ್ಥಾಪನೆಗೆ ಆಸಕ್ತಿ ತೋರಿದರೆ, ಕಥೋಲಿಕರು ಇಂಗ್ಲೀಷ್ ಮಾಧ್ಯಮ ಪ್ರಾಥಮಿಕ ಮತ್ತು ಉನ್ನತ ಶಿಕ್ಷಣದ ಸಂಸ್ಥೆಗಳ ಸ್ಥಾಪನೆಗೆ ಹೆಚ್ಚು ಒಲವು ತೋರಿದರು. ಕಥೋಲಿಕರ ಇಂಗ್ಲಿಷ್ ಭಾಷೆಯ ವ್ಯಾಮೋಹದಿಂದಾಗಿ ನಗರ ಕೇಂದ್ರಿತವಾಗಿದ್ದ ಶಾಲಾ-ಕಾಲೇಜುಗಳಲ್ಲಿ ವಿದ್ಯಾಭ್ಯಾಸ ನಡೆಸಿದ ಕೆಲವರಿಗೆ ಬ್ರಿಟಿಷ್ ಆಡಳಿತದಲ್ಲಿ ಉದ್ಯೋಗ ಪಡೆದುಕೊಳ್ಳಲು ಅನುಕೂಲವಾಯಿತು. ಇಂತಹ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸ ನಡೆಸಿದ ಕೆಲವರು ಪಾಶ್ಚಿಮಾತ್ಯ ಸಂಸ್ಕೃತಿಯ ಕಡೆಗೆ ಆಕರ್ಷಿತರಾಗಿ ಅನಕ್ಷರಸ್ಥ ಬಡವರು ಮತ್ತು ಇತರ ಸಮುದಾಯಗಳನ್ನು ತಾತ್ಸಾರ ಭಾವನೆಯಿಂದ ಕಾಣತೊಡಗಿದರು. ಇದೆಲ್ಲದಕ್ಕಿಂತ ಮುಖ್ಯವಾಗಿ ನಗರ ಮತ್ತು ಗ್ರಾಮೀಣ ಪ್ರದೇಶಗಳ ನಡುವೆ ಕಂದಕ ಏರ್ಪಟ್ಟಿತು. ಅಲ್ಲದೆ ನಗರದಲ್ಲಿ ನೆಲೆಸಿ ಅಲ್ಲಿಯೇ ತಮ್ಮ ಜೀವನ ನಡೆಸುತ್ತಿದ್ದ ಯುವ ಜನತೆ ಗ್ರಾಮೀಣ ಜನರ ಬಗ್ಗೆ ತುಚ್ಛ ಭಾವನೆ ಮೂಡಲು ಅವರ ಅತಿಯಾದ ಇಂಗ್ಲಿಷ್ ವ್ಯಾಮೋಹ ಪರೋಕ್ಷವಾಗಿ ಕಾರಣವಾಯಿತು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದ ಬಳಿದ ಭಾಷಾವಾರು ರಾಜ್ಯಗಳ ಸ್ಥಾಪನೆಯಾದಾಗ ಕರ್ನಾಟಕ ಸರ್ಕಾರ ಪ್ರಾಥಮಿಕ ಶಿಕ್ಷಣವನ್ನು ಮಾತೃ ಭಾಷೆ ಅಂದರೆ ಕನ್ನಡದಲ್ಲಿಯೇ ನೀಡಬೇಕೆಂಬ ಆದೇಶ ಹೊರಡಿಸಿತು. ಆದರೆ ದಕ್ಷಿಣ ಕನ್ನಡ ಜಿಲ್ಲೆಯ ಕಥೋಲಿಕ ಕ್ರೈಸ್ತರ ಮಾತೃಭಾಷೆ ಕೊಂಕಣಿಯಾಗಿದ್ದು, ಅವರಿಗೆ ಇಂಗ್ಲಿಷ್ ಮಾಧ್ಯಮದಲ್ಲಿಯೇ ಪ್ರಾಥಮಿಕ ಶಾಲೆಗಳನ್ನು ನಡೆಸಲು ಅವಕಾಶ ನೀಡಬೇಕೆಂಬ ಬೇಡಿಕೆಯನ್ನು ಮುಂದಿಟ್ಟು ನಿರಂತರವಾಗಿ ಸರ್ಕಾರದೊಂದಿಗೆ ಹೋರಾಟ ನಡೆಸಿದ್ದು ಕಥೋಲಿಕರ ಇಂಗ್ಲಿಷ್ ವ್ಯಾಮೋಹಕ್ಕೆ ಕೈಗನ್ನಡಿಯಂತಿದೆ. ನಗರ ಪ್ರದೇಶಗಳಲ್ಲಿ ನೆಲೆಸಿರುವವರ ಆಂಗ್ಲ ವ್ಯಾಮೋಹ ಈಗಲೂ ಅದೇ ರೀತಿಯಲ್ಲಿ ಜೀವಂತವಾಗಿದೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿರುವ ಕಥೋಲಿಕರು ಇಂತಹ ಯಾವುದೇ ವ್ಯಾಮೋಹಗಳಿಗೆ

ಬಲಿಯಾಗದೆ ಯಾವುದೇ ಗಮನಾರ್ಹವಾದ ವಿಭಿನ್ನತೆಗಳನ್ನು ತೋರ್ಪಡಿಸಿದೆ ಸಹಜವಾದ ಸಹಬಾಳ್ವೆಯ ಜೀವನವನ್ನು ನಡೆಸಿಕೊಂಡು ಬರುತ್ತಿದ್ದಾರೆ.

ಬಾಸೆಲ್ ಮಿಶನ್ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಪ್ರಥಮ ಬಾರಿಗೆ ಕನ್ನಡ ಮಾಧ್ಯಮ ಪ್ರಾಥಮಿಕ ಶಾಲೆಯನ್ನು ಆರಂಭಿಸಿ ಶಿಕ್ಷಣ ಕ್ರಾಂತಿಗೆ ಕಾರಣರಾದರೂ, ಉನ್ನತ ಶಿಕ್ಷಣಕ್ಕೆ ಸಾಕಷ್ಟು ಉತ್ತೇಜನ ನೀಡಲಿಲ್ಲ ಎಂಬ ಟೀಕೆಗಳಿವೆ. ಮಿಶನರಿಗಳು ಶಿಕ್ಷಣವನ್ನು ಪ್ರಾರಂಭಿಸಿದ ಉದ್ದೇಶ ಕ್ರೈಸ್ತ ಮತ ಸ್ವೀಕರಿಸಿದವರಿಗೆ ಸುವಾರ್ತೆಯನ್ನು ಓದಲು ಮತ್ತು ಬರೆಯಲು ಕಲಿಸುವುದಾಗಿತ್ತು. ಆದ್ದುದರಿಂದ ಶಿಕ್ಷಕರು ಮತ್ತು ಸೆಮಿನರಿ ಸೇರ ಬಯಸುವವರನ್ನು ಹೊರತು ಪಡಿಸಿ ಇತರರಿಗೆ ಉನ್ನತ ಶಿಕ್ಷಣ ಕೊಡುವ ಯಾವುದೇ ಯೋಜನೆ ಅವರಲ್ಲಿರಲಿಲ್ಲ. ಮಾತ್ರವಲ್ಲ, ಸ್ಥಳೀಯ ಕ್ರೈಸ್ತರಿಗೆ ತಾವೇ ಉದ್ಯೋಗದಾತರಾದ್ದುದರಿಂದ ಅವರಿಗೆ ಹೆಚ್ಚಿನ ಶಿಕ್ಷಣದ ಅಗತ್ಯ ಇದೆ ಎಂಬ ಯಾವುದೇ ಗ್ರಹಿಕೆ ಮಿಶನರಿಗಳಲ್ಲಿರಲಿಲ್ಲ. ಬಾಸೆಲ್ ಮಿಶನ್‌ಗೆ ಸೇರಿದ ಸ್ಥಳೀಯ ಕ್ರೈಸ್ತರು, ತಮ್ಮ ೬ರಿಂದ ೧೪ ವಯೋಮಿತಿಯ ಮಕ್ಕಳನ್ನು ಕಡ್ಡಾಯವಾಗಿ ಶಾಲೆಗೆ ಕಳುಹಿಸಲೇ ಬೇಕೆಂಬ ನಿಯಮವನ್ನು ಜಾರಿಗೆ ತಂದದ್ದು ಧಾರ್ಮಿಕ ಉದ್ದೇಶವನ್ನು ಹೊಂದಿದ್ದರೂ, ಪ್ರತಿಯೊಬ್ಬ ಕ್ರೈಸ್ತ ಅಕ್ಷರಜ್ಞಾನವನ್ನು ಪಡೆಯಲು ದಾರಿ ಮಾಡಿಕೊಟ್ಟಿತು. ಹೀಗೆ, ಬಾಸೆಲ್ ಮಿಶನ್ ನಿಯಮಿತ ಪರಿಮಿತಿಯಲ್ಲಿ ತಮ್ಮ ಸಮುದಾಯದವರಿಗಾಗಿ ಪ್ರಾರಂಭಿಸಿದ ಆ ನಿಯಮ, ಸ್ವಾತಂತ್ರ್ಯದ ಅನಂತರ ಭಾರತದ ಸಂವಿಧಾನದಲ್ಲಿ ೪೫ನೇ ಕಲಂನ ಪ್ರಕಾರ ೧೪ವರ್ಷಗಳ ವರೆಗಿನ ಎಲ್ಲಾ ಮಕ್ಕಳಿಗೆ ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣ ನೀತಿ(ಸರ್ವ ಶಿಕ್ಷಣ ಅಭಿಯಾನ)ಯ ಜಾರಿಗೆ ಅಡಿಗಲ್ಲಾಯಿತು ಎಂಬುದು ನನ್ನ ಅನಿಸಿಕೆಯಾಗಿದೆ. ಅಲ್ಲದೆ, ೬ ರಿಂದ ೧೪ ವಯೋಮಿತಿಯ ಮಕ್ಕಳು ಕಡ್ಡಾಯವಾಗಿ ಪ್ರಾಥಮಿಕ ಶಿಕ್ಷಣ ಪಡೆಯಬೇಕೆಂಬ ಮಿಶನರಿಗಳ ನಿಯಮ, ಸ್ಥಳೀಯ ಕ್ರೈಸ್ತರನ್ನು ಬಾಲ ಕಾರ್ಮಿಕರಾಗಿ ದುಡಿಸಿಕೊಳ್ಳುವುದನ್ನು ತಪ್ಪಿಸುವುದು ಮತ್ತು ತಮ್ಮ ಪ್ರತಿಯೊಬ್ಬ ಮಿಶನ್ ಕ್ರೈಸ್ತನನ್ನು ಅಜ್ಞಾನದ ಅಂಧಕಾರದಿಂದ ಮುಕ್ತಗೊಳಿಸಿ ಮೇಲ್ವರ್ಗದವರ ಶೋಷಣೆಯಿಂದ ತಪ್ಪಿಸುವ ಪ್ರಾಮಾಣಿಕ ಪ್ರಯತ್ನವಾಗಿದೆ.

ಕಥೋಲಿಕ ಕ್ರೈಸ್ತ ಸಮಾಜ ಪುರುಷ ಪ್ರಧಾನ ಪದ್ಧತಿಯನ್ನು ರೂಢಿಸಿಕೊಂಡು ಬಂದಿದ್ದರೂ, ಜಿಲ್ಲೆಯ ಇತರ ಸಮುದಾಯದವರೊಂದಿಗೆ ಹೋಲಿಸಿದಾಗ ೧೯ನೇ ಶತಮಾನದ ಉತ್ತರಾರ್ಧದ ಬಳಿಕ ಮಹಿಳೆಗೆ ಹೆಚ್ಚಿನ ಸ್ವಾತಂತ್ರ್ಯ ನೀಡುತ್ತಾ ಬಂದಿರುವುದು ಕಂಡು ಬರುತ್ತದೆ. ಇದರ ಫಲವಾಗಿ ಧರ್ಮಭಗಿನಿಯರು ಸ್ವ-ಸಾಮರ್ಥ್ಯದಿಂದ ಕಾನ್ವೆಂಟ್‌ಗಳನ್ನು, ಶಾಲೆಗಳನ್ನು, ಆಸ್ಪತ್ರೆಗಳನ್ನು, ಅನಾಥಾಶ್ರಮಗಳನ್ನು, ವೃತ್ತಿ ಕೌಶಲ್ಯ ತರಬೇತಿ ಶಾಲೆಗಳನ್ನು ಸ್ಥಾಪಿಸಲು ಸಾಧ್ಯವಾಗಿದೆ. ಮಹಿಳೆಯರ ಶಿಕ್ಷಣಕ್ಕೆ ಐರೋಪ್ಯದ ಮಿಶನರಿಗಳಿಂದ ಹಾಗೂ ಸಂಪ್ರದಾಯವಾದಿಗಳಿಂದ ಹೆಚ್ಚು ಪ್ರೋತ್ಸಾಹ

ದೊರೆಯದಿದ್ದರೂ ಕೆಲವು ಉದಾರವಾದಿ ಚಿಂತಕರು ಅವರಿಗೆ ಆಸರೆಯಾಗಿ ನಿಂತು ಅವರ ಕಾರ್ಯಗಳನ್ನು ಹಗುರಗೊಳಿಸಿದರು. ಹೀಗೆ, ಜಿಲ್ಲೆಯಲ್ಲಿ ಮಹಿಳೆಯರಿಗೆ ಕಾಲೇಜು ಮೆಟ್ಟಿಲು ಏರುವ ಅವಕಾಶವನ್ನು ೧೯೦೨ರಲ್ಲಿ ಮೊದಲ ಬಾರಿಗೆ ಕಲ್ಪಿಸಲಾಗಿದೆ. ಆ ಬಳಿಕ ಮಹಿಳೆಯರೇ ಆಸಕ್ತಿ ವಹಿಸಿ, ಕಾಲೇಜುಗಳನ್ನು ನಿರ್ಮಿಸಿ, ಮಹಿಳೆಯರಿಗೆ ಶಿಕ್ಷಣ ಭಾಗ್ಯವನ್ನು ನೀಡಿದರು. **ಅಳಿಯ ಸಂತಾನಕಟ್ಟು** ಅನುಸರಿಸುವ ದಕ್ಷಿಣ ಕನ್ನಡ ಜಿಲ್ಲೆಯ ಬಹುಸಂಖ್ಯಾತ ಸಮುದಾಯಗಳಲ್ಲಿ ಇಂದು ಮಹಿಳೆಯರು ಪ್ರಧಾನ ಭೂಮಿಕೆಯನ್ನು ನಿಭಾಯಿಸುತ್ತಿದ್ದರಾದರೆ ಅದಕ್ಕೆ ಧಾರ್ಮಿಕರು ಅಂದು ತೆಗೆದುಕೊಂಡ ದಿಟ್ಟ ನಿರ್ಧಾರಗಳೇ ಕಾರಣವಾಗಿವೆ ಎಂಬುದು ಕಟು ಸತ್ಯವಾಗಿದೆ.

೧೮೪೧ರಲ್ಲಿ ರೆವೆ. ವೈಗಲ್ ಎಂಬವರು ಬಾಸೆಲ್ ಮಿಶನ್‌ನ ಮಹತ್ವದ ಮುದ್ರಣ ಉದ್ಯಮ ಆರಂಭಿಸಿದರು. ಮುದ್ರಣ ಕಾರ್ಯ ಕೇವಲ ಕ್ರೈಸ್ತ ಸಾಹಿತ್ಯಕ್ಕೇ ಮೀಸಲಾಗಿರದೆ ಇತರ ಕೃತಿಗಳಿಗೂ ಅನುಕೂಲ ಒದಗಿಸಿತು. ಮುದ್ರಣದಂತೆಯೇ ಬೈಂಡಿಂಗ್ ಕೆಲಸವೂ ತುಂಬಾ ಚೊಕ್ಕವಾಗಿತ್ತು ಮತ್ತು ಇದನ್ನು ನೋಡಿಕೊಳ್ಳುತ್ತಿದ್ದವನು ಲೂಕ್ ಜೋಸುವಾ. ಅವನು ಜಿಲ್ಲೆಯ ಅನೇಕ ಜನರಿಗೆ ಬೈಂಡಿಂಗ್ ತರಬೇತಿಯನ್ನು ನೀಡಿ ಅವರ ಮುಂದಿನ ಜೀವನಕ್ಕೆ ಒಂದು ದಾರಿಯನ್ನು ತೋರಿಸಿಕೊಟ್ಟನು. ಬಾಸೆಲ್ ಮಿಶನ್ ಪ್ರೆಸ್‌ನಲ್ಲಿ ಮುದ್ರಿಸಲು ಇಷ್ಟ ಪಡದ ಕಥೋಲಿಕರು ಕೊಡಿಯಾಲ್‌ಬೈಲ್ ಪ್ರೆಸ್ಸನ್ನು ೧೮೮೨ರಲ್ಲಿ ಪ್ರಾರಂಭಿಸಿ, ಜಿಲ್ಲೆಯಲ್ಲಿ ಬಾಸೆಲ್ ಮಿಶನ್ ಪ್ರೆಸ್ಸಿನ ಏಕಸ್ವಾಮ್ಯಕ್ಕೆ ಕಡಿವಾಣ ಹಾಕುವ ಪ್ರಯತ್ನ ಮಾಡಿದರು. ಅಲ್ಲದೆ, ಇತರ ಹಲವಾರು ಮುದ್ರಣಾಲಯಗಳು ಜಿಲ್ಲೆಯಲ್ಲಿ ಹುಟ್ಟಿಕೊಳ್ಳಲು ಸಂದರ್ಭ ಸೃಷ್ಟಿಸಿದರು. ಏಕೆಂದರೆ ಅದುವರೆಗೆ ಬಾಸೆಲ್ ಮಿಶನ್ ಪ್ರೆಸ್ ಜಿಲ್ಲೆಯ ಪ್ರಶ್ನಾತೀತ ಮುದ್ರಣಾಲಯವಾಗಿ ನಾಲ್ಕು ದಶಕಗಳಿಗಿಂತಲೂ ಹೆಚ್ಚು ಕಾಲ ತನ್ನ ಪಾರಮ್ಯವನ್ನು ಮೆರೆದಿತ್ತು. ವಿದ್ಯೆಯಲ್ಲಿ ಮುಂದುವರಿಯಲಾರದ ವಿದ್ಯಾರ್ಥಿನಿಯರಿಗೆ ಜೀವನೋಪಾಯವನ್ನು ಕಲ್ಪಿಸಿಕೊಡಲು, ಕಸೂತಿ ಕೆಲಸದ ಶಾಖೆಯೊಂದನ್ನು ತೆರೆದು, ಅಲ್ಲಿ ಸುಂದರವಾದ ಎಂಬ್ರೊಯಿಡರಿ ವೃತ್ತಿಯನ್ನು , ಹಸ್ತ ಪಾವಡ, ಪಾಯಿಜಾಮೆ, ಕಾಲುಚೀಲ, ಮೇಲಂಗಿ ಇತ್ಯಾದಿಗಳನ್ನು ತಯಾರಿಸಲು ಕಲಿಸಿಕೊಟ್ಟರು. ಈಗಲೂ ಹಲವು ತರುಣಿಯರು ಈ ಕಸೂತಿ ಕೆಲಸದಿಂದಲೇ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ.

ಭಾರತದಲ್ಲಿ ಪ್ರಚಲಿತ ನಾಲ್ಕು ವರ್ಗಗಳೊಂದಿಗೆ, ತಮ್ಮ ಹೊಸ ಶಿಕ್ಷಣ ವ್ಯವಸ್ಥೆಯ ಮೂಲಕ ಪ್ರಭಾವಶಾಲಿ ಮಧ್ಯಮ ವರ್ಗದ ಹುಟ್ಟಿಗೂ ಪರೋಕ್ಷವಾಗಿ ಕ್ರೈಸ್ತ ಧಾರ್ಮಿಕರು ಮೂಲ ಕಾರಣರಾದರು. ಅವರ ನೇತೃತ್ವದಲ್ಲಿ ಭಾರತದಲ್ಲಿ ನಡೆದ ಸಮಾಜೋ- ಧಾರ್ಮಿಕ ಚಳುವಳಿಗಳು ಜನರಲ್ಲಿ ಭಾರತದ ಶ್ರೀಮಂತ ಪರಂಪರೆಯ ಬಗ್ಗೆ ಅರಿವು ಹಾಗೂ ದೇಶಭಕ್ತಿಯನ್ನು ಮೂಡಿಸಿತು. ಆದರೆ, ಭಾಷೆ, ಧರ್ಮ, ಸಂಸ್ಕೃತಿ, ಸಂಪ್ರದಾಯದ ಅತಿಯಾದ ವೈಭವೀಕರಣ ಇತರ ಸಂಸ್ಕೃತಿಗಳನ್ನು

ಕೀಳಾಗಿ ನೋಡುವಂತೆ ಮಾಡಿ ಕೋಮುವಾದದ ಬೆಳವಣಿಗೆಗೂ ಕಾರಣವಾಗಿದೆ. ಭಾರತದಲ್ಲಿ ಮಧ್ಯಮವರ್ಗದ ಉದಯ ಸಮಾಜದಲ್ಲಿ ಹೊಸ ಸಂಚಲನ ಮೂಡಿಸಿತು. ಮಧ್ಯಮವರ್ಗ ಆರ್ಥಿಕವಾಗಿ ಸದೃಢ ಸ್ಥಿತಿಯಲ್ಲಿದ್ದರಿಂದ ಇಂಗ್ಲಿಷ್ ಶಿಕ್ಷಣದ ಕಡೆಗೆ ಒಲವು ತೋರಿತು. ಹೀಗೆ , ಆಂಗ್ಲ ಶಿಕ್ಷಣ ಪಡೆಯುವ ಸಮಯದಲ್ಲಿ ಐರೋಪ್ಯ ರಾಷ್ಟ್ರಗಳಲ್ಲಿ ಇದ್ದಂತಹ ಸ್ವಾತಂತ್ರ್ಯ, ಸಮಾನತೆ, ಪ್ರಜಾಪ್ರಭುತ್ವ, ಸಂವಿಧಾನ ಮುಂತಾದವುಗಳು ಅವರನ್ನು ಹೆಚ್ಚು ಹೆಚ್ಚು ಆಕರ್ಷಿಸಿತ್ತು ಮಾತ್ರವಲ್ಲ ತಾವೂ ಸಹ ಅದನ್ನು ಪಡೆಯಲೇಬೇಕೆಂಬ ದೃಢ ಸಂಕಲ್ಪಕ್ಕೆ ಬರಲು ನೆರವಾಯಿತು. ಈ ರೀತಿಯಲ್ಲಿ, ಪಾಶ್ಚಿಮಾತ್ಯ ಶಿಕ್ಷಣ ಪಡೆದ ಮಧ್ಯಮವರ್ಗದವರ ಸಾರಥ್ಯದಲ್ಲಿ ಭಾರತದ ಸ್ವಾತಂತ್ರ್ಯ ಸಂಗ್ರಾಮ ಆರಂಭವಾಗಿ, ಹಲವರ ತ್ಯಾಗ, ಬಲಿದಾನದ ಫಲವಾಗಿ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿತು. ಭಾರತವನ್ನು ಪರಕೀಯರ ಆಳ್ವಿಕೆಯಿಂದ ಬಂಧಮುಕ್ತಗೊಳಿಸಿದರೂ, ಶ್ರೇಣೀಕೃತ ನಮ್ಮ ಸಮಾಜದಲ್ಲಿ, ದಲಿತರ, ಪಂಚಮರ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಶೋಷಣೆ ಅಭಾದಿತವಾಗಿ ನಡೆಯುತ್ತಿರುವುದು ಶೋಚನೀಯ ಸಂಗತಿಯಾಗಿದೆ.

ಜಿಲ್ಲೆಯ ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಕ್ರೈಸ್ತ ಮಿಶನರಿ ಸಂಸ್ಥೆಗಳ ಪಾತ್ರ ಶಿಕ್ಷಣಕ್ಕೆ ಪೂರಕವಾಗಿ ನೀಡಲಾಗುತ್ತಿರುವ ಸೌಲಭ್ಯಗಳು, ಶಿಕ್ಷಕರ ನೇಮಕಾತಿ, ಕ್ರೈಸ್ತ ಸಂಸ್ಥೆಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಗುಣಮಟ್ಟ, ಅಲ್ಲಲ್ಲಿ ಅವರು ರೂಢಿಸಿಕೊಳ್ಳುತ್ತಿರುವ ಜೀವನ ಮೌಲ್ಯಗಳು, ಪಡೆಯುವ ಫಲಿತಾಂಶ ಮತ್ತು ಅದರಿಂದಾಗಿ ಮುಂದಿನ ದಿನಗಳಲ್ಲಿ ಆ ವಿದ್ಯಾರ್ಥಿಗಳು ಕೃಷಿ, ಕೈಗಾರಿಕೆ, ಖಾಸಗಿ ಕಂಪೆನಿ ಮತ್ತು ಸರಕಾರಿ ಉದ್ಯೋಗವನ್ನು ಪಡೆಯುವ ಅವಕಾಶಗಳ ಬಗ್ಗೆ ಈ ಸಂಶೋಧನಾ ಕಾರ್ಯದ ಭಾಗವಾಗಿ ಒಂದು ಕ್ಷೇತ್ರ ಕಾರ್ಯವನ್ನು ನಡೆಸಲಾಗಿತ್ತು. ಅದರಲ್ಲಿ ಮುಖ್ಯವಾಗಿ, ಕ್ರೈಸ್ತ ಸಂಸ್ಥೆಗಳ ಆಡಳಿತವರ್ಗ ಮತ್ತು ಆ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ಶಿಕ್ಷಕರನ್ನು ಮತ್ತು ಸರಕಾರಿ ಶಿಕ್ಷಣ ಸಂಸ್ಥೆಗಳ ಮುಖ್ಯಸ್ಥರನ್ನು ಮತ್ತು ಶಿಕ್ಷಕರನ್ನು ಸಂಪರ್ಕಿಸಿ ಅವರಿಂದ ಅಗತ್ಯದ ಮಾಹಿತಿ ಸಂಗ್ರಹಿಸಲಾಗಿತ್ತು. ಅವರಲ್ಲಿ ೧೦೦%ದಷ್ಟು ಜನರು, ಕ್ರೈಸ್ತ ಶಿಕ್ಷಣ ಸಂಸ್ಥೆಗಳು ಜ್ಞಾನ ಮತ್ತು ಸಾಮಾಜಿಕ ಮತ್ತು ಶೈಕ್ಷಣಿಕ ತಿಳುವಳಿಕೆಯನ್ನು ನೀಡುವ ಮತ್ತು ಸಮಾಜಮುಖಿ ಕೆಲಸಗಳು ಆಗುತ್ತಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಸಂಸ್ಥೆಗಳ ಪರಿಸರ, ಆಟದ ಮೈದಾನ, ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ಕುಡಿಯುವ ನೀರಿನ ಸೌಲಭ್ಯ, ಕಾರ್ಯಕ್ರಮಗಳು, ಕಲಿಯುವಿಕೆ, ಕಂಪ್ಯೂಟರ್ ವ್ಯವಸ್ಥೆ, ಮೌಲ್ಯಮಾಪನ, ಶಿಸ್ತು, ಕಲಿಕೆಯ ವಿಧಾನ, ಪಠ್ಯೇತರ ಚಟುವಟಿಕೆಗಳು, ಕ್ರೀಡೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ನೀಡುತ್ತಿರುವ ಪ್ರೋತ್ಸಾಹ ಬಹಳಷ್ಟು ಉತ್ತಮವಿದೆ ಎಂದು ೯೦%ದಷ್ಟು ಜನರು ಉತ್ತರಿಸಿದ್ದರೆ, ಅದು ಅತ್ಯುತ್ತಮವೆಂದು ೧೦%ದಷ್ಟು ಜನರು ಅಭಿಪ್ರಾಯಪಟ್ಟಿದ್ದಾರೆ. ಇನ್ನು ಕ್ರೈಸ್ತ ಮಿಶನರಿ ಸಂಸ್ಥೆಗಳಡಿಯಲ್ಲಿರುವ ಶಿಕ್ಷಣ ವ್ಯವಸ್ಥೆ ಮತ್ತು ಅಲ್ಲಿ ನೀಡಲಾಗುತ್ತಿರುವ ಶಿಕ್ಷಣದ ಗುಣಮಟ್ಟದ ಬಗ್ಗೆ

ಸರಕಾರಿ ಶಿಕ್ಷಣ ಸಂಸ್ಥೆಗಳ ಶಿಕ್ಷಕರ ಅಭಿಪ್ರಾಯ ಸಂಗ್ರಹಿಸಿದಾಗ, ಮಾಹಿತಿ ನೀಡಿದ ಶಿಕ್ಷಕರಲ್ಲಿ ೭೫%ದಷ್ಟು ಜನರು, ಕ್ರೈಸ್ತ ಶಿಕ್ಷಣ ಸಂಸ್ಥೆಗಳಲ್ಲಿನ ಶಿಕ್ಷಣ ವ್ಯವಸ್ಥೆ ಅತ್ಯುತ್ತಮವಾಗಿದೆ ಎಂದರೆ, ೨೫%ದಷ್ಟು ಉತ್ತಮವಾಗಿದೆ ಎಂಬ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಅಲ್ಲದೇ, ಸರಕಾರಿ ಶಾಲೆಗಳು, ಕ್ರೈಸ್ತ ಶಿಕ್ಷಣ ಸಂಸ್ಥೆಗಳಿಗಿಂತ ಸೌಲಭ್ಯ, ಶಿಕ್ಷಣದ ಗುಣಮಟ್ಟ, ಕಲಿಕೆ, ಫಲಿತಾಂಶ ಎಲ್ಲದರಲ್ಲೂ ಬಹಳಷ್ಟು ಹಿಂದುಳಿದಿದೆ ಎಂದು ಪ್ರತಿಕ್ರಿಯಿಸಿದ್ದಾರೆ. ಇದಲ್ಲದೇ, ಕ್ರೈಸ್ತ ಶಿಕ್ಷಣ ಸಂಸ್ಥೆಗಳು ಜಿಲ್ಲೆಯ ಸಾಮಾಜಿಕ ಜನಜೀವನ ಕೃಷಿ, ಕೈಗಾರಿಕೆ, ಉದ್ಯಮ ಮತ್ತು ವೈದ್ಯಕೀಯ ಕ್ಷೇತ್ರದ ಮೇಲೂ ಗುರುತಿಸಬಹುದಾದ ಪರಿಣಾಮ ಬೀರಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ೧೯ನೇ ಶತಮಾನದ ಆದಿಭಾಗದಿಂದ ಈ ತನಕ ಜಿಲ್ಲೆಯ ಶಿಕ್ಷಣ ವ್ಯವಸ್ಥೆಗೆ ಭದ್ರ ಅಡಿಪಾಯವನ್ನು ಹಾಕಿ ಅದರ ಮೇಲೆ ಸಾರ್ವತ್ರಿಕ ಮೆಚ್ಚುಗೆಯನ್ನು ಗಳಿಸಿರುವ ಜಿಲ್ಲೆಯ ಕನಸಿನ 'ಶಿಕ್ಷಣ ಸೌಧ'ವನ್ನು ನಿರ್ಮಿಸಿರುವ ಕ್ರೈಸ್ತ ಮಿಶನರಿ ಸಂಸ್ಥೆಗಳ ಕಡೆಗೆ ಸ್ಥಳೀಯ ಜನರ ಭಾವನೆಗಳೇನು ಎಂಬುದನ್ನು ಇದು ವ್ಯಕ್ತಪಡಿಸುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಭಾಗಗಳು ಮಲೆನಾಡು ಪ್ರದೇಶಕ್ಕೆ ಸೇರಿರುವುದರಿಂದ ಇಲ್ಲಿ ಒಳ್ಳೆಯ ಮಳೆಯಾಗುತ್ತದೆ. ಮಾತ್ರವಲ್ಲದೆ ಮಳೆಗಾಲದಲ್ಲಿ ನೀರು ಅಲ್ಲಲ್ಲಿ ಶೇಖರಣೆಯಾಗಿ ರೋಗ-ರುಜಿನಗಳು ಕಾಣಿಸಿಕೊಳ್ಳುತ್ತವೆ. ಸೂಕ್ತ ವೈದ್ಯಕೀಯ ಸೌಲಭ್ಯಗಳಿಲ್ಲದೆ ಹಿಂದೆ ಜಿಲ್ಲೆಯಲ್ಲಿ ಅಪಾರ ಪ್ರಾಣ ಹಾನಿಯಾಗುತ್ತಿತ್ತು. ಇಂತಹ ಪರಿಸ್ಥಿತಿಯಲ್ಲಿ ಜನರ ಅಜ್ಞಾನದ ಲಾಭ ಪಡೆದು ಪುರೋಹಿತರು, ಮಾಂತ್ರಿಕರು, ಜ್ಯೋತಿಷಿಗಳು ಮುಂತಾದವರು ಪೂಜೆ, ಪುರಸ್ಕಾರ, ಮಾಟ, ಮಂತ್ರ ಇತ್ಯಾದಿಗಳನ್ನು ಮಾಡಿದರೆ ಎಲ್ಲವೂ ಸರಿ ಹೋಗುತ್ತದೆ ಎಂಬುದಾಗಿ ನಂಬಿಸಿ ಜನರಿಂದ ಹಣವನ್ನು ದೋಚಿ ಮೋಸ ಮಾಡುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ, ಜಿಲ್ಲೆಯ ಕಥೋಲಿಕರ ಧಾರ್ಮಿಕ ಅವಶ್ಯಕತೆಗಳನ್ನು ನೋಡಿಕೊಳ್ಳುತ್ತಿದ್ದ ಗೋವಾದಿಂದ ಬಂದ ಧರ್ಮಗುರುಗಳು ತಮಗೆ ತಿಳಿದಿದ್ದ ಅಲ್ಪಸ್ವಲ್ಪ ವೈದ್ಯಕೀಯ ಜ್ಞಾನದಿಂದ ಜನರನ್ನು ಕಾಯಿಲೆಯಿಂದ ಗುಣಪಡಿಸುವ ಪ್ರಯತ್ನವನ್ನು ಮಾಡಿದರು. ಆದರೆ ಆ ಎಲ್ಲಾ ವೈದ್ಯಕೀಯ ನೆರವು ಕಾಯಿಲೆಯ ತೀವ್ರತೆಗೆ ಹೋಲಿಸಿದರೆ ಎಷ್ಟಕ್ಕೂ ಸಾಲದಾಯಿತು. ಹೀಗಿರುವಾಗ, ಮಂಗಳೂರಿಗೆ ಆಗಮಿಸಿದ ಯೇಸುಸಭೆಯವರು ಫಾ। ಮುಲ್ಲರ್‌ರವರ ಮೂಲಕ ಆಸ್ಪತ್ರೆಯೊಂದನ್ನು ಸ್ಥಾಪಿಸಿ ಕುಷ್ಠ ರೋಗದಿಂದ ಬಳಲುವವರ ಆರೈಕೆಯನ್ನು ಆರಂಭಿಸಿದರು. ಹೋಮಿಯೋಪತಿ ಔಷಧದಿಂದ ಪ್ರಾರಂಭವಾದ ಅವರ ಸೇವೆ ಕಾಲಕ್ರಮೇಣ ಅಲೋಪತಿ ವಿಧಾನವನ್ನೂ ಅಳವಡಿಸಿಕೊಳ್ಳುವುದರೊಂದಿಗೆ ಎಲ್ಲಾ ರೀತಿಯ ಕಾಯಿಲೆಗಳಿಗೆ ಔಷಧಿ, ಶಸ್ತ್ರಚಿಕಿತ್ಸೆ, ಪುನರ್ವಸತಿ ಇತ್ಯಾದಿ ಸೇವೆಗಳನ್ನು ನೀಡತೊಡಗಿದರು. ಆ ಮೂಲಕ ಜಿಲ್ಲೆಯಲ್ಲಿ ಸಂಭವಿಸುತ್ತಿದ್ದ ದೊಡ್ಡ ಪ್ರಮಾಣದ ಸಾವು-ನೋವುಗಳಿಗೆ ಉಪಶಮನ ನೀಡುವ ಪ್ರಮಾಣಿಕ ಪ್ರಯತ್ನ ಆರಂಭವಾಯಿತು. ಕಾಲಕ್ರಮೇಣ

ಜಿಲ್ಲೆಯಲ್ಲಿ ಹಲವಾರು ಆರೋಗ್ಯ ಕೇಂದ್ರಗಳು ಮತ್ತು ಸಣ್ಣ ಪುಟ್ಟ ಆಸ್ಪತ್ರೆಗಳೂ ತಲೆ ಎತ್ತಿದವು. ೨೦ನೇ ಶತಮಾನದಲ್ಲಿ ಸ್ಥಾಪನೆಗೊಂಡ ಆಸ್ಪತ್ರೆಗಳಲ್ಲಿ ಅತ್ಯಂತ ಹೆಸರುವಾಸಿಯಾದ ಕ್ರೈಸ್ತ ಆಡಳಿತದಲ್ಲಿದ್ದ ಆಸ್ಪತ್ರೆಯೆಂದರೆ ಉಡುಪಿಯ ಮಿಶನ್ ಆಸ್ಪತ್ರೆ. ಡಾ.ಈವಾ ಲೊಂಬಾರ್ಡ್ ಮತ್ತು ಸಂಗಡಿಗರಿಂದ ಆರಂಭಗೊಂಡ ಆ ಆಸ್ಪತ್ರೆ ಪ್ರಾರಂಭದಲ್ಲಿ ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆಯಾಗಿತ್ತು. ಕಾಲನಂತರದಲ್ಲಿ ಗಂಡಸರನ್ನೂ ಆಸ್ಪತ್ರೆಯಲ್ಲಿ ದಾಖಲು ಮಾಡಿ ಆರೈಕೆ ಮಾಡಲಾರಂಭಿಸಿದರು. ಫಾ। ಮುಲ್ಲರ್ ಹಾಗೂ ಮಿಶನ್ ಆಸ್ಪತ್ರೆಗಳು ತಮ್ಮ ವೈದ್ಯಕೀಯ ಸೇವೆಯನ್ನು ನಗರವಾಸಿಗಳಿಗೆ ಮಾತ್ರ ಮೀಸಲಾಗಿಟ್ಟಿರಲಿಲ್ಲ. ಗ್ರಾಮೀಣ ಪ್ರದೇಶಗಳಾದ ಜಲ್ಲಿಗುಡ್ಡೆ, ಮುಲ್ಲರ್‌ಕಾಡ್, ಮಲ್ಪೆ, ಕೊರಂಗ್ರಪಾಡಿ, ಕುಂದಾಪುರ, ಇಂದಿರಾನಗರ, ಪರ್ಪಲೆ, ಎಡಪದವು ಮುಂತಾದ ಕಡೆಗಳಲ್ಲಿ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಿ ವೈದ್ಯಕೀಯ ಸೇವೆಯನ್ನು ನೀಡಿದರು. ಪ್ರಾರಂಭದಲ್ಲಿ ವೈದ್ಯಕೀಯ ನೆರವು ನೀಡಲು ದಾದಿಯರೆಂಬ ಪ್ರತ್ಯೇಕ ವರ್ಗವಿರಲಿಲ್ಲ. ಆದ್ದುದರಿಂದ ಧರ್ಮಶೀಲ ವ್ಯಕ್ತಿಗಳು ಮತ್ತು ಧರ್ಮಭಗಿನಿಯರು ನಿಸ್ವಾರ್ಥ ಮನೋಭಾವದಿಂದ ವೈದ್ಯರೊಂದಿಗೆ ಈ ಕಾರ್ಯದಲ್ಲಿ ಕೈ ಜೋಡಿಸುತ್ತಿದ್ದರು. ಆದರೆ ವರುಷಗಳು ಉರುಳಿದಂತೆ ದಾದಿಯರ ಸೇವೆಯ ಅಗತ್ಯ ಅತೀ ಅವಶ್ಯ ಎಂದು ಕಂಡು ಬಂದಾಗ ಉಡುಪಿಯಲ್ಲಿ ಹಾಗೂ ಮಂಗಳೂರಿನಲ್ಲಿ ನರ್ಸಿಂಗ್ ಶಾಲೆಗಳನ್ನು ಆರಂಭಿಸಿ, ವೈದ್ಯಕೀಯ ಕ್ಷೇತ್ರದಲ್ಲಿ ದುಡಿಯುವ ಅವಕಾಶವನ್ನು ಆಸಕ್ತ ಯುವಕ-ಯುವತಿಯರಿಗೆ ಒದಗಿಸಿಕೊಟ್ಟರು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಮಹಿಳೆಯರನ್ನು ದ್ವಿತೀಯ ದರ್ಜೆ ಪ್ರಜೆಗಳಾಗಿ ಕಾಣುತ್ತಿದ್ದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳೆಯರಿಗೆ ಶಿಕ್ಷಣ ನೀಡಿ ಕ್ರಾಂತಿಯನ್ನು ಉಂಟು ಮಾಡಿದ್ದ ಮಿಶನರಿಗಳು ಈಗ ಅವರಿಗೆ ದಾದಿಯರ ತರಬೇತಿ ಶಾಲೆಗಳನ್ನು ತೆರೆಯುವ ಮೂಲಕ ಸೇವೆಯೊಂದಿಗೆ ಜೀವನೋಪಾಯಕ್ಕೆ ಒಂದು ಉದ್ಯೋಗವನ್ನೂ ದೊರಕಿಸಿಕೊಡುವ ಕಾರ್ಯವನ್ನು ಕೈಗೊಂಡರು. ದಾದಿಯರಿಗೆ ಇಂದು ವಿಶ್ವದಾದ್ಯಂತ ತುಂಬಾ ಬೇಡಿಕೆ ಇರುವಂತ ವಿಚಾರ ನಮ್ಮೆಗೆಲ್ಲರಿಗೂ ತಿಳಿದಿದೆ. ಆದರೆ ಆ ರೀತಿಯ ತರಬೇತಿಗೆ ಹಾಗೂ ಆ ಮೂಲಕ ನಾಲ್ಕು ಗೋಡೆಗಳ ನಡುವೆ ಬಂಧಿಯಾಗಿದ್ದ ಮಹಿಳೆಗೆ ಸಾರ್ವಜನಿಕವಾಗಿ ಹೊರಗೆ ಬಂದು ದುಡಿದು ಸ್ವತಂತ್ರ ಜೀವನ ನಡೆಸಲು ಅವಕಾಶ ಮಾಡಿಕೊಟ್ಟಿರುವುದು ಕ್ರೈಸ್ತ ಧಾರ್ಮಿಕರು ಮತ್ತು ಇದು, ಕರಾವಳಿ ಕರ್ನಾಟಕದಲ್ಲಿ ಸಾಮಾಜಿಕ ಬದಲಾವಣೆಗೆ ಕ್ರೈಸ್ತರು ನೀಡಿರುವ ಅತ್ಯಂತ ಮಹತ್ವದ ಕೊಡುಗೆಯಾಗಿದೆ.

ಇಂದಿನ ದಿನಗಳಲ್ಲಿ ವೈದ್ಯಕೀಯ ಸೇವೆಯನ್ನು ಒಂದು ವ್ಯವಹಾರವಾಗಿಸಿಕೊಂಡಿರುವ ಸುಸಜ್ಜಿತ ಆಸ್ಪತ್ರೆಗಳೊಂದಿಗೆ ಹೋಲಿಸಿದಾಗ ಧಾರ್ಮಿಕರು ನಡೆಸುತ್ತಿರುವ ಆಸ್ಪತ್ರೆಗಳು ಹಾಗೂ ಆರೋಗ್ಯಕೇಂದ್ರಗಳು ಸ್ವಲ್ಪ ಮಟ್ಟಿಗೆ ತಮ್ಮ ತೇಜಸ್ಸನ್ನು ಕಳೆದುಕೊಂಡಿರುವಂತೆ ಕಂಡು ಬರುವುದು ಸಹಜ. ಇದಕ್ಕೆ ಮುಖ್ಯ ಕಾರಣವೇನೆಂದರೆ, ತಮ್ಮ ಮೂಲ ಉದ್ದೇಶಕ್ಕೆ ಸಾಧ್ಯವಾದಷ್ಟು ಚ್ಯುತಿ ಬಾರದಂತೆ

ಮುಂದುವರಿಯುತ್ತಿರುವುದು ಹಾಗೂ ಇಂದಿನ ದಿನಗಳಲ್ಲಿ ನಾಯಿ ಕೊಡೆಗಳಂತೆ ಹುಟ್ಟಿಕೊಳ್ಳುತ್ತಿರುವ ಅತ್ಯಾಧುನಿಕ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಗಳೊಂದಿಗೆ ಸ್ಪರ್ಧಿಸಲು ಧಾರ್ಮಿಕರಿಗಿರುವ ತಾಂತ್ರಿಕ ತೊಂದರೆಗಳಿಂದಾಗಿ ಈ ರೀತಿಯ ಪರಿಸ್ಥಿತಿ ನಿರ್ಮಾಣಗೊಂಡಿದೆ. ಇಂದು ಆರೋಗ್ಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸಲು ಸಾಕಷ್ಟು ಸಂಸ್ಥೆಗಳು ಮುಂದೆ ಬರುತ್ತಿರುವುದರಿಂದ ಹಾಗೂ ಪರಿಣಾಮಕಾರಿ ಅಭಿವೃದ್ಧಿಯಾಗಿರುವುದರಿಂದ ಆತ್ಯಾಧುನಿಕ ಆಸ್ಪತ್ರೆಗಳು ಸ್ಥಾಪಿಸುವುದಾಗಲೀ ಅಥವಾ ಇತರ ಆಸ್ಪತ್ರೆಗಳೊಂದಿಗೆ ಸ್ಪರ್ಧಿಸುವುದಾಗಲೀ ಕ್ರೈಸ್ತ ಮಿಶನರಿಗಳ / ಧಾರ್ಮಿಕರ ಆದ್ಯತೆಗಳಾಗಿ ಉಳಿದಿಲ್ಲ. ಆದುದರಿಂದ ಒಂದು ಕಾಲದಲ್ಲಿ ನಗರದ ಹೊರಗೆ ಸ್ಥಾಪನೆಗೊಂಡಿದ್ದ ಕ್ರೈಸ್ತ ಆರೋಗ್ಯಸಂಸ್ಥೆಗಳನ್ನು ವೃದ್ಧಾಶ್ರಮಗಳನ್ನಾಗಿ ಪರಿವರ್ತಿಸಿ ಆ ಮೂಲಕ ಬದಲಾದ ರೂಪದಲ್ಲಿ ತಮ್ಮ ಸೇವೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಇಂದಿನ ದಿನಗಳಲ್ಲಿ ಕ್ರೈಸ್ತ ಧಾರ್ಮಿಕರು ನಡೆಸುತ್ತಿರುವ ಆಸ್ಪತ್ರೆಗಳು ಅಪ್ರಸ್ತುತ ಎಂಬ ಭಾವನೆ ವ್ಯಕ್ತವಾಗಬಹುದು, ಆದರೆ ಆಸ್ಪತ್ರೆಗಳೇ ಇಲ್ಲದೆ, ಔಷಧೋಪಚಾರ ಲಭಿಸದೆ ಸಾವು-ನೋವುಗಳಿಂದ ಸಂಕಟ ಪಡುತ್ತಿದ್ದ ಬಡ ಬಗ್ಗರ ಹಾಗೂ ಅವಜ್ಞೆಗೆ ಒಳಗಾದವರ ಸೇವೆಯನ್ನು ಮಾಡಿದ್ದನ್ನು ಹಾಗೂ ಮಾಡುತ್ತಿರುವುದನ್ನು ಎಂದಿಗೂ ಮರೆಯುವಂತಿಲ್ಲ. ಆದರೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವೈದ್ಯಕೀಯ ಸೇವೆಗಾಗಿ ಆಸ್ಪತೆಗಳನ್ನು ಹಾಗೂ ಇತರ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಿ ಹೆಚ್ಚು ಕಡಿಮೆ ಶತಮಾನದಷ್ಟು ಕಾಲ ನಿಸ್ವಾರ್ಥ ಸೇವೆ ಮಾಡಿ ಇಂದು ಆರೋಗ್ಯ ಕ್ಷೇತ್ರದಲ್ಲಿ ಜಿಲ್ಲೆಯಲ್ಲಿ ಆಗಿರುವ ಅಭೂತಪೂರ್ವ ಬದಲಾವಣೆಗೆ ಕ್ರೈಸ್ತ ಧಾರ್ಮಿಕರು ನೇರವಾಗಿ ಕಾರಣೀಭೂತರಾಗಿದ್ದಾರೆ ಎಂಬುದು ವಸ್ತುನಿಷ್ಠ ಕಟು ಸತ್ಯವಾಗಿದೆ.

ಜಿಲ್ಲೆಯಲ್ಲಿ ಧರ್ಮ ಪ್ರಸಾರಣೆ ಹಾಗೂ ಸಮಾಜಸೇವೆ ಕ್ರೈಸ್ತ ಮಿಶನ್ನುಗಳ ಧಾರ್ಮಿಕ ಚಟುವಟಿಕೆಯ ಅವಿಭಾಜ್ಯ ಅಂಗವಾಗಿದೆ. ದಕ್ಷಿಣ ಕನ್ನಡದ ಕಥೋಲಿಕ, ಪ್ರೊಟೆಸ್ಟಂಟ್, ಸಿರಿಯನ್, ಸಿರೋ- ಮಲಂಕರ, ಸಿರೋ- ಮಲಬಾರ್ ಧರ್ಮಸಭೆಗಳಿಗೆ ಸೇರಿದ ಧಾರ್ಮಿಕರು ಹಾಗೂ ಧರ್ಮಶೀಲ ಜನಸಾಮಾನ್ಯರು ಸಮಾಜ  ಸೇವೆಯನ್ನು ಅತ್ಯಂತ ಅವಶ್ಯವಾದ ಸೇವೆ ಎಂದೂ ಪರಿಗಣಿಸಿದ್ದರು. ಈ ನಿಟ್ಟಿನಲ್ಲಿ ಕೆನರಾ ಜಿಲ್ಲೆಯಲ್ಲಿ ಹಲವಾರು ಅನಾಥಾಶ್ರಮ, ವೃದ್ಧಾಶ್ರಮ, ಸ್ಪೆಶಲ್ ಸ್ಕೂಲ್ (ವಿಭಿನ್ನ ಸಾಮರ್ಥ್ಯದವರಿಗಾಗಿ), ವಸತಿ ನಿಲಯ, ಸಹಕಾರಿ ಸಂಘ, ಮದ್ಯವ್ಯಸನಿಗಳಿಗೆ, ಏಡ್ಸ್/ಹೆಚ್.ಐ.ವಿ. ಪೀಡಿತರಿಗೆ, ಕುಷ್ಠರೋಗಿಗಳಿಗೆ, ಕ್ಯಾನ್ಸರ್ ರೋಗಿಗಳಿಗೆ ಪುನರ್ವಸತಿ ಕೇಂದ್ರಗಳನ್ನು ಆರಂಭಿಸಿ ಪ್ರೀತಿಯಿಂದ ಅವರನ್ನು ನೋಡಿಕೊಳ್ಳಲಾಗುತ್ತಿದೆ. ವೃದ್ಧಾಶ್ರಮ ಮತ್ತು ವಿಭಿನ್ನ ಸಾಮರ್ಥ್ಯದ ಮಕ್ಕಳ ಶಾಲೆಗಳು ೧೯೮೦ರ ಬಳಿಕ ಹೆಚ್ಚು ಪ್ರಾಮುಖ್ಯತೆ ಪಡೆದಿರುವುದು ಒಂದು ವಿಶೇಷತೆ ಆಗಿದೆ. ವಿಭಕ್ತ ಕುಟುಂಬ ಪದ್ಧತಿಯ ನೇರವಾದ ಪರಿಣಾಮ ಇದಾಗಿದೆ. ಹಿಂದೆ ಕೂಡು ಕುಟುಂಬಗಳಲ್ಲಿ ಕುಟುಂಬದ ಸದಸ್ಯರೆಲ್ಲಾ ಒಂದೇ ಸೂರಿನಡಿ ಜೀವಿಸುತ್ತಿದ್ದಾಗ ಇಂತಹವರನ್ನು ನೋಡಿಕೊಳ್ಳಲು ಮನೆಯಲ್ಲಿ

ಯಾರಾದರೊಬ್ಬರು ಇರುತ್ತಿದ್ದರು. ಆದರೆ ಬದಲಾದ ಪರಿಸ್ಥಿತಿಯಲ್ಲಿ ಪತಿ-ಪತ್ನಿಯರಿಬ್ಬರೂ ದುಡಿಯಬೇಕಾಗಿರುವ ಈ ಕಾಲಘಟ್ಟದಲ್ಲಿ ಇಂತಹವರ ಪೋಷಣೆ, ಪೋಷಕರಿಗೆ ಅಥವಾ ತಮ್ಮ ಕುಟುಂಬದವರಿಗೆ ಒಂದು ಸಮಸ್ಯೆಯಾಗಿದೆ. ಪರಿಸ್ಥಿತಿಯನ್ನು ಮನವರಿಕೆ ಮಾಡಿಕೊಂಡ ಕ್ರೈಸ್ತ ಧಾರ್ಮಿಕರು, ಪೋಷಕರು ಅಥವಾ ಮಕ್ಕಳು ಮಾಡಬೇಕಾಗಿರುವ ಕರ್ತವ್ಯವನ್ನು ತಾವು ನಿರ್ವಹಿಸಲು ಮುಂದೆ ಬಂದರು. ಅದರ ಪರಿಣಾಮವಾಗಿಯೇ ಸ್ಪೆಶಲ್ ಸ್ಕೂಲ್ ಮತ್ತು ವೃದ್ಧಾಶ್ರಮಗಳೆಂಬ ಸಮಾಜ ಸೇವಾ ಕೇಂದ್ರಗಳ ಬೀಜಾಂಕುರವಾಯಿತು. ಕಾಲಕ್ರಮೇಣ ಇತರ ಸಮುದಾಯದವರೂ ಇಂತಹ ಸಂಸ್ಥೆಗಳನ್ನು ಸ್ಥಾಪಿಸಿ, ಜಿಲ್ಲೆಯ ಇನ್ನೂ ಹಲವರಿಗೆ ಈ ಸೌಲಭ್ಯದ ಅವಕಾಶವನ್ನು ಕಲ್ಪಿಸಿಕೊಟ್ಟರು. ಹೀಗೆ, ಈವೊಂದು ಸೇವಾ ಕಾರ್ಯದಲ್ಲಿಯೂ ಕ್ರೈಸ್ತ ಧಾರ್ಮಿಕರು ಜಿಲ್ಲೆಯಲ್ಲಿ ಆದ್ಯರೆನಿಸಿಕೊಂಡರು. ಜಿಲ್ಲೆಯ ಕ್ರೈಸ್ತ ಧಾರ್ಮಿಕರು ಹಾಗೂ ಧರ್ಮಶೀಲ ವ್ಯಕ್ತಿಗಳು ನೀಡುತ್ತಿರುವ ಅತ್ಯಂತ ಮಹತ್ವದ ಇನ್ನೊಂದು ಸೇವಾ ಕ್ಷೇತ್ರವೆಂದರೆ, ಕ್ಯಾನ್ಸರ್ ಮತ್ತು ಏಡ್ಸ್ ರೋಗಿಗಳನ್ನು ತಮ್ಮ ರೋಗದಿಂದ ಗುಣಮುಖರಾಗಲು ಸಾಧ್ಯವಿಲ್ಲ ಎಂಬ ಹಂತದಲ್ಲಿ ಪ್ರೀತಿಯಿಂದ ಆರೈಕೆ ಮಾಡಿ, ಕೊನೆ ಗಳಿಗೆಯನ್ನು ಧೈರ್ಯದಿಂದ ಎದುರಿಸಿ ಗೌರವದಿಂದ ಕಣ್ಣು ಮುಚ್ಚಲು ನೆರವಾಗುವುದು. ಕಲ್ಯಾಣಪುರದ ಗೊರಟ್ಟಿ ಆಸ್ಪತ್ರೆಯ ಪ್ಯಾಲಿಯೇಟಿವ್ ಕೇರ್ ಯೂನಿಟ್,ಲೈಲಾದ ಜ್ಯೋತಿ ಆಸ್ಪತ್ರೆ, ಗಂಜೀಮಠದ ಸೈಂಟ್ ಕ್ಯಾಮಿಲಸ್ ಧಾರ್ಮಿಕ ಸಭೆಯವರು ನಡೆಸುವ ಕ್ಯಾನ್ಸರ್ ಮತ್ತು ಏಡ್ಸ್/ ಹೆಚ್ಐವಿ ಪೀಡಿತರ ಪುನರ್ವಸತಿ ಕೇಂದ್ರಗಳು ಮುಖ್ಯವಾಗಿ ಇಂತಹ ಮಾನವತಾ ಕಾರ್ಯಗಳಲ್ಲಿ ತೊಡಗಿಸಿಕೊಂಡಿವೆ.

ಮದ್ಯವ್ಯಸನಿಗಳಿಗಾಗಿ ಕ್ರೈಸ್ತ ಧಾರ್ಮಿಕರು ಹಾಗೂ ಧರ್ಮಶೀಲ ವ್ಯಕ್ತಿಗಳು ನಡೆಸುತ್ತಿರುವ ಹಲವಾರು ಮಧ್ಯವರ್ಜನ ಅಥವಾ ಡಿ- ಎಡಿಕ್ಷನ್ ಸೆಂಟರ್‌ಗಳಿವೆ. ಈವೊಂದು ಕ್ಷೇತ್ರದಲ್ಲಿ ಮಂಗಳೂರಿನ 'ಪ್ರಜ್ಞಾ' ಸಂಸ್ಥೆ ಇತರ ಸಂಸ್ಥೆಗಳಿಗೆ ಮಾದರಿ ಎನಿಸಿಕೊಂಡಿದೆ. ಮದ್ಯವರ್ಜನ ಸಂಘಗಳ ನಿಸ್ವಾರ್ಥ ಸೇವೆಯ ಫಲವಾಗಿ ಅದೆಷ್ಟೋ ಒಡೆದ ಮನೆಗಳನ್ನು, ಒಡೆದ ಕುಟುಂಬಗಳನ್ನು ಒಂದುಗೂಡಿಸಿ, ಅವರೂ, ಇತರರಂತೆ ಸಾಮಾನ್ಯ ಜೀವನ ನಡೆಸಲು ನೆರವಾಗಿದ್ದಾರೆ. ರಾಜಕೀಯ ಪ್ರಭಾವಕ್ಕೆ ಒಳಗಾಗಿ, ಹಾಗೂ ರಾಜ್ಯ ಬೊಕ್ಕಸಕ್ಕೆ ಅಬಕಾರಿ ಸುಂಕದ ಮೂಲಕ ಅಧಿಕ ಲಾಭ ದೊರೆಯುತ್ತದೆ ಎಂಬ ಕಾರಣಗಳಿಂದಾಗಿ ಇಂದು, ದಿನ ಬೆಳಗಾಗುವುದರೊಳಗೆ ಹೊಸ ಮದ್ಯದಂಗಡಿಗಳು ತಲೆ ಎತ್ತುತ್ತಿವೆ. ಇವು ಮದ್ಯವ್ಯಸನಿಗಳಿಗೆ ಹೆಚ್ಚು ತ್ರಾಸವಿಲ್ಲದೆ ಮಧ್ಯ ಒದಗಿಸುತ್ತಿರುವುದರಿಂದ ಈವೊಂದು ಪಿಡುಗು ಉಲ್ಬಣಗೊಳ್ಳಲು ಪರೋಕ್ಷವಾಗಿ ಕಾರಣವಾಗುತ್ತಿದ್ದಾರೆ. ಸರ್ಕಾರದ ಬೇಜವಾಬ್ದಾರಿತನವನ್ನು ಅರಿತೂ, ಸರ್ಕಾರದ ಜವಾಬ್ದಾರಿಯನ್ನು ತಾವೇ ವಹಿಸಿಕೊಂಡು ಮಧ್ಯವ್ಯಸನಿಗಳನ್ನು ಮುಖ್ಯವಾಹಿನಿಗೆ ತರಲು ಶ್ರಮಿಸುತ್ತಿರುವುದು ಫಾ। ಮುಲ್ಲರ್ಸ್ ಆಸ್ಪತ್ರೆ, ಗೊರಟ್ಟಿ ಆಸ್ಪತ್ರೆ, ಫಾ। ಪತ್ರಾವೊ ಆಸ್ಪತ್ರೆ, ಮಿಶನ್ ಆಸ್ಪತ್ರೆ,

ಲಿಂಕ್ ಮಧ್ಯವರ್ಜನ ಸಂಘ ಮತ್ತು ಇನ್ನಿತರ ಕ್ರೈಸ್ತ ಸಂಘ ಸಂಸ್ಥೆಗಳು ಸಾಮಾಜಿಕ ಬದಲಾವಣೆಗೆ ನೀಡುತ್ತಿರುವ ಕೊಡುಗೆಯಾಗಿದೆ ಎಂಬುವುದು ನನ್ನ ಅನಿಸಿಕೆ.

ಕ್ರೈಸ್ತ ಧರ್ಮ ಜಾತಿ ಪದ್ಧತಿಗೆ ಅವಕಾಶ ನೀಡುವುದಿಲ್ಲ. ಆದರೂ, ಕ್ರೈಸ್ತ ಸಮುದಾಯದವರೊಳಗೆ ಮುಖ್ಯವಾಗಿ ಕಥೋಲಿಕ ಕ್ರೈಸ್ತರಲ್ಲಿ ಅದು ಜೀವಂತವಾಗಿರುವುದು ಕಟು ಸತ್ಯವಾಗಿದೆ. ಬಾಸೆಲ್ ಮಿಶನ್ ಕ್ರೈಸ್ತರಲ್ಲಿ ಬಹುಸಂಖ್ಯಾತರು ಬಿಲ್ಲವ ವರ್ಗದಿಂದ ಕ್ರೈಸ್ತ ಧರ್ಮ ಸ್ವೀಕರಿಸಿದವರಾಗಿದ್ದು ಜಾತಿ ಪದ್ಧತಿಯ ಸಮಸ್ಯೆ ಅಷ್ಟಾಗಿ ಇಲ್ಲ. ಆದರೆ, ಬಾಸೆಲ್ ಮಿಶನ್ ವರದಿಗಳು ಹೇಳುವಂತೆ, "ಬಾಸೆಲ್ ಮಿಶನ್ ಕ್ರೈಸ್ತರಲ್ಲಿ ಜಾತಿ ಪದ್ಧತಿ ಎಂಬ ಭೂತ ತಲೆ ಎತ್ತದಂತೆ ನೋಡಿಕೊಳ್ಳುವ ಪ್ರಯತ್ನ ಮಾಡಲಾಗಿದೆ" ಎಂಬುದರಲ್ಲಿ ಸತ್ಯಾಂಶವಿದ್ದರೂ ಸಂಪೂರ್ಣವಾಗಿ ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಬಾಸೆಲ್ ಮಿಶನ್‌ನಲ್ಲಿ ಸಾಮೂಹಿಕ ಹಾಗೂ ಕೆಳವರ್ಗದವರ ಕ್ರೈಸ್ತ ಧರ್ಮ ಸ್ವೀಕಾರಕ್ಕೆ ಉತ್ತೇಜನ ಇರಲಿಲ್ಲ. ಕಥೋಲಿಕ ಕ್ರೈಸ್ತರು ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಕೊರಗ, ಪರಾಯ ಮುಂತಾದ ವರ್ಗಗಳನ್ನು ಕ್ರೈಸ್ತ ಧರ್ಮಕ್ಕೆ ಸ್ವೀಕರಿಸಿದರು. ಆದರೆ, ಕಥೋಲಿಕರಲ್ಲಿ ಈಗಾಗಲೇ ಬೇರು ಬಿಟ್ಟಿದ ಜಾತಿ ಪದ್ದತಿಯಿಂದಾಗಿ ನವಕ್ರೈಸ್ತರು ಸಾಕಷ್ಟು ಸಂಕಷ್ಟಗಳನ್ನು ಎದುರಿಸಬೇಕಾಗಿ ಬಂದ್ದದ್ದು ವಿಪರ್ಯಾಸವೇ ಸರಿ. ಜಾತಿ ಪದ್ದತಿಯ ವಿಷ ವರ್ತುಲದಲ್ಲಿ ಸಿಲುಕಿ ನವಕ್ರೈಸ್ತರು ಈಗಲೂ ಕಷ್ಟಗಳನ್ನು ಅನುಭವಿಸುತ್ತಿದ್ದರಾದರೂ, ಚರ್ಚಿನ ಕಟ್ಟುನಿಟ್ಟಿನ ನಿಯಮಗಳಿಂದಾಗಿ ಸ್ವಲ್ಪ ಮಟ್ಟಿಗೆ ಪರಿಸ್ಥಿತಿಯಲ್ಲಿ ಸುಧಾರಣೆಯಾಗಿದೆ. ಅನ್ನ, ಬಟ್ಟೆ ಮತ್ತು ಸೂರಿಗಾಗಿ (ಆಶ್ರಯಕ್ಕಾಗಿ) ಕ್ರೈಸ್ತ ಧರ್ಮ ಸ್ವೀಕರಿಸಿದ ಅವರು ಪಡಬಾರದ ಕಷ್ಟಗಳಿಗೆ ಈಡಾದ್ದುದು ಜಾತಿ ಪದ್ಧತಿಯ ಆಳ ಎಷ್ಟಿತ್ತೆಂಬುದಕ್ಕೆ ಉತ್ತಮ ನಿದರ್ಶನವಾಗಿದೆ.

ಬ್ರಿಟಿಷರ ಆಳ್ವಿಕೆ ಆರಂಭಗೊಳ್ಳುವ ಮೊದಲು ಕರ್ನಾಟಕದಲ್ಲಿ ಬೃಹತ್ ಪ್ರಮಾಣದ ಕೈಗಾರಿಕೆಗಳೇನೂ ಇರಲಿಲ್ಲ. ಕೃಷಿ ಆಧಾರಿತ ಹಾಗೂ ಗೃಹೋಪಯೋಗಿ ವಸ್ತುಗಳನ್ನು ಉತ್ಪಾದಿಸುವ ಕೈಗಾರಿಕೆಗಳು ಹೆಚ್ಚಿನ ಸಂಖ್ಯೆಯಲ್ಲಿ ಇದ್ದವು. ಅಲ್ಲದೇ, ಕರಾವಳಿ ಪ್ರದೇಶದ ಕುಟುಂಬ ಜೀವನ ಕ್ರಮ ಎಲ್ಲ ಕಡೆ ಒಂದೇ ರೀತಿಯಲ್ಲಿಲ್ಲ. ತಮಿಳುನಾಡಿನಲ್ಲಿ ಪ್ರತಿಯೊಂದು ಜಾತಿಯೂ ಮತಾಂತರಿಸಲ್ಪಟ್ಟರೂ ಒಂದೇ ಗುಂಪಾಗಿ ಕಷ್ಟ- ಸುಖಗಳಿಗೆ ತಮ್ಮೊಳಗೇ ಒಂದು ರೀತಿಯ ಕೊಡುಕೊಳ್ಳುವ ಸೌಹಾರ್ದ ರೀತಿಯಿಂದ ವರ್ತಿಸುತ್ತಿತ್ತು. ಕರ್ನಾಟಕ ಮತ್ತು ಕೇರಳದ ಸ್ಥಿತಿ ಇದಕ್ಕೆ ವಿರುದ್ಧವಾಗಿತ್ತು. ಇಲ್ಲಿನವರು ಇನ್ನೊಬ್ಬರ ಹಂಗಿಗೆ ಕೈಯೊಡ್ಡದೆ ತಮ್ಮ ಸ್ವಂತ ಗಳಿಕೆಯನ್ನೇ ನೆಚ್ಚಿಕೊಂಡಿರುವ ಆತ್ಮಾಭಿಮಾನಿಗಳು. ಮತಾಂತರ ಹೊಂದಿದ ಮೇಲೆ ತಮ್ಮ ಪೂರ್ವಾಶ್ರಮದ ಹಕ್ಕನ್ನು ಯಾವುದೇ ಕ್ಷೇತ್ರದಲ್ಲಿ ಅವರು ಸ್ಥಾಪಿಸುವಂತಿಲ್ಲ. ಹಾಗಾದರೆ ಅವರು ಬದುಕುವುದು ಹೇಗೆ? ಕೃಷಿ ತೋಟಗಾರಿಕೆಗಳು ಎಷ್ಟು ಜನರಿಗೆ ಪ್ರಿಯವಾದಾವು? ಇದಕ್ಕೆ ಬಾಸೆಲ್ ಮಿಶನ್ ಬೇರೆಯೇ ವ್ಯವಸ್ಥೆ ಮಾಡಬೇಕಾದುದು

ಅನಿರ್ವಾಯವಾಯಿತು. “ ಮತಾಂತರಕ್ಕೂ ಆರ್ಥಿಕ ಭದ್ರತೆಗೂ ತಳುಕು ಹಾಕುವುದು ಒಳ್ಳೆಯ ಲಕ್ಷಣವಲ್ಲ. ಹೀಗಾದರೆ ಹೊಸ ಮತ ಸ್ವೀಕರಿಸುವ ಜನರು ಆರ್ಥಿಕ ಪ್ರಲೋಭನೆಗಳಿಂದ ಆಕರ್ಷಿಸಲ್ಪಡುತ್ತಾರೆಯೇ ಹೊರತು ಮತ ಗರಿಮೆಯನ್ನು ತಿಳಿದುಕೊಂಡಲ್ಲ. ಇದರಿಂದ ಮಿಶನ್ನಿನ ಮೂಲ ಉದ್ದೇಶವೇ ನಗೆಗೆ ಈಡಾದೀತು” ಎಂದು ಮಿಶನ್‌ನ ಪದಾಧಿಕಾರಿಗಳು ಹೇಳಿದ್ದುಂಟು. ಆದರೆ ಮೂಲ ಉದ್ದೇಶದಲ್ಲಿ ಕ್ರೈಸ್ತ ಮತ ಸ್ವೀಕರಿಸಿದವರು ಉಪವಾಸವಿರಬೇಕೆಂಬುದೇನೂ ಇರಲಿಲ್ಲವಷ್ಟೆ. ಹೇಗಾದರೂ ಎಂತಾದರೂ ಮತ ಪ್ರಸಾರ ಮಾಡುವುದು ಹೇಗೆ? ಯಾವ ಮತವಾದರೂ, ಬದುಕು ಅದಕ್ಕಿಂತಲೂ ಮುಖ್ಯವಾದುದಾಗಿದೆ. ಇದನ್ನು ಸರಿಯಾಗಿ ಮನವರಿಕೆ ಮಾಡಿದ ಮಂಗಳೂರು ಮಿಶನ್ ಅಧಿಕಾರಿಗಳು ಹೆಚ್ಚು ಹೆಚ್ಚು ಉದ್ಯೋಗವಕಾಶಗಳನ್ನು ತಮ್ಮ ಜನರಿಗೆ ಒದಗಿಸುವುದರಲ್ಲಿ ನಿರತರಾದರು.

೧೮೪೨ರಲ್ಲಿ ಮಂಗಳೂರಿನಲ್ಲಿ ಮಿಶನ್‌ನವರು ಒಂದು ಕೈಗಾರಿಕಾ ಶಾಲೆಯನ್ನು ಪ್ರಾರಂಭ ಮಾಡಿದರು ಮತ್ತು ಮಧ್ಯಾಹ್ನದ ನಂತರ ಕೈಗಾರಿಕೆ ಮತ್ತು ನೇಯ್ಗೆಗಳಲ್ಲಿ ಶಿಕ್ಷಣ ನೀಡಲಾರಂಭಿಸಿದರು. ಈ ಶಿಕ್ಷಣದಲ್ಲಿ ತರಬೇತಿ ಹೊಂದಿದವರ ಸಹಾಯದಿಂದ ೧೮೪೪ರಲ್ಲಿ ಬಲ್ಮಠದಲ್ಲಿ ನೇಯ್ಗೆ ಕಾರ್ಖಾನೆಯನ್ನು ಬಾಸೆಲ್ ಮಿಶನ್ ಸ್ಥಾಪಿಸಿತು. ಅಲ್ಲದೇ, ಬಾಸೆಲ್ ಮಿಶನ್ ನೇಯ್ಗೆ ಕಾರ್ಖಾನೆಯು ‘ ಕ್ಷೇಮ ನಿಧಿ’ ಮತ್ತು ‘ಆರೋಗ್ಯ ನಿಧಿ’ ಎಂಬ ಯೋಜನೆಗಳನ್ನು ಕೆಲಸಗಾರರಿಗಾಗಿ ಆರಂಭಿಸಿತು. ಈ ಕಾರ್ಖಾನೆಯಲ್ಲಿ ಕೇವಲ ಕ್ರೈಸ್ತರು ಮಾತ್ರ ಕೆಲಸಕ್ಕಿದ್ದರು ಎಂದು ತಿಳಿದುಕೊಳ್ಳುವುದು ತಪ್ಪಾಗುತ್ತದೆ. ಕ್ರೈಸ್ತ ಮತ ಸ್ವೀಕರಿಸಿದವರನ್ನು ನೇಕಾರರೆಂದು ಕರೆಯುವುದು ಬಾಸೆಲ್ ಮಿಶನ್‌ನವರಿಗೆ ಬೇಡವಾಗಿತ್ತು. ಇದ್ದ ಕೆಲಸಗಾರರಲ್ಲಿ ಬಹುಶಃ ವಿಧವೆಯರು, ಸಂಕಷ್ಟಕ್ಕೆ ಒಳಗಾದವರು ಎಂಬುದು ನಿಜವಾದರೂ ಅನೇಕ ಕ್ರೈಸ್ತೇತರರೂ ಇದ್ದರು. ಪ್ರಾರಂಭದಲ್ಲಿ ಇಂಥವರ ಮೇಲೆ ಸಮಾಜದ ಕಾಕದೃಷ್ಟಿ ಹರಿಯಿತಾದರೂ ಹೊಸ ಉದ್ಯೋಗದಿಂದಾಗಿ ಅವರ ಆರ್ಥಿಕ ಸ್ಥಿತಿ ಸುಧಾರಿತೆಂದು ತಿಳಿದ ಮೇಲೆ ಅವರೂ ಪ್ರತಿಷ್ಠಿತ ಮಟ್ಟಕ್ಕೆ ಸೇರುತ್ತಾ ಬಂದರು. ಜಾತಿ ಬಿಟ್ಟರೂ ಸುಖ ಪಡೆದೆವೆಂಬ ಆತ್ಮ ವಿಶ್ವಾಸ ಅವರಲ್ಲಿಯೂ ಮೂಡಿತು. ಕಾಲಕ್ರಮೇಣ ಬಾಸೆಲ್ ನೇಯ್ಗೆ ಕಾರ್ಖಾನೆಯ ಶಾಖೆಗಳು ಮೂಲ್ಕಿ, ಕಲ್ಲಿಕೋಟೆ, ಕೊಡಕಲ್ ಮುಂತಾದ ಕಡೆಗಳಲ್ಲಿಯೂ ಹುಟ್ಟಿಕೊಂಡವು. ತಾವು ಕೈಗೊಂಡ ಎಲ್ಲ ಉದ್ಯಮಗಳಲ್ಲಿಯೂ ಮಿಶನ್‌ನವರು ಯಶಸ್ಸು ಪಡೆದರೆಂದು ಹೇಳಲಾಗದು. ನೇಯ್ಗೆ ಕಾರ್ಖಾನೆಯ ಸ್ಥಾಪನೆಯಾಗುವ ಮೊದಲು ಅವರು ಮುಲ್ಲರ್ ಎಂಬವನ ನೇತೃತ್ವದಲ್ಲಿ ಗಡಿಯಾರ ತಯಾರಿಕೆಯನ್ನು ಆರಂಭಿಸಿದರೂ, ಈ ಕ್ಷೇತ್ರದಲ್ಲಿ ಇದಿರಾದ ಅಮೇರಿಕನ್ ಸ್ಪರ್ಧೆ, ದೇಶಿ ಕೆಲಸಗಾರರ ಅಸಹಕಾರಗಳಿಂದ ಆ ಉದ್ಯಮವನ್ನು ಬಾಸೆಲ್ ಮಿಶನ್ ಬಿಟ್ಟುಕೊಟ್ಟಿತು.

ಬಾಸೆಲ್ ಮಿಶನ್ ದಕ್ಷಿಣಕನ್ನಡದಲ್ಲಿ ಪ್ರಥಮ ಹಂಚಿನ ಕಾರ್ಖಾನೆಯನ್ನು ೧೮೬೫ರಲ್ಲಿ ಸ್ಥಾಪಿಸುವುದರ ಮೂಲಕ ಇಂದೂ ಕೂಡ ಜಿಲ್ಲೆಯ ಮಾತ್ರವಲ್ಲದೇ ಇಡೀ ಭಾರತ ದೇಶದಲ್ಲಿ ಎಲ್ಲಾ

ಜನರ ಹೃದಯಾಳದಲ್ಲಿ ಅದರ ನೆನಪನ್ನು ಬಿಟ್ಟು ಹೋಗಿದೆ. ೧೯ನೇ ಶತಮಾನದಲ್ಲಿ ಆ ಉದ್ಯಮವು ಸಂಸ್ಥೆಯ ಮತ್ತು ಜಿಲ್ಲೆಯ ಹಲವು ಜನರ ಜೀವನಕ್ಕೆ ಒಂದು ಆಧಾರವಾಗಿತ್ತು. ಅಂದು ಅದು ಆ ಉದ್ಯಮದ ಆಡಳಿತದಲ್ಲಿ ಮತ್ತು ವಸ್ತುಗಳ ಗುಣಮಟ್ಟದಲ್ಲಿ ಅತ್ಯಂತ ಉನ್ನತ ಸ್ಥಾನದಲ್ಲಿತ್ತು ಮತ್ತು ಜಿಲ್ಲೆಯ ಜನರಿಗೆ ಹೊಸತಾಗಿತ್ತು. ೧೯ನೇ ಶತಮಾನದ ಗುಣಮಟ್ಟ ಮತ್ತು ವಿನ್ಯಾಸಕ್ಕೆ ಬಾಸೆಲ್ ಮಿಶನ್ ಕಾರ್ಖಾನೆಯಲ್ಲಿ ತಯಾರಾಗುತ್ತಿದ್ದ ವಸ್ತುಗಳು ಆಧುನಿಕ ಮಾತ್ರವಲ್ಲ ಅದು ಭಾರಿ ಯಶಸ್ಸು ಕೂಡಾ ಪಡೆದಿತ್ತು. ಕರಾವಳಿ ತೀರದಲ್ಲಿ ಮುಂಗಾರು ಅತ್ಯಂತ ತೀವ್ರವಾಗಿರುವೆಡೆ ಮಳೆಗಾಳಿಯ ಹೊಡೆತದಿಂದ ಜನರನ್ನು ರಕ್ಷಿಸುವಲ್ಲಿ ತಲೆಯ ಮೇಲೊಂದು ಸೂರು ನಿರ್ಮಿಸುವಲ್ಲಿ, ಸ್ಥಳೀಯ ಆರ್ಥಿಕ ಪರಿಸ್ಥಿತಿಯು ಸುಧಾರಿಸುವಲ್ಲಿ, ದೇಶಕ್ಕೆ ಅಗತ್ಯವಿರುವ ವಿದೇಶಿ ವಿನಿಮಯವನ್ನು ಗಳಿಸಿ ಕೊಡುವಲ್ಲಿ, ಮಂಗಳೂರು ಹಂಚುಗಳು ಬಹಳ ಮುಖ್ಯ ಪಾತ್ರ ವಹಿಸಿವೆ. ಆದರೆ ಕಾಲದೊಂದಿಗೆ ಹೆಜ್ಜೆ ಹಾಕಲು ಹಂಚು ಉದ್ಯಮವು ಹಿಂದೇಟು ಹಾಕಿದುದ್ದರಿಂದ, ಅಗತ್ಯವಿಋವ ಆಧುನೀಕರಣವನ್ನು ಮಾಡಲು ಗಮನ ನೀಡದೆ ಇದ್ದುದರಿಂದ ಕಚ್ಚಾವಸ್ತುಗಳ ಅಭಾವ ಮತ್ತು ಸಮಾನ ಇತರ ವಸ್ತುಗಳಿಂದ ಅದು ಎದುರುಸುತ್ತಿರುವ ತೀವ್ರ ಪೈಪೋಟಿಯಿಂದಾಗಿ ಇಂದು ಅದು ಕೆಟ್ಟ ಸಮಯವನ್ನು ಎದುರು ನೋಡುವಂತಾಗಿದೆ.

ನೇಯ್ಗೆ ಮತ್ತು ಹಂಚು ಕಾರ್ಖಾನೆಗಳಿಗೆ ಬೇಕಾಗಿರುವ ಅಚ್ಚು ತಯಾರಿಸುವುದಕ್ಕೆ ಮತ್ತು ಆ ಕಾರ್ಖಾನೆಗಳಲ್ಲಿರುವ ಯಂತ್ರ ಸಾಧನಗಳನ್ನು ರಿಪೇರಿ ಮಾಡುವ ಉದ್ದೇಶದಿಂದ ಮೆಕ್ಯಾನಿಕಲ್ ಅಥವಾ ಕಬ್ಬಿಣದ ಕೆಲಸದ ಕಾರ್ಖಾನೆ ಸ್ಥಾಪಿತವಾಗಿದೆ. ಇದು ಕಾರ್ಖಾನೆಗಳ ಉಪಯೋಗಕ್ಕಾಗಿಯೇ ಇತ್ತಾದರೂ, ಕ್ರಮೇಣ ಇತರ ಸಾಮಾಗ್ರಿಗಳನ್ನು ಸಿದ್ಧಗೊಳಿಸುವ ಕಾರ್ಯವನ್ನೂ ಸಹ ಕೈಗೆತ್ತಿಕೊಂಡಿತು. ಇದೇ ವೇಳೆಗೆ ಬಾಸೆಲ್ ಮಿಶನ್ ಸೇತುವೆ ನಿರ್ಮಾಣದಂತಹ ದೊಡ್ಡ ಹೊಣೆಗಾರಿಕೆಯ ಕೆಲಸಕ್ಕೂ ಒಪ್ಪಿಕೊಂಡಿತು. ಇದು ಬಿಡಿ ವಸ್ತುಗಳ ಉತ್ಪಾದನೆಯಂತಲ್ಲವಾದರೂ ಅಂದಿನ ಸರಕಾರ, ಬಾಸೆಲ್ ಮಿಶನ್‌ನ ಕರ್ತೃತ್ವ ಶಕ್ತಿ, ಪ್ರಾಮಾಣಿಕತೆಯನ್ನು ಗುರುತಿಸಿ ಇಂತಹ ಹೊಣೆಗಾರಿಕೆಯ ಗುತ್ತಿಗೆ ಕೆಲಸವನ್ನು ವಹಿಸಿಕೊಟ್ಟಿತು. ಬಾಸೆಲ್ ಮಿಶನ್ ಇಂತಹ ಕೆಲಸವನ್ನು ಹೆಚ್ಚು ಕೈಗೊಳ್ಳದಿದ್ದರೂ, ತನ್ನ ಹೆಸರು ಶಾಶ್ವತವಾಗಿ ಉಳಿಯುವಂತೆ ಮಾಡಿದ ಕೆಲಸವೆಂದರೆ ಬೆಳ್ತಂಗಡಿ ಸೇತುವೆ. ಬಾಸೆಲ್ ಮಿಶನ್ ಯಾಂತ್ರಿಕ ಕೈಗಾರಿಕೆಯಿಂದ ಪ್ರೇರೇಪಿತರಾದ ಕಥೋಲಿಕರು ಜೆಪ್ಪು ಸೈಂಟ್ ಜೋಸೆಪ್ಸ್ ಅಸೈಲಂ ವರ್ಕ್‌ಶಾಪ್ ಹಾಗೂ ಮಂಗಳೂರು ಅಯರ್ನ್ ವರ್ಕ್ಸ್ ಎಂಬ ಎರಡು ಸಂಸ್ಥೆಗಳನ್ನು ಸ್ಥಾಪಿಸಿದರು. ಸೈಂಟ್ ಜೋಸೆಪ್ಸ್ ವರ್ಕ್‌ಶಾಪ್ ಈಗಲೂ ಅತ್ಯುತ್ತಮ ರೀತಿಯಲ್ಲಿ ನಡೆಯುತ್ತಿದೆ. ೧೯೪೦ರಲ್ಲಿ ಆರಂಭಗೊಂಡ ಫೆರ್ನಾಂಡಿಸ್ ಕಾಪರ್ ಸ್ಮಿತ್ ತಾಮ್ರ ಮತ್ತು ಹಿತ್ತಾಳೆ ಪಾತ್ರೆಗಳನ್ನು ತಯಾರಿಸುತ್ತಿದ್ದವು. ೧೯೪೬ರಲ್ಲಿ ಲೂಪಿಸ್ ಇಂಡಸ್ಟ್ರೀಸ್ ಆರಂಭಗೊಂಡು ಇಂಜಿನಿಯರಿಂಗ್ ರಿಪೇರಿ ಮತ್ತು ಸ್ಪೇರ್‌ಗಳ ತಯಾರಿಕೆಯಲ್ಲಿ ತೊಡಗಿತು. ಜಿಲ್ಲೆಗೆ ನೂತನ ಕೈಗಾರಿಕೆಯನ್ನು ಪರಿಚಯಿಸಿದ ಬಾಸೆಲ್ ಮಿಶನ್, ಇಲ್ಲಿಯ ಆರ್ಥಿಕತೆಗೆ

ಹೊಸನೋಟ ನೀಡಿತ್ತು ಮತ್ತು ಅದರಿಂದಾಗಿ ಬೆಳವಣಿಗೆಗೆ ಹೊಸ ದಿಕ್ಕು ದೊರೆಯಿತು. ಮಿಶನ್ನಿನ ಕೆಲವು ಪ್ರಯತ್ನಗಳು ದಕ್ಷಿಣ ಕನ್ನಡದ ಕೈಗಾರಿಕಾ ಅಭಿವೃದ್ಧಿಗೆ ತಳಹದಿಯಾಗಿ ಪರಿಣಮಿಸಿವೆ. ಆದರೆ ಇದರಲ್ಲಿ ಪ್ರಾಟೆಸ್ಟಂಟರು ಮುಂಚೂಣಿಯಲ್ಲಿ ಕಾಣಿಸಿಕೊಂಡಿಲ್ಲದಿರುವುದು ವಿಡಂಬನೆಯಾಗಿದೆ. ಹೀಗೆ ಪ್ರೊಟೆಸ್ಟಂಟರಲ್ಲಿ ಬಂಡವಾಳಶಾಹಿಯಾಗಿ ಪರಿವರ್ತನೆ ಹೊಂದುವ ಯಾವುದೇ ಭಾವನೆಯನ್ನು ಈ ಜಿಲ್ಲೆ ಹುಟ್ಟಿಸಿಲ್ಲ. ಆದರೆ ಹಸಿದಿರುವವರಿಗೆ ಒಂದು ಹೊತ್ತು ಉಣ್ಣಕೊಡುವುದಕ್ಕಿಂತಲೂ ಹಸಿದಿರುವವರು ಸದಾ ತಮ್ಮ ಆಹಾರವನ್ನು ಸಂಪಾದಿಸಿಕೊಳ್ಳುವ ಮಾರ್ಗೋಪಾಯವನ್ನು ಕಲಿಸಿಕೊಟ್ಟದ್ದು ಬಾಸೆಲ್ ಮಿಶನ್ನ್‌ನ ದೇಶಸೇವೆಗೆ ಕೈಗನ್ನಡಿಯಾಗಿದೆ.

ಬ್ರಿಟಿಷ್ ಆಡಳಿತದಲ್ಲಿ ಜಿಲ್ಲೆಯ ಆರ್ಥಿಕತೆಗೆ ಮತ್ತು ದೇಶಕ್ಕೆ ಕ್ರೈಸ್ತರ ಕೊಡುಗೆಯು ಸಮುದಾಯದ ಭಾಗವಾಗಿ ಮಾತ್ರವಲ್ಲ ವೈಯಕ್ತಿಕ ನೆಲೆಯಿಂದಲೂ ಸಂದಿದೆ. ಪ್ರೊಟೆಸ್ಟಂಟರು ತಮ್ಮ ಚರ್ಚಿನ ಭಾಗವಾಗಿ ಸಾಮುದಾಯಿಕ ಸೇವೆ ಸಲ್ಲಿಸಿದ್ದಾರೆ. ದೇಶದ ಇತರ ಭಾಗಗಳ ಕೃಷಿ ಸಮುದಾಯಗಳ ಹಾಗೆ ಕ್ರೈಸ್ತರು ಕೂಡಾ ಹೊಸ ಅವಕಾಶಗಳನ್ನು ಹುಡುಕಿಕೊಂಡು ನಗರ ಪ್ರದೇಶಗಳಿಗೆ, ಅದರಲ್ಲಿಯೂ ವಿಶೇಷವಾಗಿ ಬೆಂಗಳೂರು, ಬಾಂಬೆ, ಕಲ್ಕತ್ತಾ, ಕರಾಚಿ, ಮದ್ರಾಸ್, ಮೈಸೂರು ಮತ್ತು ಪುಣೆಗೆ ವಲಸೆ ಹೋಗಿದ್ದಾರೆ. ದಕ್ಷಿಣ ಕನ್ನಡವನ್ನು ಮೊದಲು ಬಿಟ್ಟು ಹೋಗಿರುವ ಕ್ರೈಸ್ತರೆಂದರೆ ಬಾಸೆಲ್ ಮಿಶನ್‌ನ ಪ್ರೊಟೆಸ್ಟಂಟರು. ಅವರಲ್ಲಿ ಕೆಲವು ಮಂದಿ ೧೮೮೦ರಲ್ಲಿ ದಕ್ಷಿಣ ಕನ್ನಡ ಬಿಟ್ಟು ಬಾಂಬೆ ಸೇರಿದ್ದಾರೆ. ನಂತರ ಒಂದು ದಶಕ ಕಳೆದು ಕೆಲವು ಕಥೋಲಿಕರು ಬಾಂಬೆಗೆ ಹೋದರು. ಮಂಗಳೂರಿನ ಕಾರ್ಯಾಗಾರಗಳಲ್ಲಿ ತರಬೇತಿಯನ್ನು ಹೊಂದಿದ್ದ ಯುವ ಕ್ರೈಸ್ತರಿಗೆ ಬಾಂಬೆಯಲ್ಲಿ ಲಾಭದಾಯಕ ಹುದ್ದೆಗಳು ದೊರೆತವು. ಮೊದಲ ಮಹಾಯುದ್ಧದ ಸಮಯದಲ್ಲಿ ಬಾಂಬೆಗೆ ಬಂದ ಎಫ್ರೇಮ್ ಸೋನ್ಸರು ಮಜಗಾಂವ್‌ನ ಡಿಲಿಮಾ ರಸ್ತೆಯಲ್ಲಿ ಬೆಸುಗೆ ಕಾರ್ಯಾಗಾರವನ್ನು ಪ್ರಾರಂಭಿಸಿದರು. ಅವರ ಸೋದರಳಿಯ ಡೇವಿಡ್ ಸೋನ್ಸ್ ತನ್ನ ಸ್ವಂತ ವಾಹನ ರಿಪೇರಿ ಗ್ಯಾರೇಜನ್ನು, 'ಡೇವಿಡ್ ಗ್ಯಾರೇಜ್' ಹೆಸರಿನಲ್ಲಿ ವರ್ಲಿಯ ಹೇನ್ಸ್ ರಸ್ತೆಯಲ್ಲಿ ಪ್ರಾರಂಭಿಸಿದರು. ಡ್ಯಾನ್ ಮೆಲ್ವಿಲೆ ಅವರು ಮಜಗಾಂವ್‌ನ ಷೆಡ್ ಒಂದರಲ್ಲಿ ೧೯೪೭ರಲ್ಲಿ ಜೋಡಣೆಯ ಕೆಲಸದ 'ಕೆನರಾ ಇಂಜಿನಿಯರಿಂಗ್ ಕಂಪನಿ, ಲಿಮಿಟೆಡ್' ಪ್ರಾರಂಭಿಸಿದರು. ಬಾಸೆಲ್ ಮಿಶನ್ ಕ್ರೈಸ್ತರು ಕ್ರೈಸ್ತ ಸಮುದಾಯದ ಅಥವಾ ಇನ್ನೂ ದೊಡ್ಡ ಸಮಾಜದಲ್ಲಿನ ಸಾರ್ವಜನಿಕ ಅಥವಾ ಸಾಮಾಜಿಕ ಬದುಕಿನಲ್ಲಿ ಎಂದೂ ಗಮನಾರ್ಹ ರೀತಿಯಿಂದ ಕಾಣಿಸಿಕೊಂಡದ್ದಿಲ್ಲ. ಆದರೆ ಕೆಲವೊಂದು ಸಂಧರ್ಭದಲ್ಲಿ ದಕ್ಷಿಣ ಕನ್ನಡದ ಅವರ ಪ್ರತಿರೂಪಗಳಾಗಿದ್ದ ಕಥೋಲಿಕರು ಪ್ರಸ್ತಾಪಿಸಿದ ಅಥವಾ ಅಳವಡಿಸಿಕೊಂಡಿದ್ದ ಸಾಮಾಜಿಕ ಕ್ರಮಗಳನ್ನು ಬೆಂಬಲಿಸುವ

ಪ್ರಯತ್ನಗಳನ್ನು ಅವರು ನಡೆಸಿದ್ದಾರೆ. ದಕ್ಷಿಣ ಕನ್ನಡದ ಕಥೋಲಿಕರು ಮತ್ತು ಪ್ರೊಟೆಸ್ಟಂಟರು, ಅವರ ನಡುವಿನ ಅಂತರ ಕಿರಿದಾಗುವುದರೊಂದಿಗೆ ದೂರದ ನೆರೆಯವರಾಗಿದ್ದಾರೆ.

ಯಾವುದೇ ಒಂದು ಚಟುವಟಿಕೆ ಆರಂಭಿಸುವಾಗ ಅದಕ್ಕೆ ಪರ-ವಿರೋಧಗಳು ಸಹಜವಾಗಿ ಇದ್ದೇ ಇರುತ್ತವೆ. ಹೀಗಿರುವಾಗ, ಮಿಶನರಿಗಳ ಸುವಾರ್ತಾ ಪ್ರಸಾರಣೆಗೆ ಆರಂಭದಲ್ಲಿ ಸುಶಿಕ್ಷಿತ ಮೇಲ್ವರ್ಗದವರ ತೆರೆಮರೆಯ ಪ್ರಚೋದನೆಯಿಂದ ವಿರೋಧ ಎದುರಿಸಬೇಕಾದುದ್ದು ಒಂದು ನಿರೀಕ್ಷಿತ ಬೆಳವಣಿಗೆಯೇ ಆಗಿದೆ. ೧೮೬೯-೧೮೭೫ರ ಸಮಯದಲ್ಲಿ ಸಾಮಾನ್ಯಕ್ಕಿಂತ ಸ್ವಲ್ಪ ವೇಗವಾಗಿಯೇ ಕ್ರೈಸ್ತ ಧರ್ಮ ಸ್ವೀಕಾರ ಪ್ರಕ್ರಿಯೆ ನಡೆದುದ್ದರಿಂದ ಅದನ್ನು ತಡೆಗಟ್ಟುವ ಸಲುವಾಗಿ ಬ್ರಹ್ಮ ಸಮಾಜ, ಥಿಯೋಸಾಫಿಕಲ್ ಸೊಸೈಟಿಗಳಂತಹ ಸುಧಾರಣಾ ಚಳುವಳಿಗಳು ಮಂಗಳೂರಿನಲ್ಲಿ ಆರಂಭಗೊಂಡವು. ಆದರೆ ಆ ಚಳುವಳಿಗಳು ಜನರ ಜೀವನದ ಮೇಲೆ ಹೆಚ್ಚಿನ ಪ್ರಭಾವ ಬೀರಲು ವಿಫಲವಾದವು. ಮಾತ್ರವಲ್ಲದೆ, ಸ್ಥಳೀಯರನ್ನು ಗಣನೀಯ ಪ್ರಮಾಣದಲ್ಲಿ ಆಕರ್ಷಿಸಲು ವಿಫಲವಾದ ಮಿಶನರಿಗಳ ವಿರುದ್ಧದ ಕೂಗು ಕಾಲಕ್ರಮೇಣ ಕ್ಷೀಣಿಸತೊಡಗಿತು. ಅದೇ ವೇಳೆ, ಸ್ಥಳೀಯ ಕ್ರೈಸ್ತರು ಅಪರೂಪಕ್ಕೊಮ್ಮೆ ಮಿಶನರಿಗಳ ಸಹಿಸಲಸಾಧ್ಯವಾದ ನೀತಿ ನಿಯಮಗಳು ಹಾಗೂ ಯಜಮಾನಿಕೆಗಳ ವಿರುದ್ಧ ತಿರುಗಿ ಬಿದ್ದ ಪ್ರಸಂಗಗಳು ಯಾವ ರೀತಿಯಲ್ಲಿ ಸ್ಥಳೀಯ ಕ್ರೈಸ್ತರು ಸ್ವತಂತ್ರ ಅಥವಾ ಸ್ವದೇಶೀ ಚಳುವಳಿಯೆಡೆಗೆ ಆಕರ್ಷಿತರಾಗತೊಡಗಿದ್ದರು ಎಂಬುದಕ್ಕೆ ಉತ್ತಮ ನಿದರ್ಶನವಾಗಿದೆ.

ಹೀಗೆ, ಸುವಾರ್ತಾ ಸೇವೆಯೆಂಬ ಮುಖ್ಯ ಧ್ಯೇಯವನ್ನು ಎದುರಿಗಿಟ್ಟುಕೊಂಡು ದಕ್ಷಿಣ ಕನ್ನಡ ಜಿಲ್ಲೆಗೆ ಕಾಲೂರಿದ ಕ್ರೈಸ್ತ ಮಿಶನರಿಗಳು ಅದರಲ್ಲಿ ಸೀಮಿತ ಫಲ ಕಂಡುಕೊಂಡರೂ, ಕರ್ನಾಟಕ ರಾಜ್ಯದಲ್ಲಿಯೇ ಈ ಜಿಲ್ಲೆ ಒಂದು ಅದ್ಭುತ, ಶೈಕ್ಷಣಿಕ ನೆಲೆಯಾಗಿ ಗುರುತಿಸಿಕೊಳ್ಳುವಲ್ಲಿ, ೧೯ನೇ ಶತಮಾನ ಮತ್ತು ೨೦ ನೇ ಶತಮಾನದ ಆದಿಭಾಗದಲ್ಲಿ ಕನ್ನಡ, ತುಳು, ಕೊಂಕಣಿ ಮತ್ತು ಇತರ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಯಲ್ಲಿ, ಉತ್ಕೃಷ್ಟ ವೈದ್ಯಕೀಯ ಸೌಲಭ್ಯ ನೀಡುವಲ್ಲಿ ; ಜಿಲ್ಲೆಯ ಕೃಷಿ, ಕೈಗಾರಿಕೆ ಮತ್ತು ಆರ್ಥಿಕ ಬೆಳವಣಿಗೆಗೆ ಹೊಸ ರೂಪ ಕೊಟ್ಟು ಅದರ ಬೆಳವಣಿಗೆಯ ವೇಗ ಹೆಚ್ಚಿಸುವಲ್ಲಿ, ಸಾಮಾಜಿಕ ಅಸಮಾನತೆಯ ಅಂತರವನ್ನು ಕಿರಿದುಗೊಳಿಸಿ ಸಮಾಜದ ಕೆಳಸ್ತರದ ಜನರು ಮತ್ತು ಮಹಿಳೆಯರ ಸಬಲೀಕರಣದಲ್ಲಿ ಕ್ರೈಸ್ತ ಧರ್ಮ ಸಂಸ್ಥೆಗಳು ಬಹು ದೊಡ್ಡ ಪಾತ್ರವಹಿಸಿವೆ. ಇದರಿಂದಾಗಿ, ಧಾರ್ಮಿಕ ಕ್ಷೇತ್ರದಲ್ಲಿ ಅದು ನಿರೀಕ್ಷಿತ ಪ್ರತಿಫಲ ಪಡೆಯದಿದ್ದರೂ, ಇತರ ಕ್ಷೇತ್ರಗಳಲ್ಲಿನ ಅವುಗಳ ಸಾಧನೆ ಆ ವೈಫಲ್ಯವನ್ನು ತೊಡೆದುಹಾಕಿದೆ. ಏಕೆಂದರೆ, ಇಂತಹ ಹೊಸ ಸಾಮಾಜಿಕ ವ್ಯವಸ್ಥೆಯ ಉದಯದಲ್ಲಿ ಕ್ರೈಸ್ತ ಧರ್ಮಸಂಸ್ಥೆಗಳ ಪಾತ್ರವೂ ಜಿಲ್ಲೆಯ ಜನರ ಮನಸ್ಸಿನಲ್ಲಿ ಸದಾ ಅಚ್ಚ ಹಸುರಾಗಿರುತ್ತದೆ.

# Questionnaire

Note : 1. Please answer all questions

2. Please put tick mark into ☐ and give your views wherever applicable.

## MANAGEMENT PROFILE

1.Name :

2. Gender : Male ☐ Female ☐

3. Age : Below 40 ☐ Below 50 ☐ Below 60 ☐ Above 60 ☐

4. Qualification : PUC ☐ Degree ☐ Master Degree ☐ Any other ............

5. Designation : President ☐ Secretary ☐ Correspondent ☐

Head Master / Principal ☐ Any other ........................................

6. Management : Private ☐ Aided ☐ unaided ☐ Government ☐

7. Year of establishment :

8. Aims and objectives of the establishment of Schools / Colleges

a) Give Education to all ☐ b) Education to Backward Class and down trodden people ☐

c) To give knowledge ☐ d) Service to community ☐

e) Development of the Society ☐ f) Any other (Please specify)........................................

9. Type of education given

a) Primary ☐ b) Hr. Primary ☐ c) Secondary ☐ d) Pre-University ☐

e) Graduation ☐ f) Post –Graduation ☐ g) Any other ........................................

10. Faculty Strength

a) Male ------------------------ b) Female ----------------------------

11. Number of Faculty

☐ ☐ ☐ ☐

SC ST OBC GM

12. Student Strength

a) Male ------------------------ b) Female -----------------------------

13. Community Development Programmes Conducted through the Institution.

a) NSS (Social Service) ☐ b) Scouts /Guides ☐ c) PTA ☐

d) Workshops / Seminars ☐ e) Any other ..............................................

14. Employment Generation

a) Agricultural Sector ☐ b) Industrial Sector ☐

c) Trade & Commerce ☐ d) Any other ........................................

15. Do you find any problems in imparting education to the Society

1)

2)

3)

4)

5)

16. Suggestions towards the improvement of present education system

1)

2)

3)

4)

17. How do you feel about the education system in Christian Missionarys Institutions in Puttur Taluk

a) Very Good ☐ b) Good ☐ c) Satisfactory ☐

# Questionnaire

Note : 1. Please answer all questions

2. Please put tick mark into ☐ and give your views wherever applicable.

3. Please strike out Whichever is not applicable

## BENEFICIARIES REACTIONS

1. Name :

2. Gender : Male ☐ Female ☐

3. Age group : Below 15 ☐ 16-30 ☐ 31-45 ☐ 46 and Above ☐

4. Designation : Student ☐ Teacher ☐ Lecturer ☐ other ☐

5. Nature of the Institution: Private ☐ Aided ☐ Government ☐ other ☐

6. Qualification : Below SSLC ☐ SSLC ☐ PUC ☐ Degree ☐ Master Degree ☐
(Highest degree) M.Phil ☐ Ph.D ☐ Any other (Specify) ............ ☐

7. Whether you have benefited from this Institution

Yes ☐ No ☐

8. If yes in what manner

a) Employment ☐ b) Improvement in Skill ☐

c) In-building personality ☐ d) Any other ☐

9. Whether this Institution has contributed towards the development of the Society?

Yes ☐ No ☐

10. If yes,

a) Knowledge awareness b) Improvement in the agricultural sector

c) Improvement in Industrial sector d) Service Sector e) Any other ........................................

Based on your association with this Institution how do you rate for the following ?

(a. Excellent b. Good c. Fair d. Poor)

| | | A | B | C | d |
|---|---|---|---|---|---|
| 11. Facilities in the School campus | Play ground | | | | |
| | General Facilities | | | | |
| | Environment | | | | |
| | Drinking Water | | | | |
| | Toilet | | | | |
| 12. Education Standard in the School | | | | | |
| 13. Teachers Standard | | | | | |
| 14. Teaching Facilities in the School | Programme | | | | |
| | Instruction | | | | |
| | Teaching Machines | | | | |
| | Computer Assisted Instruction | | | | |
| | Smart class | | | | |
| | Flexible Scheduling | | | | |
| 15. Other learning friendly support base and environment in the Institution's Campus | Team Teaching | | | | |
| | Evaluation Of learning | | | | |
| | Reporting to parents | | | | |
| | Student regulation control | | | | |
| | Learning styles | | | | |
| | Home work | | | | |
| | Policies and Practices | | | | |
| | Field Trips | | | | |
| | Extra-Curricular Programmes | | | | |
| | Guidance – counseling Programmers | | | | |
| 16. Infra –structural Facilities in the campus | School buildings | | | | |
| | Lighting /Fan | | | | |
| | Space | | | | |
| | Safety | | | | |
| 17. Student out of school activities | Recreation | | | | |

| | | | | |
|---|---|---|---|---|
| Sports | | | | |
| Cultural activity | | | | |
| Reading | | | | |
| 18. Teacher out – of School activities | | | | |
| 19. Independent study Programmes | | | | |
| 20. Educational organizations (recognition affiliation level) Local | | | | |
| State | | | | |
| National | | | | |
| Any other | | | | |
| 21. Racial integration | | | | |
| 22. Non-school sponsored social organizations or clubs | | | | |
| 23. How would you rate the parent support of your school ? | | | | |
| 24. How would you rate your morale as a teacher in the institution? | | | | |
| 25. How would you rate the Management of the Institution | | | | |
| 26. Primary support given by the Institution to the students (people) in terms of moral and knowledgeable support to start Industry | | | | |
| Trade | | | | |
| Agriculture | | | | |
| Any other | | | | |
| 27. In comparison with other similar institutions around, How do you rate this (your) institution | | | | |

28. Do you feel that this Institution played a major role in eradicating the social evils by imparting education to depressed class people?

Yes ☐ No ☐

29. Whether you think that those who got education in this institution, helped them to get better social status

Yes ☐ No ☐

30. Do you think that other educational Institutions opted to adopt the models of your Institution?

Yes ☐ No ☐

31 Government Institutions (Schools) wielded influence on other Institutions?

Yes ☐ No ☐

32. Government Institutions (Schools) played a role in a wakening the people and to imbibe in them the spirit of reasoning

Yes ☐ No ☐

33. Government Institutions (Schools) played a role in transforming the traditional society into the modern Society

Yes ☐ No ☐

34. Do you find any problems in imparting education to society

1.
2.
3.
4.
5.

35. Suggestions towards the improvement of present education system.

1.
2.
3.
4.
5.

36. How do you feel about the education system in Christian Missionaries Institutions in Puttur Taluk.

a) Very good ☐ b) Good ☐ c) Satisfactory ☐

# Questionnaire

Note : 1. Please answer all questions

2. Please put tick mark into ☐ and give your views wherever applicable.

## MANAGEMENT PROFILE

1.Name :

2. Gender : Male ☐ Female ☐

3. Age : Below 40 ☐ Below 50 ☐ Below 60 ☐ Above 60 ☐

4. Qualification : PUC ☐ Degree ☐ Master Degree ☐ Any other ............

5. Designation : President ☐ Secretary ☐ Correspondent ☐

Head Master / Principal ☐ Any other ............................................

6. Management : Private ☐ Aided ☐ unaided ☐

7. Year of establishment :

8. Aims and objectives of the establishment of Schools / Colleges by the Missionaries / Christian Organizations.

a) Give Education to all ☐ b) Education to Backward Class and downtrodden people ☐

c) Evangelism through education ☐ d) To give knowledge ☐

e) Service to community ☐ f) Development of the Society ☐

g) Any other (Please specify)............................................................

9. Type of education given

a) Primary ☐ b) Hr. Primary ☐ c) Secondary ☐ d) Pre-University ☐

e) Graduation ☐ f) Post –Graduation ☐ g) Any other ............................................

10. Faculty Strength

a) Male ------------------------ b) Female ----------------------------

11. Number of Faculty

SC ☐ ST ☐ OBC ☐ GM ☐

12. Student Strength

a) Male ------------------------ b) Female -----------------------------

13. Community Development Programmes Conducted through the Institution.

a) NSS (Social Service) ☐ b) Scouts /Guides ☐ c) PTA ☐

d) Workshops / Seminars ☐ e) Any other ................................................

14. Employment Generation

a) Agricultural Sector ☐ b) Industrial Sector ☐ c) Trade & Commerce

d) Any other ........................................

15. Do you find any problems in imparting education to the Society

1)

2)

3)

4)

5)

16. Suggestions towards the improvement of present education system

1)

2)

3)

4)

# Questionnaire

Note : 1. Please answer all questions

2. Please put tick mark into ☐ and give your views wherever applicable.

3. Please strike out Whichever is not applicable

## BENEFICIARIES REACTIONS

1.Name :

2. Gender : Male ☐ Female ☐

3. Age group : Below 15 ☐ 16-30 ☐ 31-45 ☐ 46 and Above ☐

4. Designation : Student ☐ Teacher ☐ Lecturer ☐ other ☐

5. Nature of the Institution: Private ☐ Aided ☐ Government ☐ others ☐

6. Qualification : Below SSLC ☐ SSLC ☐ PUC ☐ Degree ☐ Master Degree ☐

(Highest degree) M.Phil ☐ Ph.D ☐ Any other (Specify) ............

7. Whether you have benefited from this Institution

Yes ☐ No ☐

8. If yes in what manner

a) Employment ☐ b) Improvement in Skill ☐

c) In-building personality ☐ d) Any other ☐

9. Whether this Institution has contributed towards the development of the Society?

Yes ☐ No ☐

10. If yes ,

a) Knowledge awareness b) Improvement in the agricultural sector

c) Improvement in Industrial sector d) Service Sector e) Any other ......................................

Based on your association with the Missionary/ Christian Institution how do you rate for the following ?

(a. Excellent b. Good c. Fair d. Poor)

| | | A | B | C | D |
|---|---|---|---|---|---|
| 11. Facilities in the School campus | Play ground | | | | |
| | General Facilities | | | | |
| | Environment | | | | |
| | Drinking Water | | | | |
| | Toilet | | | | |
| 12. Education Standard in the School | | | | | |
| 13. Teachers Standard | | | | | |
| 14. Teaching Facilities in the School | Programme | | | | |
| | Instruction | | | | |
| | Teaching Machines | | | | |
| | Computer Assisted Instruction | | | | |
| | Smart class | | | | |
| | Flexible Scheduling | | | | |
| 15. Other learning friendly support base and environment in the Institution's Campus | Team Teaching | | | | |
| | Evaluation Of learning | | | | |
| | Reporting to parents | | | | |
| | Student regulation control | | | | |
| | Learning styles | | | | |
| | Home work | | | | |
| | Policies and Practices | | | | |
| | Field Trips | | | | |
| | Extra-Curricular Programmes | | | | |
| | Guidance – counseling Programmer | | | | |
| 16. Infra –structural Facilities in the campus | School buildings | | | | |
| | Lighting /Fan | | | | |

| | | | | | |
|---|---|---|---|---|---|
| | Space | | | | |
| | Safety | | | | |
| 17. Student out of school activities | Recreation | | | | |
| | Sports | | | | |
| | Cultural activity | | | | |
| | Reading | | | | |
| 18. Teacher out – of School activities | | | | | |
| 19. Independent study Programmes | | | | | |
| 20. Educational organizations (recognition affiliation level) | Local | | | | |
| | State | | | | |
| | National | | | | |
| | Any other | | | | |
| 21. Racial integration | | | | | |
| 22. Non-school sponsored social organization or clubs | | | | | |
| 23. How would you rate the parent support of your school ? | | | | | |
| 24. How would you rate your morale as a teacher in the institution? | | | | | |
| 25. How would you rate the Management of the Institution | | | | | |
| 26. Primary support given by the Institution to the students (people) in terms of moral and knowledgeable support to start | Industry | | | | |
| | Trade | | | | |
| | Agriculture | | | | |
| | Any other | | | | |
| 27. In comparison with other similar institutions around, How do you rate this (your) institution | | | | | |

28. Do you feel that this missionary/ Christian Institutions played a major role in eradicating the social evils by imparting education to depressed class people?

Yes ☐ No ☐

29. Whether you think that those who got education in the institutions, missionary/ Christian helped them to get better social status

Yes ☐ No ☐

30. Do you think that other educational Institutions opted to adopt the models of missionary/Christian Institutions?

Yes ☐ No ☐

31 Missionary / Christian Institutions (Schools) wielded influence on other Institutions?

Yes ☐ No ☐

32. Are you aware of the fact that Missionary/ Christian Institutions are the pioneering organizations in the education sector in Dakshina Kannada district

Yes ☐ No ☐

33. Missionary Institutions played a role in awakening the people and to imbibe in them the spirit of reasoning

Yes ☐ No ☐

34. It played a role in transforming the traditional society into the modern society

Yes ☐ No ☐

35. Do you find any problems in imparting education to the Society

1.
2.
3.
4.
5.

36. Suggestions towards the improvement of present education system

1.
2.
3.
4.
5.

# ಬಾಸೆಲ್ ಮಿಶನ್ ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳು

## ಅನುಬಂಧ – ೧

| ಕ್ರ.ಸಂ | ಶಾಲೆಯ ಹೆಸರು | ಸ್ಥಳ | ಸ್ಥಾಪನೆ |
|---|---|---|---|
| ೧ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಮಂಗಳೂರು | ಹಳೆಯಂಗಡಿ | ೧೮೪೦ |
| ೨ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಮಂಗಳೂರು | ಕೊಣಾಜೆ | ೧೮೪೫ |
| ೩ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಮಂಗಳೂರು | ಮೂಲ್ಕಿ | ೧೮೫೩ |
| ೪ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಮಂಗಳೂರು | ಹಂಪನಕಟ್ಟೆ | ೧೮೫೫ |
| ೫ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ | ಉಡುಪಿ | ೧೮೫೫ |
| ೬ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಉಚ್ಚಿಲ | ಮೂಳೂರು | ೧೮೫೮ |
| ೭ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ | ಪಾದೂರು | ೧೮೬೨ |
| ೮ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ,ಮಟ್ಟಾರು | ಶಿರ್ವಾ | ೧೮೬೫ |
| ೯ | ಯು.ಬಿ ಎಂ.ಸಿ ಹಿರಿಯ ಪ್ರಾಥಮಿಕ ಶಾಲೆ, ಮೂಲ್ಕಿ | ಕಾರ್ನಾಡು | ೧೮೬೯ |
| ೧೦ | ಯು.ಬಿ ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ | ಗುಡ್ಡೆ ಪಾಂಗಾಳ | ೧೮೭೦ |
| ೧೧ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ | ಮಲ್ಪೆ | ೧೮೮೧ |
| ೧೨ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ | ಉದ್ಯಾವರ | ೧೮೮೩ |
| ೧೩ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಮಂಗಳೂರು | ಬೊಕ್ಕಪಟ್ಣ | ೧೮೮೪ |
| ೧೪ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಮಂಗಳೂರು | ಜೆಪ್ಪು | ೧೮೮೫ |
| ೧೫ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಮುದರಂಗಡಿ | ಸಾಂತೂರು | ೧೮೮೫ |
| ೧೬ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಕಾರ್ಕಳ | ದೂಪದಕಟ್ಟೆ | ೧೮೮೭ |
| ೧೭ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ | ಕುಂದಾಪುರ | ೧೮೯೧ |
| ೧೮ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಮಂಗಳೂರು | ಮಡಿಕೇರಿ ಗುಡ್ಡೆ | ೧೮೯೨ |
| ೧೯ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಕಾರ್ಕಳ | ಬಜಗೋಳಿ | ೧೮೯೭ |
| ೨೦ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಕಾಸರಗೋಡು | ಹೊಸದುರ್ಗ | ೧೮೯೭ |
| ೨೧ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ | ಕಾರ್ಕಳ | ೧೯೦೦ |
| ೨೨ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ | ಕಲ್ಲಂಬಾಡಿ | ೧೯೦೫ |
| ೨೩ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಮಂಗಳೂರು | ಬಲ್ಮಠ | ೧೯೧೨ |
| ೨೪ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ,ಮಂಗಳೂರು | ಜಪ್ಪಿನಮೊಗರು | ೧೯೩೨ |
| ೨೫ | ಯು.ಬಿ.ಎಂ.ಸಿ.ಹಿರಿಯ ಪ್ರಾಥಮಿಕ ಶಾಲೆ, ಪುತ್ತೂರು | ಮಂಜಲ್ಪಡ್ಪು | ೧೯೬೧ |

| | | | |
|---|---|---|---|
| ೧ | ಕ್ರಿಶ್ಚಿಯನ್ ಆಂಗ್ಲ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆ | ಉಡುಪಿ | ೧೯೬೫ |
| ೨ | ಕಿಟ್ಟೆಲ್ ಮೆಮೋರಿಯಲ್ ಪ್ರೌಢಶಾಲೆ | ಗೋರಿಗುಡ್ಡ | ೧೯೮೨ |
| ೩ | ಸಿಎಸ್ಐ ಪ್ರೌಢಶಾಲೆ ಉಚ್ಚಿಲ | ಮೂಳೂರು | ೧೯೯೩ |
| ೪ | ಕಿಟ್ಟೆಲ್ ಮೆಮೋರಿಯಲ್ ಸಂಯುಕ್ತ ಪದವಿ ಪೂರ್ವ ಕಾಲೇಜು | ಗೋರಿಗುಡ್ಡ | ೧೯೯೪ |
| ೫ | ಸಿಎಸ್ಐ ಆಂಗ್ಲ ಮಾಧ್ಯಮ ಶಾಲೆ, ಮೂಲ್ಕಿ | ಕಾರ್ನಾಡು | ೧೯೯೬ |
| ೬ | ಸಿಎಸ್ಐ ಪ್ರೌಢಶಾಲೆ, ಮೂಲ್ಕಿ | ಕಾರ್ನಾಡು | ೧೯೯೬ |
| ೭ | ಸಿಎಸ್ಐ ಆಂಗ್ಲ ಮಾಧ್ಯಮ ಶಾಲೆ, ಮಂಗಳೂರು | ಬೊಕ್ಕಪಟ್ಣ | ೧೯೯೭ |
| ೮ | ಕ್ರಿಶ್ಚಿಯನ್ ಪ್ರೌಢಶಾಲೆ | ಉಡುಪಿ | ೧೯೯೮ |
| ೯ | ಸಿಎಸ್ಐ ಯುನಿಟಿ ಆಂಗ್ಲ ಮಾಧ್ಯಮ ಶಾಲೆ, ಉಚ್ಚಿಲ | ಮುಳೂರು | ೧೯೯೮ |
| ೧೦ | ಸಿಎಸ್ಐ ಆಂಗ್ಲ ಮಾಧ್ಯಮ ಶಾಲೆ | ಹಳೆಯಂಗಡಿ | ೧೯೯೯ |
| ೧೧ | ಕ್ರಿಶ್ಚಿಯನ್ ಸಂಯುಕ್ತ ಪದವಿ ಪೂರ್ವ ಕಾಲೇಜು | ಉಡುಪಿ | ೨೦೦೦ |
| ೧೨ | ಸಿಎಸ್ಐ ಕ್ರಿಸ್ತಶಾಂತಿ ಇಂಗ್ಲೀಷ್ ಸ್ಕೂಲ್ | ಉದ್ಯಾವರ | ೨೦೦೧ |
| ೧೩ | ಸಿಎಸ್ಐ ಇಂಗ್ಲೀಷ್ ಮಾಧ್ಯಮ ಶಾಲೆ | ಕೃಷ್ಣಾಪುರ | ೨೦೦೧ |

(ಕೃಪೆ: ಬೆಳ್ಳಿಹಬ್ಬದ ಸ್ಮರಣ ಸಂಚಿಕೆ, ಕರ್ನಾಟಕ ಸದರ್ನ್ ಡಯಾಸಿಸ್ ಎಜುಕೇಶನ್ ಸೊಸೈಟಿ (ರಿ) ಮಂಗಳೂರು (೧೯೭೪-೨೦೦೧); ಪೀಟರ್ ವಿಲ್ಸನ್ ಪ್ರಭಾಕರ್, "ಬಾಸೆಲ್ ಮಿಶನ್ ಇನ್ ಸೌತ್ ಕೆನರಾ" (೧೮೩೪-೧೯೪೭), ೧೯೮೮, ಪುಟಗಳು,(೧೨೬,೧೨೭)

# ಅಪೋಸ್ತಲಿಕ್ ಕಾರ್ಮೆಲ್ ಶಿಕ್ಷಣ ಸಂಸ್ಥೆಗಳು

## ಅನುಬಂಧ – ೨

**ಪ್ರಾಥಮಿಕ ಶಾಲೆಗಳು:**

- ಕಾರ್ಮೆಲ್ ಇಂಗ್ಲೀಷ್ ಸ್ಕೂಲ್, ಮಂಗಳೂರು
- ಸೈಂಟ್ ಆ್ಯನ್ಸ್ ಹಿರಿಯ ಪ್ರಾಥಮಿಕ ಶಾಲೆ, ಬೋಳಾರ, ಮಂಗಳೂರು
- ಸೈಂಟ್ ಆ್ಯನ್ಸ್ ಕಾರ್ಮೆಲ್ ಪ್ರಿಪರೇಟರಿ ಸ್ಕೂಲ್ ಮಂಗಳೂರು
- ಸೈಂಟ್ ಆ್ಯಗ್ನೇಸ್ ಇಂಗ್ಲೀಷ್ ಪ್ರೈಮರಿ ಸ್ಕೂಲ್, ಮಂಗಳೂರು
- ಸೈಂಟ್ ಆ್ಯಗ್ನೇಸ್ ಪ್ರಿಪರೇಟರಿ ಸ್ಕೂಲ್, ಮಂಗಳೂರು
- ಸೈಂಟ್ ಮೇರಿಸ್ ಇಂಗ್ಲೀಷ್ ಪ್ರೈಮರಿ ಸ್ಕೂಲ್, ಪಳ್ನೀರ್, ಮಂಗಳೂರು
- ಲೇಡಿಹಿಲ್ ಇಂಗ್ಲೀಷ್ ಪ್ರೈಮರಿ ಸ್ಕೂಲ್, ಲೇಡಿಹಿಲ್, ಮಂಗಳೂರು
- ಲೇಡಿಹಿಲ್ ಹಿರಿಯ ಪ್ರಾಥಮಿಕ ಶಾಲೆ, ಲೇಡಿಹಿಲ್, ಮಂಗಳೂರು
- ಲೇಡಿಹಿಲ್ ಇಂಗ್ಲೀಷ್ ಪ್ರೈಮರಿ ಸ್ಕೂಲ್, ಲೇಡಿಹಿಲ್, ಮಂಗಳೂರು
- ಸೈಂಟ್ ಸಿಸಿಲೀಸ್ ಇಂಗ್ಲೀಷ್ ಪ್ರೈಮರಿ ಸ್ಕೂಲ್, ಉಡುಪಿ
- ಸೈಂಟ್ ಸಿಸಿಲೀಸ್ ಪ್ರಿಪರೇಟರಿ ಸ್ಕೂಲ್, ಉಡುಪಿ
- ಸೈಂಟ್ ಸಿಸಿಲೀಸ್ ಹಿರಿಯ ಪ್ರಾಥಮಿಕ ಶಾಲೆ, ಉಡುಪಿ
- ಸ್ಟೆಲ್ಲಾ ಮಾರೀಸ್ ಪ್ರಿಪರೇಟರಿ ಸ್ಕೂಲ್, ಕೋಟೆಕಾರ್, ಮಂಗಳೂರು
- ಸೈಂಟ್ ಜೋಸೆಪ್ಸ್ ಹಿರಿಯ ಪ್ರಾಥಮಿಕ ಶಾಲೆ, ಕುಂದಾಪುರ
- ವಿದ್ಯಾ ಜ್ಯೋತಿ ಹಿರಿಯ ಪ್ರಾಥಮಿಕ ಶಾಲೆ, ಜ್ಯೋತಿನಗರ
- ಸ್ಟೆಲ್ಲಾ ಮಾರೀಸ್ ಇಂಗ್ಲೀಷ್ ಹೈಯರ್ ಪ್ರೈಮರಿ ಸ್ಕೂಲ್, ಗಂಗೊಳ್ಳಿ, ಕುಂದಾಪುರ
- ಮಡೂನ್ನಾ ಶಾಲೆ, ಕಾಸರಗೋಡು
- ಇನ್ಫೆಂಟ್ ಜೀಸಸ್ ಶಾಲೆ ಮೇರಿಹಿಲ್, ಮಂಗಳೂರು

**ಪ್ರೌಢಶಾಲೆಗಳು**

- ಸೈಂಟ್ ಆ್ಯಗ್ನೇಸ್ ಪ್ರೌಢಶಾಲೆ, ಬೆಂದೂರ್, ಮಂಗಳೂರು
- ಸೈಂಟ್ ಆ್ಯನ್ಸ್ ಪ್ರೌಢಶಾಲೆ, ಬೋಳಾರ, ಮಂಗಳೂರು
- ಲೇಡಿಹಿಲ್ ವಿಕ್ಟೋರಿಯ ಪ್ರೌಢಶಾಲೆ, ಲೇಡಿಹಿಲ್, ಮಂಗಳೂರು
- ಸೈಂಟ್ ಮೇರಿಸ್ ಪ್ರೌಢಶಾಲೆ, ಪಳ್ನೀರ್, ಮಂಗಳೂರು
- ಸೈಂಟ್ ಸಿಸಿಲೀಸ್ ಪ್ರೌಢಶಾಲೆ, ಉಡುಪಿ
- ಸೈಂಟ್ ಜೋಸೆಪ್ಸ್ ಪ್ರೌಢಶಾಲೆ, ಕುಂದಾಪುರ
- ಸ್ಟೆಲ್ಲಾ ಮಾರೀಸ್ ಇಂಗ್ಲೀಷ್ ಪ್ರೌಢಶಾಲೆ, ಗಂಗೊಳ್ಳಿ, ಕುಂದಾಪುರ
- ಕಾರ್ಮೆಲ್ ಇಂಗ್ಲೀಷ್ ಪ್ರೌಢಶಾಲೆ, ಕೋಟೆಕಾರ್, ಮಂಗಳೂರು
- ಕಾರ್ಮೆಲ್ ಪ್ರೌಢಶಾಲೆ, ಕೆಮ್ಮಣ್ಣು, ಉಡುಪಿ
- ಹೋಲಿ ರೋಜರಿ ಪ್ರೌಢಶಾಲೆ, ಮೂಡಬಿದ್ರೆ
- ಕಾರ್ಮೆಲ್ ಪ್ರೌಢಶಾಲೆ, ಮೊಡಂಕಾಪು, ಬಂಟ್ವಾಳ

## ಪದವಿಪೂರ್ವ ಕಾಲೇಜು

- ❖ ಸೈಂಟ್ ಆ್ಯನ್ಸ್ ಪದವಿ ಪೂರ್ವ ಕಾಲೇಜು, ಮಂಗಳೂರು
- ❖ ಸೈಂಟ್ ಆ್ಯಗ್ನೆಸ್ ಪದವಿ ಪೂರ್ವ ಕಾಲೇಜು, ಬೆಂದೂರ್, ಮಂಗಳೂರು
- ❖ ಸೈಂಟ್ ಮೇರಿಸ್ ಪದವಿ ಪೂರ್ವ ಕಾಲೇಜು, ಫಳ್ನೀರ್, ಮಂಗಳೂರು
- ❖ ಲೇಡಿಹಿಲ್ ಪದವಿ ಪೂರ್ವ ಕಾಲೇಜು, ಲೇಡಿಹಿಲ್, ಮಂಗಳೂರು
- ❖ ಸೈಂಟ್ ಸಿಸಿಲೀಸ್ ಪದವಿ ಪೂರ್ವ ಕಾಲೇಜು, ಉಡುಪಿ
- ❖ ಕಾರ್ಮೆಲ್ ಪದವಿ ಪೂರ್ವ ಕಾಲೇಜು, ಮೊಡಂಕಾಪು, ಬಂಟ್ವಾಳ
- ❖ ಹೋಲಿ ರೋಜರಿ ಪದವಿ ಪೂರ್ವ ಕಾಲೇಜು, ಮೂಡಬಿದ್ರೆ

## ಪದವಿ ಕಾಲೇಜು

- ❖ ಸೈಂಟ್ ಆ್ಯಗ್ನೆಸ್ ಪದವಿ ಕಾಲೇಜು, ಬೆಂದೂರ್, ಮಂಗಳೂರು

## ತರಬೇತಿ ಶಾಲೆ/ ಕಾಲೇಜುಗಳು

- ❖ ಸೈಂಟ್ ಆ್ಯನ್ಸ್ ಶಿಕ್ಷಕಿಯರ ತರಬೇತಿ ಸಂಸ್ಥೆ, ಬೋಳಾರ, ಮಂಗಳೂರು
- ❖ ಸೈಂಟ್ ಆ್ಯನ್ಸ್ ಕಾಲೇಜು ಆಫ್ ಎಜ್ಯುಕೇಶನ್, ಬೋಳಾರ, ಮಂಗಳೂರು
- ❖ ವಿಜಯಾಪಾರಿ ತಾಂತ್ರಿಕ ಸಂಸ್ಥೆ, ಮೇರಿಹಿಲ್, ಮಂಗಳೂರು
- ❖ ಸೈಂಟ್ ಆಗ್ನೆಸ್ ಸ್ಪೆಷಲ್ ಸ್ಕೂಲ್, ಬೆಂದೂರ್, ಮಂಗಳೂರು

(ಕೃಪೆ : ಡೈರೆಕ್ಟರಿ ೨೦೧೧ ಡಯಾಸಿಸ್ ಆಫ್ ಮ್ಯಾಂಗಲೋರ್, ಪುಟಗಳು ೭೧೦. ೭೧೧
'ಕಾರ್ಮೆಲ' ಆನ್ನಲ್ಸ್ ಆಫ್ ದ ಅಪೋಸ್ತಲಿಕ್ ಕಾರ್ಮೆಲ್, ಪುಟಗಳು ೯, ೧೦,೧೧)

## ಯೇಸು ಸಭೆ (Jesuits) ಸಂಸ್ಥೆಗಳು

### ಅನುಬಂಧ – ೩

- ಸೈಂಟ್ ಅಲೋಶಿಯಸ್ ಪ್ರಾಥಮಿಕ ಶಾಲೆ, ಮಂಗಳೂರು
- ಸೈಂಟ್ ಅಲೋಶಿಯಸ್ ಮಾಧ್ಯಮಿಕ ಶಾಲೆ, ಮಂಗಳೂರು
- ಸೈಂಟ್ ಅಲೋಶಿಯಸ್ ಪ್ರೌಢಶಾಲೆ, ಮಂಗಳೂರು
- ಸೈಂಟ್ ಅಲೋಶಿಯಸ್ ಸಂಧ್ಯಾ ಪ್ರೌಢಶಾಲೆ, ಮಂಗಳೂರು
- ಸೈಂಟ್ ಅಲೋಶಿಯಸ್ ಪದವಿ ಪೂರ್ವ ಕಾಲೇಜು, ಮಂಗಳೂರು
- ಸೈಂಟ್ ಅಲೋಶಿಯಸ್ ಸಂಧ್ಯಾ ಪದವಿ ಪೂರ್ವ ಕಾಲೇಜು, ಮಂಗಳೂರು
- ಸೈಂಟ್ ಅಲೋಶಿಯಸ್ ಕಾಲೇಜು, ಮಂಗಳೂರು
- ಸೈಂಟ್ ಅಲೋಶಿಯಸ್ ಸಂಧ್ಯಾ ಕಾಲೇಜು, ಮಂಗಳೂರು
- ಸೈಂಟ್ ಅಲೋಶಿಯಸ್ ಕೈಗಾರಿಕಾ ತರಬೇತಿ, ಕೇಂದ್ರ ಮಂಗಳೂರು
- ಸೈಂಟ್ ಅಲೋಶಿಯಸ್ ಮೋಟಾರ್ ಡ್ರೈವಿಂಗ್ ಶಾಲೆ, ಮಂಗಳೂರು
- ಸೈಂಟ್ ಅಲೋಶಿಯಸ್ ಇನ್‌ಸ್ಟಿಟ್ಯೂಟ್ ಆಫ್ ಕಂಪ್ಯೂಟರ್ ಸೈನ್ಸ್, ಮಂಗಳೂರು
- ಸೈಂಟ್ ಅಲೋಶಿಯಸ್ ಇನ್‌ಸ್ಟಿಟ್ಯೂಟ್ ಆಫ್ ಸೋಶಿಯಲ್ ವರ್ಕ್, ಮಂಗಳೂರು
- ಸೈಂಟ್ ಅಲೋಶಿಯಸ್ ಕಾಲೇಜು ಆಫ್ ಬ್ಯುಶಿನೆಸ್ ಅಡ್ಮಿನಿಸ್ಟ್ರೇಶನ್
- ಇನ್‌ಸ್ಟಿಟ್ಯೂಟ್ ಆಫ್ ಕೊಂಕಣಿ
- ಸೈಂಟ್ ಅಲೋಶಿಯಸ್ ಪದವಿ ಪೂರ್ವ ಕಾಲೇಜು, ಹರಿಹರ

(ಕೃಪೆ : ದ ಪೋಸ್ಟ್ - ಸೆಂಟಿನರಿ ಸಿಲ್ವರ್ ಜುಬಿಲಿ ಸಾವೆಸಿಯರ್, ಸೈಂಟ್ ಅಲೋಶಿಯಸ್ ಕಾಲೇಜು ಇನ್‌ಸ್ಟಿಟ್ಯೂಷನ್ಸ್, ಮ್ಯಾಂಗಲೂರ್, ೨೦೦೫ , ಪುಟ ೯೧ ; ಡೈರೆಕ್ಟರಿ – ೨೦೧೧, ಡಯಾಸಿಸ್ ಆಫ್ ಮ್ಯಾಂಗಲೂರ್ ಪುಟ ೨೧೨)

## ಅರ್ಸುಲಾಯ್ನ್ ಶಿಕ್ಷಣ ಸಂಸ್ಥೆಗಳು

### ಅನುಬಂಧ – ೪

| ಸಂಸ್ಥೆಯ ಹೆಸರು | ಸ್ಥಳ |
|---|---|
| ❖ ಲೂರ್ಡ್ಸ್ ಹೈಸ್ಕೂಲ್, ಬಿಜೈ | ಮಂಗಳೂರು |
| ❖ ಸೈಂಟ್ ಥೆರೆಸಾಸ್ ಹೈಸ್ಕೂಲ್ | ಬೆಳ್ತಂಗಡಿ |
| ❖ ಅಮೃತ್ ಲಾಲ್‌ಜೀ ಹೈಸ್ಕೂಲ್ | ಕೆಲರಾಯ್ |
| ❖ ಸೈಂಟ್ ಮೇರಿಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ವೊರ್ಕಾಡಿ |
| ❖ ನವಚೇತನ ಸ್ಪೆಶಲ್ ಸ್ಕೂಲ್ | ವೇಣೂರು |
| ❖ ಗೃಹಿಣಿ ಸ್ಕೂಲ್ | ವೇಣೂರು |
| ❖ ಮೇರಿಯನ್ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ | ಜೆಪ್ಪು |

(ಕೃಪೆ : ಡೈರೆಕ್ಟರಿ- ೨೦೧೧, ಡಯಾಸಿಸ್ ಆಫ್ ಮ್ಯಾಂಗಲೂರ್, ಪುಟ ೨೧೨)

## ಸಿಸ್ಟರ್ಸ್ ಆಫ್ ಚಾರಿಟಿ ಶಿಕ್ಷಣ ಸಂಸ್ಥೆಗಳು

### ಅನುಬಂಧ – ೫

- ಕಪಿತಾನಿಯೊ ಶಿಕ್ಷಕ ತರಬೇತಿ ಸಂಸ್ಥೆ, ಅಂಜೆಲೂರ್ ಮಂಗಳೂರು
- ಕಪಿತಾನಿಯೊ ಪದವಿ ಪೂರ್ವ ಕಾಲೇಜು, ಅಂಜೆಲೂರ್, ಮಂಗಳೂರು
- ಕಪಿತಾನಿಯೊ ಪ್ರಾಥಮಿಕ ಶಾಲೆ, ಅಂಜೆಲೂರ್, ಮಂಗಳೂರು
- ಕಪಿತಾನಿಯೊ ಪ್ರೌಢಶಾಲೆ, ಅಂಜೆಲೂರ್, ಮಂಗಳೂರು
- ಸೈಂಟ್ ಜೆರೊಸಾ ಜೆಪ್ಪು, ಮಂಗಳೂರು
- ನಿರ್ಮಲ ಪ್ರೌಢಶಾಲೆ, ಬ್ರಹ್ಮಾವರ, ಉಡುಪಿ
- ಮೇರಿನೋಲ್ ಪ್ರೌಢಶಾಲೆ, ಬಾರ್ಕೂರು, ಉಡುಪಿ

(ಕೃಪೆ : ಡೈರೆಕ್ಟರಿ -೨೦೧೧ ಡಯಾಸಿಸ್ ಆಫ್ ಮ್ಯಾಂಗಲೂರ್ ಪುಟ ೨೧೧)

## ಕಥೋಲಿಕ ಶಿಕ್ಷಣ ಮಂಡಳಿಯ ಅಧೀನದಲ್ಲಿರುವ ಬಾಲವಾಡಿ / ಅಂಗನವಾಡಿ / ಕಿರಿಯ/ ಹಿರಿಯ ಪ್ರಾಥಮಿಕ ಶಾಲೆಗಳು

### ಅನುಬಂಧ– ೬

| ಕ್ರ.ಸಂ | ಸಂಸ್ಥೆಯ ಹೆಸರು | ವಿಳಾಸ |
|---|---|---|
| ೧ | ಪ್ರಿಮರೋಸ್ ಬಾಲವಾಡಿ | ಅಗ್ರಾರ್, ಬಂಟ್ವಾಳ |
| ೨ | ಚರ್ಚ್ ನರ್ಸರಿ ಶಾಲೆ | ಅಜೆಕಾರ್, ಕಾರ್ಕಳ |
| ೩ | ಸಂತ ಜಾನರ ಬಾಲವಾಡಿ | ಅಲ್ಲಿಪಾದೆ, ಬಂಟ್ವಾಳ |
| ೪ | ಸಂತ ಪೀಟರ್ ಕ್ಲೇವರ್ ಪ್ರಾಥಮಿಕ ಶಾಲೆ | ಅರ್ವಾ, ಅಳದಂಗಡಿ |
| ೫ | ಸೇಕ್ರೆಡ್ ಹಾರ್ಡ್ ಪ್ರಾಥಮಿಕ ಶಾಲೆ | ತೊಡಂಬಿಲ, ಬಂಟ್ವಾಳ |
| ೬ | ಬಾಳ್ ಕ್ರೈಸ್ತ ನರ್ಸರಿ ಸ್ಕೂಲ್ | ಕಾಸ್ಸಿಯಾ, ಮಂಗಳೂರು |
| ೭ | ಮರಿಯ ಗೊರಟ್ಟಿ ಪ್ರಾಥಮಿಕ ಶಾಲೆ | ಹಿರ್ಗಾಣ್, ಕುಕ್ಕುಂದೂರು |
| ೮ | ಸಂತ ಆ್ಯನಿ ಪ್ಲೇ ಸ್ಕೂಲ್ | ಕಡಬ, ಪುತ್ತೂರು |
| ೯. | ಮಿಲಾಗ್ರಿಸ್ ಇಂಗ್ಲೀಷ್ ಮಾಧ್ಯಮ ಶಾಲೆ | ಕಲ್ಯಾಣಪುರ, ಉಡುಪಿ |
| ೧೦ | ಮೌಂಟ್ ರೋಜರಿ ಇಂಗೀಷ್ ಮಾಧ್ಯಮ ಶಾಲೆ | ಸಂತೆಕಟ್ಟೆ, ಉಡುಪಿ |
| ೧೧ | ಇನ್ಫೆಂಟ್ ಮೇರಿಸ್ ಪ್ರಾಥಮಿಕ ಶಾಲೆ | ಕಾಟಿಪಳ್ಳ, ಮಂಗಳೂರು |
| ೧೨ | ಸಂತ ಆ್ಯನ್ ಇಂಗ್ಲೀಷ್ ಮಾಧ್ಯಮ ಶಾಲೆ | ಕೆಲರಾಯ, ಪೆದಮಾಲೆ, ಮಂಗಳೂರು |
| ೧೩ | ಸೈಂಟ್ ಫ್ರಾನ್ಸಿಸ್ ಇಂಗ್ಲೀಷ್ ಮಾಧ್ಯಮ ಶಾಲೆ | ಕೆನ್ನ, ಪಿಲಾರ್ |
| ೧೪ | ಸಂತ ತೋಮಸರ ಪ್ರಾಥಮಿಕ ಶಾಲೆ | ಕೊಲ್ಲಂಗಾಣ ಕಲ್ಲಕಟ್ಟ, ಕಾಸರಗೋಡು |
| ೧೫ | ಸೈಂಟ್ ಮೋನಿಕಾ ಇಂಗ್ಲೀಷ್ ಮಾಧ್ಯಮ ಶಾಲೆ | ಕುಂಬ್ಳ, ಕೇರಳ |
| ೧೬ | ಸಂತ ಮೇರಿಯ ಕನ್ನಡ ಮಾಧ್ಯಮ ಶಾಲೆ | ಕುಂದಾಪುರ |
| ೧೭ | ರೋಜರಿ ಕಿಂಡರ್ ಗಾರ್ಟನ್ ಹಾಗೂ ಪ್ಲೇ ಸ್ಕೂಲ್ | ಕುಂದಾಪುರ |
| ೧೮ | ಲೊರೆಟ್ಟೊ ಇಂಗ್ಲೀಷ್ ಮಾಧ್ಯಮ ಶಾಲೆ | ಲೊರೆಟ್ಟೊ, ಬಂಟ್ವಾಳ |
| ೧೯ | ಸೆಕ್ರೇಡ್ ಹಾರ್ಟ್ ಇಂಗ್ಲೀಷ್ ಮಾಧ್ಯಮ ಶಾಲೆ | ಮಡಂತ್ಯಾರು |
| ೨೦ | ಕ್ರೈಸ್ಟ್ ಸ್ಕೂಲ್ | ಅಲೆವೂರು, ಮಣಿಪಾಲ |
| ೨೧ | ಇನ್ಫೆಂಟ್ ಜೀಸಸ್ ಇಂಗೀಷ್ ನರ್ಸರಿ ಸ್ಕೂಲ್ | ಮಂಜೇಶ್ವರ, ಕಾಸರಗೋಡು |
| ೨೨ | ಇನ್ಫೆಂಟ್ ಜೀಸಸ್ ಇಂಗೀಷ್ ಮೀಡಿಯಂ ಸ್ಕೂಲ್ | ಮಂಜೇಶ್ವರ, ಕಾಸರಗೋಡು |
| ೨೩ | ಮರಿಯಾಶ್ರಮ ಎ.ಎಲ್.ಪಿ ಸ್ಕೂಲ್ | ಕುಂಜತ್ತೂರು- ಕಾಸರಗೋಡು |
| ೨೪ | ಮಿಲಾಗ್ರಿಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಮಿಲಾಗ್ರಿಸ್, ಮಂಗಳೂರು |
| ೨೫ | ಫಾತಿಮಾ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಮಿಯಪದವು, ಮಂಜೇಶ್ವರ |

| | | |
|---|---|---|
| ೨೬ | ದೇವಮಾತಾ ಪ್ರಾಥಮಿಕ ಶಾಲೆ | ಮೊಗರ್ನಾಡ್, ಕಲ್ಲಡ್ಕ |
| ೨೭ | ಸಂತ ತೋಮಸರ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಆಲಂಗಾರು, ಮೂಡಬಿದ್ರೆ |
| ೨೮ | ಹೋಲಿ ಸ್ಪಿರಿಟ್ ಇಂಗ್ಲೀಷ್ ಪ್ರೈಮರಿ ಶಾಲೆ | ಮುಕ್ಕ |
| ೨೯ | ಫಾತಿಮಾ ಎ.ಎಲ್.ಪಿ ಸ್ಕೂಲ್ | ನರಂಪಾಡಿ, ಮೊವ್ವಾರ್, ಕಾಸರಗೋ |
| ೩೦ | ಸಂತ ಜೋಸೆಪರ ಪ್ರಾಥಮಿಕ ಶಾಲೆ | ನೀರುಮಾರ್ಗ, ಮಂಗಳೂರು |
| ೩೧ | ನಿತ್ಯಾದಾರ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಪೆರ್ಮನ್ನೂರು |
| ೩೨ | ಹೋಲಿ ಫ್ಯಾಮಿಲಿ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಮೇರೆಮಜಲು, ಫರಂಗಿಪೇಟೆ |
| ೩೩ | ವಿದ್ಯೋದಯ ಎ.ಎಲ್.ಪಿ. ಸ್ಕೂಲ್ | ಪಾವೂರು, ಗೇರುಕಟ್ಟೆ, ಮಂಚಿ |
| ೩೪ | ಸೈಂಟ್ ಸೆಬಾಸ್ಟಿಯನ್ ಇಂಗ್ಲೀಷ್ ಸ್ಕೂಲ್ | ಪೆರ್ಮನ್ನೂರು |
| ೩೫ | ಸೈಂಟ್ ವಿಕ್ಟರ್ಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಪುತ್ತೂರು |
| ೩೬ | ಸವೇರಪುರ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಕಲ್ಲುಗುಂಡಿ, ಸುಳ್ಯ |
| ೩೭ | ಲಿಟ್ಲ್ ಏಂಜಲ್ ಕೆ.ಜಿ ಹಾಗೂ ಪ್ಲೇ ಸ್ಕೂಲ್ | ಸಾಸ್ತಾನ, ಉಡುಪಿ |
| ೩೮ | ಸಂತ ಅಂತೋನಿಯವರ ಕೇಂದ್ರೀಯ ಶಾಲೆ | ಸಾಸ್ತಾನ, ಉಡುಪಿ |
| ೩೯ | ಸೈಂಟ್ ಆ್ಯಂಟನೀಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಸಾಸ್ತಾನ, ಉಡುಪಿ |
| ೪೦ | ಮೌಂಟ್ ಕಾರ್ಮೆಲ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಶಿರ್ತಾಡಿ |
| ೪೧ | ಡಾನ್ ಬೋಸ್ಕೊ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಶಿರ್ವಾಂ, ಉಡುಪಿ |
| ೪೨ | ಡಾನ್ ಬೋಸ್ಕೊ ಪ್ಲೇ ಸ್ಕೂಲ್ | ಶಿರ್ವಾಂ, ಉಡುಪಿ |
| ೪೩ | ಸಂತ ಜೋಸೆಫರ ಪ್ರಿ-ಪ್ರೈಮರಿ ಶಾಲೆ | ಸುಳ್ಯ |
| ೪೪ | ಸೈಂಟ್ ಜೋಸೆಫ್ಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಸುಳ್ಯ |
| ೪೫ | ಹೋಲಿ ಫ್ಯಾಮಿಲಿ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಸುರತ್ಕಲ್, ಮಂಗಳೂರು |
| ೪೬ | ಸೈಂಟ್ ಆ್ಯಂಟನೀಸ್ ಪ್ರಾಥಮಿಕ ಶಾಲೆ | ತೋಕುರು ಮಂಗಳೂರು |
| ೪೭ | ಸಂತ ಮೇರಿಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಉಡುಪಿ |
| ೪೮ | ಸೈಂಟ್ ಫ್ರಾನ್ಸಿಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಉದ್ಯಾವರ, ಉಡುಪಿ |
| ೪೯ | ಅನುಗ್ರಹ ಇಂಗ್ಲೀಷ್ ಮಾಧ್ಯಮ ಶಾಲೆ | ಉಜಿರೆ, ಬೆಳ್ತಂಗಡಿ |
| ೫೦ | ಸಂತ ಮೇರಿಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಉಪ್ಪಿನಂಗಡಿ, ಪುತ್ತೂರು |
| ೫೧ | ಸಂತ ಮೇರಿಯವರ ನರ್ಸರಿ ಶಾಲೆ | ಉಪ್ಪಿನಂಗಡಿ, ಪುತ್ತೂರು |
| ೫೨ | ಸೈಂಟ್ ಅಲೋಶಿಯಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಉರ್ವ, ಮಂಗಳೂರು |
| ೫೩ | ಸಂತ ವಿನ್ಸೆಂಟ್ ಫೆರಾರ್ ಕಿಂಡರ್ ಗಾರ್ಟನ್ | ವಾಲೆನ್ಸಿಯ, ಮಂಗಳೂರು |
| ೫೪ | ಸೈಂಟ್ ರೀಟಾಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ವಿಟ್ಲ |
| ೫೫ | ಸಂತ ಮೇರಿಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ವರ್ಕಾಡಿ ಮಂಜೇಶ್ವರ |
| ೫೬ | ರೋಜಾರಿಯೊ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಬೋಳಾರ, ಮಂಗಳೂರು |
| ೫೭ | ಅಗಾರ್ ಚರ್ಚ್ ಪ್ರಾಥಮಿಕ ಶಾಲೆ | ಅಗ್ರಾರ್, ಬಂಟ್ವಾಳ |
| ೫೮ | ಹೋಲಿ ಸೇವಿಯರ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಅಗ್ರಾರ್, ಬಂಟ್ವಾಳ |
| ೫೯ | ಇನ್ಫೆಂಟ್ ಜೀಸಸ್ ಕನ್ನಡ ಶಾಲೆ | ಮೊಡಂಕಾಪು, ಬಂಟ್ವಾಳ |
| ೬೦ | ಇನ್ಫೆಂಟ್ ಜೀಸಸ್ ಇಂಗ್ಲೀಷ್ ಶಾಲೆ | ಮೊಡಂಕಾಪು, ಬಂಟ್ವಾಳ |
| ೬೧ | ಸೈಂಟ್ ಲಾರೆನ್ಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಬೆಳ್ಳೆ, ಉಡುಪಿ |
| ೬೨ | ಪದುವಾ ಪ್ರಾಥಮಿಕ ಶಾಲೆ | ಮಂಗಳೂರು |
| ೬೩ | ಸಂತ ಲಾರೆನ್ಸರ ಇಂಗ್ಲೀಷ್ ಮಾಧ್ಯಮ ಶಾಲೆ | ಬೊಂದೆಲ್, ಮಂಗಳೂರು |
| ೬೪ | ನಿರ್ಮಲ ಇಂಗ್ಲೀಷ್ ಮಾಧ್ಯಮ ಶಾಲೆ | ಬ್ರಹ್ಮಾವರ |
| ೬೫ | ಸೈಂಟ್ ರೀಟಾಸ್ ಇಂಗ್ಲೀಷ್ ಮೀಡಿಯಂ ಸ್ಕೂಲ್ | ಕಾಸ್ಸಿಯಾ |
| ೬೬ | ಅರ್ಸುಲರ ಹಿರಿಯ ಪ್ರಾಥಮಿಕ ಶಾಲೆ | ಬೋಳಾರ, ಮಂಗಳೂರು |
| ೬೭ | ಚರ್ಚ್ ಹಿರಿಯ ಪ್ರಾಥಮಕ ಶಾಲೆ | ಅಜೆಕಾರ್, ಕಾರ್ಕಳ |
| ೬೮ | ಸಂತ ತೋಮಸರ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ | ಅಮ್ಮೆಂಬಾಳ, ಚೇಳೂರು, ಕುರ್ನಾಡು |
| ೬೯ | ವಾಲ್ಪಾಡಿ ಹಿರಿಯ ಪ್ರಾಥಮಿಕ ಶಾಲೆ | ವಾಲ್ಪಾಡಿ, ಶಿರ್ತಾಡಿ |
| ೭೦ | ಗಾರ್ಡಿಯನ್ ಏಂಜಲ್ ಹಿರಿಯ ಪ್ರಾಥಮಿಕ ಶಾಲೆ | ಅಂಜಲೂರು, ಮಂಗಳೂರು |
| ೭೧ | ಇನ್ಫೆಂಟ್ ಮೇರಿಯವರ ಹಿರಿಯ ಪ್ರಾಥಮಿಕ ಶಾಲೆ | ನಾಲ್ಕೂರು, ಅಲಂಗಡಿ |
| ೭೨ | ಸಂತ ರಾಫಯೇಲರ ಹಿರಿಯ ಪ್ರಾಥಮಿಕ ಶಾಲೆ | ಬದ್ಯಾರ್, ಉಪ್ಪಿನಂಗಡಿ |

| | | |
|---|---|---|
| ೭೩ | ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆ | ಬಜಾಲ್, ಮಂಗಳೂರು |
| ೭೪ | ಪೆರೋಕಿಯಲ್ ಹಿರಿಯ ಪ್ರಾಥಮಿಕ ಶಾಲೆ | ಬಜ್ಪೆ, ಮಂಗಳೂರು |
| ೭೫ | ಮೇರಿನೋಲ್ ಹಿರಿಯ ಪ್ರಾಥಮಿಕ ಶಾಲೆ | ಬಾರ್ಕೂರು, ಉಡುಪಿ |
| ೭೬ | ಆರ್. ಸಿ. ಹಿರಿಯ ಪ್ರಾಥಮಿಕ.ಶಾಲೆ | ಬಸ್ರೂರು, ಉಡುಪಿ |
| ೭೭ | ಸಂತ ಫ್ರಾನ್ಸಿಸ್ ಕ್ಷೇವಿಯರ್ ಹಿರಿಯ ಪ್ರಾಥಮಿಕ ಶಾಲೆ | ಬಿಜೈ, ಮಂಗಳೂರು |
| ೭೮ | ಬೆಳ್ಳೆ ಚರ್ಚ್ ಹಿರಿಯ ಪ್ರಾಥಮಿಕ ಶಾಲೆ | ಮೂಡುಬೆಳ್ಳೆ, ಉಡುಪಿ |
| ೭೯ | ಸಂತ ಮೈಕಲರ ಹಿರಿಯ ಪ್ರಾಥಮಿಕ ಶಾಲೆ | ತೆಂಕ ಬೆಳ್ಳೂರು, ಬಂಟ್ವಾಳ |
| ೮೦ | ಕುರಿಯಾಲ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ | ತೆಂಕಬೆಳ್ಳೂರು ಬಂಟ್ವಾಳ |
| ೮೧ | ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆ | ಬೆಳ್ಮಣ್, ಉಡುಪಿ |
| ೮೨ | ಚರ್ಚ್ ಹಿರಿಯ ಪ್ರಾಥಮಿಕ ಶಾಲೆ | ಬೆಳ್ತಂಗಡಿ |
| ೮೩ | ಹೋಲಿ ರೀಡಿಮರ್ ಹಿರಿಯ ಪ್ರಾಥಮಿಕಶಾಲೆ | ಬೆಳ್ತಂಗಡಿ |
| ೮೪ | ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆ | ಗುಮ್ಮಹೊಲ, ಬೆಜ್ಪೆ |
| ೮೫ | ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆ | ನಂತೂರ್, ಮಂಗಳೂರು |
| ೮೬ | ಸಂತ ಪೌಲರ ಹಿರಿಯ ಪ್ರಾಥಮಿಕ ಶಾಲೆ | ಬಳ್ಕುಂಜೆ |
| ೮೭ | ಸಂತ ಲಾರೆನ್ಸರ ಹಿರಿಯ ಪ್ರಾಥಮಿಕ ಶಾಲೆ | ಬೊಂದೆಲ್, ಮಂಗಳೂರು |
| ೮೮ | ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆ | ಬರಿಮಾರು |
| ೮೯ | ನಿರ್ಮಲ ಹಿರಿಯ ಪ್ರಾಥಮಿಕ ಶಾಲೆ, ಬಹ್ಮಾವರ | ಬ್ರಹ್ಮಾವರ |
| ೮೦ | ಎ.ಪಿ.ಹಿರಿಯ ಪ್ರಾಥಮಿಕ ಶಾಲೆ, ಹಂದಾಡಿ | ಹಂದಾಡಿ, ಬ್ರಹ್ಮಾವರ |
| ೮೧ | ಹೋಲಿ ಕ್ರಾಸ್ ಹಿರಿಯ ಪ್ರಾಥಮಿಕ ಶಾಲೆ | ಬೈಂದೂರು |
| ೮೨ | ಸಂತ ಜಾನರ ಹಿರಿಯ ಪ್ರಾಥಮಿಕ ಶಾಲೆ | ಕಾಸ್ಸಿಯಾ, ಮಂಗಳೂರು |
| ೮೩ | ಸಂತ ಲೀಟಾರ ಹಿರಿಯ ಪ್ರಾಥಮಿಕ ಶಾಲೆ | ಕಾಸ್ಸಿಯಾ, ಮಂಗಳೂರು |
| ೮೪ | ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆ(ಕನ್ನಡ) | ಕುಲಶೇಖರ, ಮಂಗಳೂರು |
| ೮೫ | ಸಂತ ಪೀಟರನ ಹಿರಿಯ ಪ್ರಾಥಮಿಕ ಶಾಲೆ | ಕೊಟ್ಟಾರ, ಮಂಗಳೂರು |
| ೮೬ | ಹೋಲಿ ಫ್ಯಾಮಿಲಿ ಹಿರಿಯ ಪ್ರಾಥಮಿಕ ಶಾಲೆ | ದೇರೆಬೈಲು, ಮಂಗಳೂರು |
| ೮೭ | ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆ | ಫಜೀರ್, ಮಂಗಳಗಂಗೋತ್ರಿ |
| ೮೮ | ಸಂತ ಜೇಕಬರ ಹಿರಿಯ ಪ್ರಾಥಮಿಕ ಶಾಲೆ | ಫರ್ಲ, ನಾವೂರು, ಬಂಟ್ವಾಳ |
| ೮೯ | ಸಂತ ಫ್ರಾನ್ಸಿಸ್ ಕ್ಷೇವಿಯರ್‌ಹಿರಿಯ ಪ್ರಾಥಮಿಕ ಶಾಲೆ | ಫೆರಾರ್, ಮೂಡುಪೆರಾರ್, ಮಂಗಳೂರು |
| ೯೦ | ಸಂತ ತೋಮಸರ ಹಿರಿಯ ಪ್ರಾಥಮಿಕ ಶಾಲೆ | ಬೊಂಡಂತಿಲ, ಮಂಗಳೂರು |
| ೯೧ | ಸಂತ ಜೋಸೆಪರ ಹಿರಿಯ ಪ್ರಾಥಮಿಕ ಶಾಲೆ | ಗಂಗೊಳ್ಳಿ, ಕುಂದಾಪುರ |
| ೯೨ | ಸಂತ ಕ್ಷೇವಿಯರ್ ಹಿರಿಯ ಪ್ರಾಥಮಿಕ ಶಾಲೆ | ಕೊಳಲಗಿರಿ, ಉಡುಪಿ |
| ೯೩ | ಸೆಕ್ರೆಡ್ ಹಾರ್ಟ್ ಹಿರಿಯ ಪ್ರಾಥಮಿಕ ಶಾಲೆ, ಅಮ್ಮುಂಜೆ | ಕೊಳಲಗಿರಿ, ಉಡುಪಿ |
| ೯೪ | ಬೆಳ್ಮಾರ್ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ | ಕೊಳಲಗಿರಿ, ಉಡುಪಿ |
| ೯೫ | ಪೊಂಪೈ ಹಿರಿಯ ಪ್ರಾಥಮಿಕ ಶಾಲೆ | ಗುರುಪುರ, ಕೈಕಂಬ, ಮಂಗಳೂರು |
| ೯೬ | ಸಂತ ಸೆಬಾಸ್ಟಿಯನ್ನರ ಹಿರಿಯ ಪ್ರಾಥಮಿಕ ಶಾಲೆ | ಹೊಸಬೆಟ್ಟು, ಮೂಡಬಿದ್ರಿ |
| ೯೭ | ಇನ್ಫೆಂಟ್ ಮೇರಿ ಹಿರಿಯ ಪ್ರಾಥಮಿಕ ಶಾಲೆ | ಜೆಪ್ಪು, ಮಂಗಳೂರು |
| ೯೮ | ಸಂತ ಜೋಕಿಮರ ಹಿರಿಯ ಪ್ರಾಥಮಿಕ ಶಾಲೆ | ಕಡಬ, ಪುತ್ತೂರು |
| ೯೯ | ಸಂತ ಅನ್ನರ ಹಿರಿಯ ಪ್ರಾಥಮಿಕ ಶಾಲೆ | ಕಡಬ, ಪುತ್ತೂರು |
| ೧೦೦ | ಯೆಲ್ಲೂರು ನಿತ್ಯಸಹಾಯ ಮಾತಾ ಹಿರಿಯ ಪ್ರಾಥಮಿಕ ಶಾಲೆ, ಎಲ್ಲೂರು | ಕಳತ್ತೂರು |
| ೧೦೧ | ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆ | ಕಲ್ಯಾಣಪುರ, ಉಡುಪಿ |
| ೧೦೨ | ಎಲ್.ವಿ.ಪಿ.ಹಿರಿಯ ಪ್ರಾಥಮಿಕ ಶಾಲೆ | ಉಡುಪಿ , ಪುತ್ತೂರು |
| ೧೦೩ | ಲೂರ್ಡ್ಸ್ ಹಿರಿಯ ಪ್ರಾಥಮಿಕ ಶಾಲೆ (ಕನ್ನಡ) | ಕಣಜಾರ್, ಬೈಲೂರು |
| ೧೦೪ | ಸಂತ ಲಾರೆನ್ಸರ ಹಿರಿಯ ಪ್ರಾಥಮಿಕ ಶಾಲೆ | ಕರಾಡಿ, ವಿಜಯಡ್ಕ, ಕನ್ಯಾನ |
| ೧೦೫ | ಸಂತ ಲಾರೆನ್ಸರ ಹಿರಿಯ ಪ್ರಾಥಮಿಕ ಶಾಲೆ | ಕಾರ್ಕಳ, ಅತ್ತೂರು, |
| ೧೦೬ | ಕ್ರೈಸ್ಟ್‌ಕಿಂಗ್ ಕನ್ನಡ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆ | ಕಾರ್ಕಳ |
| ೧೦೭ | ಸಂತ ಜೋಕಿಮರ ಹಿರಿಯ ಪ್ರಾಥಮಿಕ ಶಾಲೆ, ಕೆಲರಾಯ್ | ಪೆದಮಾಲೆ, ಮಂಗಳೂರು |
| ೧೦೮ | ಲಿಟ್ಲ್ ಫ್ಲವರ್ ಹಿರಿಯ ಪ್ರಾಥಮಿಕ ಶಾಲೆ, ಕೆಂಲ್ಬೆಟ್ | ಮೋಳಕೋಡಿ. ಮುಂಡ್ಕೂರ್ |

| | | |
|---|---|---|
| ೧೦೯ | ಸಂತ ಫ್ರಾನ್ಸಿಸರ ಹಿರಿಯ ಪ್ರಾಥಮಿಕ ಶಾಲೆ | ಕೆನ್ನಾ, ಪಿಲಾರ್ |
| ೧೧೦ | ಸಂತ ಮೇರಿಯವರ ಹಿರಿಯ ಪ್ರಾಥಮಿಕ ಶಾಲೆ | ಕಿನ್ನಿಗೋಳಿ |
| ೧೧೧ | ಪೊಂಪೈ ಹಿರಿಯ ಪ್ರಾಥಮಿಕ ಶಾಲೆ ಕಿರೆಂ | ಕಿನ್ನಿಗೋಳಿ |
| ೧೧೨ | ಲಿಟ್ಲ್ ಫ್ಲವರ್ ಹಿರಿಯ ಪ್ರಾಥಮಿಕ ಶಾಲೆ, ಎಲಿಂಜೆ | ಕಿನ್ನಿಗೋಳಿ |
| ೧೧೩ | ಪೊಂಪೈ ಹಿರಿಯ ಪ್ರಾಥಮಿಕ ಶಾಲೆ ಕುದ್ರಿಪದವು | ಕಿನ್ನಿಗೋಳಿ |
| ೧೧೪ | ಸಂತ ಜಾನರ ಹಿರಿಯ ಪ್ರಾಥಮಿಕ ಶಾಲೆ, ಕೌಕ್ರಾಡಿ | ಕೊಕ್ಕಡ, ಪುತ್ತೂರು |
| ೧೧೫ | ಚರ್ಚ್ ಹಿರಿಯ ಪ್ರಾಥಮಿಕ ಶಾಲೆ | ಕೂಳೂರು, ಮಂಗಳೂರು |
| ೧೧೬ | ಹೋಲಿ ರೋಜರಿ ಇಂಗ್ಲೀಷ್ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆ | ಕುಂದಾಪುರ |
| ೧೧೭ | ಲೊರೆಟ್ಟೊ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ | ಲೊರೆಟ್ಟೊ, ಬಂಟ್ವಾಳ |
| ೧೧೮ | ಸಂತ ಆಂಡ್ರ್ಯೂರ ಹಿರಿಯ ಪ್ರಾಥಮಿಕ ಶಾಲೆ ಸೊರ್ನಾಡು | ಬಂಟ್ವಾಳ |
| ೧೧೯ | ಗಾರ್ಡಿಯನ್ ಏಂಜಲ್ಸ್ ಹಿರಿಯ ಪ್ರಾಥಮಿಕ ಶಾಲೆ | ಗರ್ಡಾಡಿ, ಮಡಂತ್ಯಾರು |
| ೧೨೦ | ಸಂತ ಅಂತೋನಿಯವರ ಹಿರಿಯ ಪ್ರಾಥಮಿಕ ಶಾಲೆ ಗರ್ಡಾಡಿ | ಮಡಂತ್ಯಾರು |
| ೧೨೧ | ಸಂತ ಅಂತೋನಿಯವರ ಹಿರಿಯ ಪ್ರಾಥಮಿಕ ಶಾಲೆ | ಮೊಗರ್ನಾಡ್, ಕಲ್ಲಡ್ಕ |
| ೧೨೨ | ಸಂತ ತೋಮಸರ ಹಿರಿಯ ಪ್ರಾಥಮಿಕ ಶಾಲೆ | ಅಲಂಗಾರ್, ಮೂಡಬಿದ್ರಿ |
| ೧೨೩ | ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆ | ನೈನಾಡು, ಪೂಂಜಾಲಕಟ್ಟೆ, ಬಂಟ್ವಾಳ |
| ೧೨೪ | ಸಂತ ಪೌಲರ ಹಿರಿಯ ಪ್ರಾಥಮಿಕ ಶಾಲೆ | ನಾರಾವಿ |
| ೧೨೫ | ಸಂತ ಪೌಲರ ಹಿರಿಯ ಪ್ರಾಥಮಿಕ ಆಂಗ್ಲ ಮಾಧ್ಯಮ ಶಾಲೆ | ನಾರಾವಿ |
| ೧೨೬ | ಸಂತ ಲಿಗೋರಿ ಹಿರಿಯ ಪ್ರಾಥಮಿಕ ಶಾಲೆ | ನೀರುಮಾರ್ಗ, ಮಂಗಳೂರು |
| ೧೨೭ | ಸಂತ ಫ್ರಾನ್ಸಿಸರ ಹಿರಿಯ ಪ್ರಾಥಮಿಕ ಶಾಲೆ | ನೀರುಡೆ |
| ೧೨೮ | ಸಂತ ವಿಕ್ಟರನ ಹಿರಿಯ ಪ್ರಾಥಮಿಕ ಶಾಲೆ | ನೆಲ್ಲಿಕಾರು |
| ೧೨೮ | ಲಿಟ್ಲ್ ಫ್ಲವರ್ ಹಿರಿಯ ಪ್ರಾಥಮಿಕ ಶಾಲೆ | ಕಲ್ಲಮುಂಡ್ಕೂರು, ಮೂಡಬಿದ್ರೆ |
| ೧೨೮ | ಸಂತ ತೋಮಸರ ಹಿರಿಯ ಪ್ರಾಥಮಿಕ ಶಾಲೆ | ನಿರ್ಕಾಣ್, ವೊಗ್ಗ |
| ೧೨೯ | ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆ | ಒಮ್ಜೂರ್, ಮಂಗಳೂರು |
| ೧೩೦ | ಸಂತ ಅಂತೋನಿ ಹಿರಿಯ ಪ್ರಾಥಮಿಕ ಶಾಲೆ | ಪಡುಕೋಣೆ |
| ೧೩೧ | ಸಂತ ಅಂತೋನಿ ಹಿರಿಯ ಪ್ರಾಥಮಿಕ ಶಾಲೆ, ಗುಡ್ಡೆಯಂಗಡಿ | ಪಡುಕೋಣೆ |
| ೧೩೨ | ಸಂತ ಜೂಡರ ಹಿರಿಯ ಪ್ರಾಥಮಿಕ ಶಾಲೆ | ಪಕ್ಷಿಕೆರೆ |
| ೧೩೩ | ಸಂತ ಇಗ್ನೇಷಿಯಸರ ಹಿರಿಯ ಪ್ರಾಥಮಿಕ ಶಾಲೆ | ಪಾಲಡ್ಕ, ಮೂಡಬಿದ್ರೆ |
| ೧೩೪ | ಚರ್ಚ್ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ | ಪಾಂಬೂರು, ಬಂಟಕಲ್ |
| ೧೩೫ | ಸಂತ ಜಾನರ ಹಿರಿಯ ಪ್ರಾಥಮಿಕ ಶಾಲೆ | ಪಾಂಗಾಳ, ಶಂಕರಾಪುರ |
| ೧೩೬ | ಪನೀರ್ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ | ಪನೀರ್, ದೇರ್ಲಕಟ್ಟೆ |
| ೧೩೭ | ಇನ್ಫೆಂಟ್ ಹಿರಿಯ ಪ್ರಾಥಮಿಕ ಶಾಲೆ | ಪೆರಂಪಳ್ಳಿ, ಉಡುಪಿ |
| ೧೩೮ | ಹೋಲಿ ಏಂಜಲ್ಸ್ ಹಿರಿಯ ಪ್ರಾಥಮಿಕ ಶಾಲೆ | ಪೆರ್ಮನ್ನೂರು |
| ೧೩೯ | ಸಂತ ಸೆಬಾಸ್ಟಿಯನ್ನರ ಹಿರಿಯ ಪ್ರಾಥಮಿಕ ಶಾಲೆ, ಆಡಂಕುದ್ರು | ಪೆರ್ಮನ್ನೂರು |
| ೧೪೦ | ಟ್ರೈ-ಐಲ್ಯಾಂಡ್ ಹಿರಿಯ ಪ್ರಾಥಮಿಕ ಶಾಲೆ, ಉಳ್ಳಾಲ- ಹೊೈಗೆ | ಪೆರ್ಮನ್ನೂರು |
| ೧೪೧ | ಫಾತಿಮಾ ಹಿರಿಯ ಪ್ರಾಥಮಿಕ ಶಾಲೆ | ಪೆರ್ನಾಲ್ |
| ೧೪೨ | ಪೇಜಾವರ ಚರ್ಚ್ ಹಿರಿಯ ಪ್ರಾಥಮಿಕ ಶಾಲೆ | ಪೇಜಾವರ |
| ೧೪೩ | ಮ್ಯಾದೆ ದೇವುಸ್ ಹಿರಿಯ ಪ್ರಾಥಮಿಕ ಶಾಲೆ | ಪುತ್ತೂರು |
| ೧೪೪ | ರಾಣಿಪುರ ಹಿರಿಯ ಪ್ರಾಥಮಿಕ ಶಾಲೆ | ರಾಣೀಪುರ, ಪೆರ್ಮನ್ನೂರು |
| ೧೪೫ | ಸವೇರಪುರ ಕಿರಿಯ ಪುಷ್ಪ ಹಿರಿಯ ಪ್ರಾಥಮಿಕ ಶಾಲೆ | ಕಲ್ಲುಗುಂಡಿ, ಸುಳ್ಯ |
| ೧೪೬ | ಮೂಡಹಾಡು ಹಿರಿಯ ಪ್ರಾಥಮಿಕ ಶಾಲೆ | ಸಾಸ್ತಾನ, ಉಡುಪಿ |
| ೧೪೭ | ಪಾಂಡೇಶ್ವರ ಹಿರಿಯ ಪ್ರಾಥಮಿಕ ಶಾಲೆ | ಸಾಸ್ತಾನ |
| ೧೪೮ | ಸಂತ ಅಂತೋನಿಯವರ ಹಿರಿಯ ಪ್ರಾಥಮಿಕ ಶಾಲೆ | ಸಾಸ್ತಾನ, ಉಡುಪಿ |
| ೧೪೯ | ಹೋಲಿ ಏಂಜಲ್ಸ್ ಹಿರಿಯ ಪ್ರಾಥಮಿಕ ಶಾಲೆ | ಶಿರ್ತಾಡಿ |
| ೧೫೦ | ಡೋನ್ ಬೋಸ್ಕೊ ಹಿರಿಯ ಪ್ರಾಥಮಿಕ ಶಾಲೆ | ಶಿರ್ವಾ, ಉಡುಪಿ |
| ೧೫೧ | ಸಂತ ಪ್ಯಾಟ್ರಿಕರ ಹಿರಿಯ ಪ್ರಾಥಮಿಕ ಶಾಲೆ | ಸಿದ್ದಕಟ್ಟೆ, ಬಂಟ್ವಾಳ |
| ೧೫೨ | ಸಂತ ಬ್ರಿಡ್ಜಿತ್ ಹಿರಿಯ ಪ್ರಾಥಮಿಕ ಶಾಲೆ | ಸುಳ್ಯ |

